ಪ್ರವೇಶವಿಲ್ಲದಂತೆ ಸ್ಪಷ್ಟವಾಗಿ ಪ್ರತಿಪಾದನೆ ಮಾಡಿಲ್ಲವೇನೋ! ಎನಿಸುತ್ತಿದೆ' ಎಂದು ನಾರದರ ಮುಂದೆ ಶ್ರೀವ್ಯಾಸರು ಹೇಳಿದರು.

ಅಜ್ಞ ಜನ ಮೋಹನಕ್ಕಾಗಿ ಹೀಗೆ ಶ್ರೀಹರಿ ತಾನು ಅಜ್ಞನಂತೆ ಅಶಕ್ತನಂತೆ ತೋರಿಕೊಳ್ಳುವುದುಂಟು.

ಕಿಂ ವಾ ಭಾಗವತಾ ಧರ್ಮಾ ನ ಪ್ರಾಯೇಣ ನಿರೂಪಿತಾಃ ।
ಪ್ರಿಯಾಃ ಪರಮಹಂಸಾನಾಂ ತ ಏವ ಹ್ಯಚ್ಯುತಪ್ರಿಯಾಃ ॥

(ಭಾ.೧.೪.೩೦)

'ವಿರಕ್ತ ಪುರುಷರೇ ಹರಿಗೆ ಪ್ರಿಯರು. ಅವರಿಗೆ ಪ್ರಿಯವಾದ ಭಾಗವತ ಧರ್ಮಗಳನ್ನು ವಿಸ್ತಾರವಾಗಿ ಹೇಳದಿರುವುದೇ ನನ್ನ ಕಾರ್ಯದಲ್ಲಿ ನ್ಯೂನತೆಗೆ ಕಾರಣವಾಗಿದೆಯೆ?' ಎಂದು ಶ್ರೀವ್ಯಾಸರು ಹೇಳಿಕೊಳ್ಳುತ್ತಾರೆ. ತಾವು ಖಿನ್ನ ರಾದಂತೆ ತೋರಿಕೊಳ್ಳುತ್ತಾನೆ. ವಸ್ತುತಃ ಅವರಿಗೆ ಖೇದವೆಂಬುದಿಲ್ಲ. ಖೇದವಿದೆ ಎಂದರೂ ಅದು ತಾನು ಮಾಡಿದ್ದು ಇನ್ನೂ ಸಾಕೆನಿಸದಿರುವುದೇ 'ಖೇದ' ಹೊರತು ದುಃಖವಲ್ಲ. ಅವರು ಹೀಗೆ ಹೇಳಿಕೊಳ್ಳುತ್ತಿರುವಾಗಲೆ ಅವರ ಇಚ್ಛೆಯಂತೇ ನಾರದರು ಬರುತ್ತಾರೆ. ವ್ಯಾಸರು ಅವರಿಗೆ ಸತ್ಕಾರ ಮಾಡುತ್ತಾರೆ. ಆಗ ಅವರು ಕೇಳುತ್ತಾರೆ, 'ವ್ಯಾಸರೆ, ತಮ್ಮ ಅವತಾರಕಾರ್ಯವಾದ ವೇದವಿಭಾಗ ಭಾರತ ನಿರ್ಮಾಣಾದಿ ಎಲ್ಲವೂ ಪೂರ್ತಿಯಾಗಿದೆ. ಆದರೂ ತಮ್ಮ ಮುಖದಲ್ಲಿ ಚಿಂತೆಯ ಚಿಹ್ನೆ ಕಾಣಿಸುತ್ತಿದೆ! ಏನು ಕಾರಣ? ಎಂದು. ಆಗ ವ್ಯಾಸರು 'ಅಸ್ತ್ಯೇವ ಮೇ ಸರ್ವಮಿದಂ ತ್ವಯೋಕ್ತಂ' ಎಂದು ಮುಂತಾಗಿ ಹೇಳುತ್ತಾರೆ. ಅದಕ್ಕೆ ನಾರದರು ಹೇಳುತ್ತಾರೆ—

ಭವತಾನುದಿತಪ್ರಾಯಂ ಯಶೋ ಭಗವತೋಽಮಲಂ ।
ಯೇನ್ಯೈವಾಸೌ ನ ತುಷ್ಯೇತ ಮನ್ಯೇ ತದ್‌ದರ್ಶನಂ ಖಿಲಂ ॥

(ಭಾ.೧.೫.೮)

ತಾವು ಮಹಾಭಾರತದಲ್ಲಿ ಭಗವಂತನ ಮಹಿಮೆಯನ್ನು ಚೆನ್ನಾಗಿಯೇ ಹೇಳಿದರೂ ಬೇರೆ ವಿಷಯಗಳೂ ಬರುವುದರಿಂದ ಅಶಕ್ತರಿಗೆ ಅದು ತಿಳಿಯ ಲಾರದು. ಅವರಿಗೂ ತಿಳಿಯುವಂತೆ ಅದೊಂದನ್ನೇ ವಿಸ್ತಾರವಾಗಿ ಹೇಳಬೇಕಿತ್ತು. ಹೇಳದಿದ್ದುದರಿಂದಲೇ ನಿಮ್ಮ ಮನಸ್ಸಿನಲ್ಲಿ ತೃಪ್ತಿ ಉಂಟಾಗಿಲ್ಲ. ವಿಸ್ತಾರವಾಗಿ

ಹೇಳುವ ಆ ಭಾಗವತ ಶಾಸ್ತ್ರವನ್ನು ರಚಿಸುವ ಮಹಾಕಾರ್ಯ ಒಂದೇ ಉಳಿದಿದೆ ಎಂದು ನನಗೆ ಅನಿಸುತ್ತಿದೆ!

ನಾರದರ ಅಭಿಪ್ರಾಯ ಇದು— ಏನೂ ಅರ್ಥವಾಗದ ಗುಹ್ಯ ಭಾಷೆಯಲ್ಲಾಗಲಿ, ಅನ್ಯದರ್ಶನಕಾರರ ಅಭಿಪ್ರಾಯವನ್ನು ತಮ್ಮದೆಂದು ಅಜ್ಞರಿಗೆ ಭ್ರಾಂತಿಬರುವ ರೀತಿಯಲ್ಲಿ ಹೇಳುವ ದರ್ಶನ ಭಾಷೆಯಲ್ಲಾಗಲಿ ಹೇಳದೆ ನೇರವಾಗಿ ಸ್ಪಷ್ಟವಾಗಿ ವಿವಕ್ಷಿತವಾದ ಪ್ರಮೇಯವನ್ನು ಹೇಳುವ ಸಮಾಧಿಭಾಷೆಯಲ್ಲಿಯೇ ಹೇಳಿರಿ ಎಂದು. ಹೀಗೆ ಲೋಕದ ಸಜ್ಜನರ ಪರವಾಗಿ ನಾರದರು ವ್ಯಾಸರಲ್ಲಿ ಜ್ಞಾನಪ್ರಾರ್ಥನೆ ಮಾಡುತ್ತಾರೆ.



—೬—

**ಹರಿಗುಣಗಳನ್ನು ಸಮಾಧಿಭಾಷೆಯಿಂದ ಹೇಳುವ ಭಾಗವತ ರಚಿಸಿರೆಂದು ನಾರದರ ಪ್ರಾರ್ಥನೆ**

**ಅತೋ ಮಹಾಭಾಗ ಭವಾನಮೋಘದೃಕ್**
**ಶುಚಿಶ್ರವಾಃ ಸತ್ಯರತೋ ಧೃತವ್ರತಃ ।**
**ಉರುಕ್ರಮಸ್ಯಾಖಿಲ ಧರ್ಮಗುಪ್ತಯೇ**
**ಸಮಾಧಿನಾನುಸ್ಮರ ಯದ್‌ವಿಚೇಷ್ಟಿತಂ ॥**

(ಭಾ.೧.೫.೧೩)

ಏವಂ ಪೃಷ್ಟವತೇ ವ್ಯಾಸಾಯ ಭಾಗವತಧರ್ಮಪ್ರತಿಪಾದನಮೇವ ಮನೋಽಪರಿತೋಷಕಾರಣಂ । **ಯಥಾಹುಃ—**

''ಭವತಾನುದಿತಪ್ರಾಯಂ ಯಶೋ ಭಗವತೋಽಮಲಂ ।
ಯೇನೈವಾಸೌ ನ ತುಷ್ಯೇತ ಮನ್ಯೇ ತದ್ದರ್ಶನಂ ಖಿಲಮಿ''ತಿ ।

**ಅತಸ್ತದೇವ ಕಾರ್ಯಮಿತಿ ವಿಜ್ಞಾಪಯತಿ ॥ ಅತ ಇತಿ ॥** ಯತೋ ಹೇ ಮಹಾಭಾಗ ಭವಾನ್ ಧೃತವ್ರತಃ ವಿಶೇಷತೋ ಭಾಗವತಧರ್ಮ ಪ್ರತಿಪಾದನಂ ವಿನಾಽನಿಷ್ಪಾದಿತವ್ರತಧಾರಣೋಪಲಕ್ಷಿತನಿಖಿಲಾನ್ಯಪ್ರಯೋಜನೋಽತೋ ಭಾಗವತಧರ್ಮಾಣಾಂ ಗುಪ್ತಯೇ ರಕ್ಷಣಾಯೋರುಕ್ರಮಸ್ಯ ಯದ್ವಿಚೇಷ್ಟಿತಂ ತತ್ಸಮಾಧಿನಾ ಸಮಾಧಿಭಾಷಯಾ ವಸ್ತುಸ್ಥಿತಿಮನತಿಕ್ರಮ್ಯ ವಿಸ್ಪಷ್ಟವಚನೇನ ।

**ಏತದೇವ ವಿಭಾವಯಿತುಂ ಸತ್ಯರತ ಇತ್ಯಾಹ। ಏತತ್ಕರಣಂ ತವೈವ ಶಕ್ಯಮಿತ್ಯಾಶಯೇನಾಹ ॥ ಶುಚಿಶ್ರವಾ ಇತಿ ॥ ನಾರಾಯಣಾವತಾರ ಇತ್ಯರ್ಥಃ। ಅನುಸ್ಮರ ಕಥಯ। ತೇನೈವ ತವ ಮನಸ್ತೋಷೋ ಭವೇದಿತ್ಯುಕ್ತ್ವಾ ಬ್ರಹ್ಮಣಾ ಸ್ವಸ್ಮೈ ಪ್ರೋಕ್ತಂ ಭಾಗವತಮುಪದಿದೇಶೇತಿ। ತನ್ಮೂಲಜ್ಞಾನಮಪ್ಯಬಾಧಿತವಿಷಯಮಸ್ತೀತಿ ಸೂಚಯಿತುಮಮೋಘದೃಗಿತಿ ವಿಶೇಷಣಂ। ಯಥಾಹುಃ—**

**''ತಸ್ಮಾ ಇದಂ ಭಾಗವತಂ ಪುರಾಣಂ ದಶಲಕ್ಷಣಂ।**
**ಪ್ರೋಕ್ತಂ ಭಗವತಾ ಪ್ರಾಹ ಪ್ರೀತಃ ಪುತ್ರಾಯ ಭೂತಕೃತ್।**
**ನಾರದಃ ಪ್ರಾಹ ಮುನಯೇ ಸರಸ್ವತ್ಯಾಸ್ತಟೇ ನೃಪ।**
**ಧ್ಯಾಯತೇ ಬ್ರಹ್ಮ ಪರಮಂ ವ್ಯಾಸಾಯಾಮಿತತೇಜಸ'' ಇತಿ ॥**



**'ಮಹಾಕೀರ್ತಿಶಾಲಿಗಳೆ, ಅಮೋಘ ತತ್ವಜ್ಞಾನಿಗಳೂ ಹರಿಯ ಅವತಾರಭೂತರೂ ಸತ್ಯವನ್ನೇ ಹೇಳುವವರೂ ಮೋಕ್ಷಸಾಧನ ಧರ್ಮೋಪದೇಶ ಹೊರತು ಬೇರೆ ಕಾರ್ಯದ ಉದ್ದೇಶವಿಲ್ಲದವರೂ ಆದ ತಾವು ಎಲ್ಲ ಸುಜನರ ಬಂಧಮುಕ್ತಿಗಾಗಿ ಸರ್ವಶಕ್ತನಾದ ಭಗವಂತನ ಲೀಲೆಯನ್ನೇ ಸಮಾಧಿಭಾಷೆಯಿಂದ ಸ್ಪಷ್ಟ ಹೇಳುವ ಭಾಗವತವನ್ನು ರಚಿಸಿರಿ.**

'ಅನುಸ್ಮರ' ಎಂದರೆ ಸ್ಮೃತಿಗ್ರಂಥವಾದ ಪುರಾಣ ರಚಿಸಿರಿ ಎಂದರ್ಥ.

ನಾರದರು ಹೀಗೆ ಹೇಳಿ ಬ್ರಹ್ಮದೇವರು ತಮಗೆ ಉಪದೇಶಿಸಿದ ಭಾಗವತವನ್ನು ಶ್ರೀವ್ಯಾಸರ ಮುಂದೇ ಹೇಳಿದರು.

ತಸ್ಮಾ ಇದಂ ಭಾಗವತಂ ಪುರಾಣಂ ದಶಲಕ್ಷಣಂ।
ಪ್ರೋಕ್ತಂ ಭಗವತಾ ಪ್ರಾಹ ಪ್ರೀತಃ ಪುತ್ರಾಯ ಭೂತಕೃತ್ ॥
ನಾರದಃ ಪ್ರಾಹ ಮುನಯೇ ಸರಸ್ವತ್ಯಾಸ್ತಟೇ ನೃಪ।
ಧ್ಯಾಯತೇ ಬ್ರಹ್ಮ ಪರಮಂ ವ್ಯಾಸಾಯಾಮಿತತೇಜಸೇ ॥

(ಭಾ.೨.೮.೪೩,೪೪)

'ಸಂತುಷ್ಟರಾದ ಬ್ರಹ್ಮದೇವರು ತಮಗೆ ಶ್ರೀಹರಿ ಉಪದೇಶಿಸಿದ್ದ ಹತ್ತು ವಿಷಯಗಳುಳ್ಳ ಭಾಗವತ ಪುರಾಣವನ್ನು ಪುತ್ರ ನಾರದರಿಗೆ ಉಪದೇಶಿಸಿದರು. ನಾರದರು ಅದನ್ನು ಸರಸ್ವತೀ ತೀರದಲ್ಲಿ ತನ್ನನ್ನೇ ಧ್ಯಾನಿಸುತ್ತ ಕುಳಿತ ಅನಂತ

ತೇಜರಾದ ತ್ರಿಕಾಲಜ್ಞಾನಉಳ್ಳ ವ್ಯಾಸರಿಗೆ ಹೇಳಿದರು. ವ್ಯಾಸರು ನನಗೆ ಹೇಳಿದರು' ಎಂದು ಶುಕಮುನಿ ಪರೀಕ್ಷಿತನಿಗೆ ಹೇಳುತ್ತಾರೆ.

ಶ್ರೀವ್ಯಾಸರು ಭಾಗವತವನ್ನು ನಿರ್ಮಾಣಮಾಡಿ ತನ್ನ ಪುತ್ರನಾದ ಶುಕಮುನಿಗೆ ಅದನ್ನು ಉಪದೇಶಿಸಿದರು. ಶುಕಮುನಿ ಪರೀಕ್ಷಿದ್ರಾಜನಿಗೂ ಸೂತ ಪುರಾಣಿಕರಿಗೂ ಉಪದೇಶಿಸಿದರು.



–೭–

**ಶ್ರೀವ್ಯಾಸರಲ್ಲಿ ಶುಕಮುನಿ ಭಾಗವತದ ಅಧ್ಯಯನ ಮಾಡಿದರು**

**ಸ್ವಸುಖ ನಿಭೃತಚೇತಾಸ್ತದ್ವ್ಯುದಸ್ತಾನ್ಯಭಾವೋಽ**
**ಪ್ಯಜಿತ ರುಚಿರ ಲೀಲಾಕೃಷ್ಟ ಸಾರಸ್ತದೀಯಂ ।**
**ವ್ಯತನುತ ಕೃಪಯಾ ಯಸ್ತತ್ವದೀಪಂ ಪುರಾಣಂ**
**ತಮಖಿಲ ವೃಜಿನಘ್ನಂ ವ್ಯಾಸಸೂನುಂ ನತೋಽಸ್ಮಿ ॥**

(ಭಾ.೧೨.೧೨.೬೧)

ಅತೋ ವ್ಯಾಸಃ ಸ್ವಯಂ ಭಾಗವತಂ ನಿರ್ಮಾಯ ಸ್ವಪುತ್ರಾಯ ಪ್ರೋವಾಚ । ಸ ಚ ಶುಕಃ ಪರೀಕ್ಷಿತೇ ಸೂತಾಯ ಚ । ನನು ಸ ಮಹಾನುಭಾವೋ ವಿಗತದೇಹಾಭಿಮತಿಃ ಕಥಂ ಇದಮಧೀತವಾನಧ್ಯಾಪಿತವಾಂಶ್ಚ । **ಯಥಾಹುಃ—**

''ಸ ವೈ ನಿವೃತ್ತಿನಿರತಃ ಸರ್ವತ್ರೋಪೇಕ್ಷಕೋ ಮುನಿಃ ।
ಕಸ್ಯ ವಾ ಬೃಹತೀಮೇತಾಮಾತ್ಮಾರಾಮಃ ಸಮಭ್ಯಸದಿ''ತಿ ।

ಕಥಂ ಚ ಮಹಾರಾಜಾಧಿರಾಜಸ್ಯ ಪರೀಕ್ಷಿತೋ ನಿರಪೇಕ್ಷಸ್ಯಾಸ್ಯ ಚ ಸಹಾವಸ್ಥಾನಘಟನಾ । **ಯಥಾಹುಃ—**

''ಕಥಮಾಲಕ್ಷಿತಃ ಪೌರೈಃ ಸಂಪ್ರಾಪ್ತಃ ಕುರುಜಾಂಗಲಂ ।
ಉನ್ಮತ್ತಮೂಕಜಡವದ್ವಿಚರನ್ ಗಜಸಾಹ್ವಯೇ ।
ಸ ಗೋದೋಹನಮಾತ್ರಂ ಹಿ ಗೃಹೇಷು ಗೃಹಮೇಧಿನಾಂ ।
ಅವೇಕ್ಷತೇ ಮಹಾಭಾಗಸ್ತೀರ್ಥೀಕುರ್ವಂಸ್ತದಾಶ್ರಮಂ ।
ಕಥಂ ವಾ ಪಾಂಡವೇಯಸ್ಯ ರಾಜರ್ಷೇರ್ಮುನಿನಾ ಸಹ ।
ಸಂವಾದಃ ಸಮಭೂತ್ತಾತ ಯತ್ರೈಷಾ ಸಾತ್ವತೀ ಶ್ರುತಿಃ'' ಇತಿ ।

**ಸತ್ಯಂ। ತಾದೃಶೋऽಪಿ ಶ್ರೀಹರಿಗುಣಾಹೃತಮತಿಸ್ತದಧ್ಯಯನಾದಿ ಕೃತವಾನಿತ್ಯಾಹ ॥ ಸ್ವಸುಖೇತಿ ॥ ಭಗವದ್ದರ್ಶನಜನಿತೇನ ಸುಖೇನ ಪೂರ್ಣಮನಾಸ್ತೇನೈವ ಸುಖೇನ ನಿರಸ್ತಾನ್ಯಪದಾರ್ಥೋऽಪ್ಯಜಿತಸ್ಯ ಹರೇಃ ರುಚಿರಲೀಲಯಾऽऽಕೃಷ್ಟಚಿತ್ತಃ ಸನ್ ತದೀಯಂ ಭಗವತ್ತತ್ತ್ವಪ್ರತಿಪಾದಕಂ, ತಥಾ ತದಧೀನಜೀವಪ್ರಕೃತಿರೂಪತತ್ತ್ವಯೋಃ ದೀಪಕಂ ಪುರಾಣಂ ಭಾಗವತಾಖ್ಯಂ ಅಧೀತವಾನ್। ಜನೇಷು ಕೃಪಯಾಧ್ಯಾಪನಂ ಚ ಕೃತವಾನ್। ಅಧ್ಯಾಪನೇ ಹೇತುದ್ವಯಂ। ಭಗವದ್ಗುಣಗೃಹೀತಮತಿತ್ವಂ ಸ್ವಜನೇಷು ಕೃಪಾ ಚೇತಿ। ಅಧ್ಯಯನೇ ತು ಪೂರ್ವಮೇಕಮೇವೇತಿ ಮಂತವ್ಯಂ। ಏತದುಭಯ ಸಂಗ್ರಹಾಯ ವ್ಯತನುತ ವಿಸ್ತೃತವಾನಿತ್ಯುಕ್ತಂ। ಯೋ ವ್ಯತನುತ। ತಂ ಅಖಿಲ ಪಾಪಪರಿಹಾರಕಂ ವ್ಯಾಸಸೂನುಂ ಶ್ರೀಶುಕಂ ನತೋऽಸ್ಮೀತಿ। ಯಥಾಹುಃ—**

**''ಹರೇರ್ಗುಣಾಕ್ಷಿಪ್ತಮತಿರ್ಭಗವಾನ್ ಬಾದರಾಯಣಿಃ।**
**ಅಧ್ಯಗಾನ್ಮಹದಾಖ್ಯಾನಂ ನಿತ್ಯಂ ವಿಷ್ಣುಜನಪ್ರಿಯಮಿ''ತಿ ॥**



**ಸೂತರು ಶೌನಕಾದಿಗಳಿಗೆ ಹೇಳುತ್ತಾರೆ—ಸ್ವತಂತ್ರ ಭಗವದ್ದರ್ಶನದಿಂದ ಉಂಟಾಗುವ ಸುಖದಿಂದ ತುಂಬಿದ ಮನಸಿನಿಂದ ಬೇರೆ ಎಲ್ಲ ಆಸೆಗಳನ್ನು ತೊರೆದವರು ಶುಕಮುನಿಗಳು. ಆದರೆ ಮನೋಹರವಾದ ಹರಿಲೀಲೆಗಳಿಗೆ ಮನಸೋತು 'ತದೀಯ' ಆ ಭಗವತ್ತತ್ವವನ್ನೂ ಅವನ ಅಧೀನವಾದ ಜೀವತತ್ವ ಪ್ರಕೃತಿ ತತ್ವಗಳನ್ನೂ ಬೆಳಗುವ ಭಾಗವತ ಪುರಾಣವನ್ನು ಪ್ರೀತಿಯಿಂದ ಅಧ್ಯಯನ ಮಾಡಿದರು. ಅದೇ ಪ್ರೀತಿಯಿಂದ ಮತ್ತು ಸುಜನರ ಮೇಲಿನ ಕರುಣೆಯಿಂದ ಉಪದೇಶವನ್ನೂ ಮಾಡಿದರು. 'ವ್ಯತನುತ' ಎಂಬ ಶಬ್ದ ಎರಡನ್ನೂ ಹೇಳುತ್ತದೆ. ಅಂಥ ಎಲ್ಲರ ಪಾಪಪರಿಹಾರಕರಾದ ವ್ಯಾಸಪುತ್ರ ಶ್ರೀಶುಕರನ್ನು ನಮಿಸುವೆನು.**

ಮಹಾನುಭಾವರಾದ ಶುಕಮುನಿ ದೇಹಾಭಿಮಾನವನ್ನು ತೊರೆದವರು. ಯಾವುದೇ ಪ್ರಯೋಜನದ ಅಪೇಕ್ಷೆ ಇಲ್ಲದವರು ಸದಾ ಪರತತ್ವದ ಮನನ ಮಾಡುವವರು. ಈ ಭಾಗವತದ ಅಧ್ಯಯನವನ್ನೇಕೆ ಮಾಡಿದರು? ಅದನ್ನು ಪರೀಕ್ಷಿತನಿಗೆ ಏಕೆ ಉಪದೇಶಿಸಿದರು? ಮಹಾರಾಜಾಧಿರಾಜನಾದ ಪರೀಕ್ಷಿತ ನಿಗೂ ಯಾವ ಅಪೇಕ್ಷೆ ಇಲ್ಲದ ಶುಕಮುನಿಗೂ ಪರಸ್ಪರ ಮೇಲನ ಹೇಗಾಯಿತು?'

ಶೌನಕರು ಹೀಗೆ ಸೂತರಲ್ಲಿ ಕೇಳಿದ್ದಾರೆ—

ಸ ವೈ ನಿವೃತ್ತಿನಿರತಃ ಸರ್ವತ್ರೋಪೇಕ್ಷಕೋ ಮುನಿಃ ।
ಕಸ್ಯವಾ ಬೃಹತೀಮೇತಾಂ ಆತ್ಮಾರಾಮಃ ಸಮಭ್ಯಸತ್॥

(ಭಾ.೧.೭.೯೮)

ಕಥಮಾಲಕ್ಷಿತಃ ಪೌರೈಃ ಸಂಪ್ರಾಪ್ತಃ ಕುರುಜಾಂಗಲಂ ।
ಉನ್ಮತ್ತಮೂಕ ಜಡವದ್ ವಿಚರನ್ ಗಜಸಾಹ್ವಯೇ ॥
ಸ ಗೋದೋಹನ ಮಾತ್ರಂ ಹಿ ಗೃಹೇಷು ಗೃಹಮೇಧಿನಾಂ ।
ಅವೇಕ್ಷತೇ ಮಹಾಭಾಗ ಸ್ತೀರ್ಥೀಕುರ್ವಂಸ್ತದಾಶ್ರಮಂ ॥

(ಭಾ.೧.೪.೫೭)

ಭಗವದ್ ಧ್ಯಾನದಲ್ಲಿ ಸುಖ ಕಾಣುವ ವಿರಕ್ತರು, ಎಲ್ಲ ಪುರುಷಾರ್ಥಗಳ ವಿಷಯದಲ್ಲಿ ಉದಾಸೀನರು. ಇಂಥ ಶುಕಮುನಿ ಭಾಗವತದಂಥ ಬೃಹದ್ ಗ್ರಂಥದ ಅಧ್ಯಯನದಲ್ಲಿ ಏಕೆ ಪ್ರವೃತ್ತಿ ಮಾಡಿದರು? ಅವರು ಹಸ್ತಿನಾವತಿಗೆ ಬಂದಾಗ ಜನರು ಅವರನ್ನು ಹೇಗೆ ಗುರುತಿಸಿದರು? ಅವರು ಭಿಕ್ಷೆಗಾಗಿ ಮನೆಯಂಗಳದಲ್ಲಿ ಕಾಲಿಟ್ಟರೆ ಹಸು ಹಾಲು ಕರೆವಷ್ಟು ಹೊತ್ತು ಮಾತ್ರ ನಿಲ್ಲುವವರು. ಅದೂ ಕೂಡ ತಮ್ಮ ಪಾದಧೂಳಿಯಿಂದ ಆ ಮನೆಯನ್ನು ಪವಿತ್ರಗೊಳಿಸುವ ಉದ್ದೇಶದಿಂದ. ಇಂಥವರು ಒಂದು ಸಪ್ತಾಹಕಾಲ ಭಾಗವತ ಪ್ರವಚನ ನಡೆಸಿದರೆಂದರೆ ಭಾಗವತದ ಮಹಿಮೆ ಎಷ್ಟಿರಬಹುದು.

ಕಥಂ ವಾ ಪಾಂಡವೇಯಸ್ಯ ರಾಜರ್ಷೇರ್ಮುನಿನಾ ಸಹ ।
ಸಂವಾದಃ ಸಮಭೂತ್ ತಾತ ಯತ್ರೈಷಾ ಸಾತ್ವತೀ ಶ್ರುತಿಃ ?

(ಭಾ.೧.೪.೭)

ರಾಜಾ ಪರೀಕ್ಷಿತನು ಶುಕಮುನಿಯೊಡನೆ ಸಂಭಾಷಣೆ ನಡೆಸಿದ್ದು ಹೇಗೆ? ಆ ಸಂಭಾಷಣೆಯು ಸಾತ್ವತನಾದ ಶ್ರೀಹರಿಯ ಕುರಿತಾಗಿತ್ತು ತಾನೆ?

ಅಂದರೆ, ಶ್ರೀಶುಕಮುನಿ ಅವಧೂತ ಶಿರೋಮಣಿಯಾಗಿದ್ದರೂ ಶ್ರೀಹರಿಯ ಕಲ್ಯಾಣಗುಣಗಳ ಆಕರ್ಷಣೆಗೊಳಗಾಗಿ ಭಾಗವತವನ್ನು ಅಧ್ಯಯನ ಮಾಡಿದರು, ಉಪದೇಶವನ್ನು ಮಾಡಿದರು—

ಹರೇರ್ಗುಣಾಕ್ಷಿಪ್ತಮತಿರ್ಭಗವಾನ್ ಬಾದರಾಯಣಿಃ ।
ಅಧ್ಯಗಾನ್ಮಹದಾಖ್ಯಾನಂ ನಿತ್ಯಂ ವಿಷ್ಣುಜನಪ್ರಿಯಂ ॥

(ಭಾ.೧.೭..೧೧)

'ಹರಿಗುಣಗಳಿಗೆ ಮನಸೋತ ಶುಕಮುನಿ ಹರಿಭಕ್ತರಿಗೆ ಸದಾ ಪ್ರಿಯವೆನಿಸುವ ಮಹತ್ತಾದ ಭಾಗವತ ಗ್ರಂಥವನ್ನು ಅಧ್ಯಯನ ಮಾಡಿದರು' ಎಂದೂ ಸೂತರು ಶೌನಕರಿಗೆ ಹೇಳುತ್ತಾರೆ.



—೮—

**ಶುಕಮುನಿ ಅಧ್ಯಯನ ಮಾಡಿದ ಭಾಗವತವನ್ನು ಹೇಳಿರೆಂದು ಸೂತರಲ್ಲಿ ಶೌನಕಾದಿಗಳ ಪ್ರಾರ್ಥನೆ**

ಅಥಾಭಿಧೇಹ್ಯಂಗ ಮನೋನುಕೂಲಂ
ಪ್ರಭಾಷಸೇ ಭಾಗವತ ಪ್ರಧಾನಃ ।
ಯದಾಹ ವೈಯಾಸಕಿರಾತ್ಮ ವಿದ್ಯಾ
ವಿಶಾರದೋ ನೃಪತಿಂ ಸಾಧು ಪೃಷ್ಟಃ ॥

(ಭಾ.೨.೩.೨೫)

ಸೂತಃ ಶೌನಕಾದಿಮುನಿಭ್ಯಃ ಪ್ರೋವಾಚೇತ್ಯಾಶಯೇನ ಶೌನಕಪ್ರಶ್ನರೂಪಂ ಪದ್ಯಂ ಪಠತಿ ॥ **ಅಥೇತಿ** ॥ ಅಂಗೇತಿ ಪ್ರಿಯಸಂಬೋಧನಂ । ಹೇ ಸೂತ ತ್ವಮೇವ ಯದ್ಯಸ್ಮಾದಸ್ಮದವಗಮನಾನುಕೂಲಂ ಯಥಾ ಭವೇತ್ತಥಾ ಕಥಯಸಿ ।ಯಸ್ಮಾಚ್ಚ ಭಾಗವತಾನಾಂ ಪ್ರಧಾನಃ ತತ ಏವ ಕಥಯಿತುಂ ಸಮರ್ಥಶ್ಚ। ಅಥ ತಸ್ಮಾದಾತ್ಮವಿದ್ಯಾಯಾಂ ವಿಶಾರದೋ ವ್ಯಾಸಪುತ್ರಃ ಶುಕಃ ಪರೀಕ್ಷಿತಂ ಪ್ರತಿ ಸಮ್ಯಕ್ ಪೃಷ್ಟಃ ಸನ್ ಯತ್ಪ್ರಮೇಯಮಾಹ ತದೇವಾಸ್ಮಾಕಮಭಿಧೇಹಿ ।ಅನೇನ ಶುಕಃ ಪರೀಕ್ಷಿತಂ ಪ್ರಾಹೇತ್ಯಪಿ ಲಬ್ಧಮಿತ್ಯವಗಂತವ್ಯಂ । **ಯಥಾಹುಃ**—

''ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಂಮಿತಂ ।
ಉತ್ತಮಶ್ಲೋಕಚರಿತಂ ಚಕಾರ ಭಗವಾನೃಷಿಃ ।
ನಿಃಶ್ರೇಯಸಾಯ ಲೋಕಸ್ಯ ಧನ್ಯಂ ಸ್ವಸ್ತ್ಯಯನಂ ಮಹತ್ ।
ತದಿದಂ ಗ್ರಾಹಯಾಮಾಸ ಸುತಮಾತ್ಮವತಾಂ ವರಂ ।

**ಸರ್ವವೇದೇತಿಹಾಸಾನಾಂ ಸಾರಂ ಸಾರಂ ಸಮುದ್ಧೃತಂ ।**
**ಸ ತು ಸಂಶ್ರಾವಯಾಮಾಸ ಮಹಾರಾಜಂ ಪರೀಕ್ಷಿತಂ ।**
**ಪ್ರಾಯೋಪವಿಷ್ಟಂ ಗಂಗಾಯಾಂ ಪರೀತಂ ಪರಮರ್ಷಿಭಿಃ ।**
**ತಸ್ಯ ಕೀರ್ತಯತೋ ವಿಪ್ರಾ ರಾಜರ್ಷೇರ್ಭೂರಿತೇಜಸಃ ।**
**ಅಹಂ ಚಾಧ್ಯಗಮಂ ತತ್ರ ನಿವಿಷ್ಟಸ್ತದನುಗ್ರಹಾತ್ ।**
**ಸೋಽಹಂ ವಃ ಶ್ರಾವಯಿಷ್ಯಾಮಿ ಯಥಾಧೀತಂ ಯಥಾಮತೀ''ತಿ ।**
**ಇದಂ ಚ ಶೌನಕಾದೀನ್ಪ್ರತಿ ಸೂತವಚನಂ ॥**



**ಪ್ರಿಯಸೂತರೆ, ಶ್ರೋತೃಗಳಿಗೆ ಮನಮುಟ್ಟುವಂತೆ ಹೇಳಬಲ್ಲವರು ನೀವು. ಮತ್ತು ಭಗವದ್ಭಕ್ತರೂ ಆಗಿರುವಿರಿ. ಆದರಿಂದ ಭಾಗವತವನ್ನು ಹೇಳಲು ಸಮರ್ಥರು ನೀವು. ಆದರಿಂದ ಪರಮಾತ್ಮ ವಿದ್ಯಾವಿಶಾರದರಾದ ವ್ಯಾಸಪುತ್ರ ಶುಕಮುನಿಗಳು ಪರೀಕ್ಷಿತನಿಗೆ ಅವನು ಬಹಳ ಕೇಳಿಕೊಂಡಾಗ ಏನು ಪ್ರಮೇಯವನ್ನು ಹೇಳಿದರೋ ಅದನ್ನು ನೀವು ನಮಗೆ ಹೇಳಿರಿ' ಎಂದು ಶೌನಕಾದಿ ಮುನಿಗಳು ಸೂತರನ್ನು ಕೇಳಿಕೊಂಡರು.**

ಅವರ ಈ ಮಾತಿನಿಂದ ಭಾಗವತದ ಉಪದೇಶ ಪರಂಪರೆಯಲ್ಲಿ 'ಶುಕರು ಆದನ್ನು ಪರೀಕ್ಷಿತನಿಗೆ ಉಪದೇಶಿಸಿದ್ದರೆಂ'ಬ ಅಂಶವು ಸ್ಪಷ್ಟವಾಗುತ್ತದೆ.

ಸೂತರು ಶೌನಕಾದಿಗಳಿಗೆ ನುಡಿದ ಮಾತಿನಿಂದಲೂ ಇದು ಸ್ಪಷ್ಟವಾಗುತ್ತದೆ. ಅವರು ಹೇಳುತ್ತಾರೆ—

ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಂ ।
ಉತ್ತಮ ಶ್ಲೋಕಚರಿತಂ ಚಕಾರ ಭಗವಾನ್ ಋಷಿಃ ॥
ನಿಃಶ್ರೇಯಸಾಯ ಲೋಕಸ್ಯ ಧನ್ಯಂ ಸ್ವಸ್ತ್ಯಯನಂ ಮಹತ್ ।
ತದಿದಂ ಗ್ರಾಹಯಾಮಾಸ ಸುತಮಾತ್ಮವತಾಂ ವರಂ ॥
ಸರ್ವವೇದೇತಿಹಾಸಾನಾಂ ಸಾರಂಸಾರಂ ಸಮದ್ಧೃತಂ ।
ಸ ತು ಸಂಶ್ರಾವಯಾಮಾಸ ಮಹಾರಾಜಂ ಪರೀಕ್ಷಿತಂ ॥
ಪ್ರಾಯೋಪವಿಷ್ಟಂ ಗಂಗಾಯಾಂ ಪರೀತಂ ಪರಮರ್ಷಿಭಿಃ ।
ತಸ್ಯ ಕೀರ್ತಯತೋ ವಿಪ್ರಾ ರಾಜರ್ಷೇರ್ಭೂರಿ ತೇಜಸಃ ॥

ಅಹಂ ಚಾಧ್ಯಗಮಂ ತತ್ರ ನಿವಿಷ್ಟಸ್ತದನುಗ್ರಹಾತ್ ।
ಸೋಽಹಂ ವಃ ಶ್ರಾವಯಿಷ್ಯಾಮಿ ಯಥಾಧೀತಂ ಯಥಾಮತಿ ॥'

(ಭಾ.೧.೩.೪೦)

'ಇದು ವೇದತುಲ್ಯವಾದ ಭಾಗವತ ಪುರಾಣ. ಭಗವಾನ್ ಬಾದರಾಯಣರು ಇದನ್ನು ಸಜ್ಜನರ ಶ್ರೇಯಸ್ಸಿಗಾಗಿ ರಚಿಸಿದರು. ತಮ್ಮ ಸುಪುತ್ರರಾದ ಶುಕಮುನಿಗಳಿಗೆ ಉಪದೇಶಿಸಿದರು. ಶುಕಮುನಿ ಸರ್ವವೇದ ಇತಿಹಾಸಗಳ ಸಾರರೂಪವಾದ ಈ ಪುರಾಣವನ್ನು ಮುಂದೆ ಗಂಗಾತೀರದಲ್ಲಿ ಪ್ರಾಯೋಪವೇಶಕ್ಕೆ ಸಂಕಲ್ಪಿಸಿದ್ದ ಪರೀಕ್ಷಿದ್ರಾಜನಿಗೆ ಉಪದೇಶಿಸಿದರು. ರಾಜನು ಆಗ ಮಹರ್ಷಿಗಳಿಂದ ಸುತ್ತುವರಿಯಲ್ಪಟ್ಟಿದ್ದ. ಅವನಿಗೆ ಶುಕಮುನಿಗಳು ಉಪದೇಶಿಸುತ್ತಿದ್ದಾಗ ಅವರ ಅನುಗ್ರಹದಿಂದ ನಾನೂ ಅಲ್ಲಿ ಸೇರಿ ಕುಳಿತು ಕೊಂಡು ಶ್ರವಣ ಮಾಡಿದೆ. ಅದನ್ನೆ ನನಗೆ ತಿಳಿದಷ್ಟು ನಿಮಗೆ ಹೇಳುತ್ತೇನೆ.'



—೯—

**ವಿದುರನು ಮೈತ್ರೇಯರಲ್ಲಿ ಭಾಗವತ ಹೇಳಲು ಕೇಳಿಕೊಳ್ಳುತ್ತಾನೆ**

**ಮುನಿರ್ವಿವಕ್ಷುರ್ಭಗವದ್ಗುಣಾನಾಂ**
**ಸಖಾಪಿ ತೇ ಭಾರತಮಾಹ ಕೃಷ್ಣಃ ।**
**ಯಸ್ಮಿನ್ ನೃಣಾಂ ಗ್ರಾಮ್ಯಸುಖಾನುವಾದ್ಯೈ**
**ರ್ಮತಿರ್ಗೃಹೀತಾ ನ ಹರೇಃಕಥಾಯಾಂ ॥**

(ಭಾ.೩.೫.೧೨)

**ತದೇವಂ ಶ್ಲೋಕಷಟ್ಕೇನ ನಾರಾಯಣೇನ ಬ್ರಹ್ಮಣೇ, ಬ್ರಹ್ಮಣಾ ನಾರದಾಯ, ನಾರದೇನ ವ್ಯಾಸಾಯ, ವ್ಯಾಸೇನ ಶುಕಾಯ, ಶುಕೇನ ಪರೀಕ್ಷಿತೇ ಸೂತಾಯ ಚ, ಸೂತೇನ ಶೌನಕಾದಿಭ್ಯಃ ಪ್ರೋಕ್ತಮಿತಿ ಲೋಕೇ ಭಾಗವತಾ ಗತಿಪ್ರಕಾರೋಽಭಿಹಿತಃ । ಇದಾನೀಂ ಪ್ರಕಾರಾಂತರೇಣಾಪಿ ಭಾಗವತಾಗತಿಂ ವದಿಷ್ಯನ್ ಮೈತ್ರೇಯಂ ಪ್ರತಿ ವಿದುರಪ್ರಶ್ನಪ್ರಕಾರಂ ತಾವದ್ದರ್ಶಯತಿ ।**

**ತತ್ರ ಝುಡಿತಿ ಭಾಗವತಂ ಬ್ರೂಹೀತ್ಯೇವಂ ಪ್ರಶ್ನೇ ಪೂರ್ವತನಂ ಗ್ರಂಥಂ ವಿಹಾಯೇದಾನೀಂ ನೂತನಂ ಕಿಂ ಪೃಚ್ಛಸೀತಿ ಮೈತ್ರೇಯೇಣೋಚ್ಯೇತ । ತತಸ್ತತ್ರ**

**ಹೇತುರ್ವಾಚ್ಯಃ । ತತಃ ಸ್ವಯಮಾದಾವೇವ ಪೂರ್ವಗ್ರಂಥೇನ ಮಂದಮತೀನಾಂ ಪ್ರಯೋಜನಂ ನ ಸಿಧ್ಯತೀತ್ಯಾಹ ॥ ಮುನಿರಿತಿ ॥**

**ಯದ್ಯಪಿ ಹೇ ಮೈತ್ರೇಯ ತವ ಸಖಾ ವ್ಯಾಸಾಖ್ಯೋ ಮಹಾಮುನಿಃ ಹರೇರ್ಗುಣಾನ್ ಗ್ರಾಹಯಿತುಮೇವ ವಕ್ತುಮಿಚ್ಛಂಸ್ತಾನೇವ ನೋಕ್ತವಾನ್ ಕಿಂತು ಮಹಾಧಿಕಾರಿಣಾಮಪ್ಯುಪಕಾರಾಯಾನೇಕಾಸದ್ಯಶಾರ್ಥಪರಿಪೂರಿತಂ ಶ್ರೀಮನ್ಮಹಾಭಾರತಂ ಕೃತವಾನ್। ತತ್ರ ಯೇ ಮಹಾಧಿಕಾರಿಣಸ್ತೇ ಭಗವದ್ಗುಣಾನೇವ ಗೃಹ್ಣಂತಃ ಪರಮಾನಂದಪೂರಿತಾ ಅಪವರ್ಗಮಪಿ ಪ್ರಾಪ್ತುಂ ನ ಗಣಯಂತಿ। ಯೇ ತು ಮಧ್ಯಮಾಸ್ತೇಽಪ್ಯನೇಕೇಷ್ವರ್ಥೇಷು ಯಥಾಮತಿ ದ್ವಿತ್ರಾದೀನಾರಭ್ಯ ಯಾವಚ್ಛಕ್ತಿ ಗೃಹ್ಣಾನಾಃ ಕ್ವಚಿದ್ಧರಿಗುಣಾನ್ ಸಾಕ್ಷಾದೇವ ಕ್ವಚಿಚ್ಛಾವಾಂತರತಾತ್ಪರ್ಯಾರ್ಥ ಪ್ರತಿಪಾದನಮುಖೇನ ಪರ್ಯವಸನ್ನಾನಿತ್ಯೇವಂ ಪ್ರಕಾರದ್ವಯೇನ ಶ್ರೀಹರಿತದ್ಭಕ್ತಗುಣಗಣಾನುವಾದಪರಿತುಷ್ಟಚಿತ್ತಾಃ ಪರಾಂ ನಿರ್ವೃತಿಂ ಪ್ರಾಪುಃ। ಯೇ ತು ಯಥಾಶ್ರುತಗ್ರಾಹಿಣೋ ನ ಪೂರ್ವಾಧಿಕಾರಿಣ ಇವ ವಿಚಕ್ಷಣಾಸ್ತೇಷಾಂ ಸ್ವಭಾವತ ಏವ ವಿಷಯಾಸಕ್ತಮತೀನಾಂ ನೃಣಾಂ ಸ್ವರ್ಗಾದಪ್ಯಧಿಕತಮಾನಾಂ ವೈಷಯಿಕಸುಖಾನಾಂ ಅನುವಾದ್ಯೈಃ ಪ್ರತಿಬದ್ಧಾ ಮತಿಃ ಪ್ರತಿಪಾದಿತಾಯಾಮಪಿ ಹರಿಗುಣಾನುವಾದಿನ್ಯಾಂ ಕಥಾಯಾಂ ನ ಪ್ರವಿಶತಿ। ಅತಸ್ತಾನ್ ಪ್ರತಿ ಪ್ರಯೋಜನಾಸಾಧಕತಯಾ ಭಾರತಮಕೃತಮಿವೇತಿ ॥**



ಹೀಗೆ ಆರು ಶ್ಲೋಕಗಳಿಂದ ಸಾಕ್ಷಾತ್ ಶ್ರೀಮನ್ನಾರಾಯಣಪ್ರಣೀತವಾದ ಭಾಗವತ ಶಾಸ್ತ್ರವು (೧) ಚತುರ್ಮುಖ ಬ್ರಹ್ಮದೇವರು (೨)ನಾರದರು (೩)ವೇದವ್ಯಾಸರು (೪) ಶುಕಮುನಿ (೫)ಪರೀಕ್ಷಿದ್ರಾಜ ಮತ್ತು ಸೂತರು (೬) ಶೌನಕಾದಿ ಮುನಿಗಳು ಹೀಗೆ ಕ್ರಮವಾಗಿ ಬಂದು ಪರಂಪರಾಪ್ರಾಪ್ತವಾಗಿ ಲೋಕದಲ್ಲಿ ಹರಡಿತೆಂದು ಒಂದು ಕ್ರಮವನ್ನು ಭಾಗವತವೇ ಹೇಳುತ್ತಿರುವುದು ಸ್ಪಷ್ಟವಾಯಿತು.

ಇದರೊಂದಿಗೆ ಇನ್ನೊಂದುಕ್ರಮವನ್ನೂ ಭಾಗವತ ಹೇಳುತ್ತಿದೆ. ಮುಂದೆ ಹದಿನಾರನೆ ಶ್ಲೋಕದವರೆಗೆ ಎಂಟು ಶ್ಲೋಕಗಳಲ್ಲಿ ಇದು ಸ್ಪಷ್ಟ ವಾಗುತ್ತದೆ. (೧)

ಶೇಷದೇವರು (೨)ಸನತ್ಕುಮಾರರು (೩)ಸಾಂಖ್ಯಾಯನರು (೪)ಪರಾಶರರು (೫)ಮೈತ್ರೇಯರು (೬) ವಿದುರ-ಎಂದು.

ಇಲ್ಲಿ ಶ್ರೀಮನ್ನಾರಾಯಣನು ಬ್ರಹ್ಮದೇವರಿಗೆ ಉಪದೇಶ ಮಾಡಿದ್ದನ್ನೇ ಶೇಷದೇವರಿಗೂ ಉಪದೇಶ ಮಾಡಿದನೆಂದು ತಿಳಿಯಬೇಕು. ಹೀಗಾಗಿ ಭಾಗವತದಲ್ಲಿ ಎರಡು ಬೇರೆಬೇರೆ ಶಾಖೆಗಳಾಗಲಿಲ್ಲ.

ವಿದುರನು ಮೈತ್ರೇಯರಲ್ಲಿ 'ಭಾಗವತ ಹೇಳಿರಿ' ಎಂದರೆ, 'ಭಾರತವನ್ನು ಬಿಟ್ಟು ಬೇರೆ ಭಾಗವತವನ್ನೇಕೆ ಕೇಳಲು ಬಯಸುವಿ?' ಎಂದು ಮೈತ್ರೇಯರು ಕೇಳಬಹುದೆಂದು ಆಲೋಚಿಸಿ ಮೊದಲಿಗೆ ವಿದುರನು ಮೈತ್ರೇಯ ಮುನಿಗಳಿಗೆ ಹೇಳುತ್ತಾನೆ— ನಿಮ್ಮ ಮಿತ್ರರಾದ ಶ್ರೀವ್ಯಾಸರು ಯದ್ಯಪಿ ಭಗವದ್ ಗುಣಗಳನ್ನು ಹೇಳಲೆಂದೇ ಭಾರತವನ್ನು ರಚಿಸಿರುವರು. ಆದರೆ ಅದರಲ್ಲಿ ಜ್ಞಾನಿಗಳಾದ ದೇವತೆಗಳಿಗೆ ಮಾತ್ರವೇ ತಿಳಿಯಲಾಗುವ ಅನೇಕ ಮಹಾರಹಸ್ಯಗಳನ್ನು ಕೂಡ ಹೇಳಿದ್ದಾರೆ. ಅದರಿಂದ ದೇವತೆಗಳು ಅವುಗಳನ್ನು ಅರ್ಥಮಾಡಿಕೊಂಡು ಪರಮಾನಂದಭರಿತರಾಗಿ ಮೋಕ್ಷಸುಖವನ್ನೂ ಲೆಕ್ಕಿಸದೆ ಮತ್ತೂ ಮತ್ತೂ ಅಧ್ಯಯನ ಮಾಡುತ್ತಾರೆ. ಋಷಿಗಂಧರ್ವಾದಿ ಮಧ್ಯಮ ವರ್ಗದ ಶ್ರೋತೃಗಳು ಕೂಡ ಯಥಾಶಕ್ತಿ ಈ ಮಹಾರಹಸ್ಯಾರ್ಥಗಳನ್ನು ಗ್ರಹಿಸಿ ತೃಪ್ತಿಪಡುತ್ತಾರೆ. ಜೊತೆಗೆ, ಅಲ್ಲಿಯೇ ಹೇಳಿದ ಧರ್ಮಾದಿ ತ್ರಿವರ್ಗವನ್ನೂ ಕೂಡ ಅದಕ್ಕೆ ಹರಿಗುಣಗಳನ್ನು ಹೇಳುವುದರಲ್ಲಿಯೇ ಮುಖ್ಯತಾತ್ಪರ್ಯವೆಂದು ಅವರು ತಿಳಿದಿರುವುದರಿಂದ, ಮುಖ್ಯವಾಗಿ ಹರಿಗುಣಗಳನ್ನೂ ತಿಳಿದು ಸುಖಿಸುತ್ತಾರೆ. ಅವರ ಮತಿಯು ಗ್ರಾಮ್ಯ ವಿಷಯಸುಖ ವರ್ಣನೆಯನ್ನು ಕೇಳುವುದರಲ್ಲಿಯೇ ಮಗ್ನವಾಗುವುದಿಲ್ಲ—

'ಹರೇಃ ಕಥಾಯಾಂ ಮತಿರ್ಗೃಹೀತಾ'

'ಗ್ರಾಮ್ಯಸುಖಾನುವಾದ್ಯೈಃ ಮತಿರ್ಗೃಹೀತಾ ನ'

ಆದರೆ ಅಜ್ಞರಾದ ಮಾನವರು ದೇವಯೋಗ್ಯರಹಸ್ಯಾರ್ಥಗಳನ್ನು ಗ್ರಹಿಸಲು ಶಕ್ತರಲ್ಲ. ಅದರಿಂದ ಅವರ ಮತಿ ಮನೋರಂಜನೆಗಾಗಿ ಸ್ವರ್ಗಸುಖವನ್ನು ಮೀರಿಸಬಲ್ಲ ಗ್ರಾಮ್ಯಸುಖ ವರ್ಣನೆಯನ್ನು ಕೇಳುವುದರಲ್ಲಿಯೇ ಮಗ್ನವಾಗುತ್ತದೆ. ಹರಿಗುಣಗಳನ್ನು ಕೇಳುವುದರಲ್ಲಿ ಮಗ್ನವಾಗುವುದಿಲ್ಲ—

**'ಹರೇಃಕಥಾಯಾಂ ನ ಮತಿರ್ಗೃಹಿತಾ'**

ಭಾಗವತ ತಾತ್ಪರ್ಯದಲ್ಲಿ ಹೀಗೆ ಹೇಳಿದ್ದಾರೆ—

ಯಥಾಹಿ ತು ಭಾರತೇ ದೇವೋ ನ ತಥಾನ್ಯೇಷು ಕೇಷುಚಿತ್ ।
ಉಚ್ಯತೇ, ನ ತಥಾಪೀಶಂ ಜಾನಂತ್ಯಜ್ಞಾ ಜನಾರ್ದನಂ ॥

(ಭಾ.ತಾ.೧.೪.೩೦)

ಭಾರತದಲ್ಲಿ ಭಗವಂತನ ಬಗ್ಗೆ ಹೇಳಿದಷ್ಟು ಇನ್ನೆಲ್ಲೂ ಹೇಳಿಲ್ಲ. ಆದರೂ ಅಜ್ಞರು ಅದರಲ್ಲಿ ಹರಿಯ ಬಗ್ಗೆ ಪೂರ್ತಿಜ್ಞಾನವನ್ನು ಪಡೆಯಲಾರರು' ಎಂದು ಸ್ಕಾಂದಪುರಾಣ ಹೇಳುತ್ತಿದೆ.

ಶ್ರೀಕೃಷ್ಣನು ಸಂಧಾನ ವಿಫಲವಾದಾಗ ಹಸ್ತಿನಾವತಿಯನ್ನು ತೊರೆದು ಉಪಪ್ಲಾವ್ಯಕ್ಕೆ ಹೋದುದನ್ನು ತಿಳಿದ ವಿದುರ ತನಗೂ ಹಸ್ತಿನಾವತಿ ಬೇಡವೆಂದು ತೀರ್ಥಯಾತ್ರೆಗೆ ತೆರಳಿದ. ಹರಿದ್ವಾರದ ಗಂಗಾತೀರದಲ್ಲಿ ಅವನಿಗೆ ಮೈತ್ರೇಯ ಮಹರ್ಷಿಗಳ ಭೆಟ್ಟಿಯಾಯಿತು. ಮೈತ್ರೇಯರು ಶ್ರೀವ್ಯಾಸರ ಮಿತ್ರರು, ಸಹಪಾಠಿಗಳು. ಪರಾಶರರಲ್ಲಿ ಅವರಿಬ್ಬರೂ ಅಧ್ಯಯನ ಮಾಡಿದ್ದರು. ಶ್ರೀವ್ಯಾಸರು ಆರುನೂರು ವರ್ಷಗಳ ಹಿಂದೆಯೇ ಭಾರತವನ್ನು ರಚಿಸಿದ್ದರು. ಅದನ್ನು ಪುನಃಪುನಃ ವಿದುರನು ಅಧ್ಯಯನ ಮಾಡಿದವನೆ ಆದರೂ ಅಜ್ಞಮಾನವರಿಗೆ ಭಾರತವು ದುರ್ಗಮ. ಏಕೆಂದರೆ ಅದರಲ್ಲಿ ಗುಹ್ಯಭಾಷೆ ದರ್ಶನಭಾಷೆ ಮತ್ತು ಸಮಾಧಿಭಾಷೆ ಎಂದು ಭಾಷಾತ್ರಯವನ್ನು ಅರಿತವರಿಗೆ ಮಾತ್ರ ಅದು ಸುಗುಮವಾಗುವುದು. ಅದರಿಂದ ಮೈತ್ರೇಯರೇ! ನೀವು ಅಜ್ಞಮಾನವರಿಗೂ ಸುಲಭವಾಗಿ ತಿಳಿಯುವಂತೆ ಕೇವಲ ಸಮಾಧಿ ಭಾಷೆಯಿಂದಲೇ ಹರಿ ಗುಣಗಳನ್ನು ಹೇಳಬೇಕು ಎಂದು ಅಜ್ಞರ ಮೇಲಿನ ಅನುಕಂಪೆಯಿಂದ ಕೇಳಿಕೊಳ್ಳುತ್ತಾನೆ, ಅವನು ಯಮದೇವಾಂಶ ಸಂಭೂತ ನಾದ್ದರಿಂದ ಮಾನವರ ಮೇಲೆ ಅನುಕಂಪೆ ಅವನಿಗೆ ಸಹಜ. ಹೀಗಾಗಿ ಶ್ರೀಕೃಷ್ಣನ ಆದೇಶದಂತೆ ಮೈತ್ರೇಯರು ವಿದುರನಿಗೆ ಭಾಗವತವನ್ನು ಉಪದೇಶಿಸಿದರು. ಹೀಗೆ ಹೇಳದಿದ್ದರೆ, ವಿದುರನು ಮೈತ್ರೇಯರಲ್ಲಿ 'ಭಾಗವತ ಹೇಳಿರಿ' ಎಂದರೆ, 'ಏಕೆ? ಮಹಾಭಾರತವೇ ಎಲ್ಲವನ್ನೂ ಹೇಳುತ್ತಿರುವಾಗ ಭಾಗವತ ಬೇರೆ ಏಕೆ ಬೇಕು?' ಎಂದು ಮೈತ್ರೇಯರು ಕೇಳುವ ಸಂಭವವಿತ್ತು. ಅದಕ್ಕೆ ವಿದುರನು

ಮೊದಲಿಗೇ 'ಅಜ್ಞ ಮಾನವರಿಗೆ ಭಾಗವತವು ದುರ್ಗಮವಾಗಿದೆ. ಸುಲಲಿತ ಸುಗಮವಾಗಿರುವ ಭಾಗವತವನ್ನೇ ಹೇಳಿರಿ' ಎನ್ನುತ್ತಿದ್ದಾನೆ.

'ಕಿಂ ವಾ ಭಾಗವತಾ ಧರ್ಮಾಃ ನ ಪ್ರಾಯೇಣ ನಿರೂಪಿತಾಃ?' ಎಂದು ಶ್ರೀವ್ಯಾಸರು ತಮ್ಮನ್ನು ತಾವೇ ಕೇಳಿಕೊಳ್ಳುತ್ತಾರೆ. ಏನು ಇದರ ಅರ್ಥ? 'ಭಾಗವತಧರ್ಮಗಳ ವಿವರ ಭಾರತದಲ್ಲಿ ವಿಸ್ತಾರವಾಗಿ ಬಂದಿಲ್ಲದಿರುವುದೇ ನನ್ನ ಈ ಜ್ಞಾನಕಾರ್ಯದ ಅಪೂರ್ಣತೆಗೆ ಕಾರಣವೆ?' ಎನ್ನುತ್ತಾರೆಯೆ? ಇಲ್ಲ. 'ಭಾಷಾತ್ರಯದ ಪರಿಜ್ಞಾನವಿಲ್ಲದ ಅಜ್ಞರಿಗೆ ಭಾರತದಲ್ಲಿ ಭಾಗವತ ಧರ್ಮ ಗಳನ್ನು ಕಂಡುಕೊಳ್ಳುವುದು ಕಠಿನವಾಗುವುದರಿಂದಲೇ ಅಜ್ಞರು ಭಾರತದಿಂದ ಭಗವಂತನನ್ನು ತಿಳಿಯುತ್ತಿಲ್ಲ' ಎಂದು ಸ್ಕಾಂದಪುರಾಣವಚನವನ್ನು ಉದಾಹರಿಸಿ ಶ್ರೀಮದಾಚಾರ್ಯರು ಭಾಗವತತಾತ್ಪರ್ಯದಲ್ಲಿ ಸ್ಪಷ್ಟ ಹೇಳುತ್ತಾರೆ.

ಇದಕ್ಕೆ ಇನ್ನೊಂದು ಅರ್ಥವನ್ನು ಸ್ಪಷ್ಟವಾಗಿ ಹೇಳುತ್ತಾರೆ— 'ಪುನರಪೇಕ್ಷಿತತ್ವಾತ್ ನ ಪ್ರಾಯೇಣ ನಿರೂಪಿತಾಃ' ಭಗವದ್‌ಗುಣಗಳನ್ನು ಭಾರತದಲ್ಲಿ ಶ್ರೀವ್ಯಾಸರು ಬಹಳವಾಗಿ ಹೇಳಿಯೇ ಇದ್ದಾರೆ, ಆದರೂ ಅವುಗಳನ್ನು ಎಷ್ಟು ಹೇಳಿದರೂ ಕಡಿಮೆಯೆ. ಅದರಿಂದ ಇನ್ನೂ ಪುನಃ ಬೇರೆಯೆ ಒಂದು ಭಾಗವತಗ್ರಂಥವನ್ನು ರಚಿಸಬೇಕಾಗಿದೆ. ಅದರಲ್ಲಿ ಸುಲಭವಾಗಿ ಸಮಾಧಿ ಭಾಷೆಯಿಂದ ಭಗವದ್‌ಗುಣಗಳನ್ನು ಇನ್ನೂ ಹೆಚ್ಚು ನಿರೂಪಿಸ ಬೇಕೆಂದು ಭಗವದ್‌ಭಕ್ತರಿಗೆ ಅಪೇಕ್ಷೆ ಇದೆ' ಎಂದು. ಹೀಗಾಗಿ,

'ಯಸ್ಮಿನ್ ನೃಣಾಂ ಗ್ರಾಮ್ಯಸುಖಾನುವಾದೈಃ ।
ಮತಿರ್ಗೃಹೀತಾ ನ ಹರೇಃ ಕಥಾಯಾಂ' ॥

ಎನ್ನುವುದಕ್ಕೆ ಎರಡು ರೀತಿಯಿಂದ ಅರ್ಥೈಸಬೇಕು—

(೧) ಭಾರತಕ್ಕಿಂತ ಹೆಚ್ಚು ವಿಷ್ಣು ಮಾಹಾತ್ಮ್ಯ ಪ್ರತಿಪಾದಕವಾದ ಹೆಚ್ಚು ಮೋಕ್ಷಸಾಧನವಿಚಾರ ಮಾಡುವ ಗ್ರಂಥ ಇನ್ನೊಂದಿಲ್ಲ. ಅದರಿಂದ—

ಭಾರತಾನ್ನಾಧಿಕಂ ವಿಷ್ಣೋರ್ಮಹಿಮಾವಾಚಕಂ ಕ್ವಚಿತ್ ।
ಭಾರತಾನ್ನ ವಿರಾಗಾಯ ಭಾರತಾನ್ನ ವಿಮುಕ್ತಯೇ ॥

(ಭಾ.ತಾ. ೩.೫.೧೨)

ಎಂದು ಪದ್ಮಪುರಾಣ ವಚನವು ಹೇಳುತ್ತಿರುವುದರಿಂದ ದೇವಾದಿ ಉತ್ತಮ

**'ಹರೇಃಕಥಾಯಾಂ ನ ಮತಿರ್ಗೃಹಿತಾ'**

ಭಾಗವತ ತಾತ್ಪರ್ಯದಲ್ಲಿ ಹೀಗೆ ಹೇಳಿದ್ದಾರೆ—

ಯಥಾಹಿ ತು ಭಾರತೇ ದೇವೋ ನ ತಥಾನ್ಯೇಷು ಕೇಷುಚಿತ್ ।
ಉಚ್ಯತೇ, ನ ತಥಾಪೀಶಂ ಜಾನಂತ್ಯಜ್ಞಾ ಜನಾರ್ದನಂ ॥

(ಭಾ.ತಾ.೧.೪.೩೦)

ಭಾರತದಲ್ಲಿ ಭಗವಂತನ ಬಗ್ಗೆ ಹೇಳಿದಷ್ಟು ಇನ್ನೆಲ್ಲೂ ಹೇಳಿಲ್ಲ. ಆದರೂ ಅಜ್ಞರು ಅದರಲ್ಲಿ ಹರಿಯ ಬಗ್ಗೆ ಪೂರ್ತಿಜ್ಞಾನವನ್ನು ಪಡೆಯಲಾರರು' ಎಂದು ಸ್ಕಾಂದಪುರಾಣ ಹೇಳುತ್ತಿದೆ.

ಶ್ರೀಕೃಷ್ಣನು ಸಂಧಾನ ವಿಫಲವಾದಾಗ ಹಸ್ತಿನಾವತಿಯನ್ನು ತೊರೆದು ಉಪಪ್ಲಾವ್ಯಕ್ಕೆ ಹೋದುದನ್ನು ತಿಳಿದ ವಿದುರ ತನಗೂ ಹಸ್ತಿನಾವತಿ ಬೇಡವೆಂದು ತೀರ್ಥಯಾತ್ರೆಗೆ ತೆರಳಿದ. ಹರಿದ್ವಾರದ ಗಂಗಾತೀರದಲ್ಲಿ ಅವನಿಗೆ ಮೈತ್ರೇಯ ಮಹರ್ಷಿಗಳ ಭೆಟ್ಟಿಯಾಯಿತು. ಮೈತ್ರೇಯರು ಶ್ರೀವ್ಯಾಸರ ಮಿತ್ರರು, ಸಹಪಾಠಿಗಳು. ಪರಾಶರರಲ್ಲಿ ಅವರಿಬ್ಬರೂ ಅಧ್ಯಯನ ಮಾಡಿದ್ದರು. ಶ್ರೀವ್ಯಾಸರು ಆರುನೂರು ವರ್ಷಗಳ ಹಿಂದೆಯೇ ಭಾರತವನ್ನು ರಚಿಸಿದ್ದರು. ಅದನ್ನು ಪುನಃಪುನಃ ವಿದುರನು ಅಧ್ಯಯನ ಮಾಡಿದವನೆ ಆದರೂ ಅಜ್ಞಮಾನವರಿಗೆ ಭಾರತವು ದುರ್ಗಮ. ಏಕೆಂದರೆ ಅದರಲ್ಲಿ ಗುಹ್ಯಭಾಷೆ ದರ್ಶನಭಾಷೆ ಮತ್ತು ಸಮಾಧಿಭಾಷೆ ಎಂದು ಭಾಷಾತ್ರಯವನ್ನು ಅರಿತವರಿಗೆ ಮಾತ್ರ ಅದು ಸುಗುಮವಾಗುವುದು. ಅದರಿಂದ ಮೈತ್ರೇಯರೇ! ನೀವು ಅಜ್ಞಮಾನವರಿಗೂ ಸುಲಭವಾಗಿ ತಿಳಿಯುವಂತೆ ಕೇವಲ ಸಮಾಧಿ ಭಾಷೆಯಿಂದಲೇ ಹರಿ ಗುಣಗಳನ್ನು ಹೇಳಬೇಕು ಎಂದು ಅಜ್ಞರ ಮೇಲಿನ ಅನುಕಂಪೆಯಿಂದ ಕೇಳಿಕೊಳ್ಳುತ್ತಾನೆ, ಅವನು ಯಮದೇವಾಂಶ ಸಂಭೂತ ನಾದ್ದರಿಂದ ಮಾನವರ ಮೇಲೆ ಅನುಕಂಪೆ ಅವನಿಗೆ ಸಹಜ. ಹೀಗಾಗಿ ಶ್ರೀಕೃಷ್ಣನ ಆದೇಶದಂತೆ ಮೈತ್ರೇಯರು ವಿದುರನಿಗೆ ಭಾಗವತವನ್ನು ಉಪದೇಶಿಸಿದರು. ಹೀಗೆ ಹೇಳದಿದ್ದರೆ, ವಿದುರನು ಮೈತ್ರೇಯರಲ್ಲಿ 'ಭಾಗವತ ಹೇಳಿರಿ' ಎಂದರೆ, 'ಏಕೆ? ಮಹಾಭಾರತವೇ ಎಲ್ಲವನ್ನೂ ಹೇಳುತ್ತಿರುವಾಗ ಭಾಗವತ ಬೇರೆ ಏಕೆ ಬೇಕು?' ಎಂದು ಮೈತ್ರೇಯರು ಕೇಳುವ ಸಂಭವವಿತ್ತು. ಅದಕ್ಕೆ ವಿದುರನು

ಮೊದಲಿಗೇ 'ಅಜ್ಞ ಮಾನವರಿಗೆ ಭಾಗವತವು ದುರ್ಗಮವಾಗಿದೆ. ಸುಲಲಿತ ಸುಗಮವಾಗಿರುವ ಭಾಗವತವನ್ನೇ ಹೇಳಿರಿ' ಎನ್ನುತ್ತಿದ್ದಾನೆ.

'ಕಿಂ ವಾ ಭಾಗವತಾ ಧರ್ಮಾಃ ನ ಪ್ರಾಯೇಣ ನಿರೂಪಿತಾಃ?' ಎಂದು ಶ್ರೀವ್ಯಾಸರು ತಮ್ಮನ್ನು ತಾವೇ ಕೇಳಿಕೊಳ್ಳುತ್ತಾರೆ. ಏನು ಇದರ ಅರ್ಥ? 'ಭಾಗವತಧರ್ಮಗಳ ವಿವರ ಭಾರತದಲ್ಲಿ ವಿಸ್ತಾರವಾಗಿ ಬಂದಿಲ್ಲದಿರುವುದೇ ನನ್ನ ಈ ಜ್ಞಾನಕಾರ್ಯದ ಅಪೂರ್ಣತೆಗೆ ಕಾರಣವೆ?' ಎನ್ನುತ್ತಾರೆಯೆ? ಇಲ್ಲ. 'ಭಾಷಾತ್ರಯದ ಪರಿಜ್ಞಾನವಿಲ್ಲದ ಅಜ್ಞರಿಗೆ ಭಾರತದಲ್ಲಿ ಭಾಗವತ ಧರ್ಮಗಳನ್ನು ಕಂಡುಕೊಳ್ಳುವುದು ಕಠಿನವಾಗುವುದರಿಂದಲೇ ಅಜ್ಞರು ಭಾರತದಿಂದ ಭಗವಂತನನ್ನು ತಿಳಿಯುತ್ತಿಲ್ಲ' ಎಂದು ಸ್ಕಾಂದಪುರಾಣವಚನವನ್ನು ಉದಾಹರಿಸಿ ಶ್ರೀಮದಾಚಾರ್ಯರು ಭಾಗವತತಾತ್ಪರ್ಯದಲ್ಲಿ ಸ್ಪಷ್ಟ ಹೇಳುತ್ತಾರೆ.

ಇದಕ್ಕೆ ಇನ್ನೊಂದು ಅರ್ಥವನ್ನು ಸ್ಪಷ್ಟವಾಗಿ ಹೇಳುತ್ತಾರೆ— 'ಪುನರಪೇಕ್ಷಿತತ್ವಾತ್ ನ ಪ್ರಾಯೇಣ ನಿರೂಪಿತಾಃ' ಭಗವದ್‌ಗುಣಗಳನ್ನು ಭಾರತದಲ್ಲಿ ಶ್ರೀವ್ಯಾಸರು ಬಹಳವಾಗಿ ಹೇಳಿಯೇ ಇದ್ದಾರೆ, ಆದರೂ ಅವುಗಳನ್ನು ಎಷ್ಟು ಹೇಳಿದರೂ ಕಡಿಮೆಯೆ. ಅದರಿಂದ ಇನ್ನೂ ಪುನಃ ಬೇರೆಯೆ ಒಂದು ಭಾಗವತಗ್ರಂಥವನ್ನು ರಚಿಸಬೇಕಾಗಿದೆ. ಅದರಲ್ಲಿ ಸುಲಭವಾಗಿ ಸಮಾಧಿ ಭಾಷೆಯಿಂದ ಭಗವದ್‌ಗುಣಗಳನ್ನು ಇನ್ನೂ ಹೆಚ್ಚು ನಿರೂಪಿಸಬೇಕೆಂದು ಭಗವದ್‌ಭಕ್ತರಿಗೆ ಅಪೇಕ್ಷೆ ಇದೆ' ಎಂದು. ಹೀಗಾಗಿ,

'ಯಸ್ಮಿನ್ ನೃಣಾಂ ಗ್ರಾಮ್ಯಸುಖಾನುವಾದೈಃ ।
ಮತಿರ್ಗೃಹೀತಾ ನ ಹರೇಃ ಕಥಾಯಾಂ' ॥

ಎನ್ನುವುದಕ್ಕೆ ಎರಡು ರೀತಿಯಿಂದ ಅರ್ಥೈಸಬೇಕು—

(೧) ಭಾರತಕ್ಕಿಂತ ಹೆಚ್ಚು ವಿಷ್ಣು ಮಾಹಾತ್ಮ್ಯ ಪ್ರತಿಪಾದಕವಾದ ಹೆಚ್ಚು ಮೋಕ್ಷಸಾಧನವಿಚಾರ ಮಾಡುವ ಗ್ರಂಥ ಇನ್ನೊಂದಿಲ್ಲ. ಅದರಿಂದ—

ಭಾರತಾನ್ನಾಧಿಕಂ ವಿಷ್ಣೋರ್ಮಹಿಮಾವಾಚಕಂ ಕ್ವಚಿತ್ ।
ಭಾರತಾನ್ನ ವಿರಾಗಾಯ ಭಾರತಾನ್ನ ವಿಮುಕ್ತಯೇ ॥

(ಭಾ.ತಾ. ೩.೫.೧೨)

ಎಂದು ಪದ್ಮಪುರಾಣ ವಚನವು ಹೇಳುತ್ತಿರುವುದರಿಂದ ದೇವಾದಿ ಉತ್ತಮ

ಸಾಧಕರಿಗೆ, ವ್ಯಾಸರು ಹೇಳಿದ ಭಾರತದಲ್ಲಿಯೇ ಭಾಷಾತ್ರಯವಿವೇಕಪೂರ್ವಕ ಪೂರ್ವಾಪರ ವಿಮರ್ಶೆಯಿಂದ ಎಲ್ಲ ಕಥೆಗಳೂ ಹರಿಮಾಹಾತ್ಮ್ಯಸೂಚಕ ವಾಗಿರುವುದು ತಿಳಿದುಬರುತ್ತದೆ. ಅವರ ಮತಿಯು ಮೇಲುನೋಟಕ್ಕೆ ಕಾಣುವ ವಿಷಯಸುಖಭೋಗದ ಕಥೆಗಳಲ್ಲಿ ತನ್ಮಯತೆಯನ್ನು ಹೊಂದುವುದಿಲ್ಲ-ಇದು ಒಂದರ್ಥ.

(೨) ಯಥಾ ತು ಭಾರತೇ ದೇವೋ
ನ ತಥಾನ್ಯೇಷು ಕೇಷುಚಿತ್ ।
ಉಚ್ಯತೇ ನ ತಥಾಪೀಶಂ
ಜಾನಂತ್ಯಜ್ಞಾ ಜನಾರ್ದನಂ ॥ ಇತಿ ಸ್ಕಾಂದೇ

'ಭಾಗವತದಲ್ಲಿ ಭಗವಂತನ ಬಗ್ಗೆ ಹೇಳಿದಷ್ಟು ಇನ್ನಾವ ಗ್ರಂಥದಲ್ಲಿಯೂ ಹೇಳಿಲ್ಲ. ಆದರೂ ಅಜ್ಞ ಮಾನವರು ಅದನ್ನು ತಿಳಿಯಲು ಅಶಕ್ತರಾದ್ದರಿಂದ ಅವರ ಮತಿಯು ಭಾರತದಲ್ಲಿ ಮೇಲುನೋಟಕ್ಕೆ ಕಾಣುವ ವಿಷಯಸುಖ ಭೋಗದ ಕಥೆಗಳಲ್ಲಿ ತನ್ಮಯವಾಗುವುದು ಹೊರತು ಸೂಕ್ಷ್ಮಬುದ್ಧಿಗೆ ತೋರುವ ಹರಿಗುಣಗಳ ವರ್ಣನೆಗಳಲ್ಲಿ ತನ್ಮಯವಾಗುವುದಿಲ್ಲ. ರಹಸ್ಯವಾಗಿ ನಿರೂಪಿತ ವಾಗುತ್ತಿರುವ ಹರಿಗುಣಗಳನ್ನು ಭಾರತದಿಂದ ತಿಳಿಯುವಲ್ಲಿ ಅವರ ಮತಿಯು ಅಸಮರ್ಥವಾಗುವುದು'—ಇದು ಇನ್ನೊಂದರ್ಥ.

ವಿದುರನು ಅಜ್ಞ ಮಾನವರ ಸ್ಥಿತಿಯ ಬಗ್ಗೆ ಶೋಕಿಸುವುದು ಈ ಅಭಿಪ್ರಾಯದಿಂದಲೆ. ಅವನು ಹೇಳುತ್ತಾನೆ—ಮಧ್ಯಮಾಧಿಕಾರಿ ಜನರು ಭಾರತದಲ್ಲಿರುವ ಅನೇಕಾನೇಕ ರಹಸ್ಯಾರ್ಥಗಳಲ್ಲಿ ಯಥಾಶಕ್ತಿ ಎರಡು ಮೂರು ಅರ್ಥಗಳನ್ನು ನೇರವಾಗಿಯೂ, ಅವಾಂತರ ತಾತ್ಪರ್ಯಯುಕ್ತವಾಗಿ ಮೇಲುನೋಟಕ್ಕೆ ಕಾಣುವಂತೆ ಹೇಳಿದ ವಿಷಯಸುಖಭೋಗದ ಕಥೆಗಳಿಂದ ಅರ್ಥಾತ್ ಉಕ್ತವಾಗುವ ಹರಿಗುಣಗಳನ್ನು ವಿಚಾರದಿಂದಲೂ ತಿಳಿಯುತ್ತಿದ್ದಾರೆ. ಆದರೆ ಸ್ಪಷ್ಟವಾಗಿ ಹೇಳಿದ್ದನ್ನು ಮಾತ್ರ ಗ್ರಹಿಸಬಲ್ಲ ಅಜ್ಞಮಾನವರು ಸ್ವಭಾವತಃ ವಿಷಯಾಸಕ್ತರಾದ್ದರಿಂದ ಅಲೌಕಿಕ ಸ್ವರ್ಗಾದಿಸುಖಭೋಗಗಳನ್ನು ಮೀರಿಸು ವಂಥ ವಿಷಯಸುಖಗಳನ್ನು ವರ್ಣಿಸುವ ಭಾರತಕಥೆಗಳ ಹಾರ್ದವನ್ನರಿಯದೆ ಪಾಪಕರವಾದ ಹಾಳು ವಿಷಯಸುಖ ವರ್ಣನೆಗಳಲ್ಲಿಯೇ ತನ್ಮಯರಾಗಿ

ಹರಿಕಥೆಗೆ ವಿಮುಖ ರಾಗುವರು. ಸ್ವಭಾವತಃ ಮೋಕ್ಷಯೋಗ್ಯರೇ ಆಗಿರುವ ಈ ಅಜ್ಞಮಾನವರ ಸ್ಥಿತಿ ತೀರ ಶೋಚನೀಯವಾಗಿದೆ. ಅವರ ಕಾಯ ವಾಕ್ ಮನಸ್ಸುಗಳಿಂದಾಗುವ ಕರ್ಮಗಳೆಲ್ಲವೂ ಹೀಗೇ ವ್ಯರ್ಥವಾಗುತ್ತಿವೆ. ವ್ಯರ್ಥ ವಾಗಿಯೆ ಅವರ ಆಯುಷ್ಯವನ್ನು ಕಾಲನಾಮಕ ಶ್ರೀಹರಿ ಕಳೆಯುತ್ತಿದ್ದಾನೆ' ಎನ್ನುತ್ತಿದ್ದಾನೆ ವಿದುರ—

ತಾನ್‌ಶೋಚ್ಯಶೋಚ್ಯಾನವಿದೋಽನುಶೋಚೇ
ಹರೇಃ ಕಥಾಯಾಂ ವಿಮುಖಾನಘೇನ ।
ಕ್ಷಿಣೋತಿ ದೇವೋಽನಿಮಿಷಸ್ತು ತೇಷಾಂ
ಆಯುರ್ವೃಥಾವಾದಗತಿಸ್ಮೃತೀನಾಂ ॥ (ಭಾ.೩.೫.೧೪)



—೧೦—



**ಅಜ್ಞರಿಗೂ ಸುಗಮವಾದ ಭಾಗವತ ಹೇಳಲು ಪ್ರಾರ್ಥನೆ**

**ತದಸ್ಯ ಕೌಷಾರವ ಶರ್ಮದಾತು**
**ರ್ಹರೇಃ ಕಥಾಮೇವ ಕಥಾಸು ಸಾರಂ ।**
**ಉದ್ಧೃತ್ಯ ಪುಷ್ಪೇಭ್ಯ ಇವಾರ್ತ ಬಂಧೋ**
**ಶಿವಾಯ ನಃ ಕೀರ್ತಯ ತೀರ್ಥಕೀರ್ತೇಃ ॥**

(ಭಾ.೩.೫.೧೫)

**ಏವಂ ಮೈತ್ರೇಯಮನೋಗತಾಂ ಶಂಕಾಂ ಪರಿಹೃತ್ಯ ವಿದುರಃ ಸ್ವಾಭಿಪ್ರಾಯಂ ವಕ್ತಿ ॥ ತದಿತಿ ॥ ಹೇ ಕೌಷಾರವ ಮೈತ್ರೇಯ ಯತ ಏವಂ ನೃಣಾಂ ಪ್ರಯೋಜನಪ್ರಾಪ್ತಿರ್ಭಾರತಾನ್ನ ಭವತಿ ತತ್ತಸ್ಮಾನ್ನೋ ಮಂದಮತೀನಾಂ ಶಿವಾಯ ಪುರುಷಾರ್ಥಲಾಭಾಯ ಪವಿತ್ರಕೀರ್ತೇಃ ಶರ್ಮಣಃ ಸುಖಸ್ಯ ದಾತುರ್ಹರೇಃ ಕಥಾಮೇವ ಮಧುಕರಃ ಪುಷ್ಪೇಭ್ಯಃ ಸಾರಮಿವ ಸರ್ವಾಸ್ವಪಿ ಕಥಾಸು ಸಾರಮುದ್ಧೃತ್ಯ ಕೀರ್ತಯ ಪ್ರತಿಪಾದಯ। ತಾದೃಶಂ ಭಾಗವತಂ ಪ್ರತಿಪಾದಯೇತಿ ಭಾವಃ। ವಕ್ತುರಾದರೋತ್ಪಾದನಾಯ ಸ್ತೌತಿ ಆರ್ತಾನಾಂ ಪ್ರಯೋಜನಲಾಭೇನ ಬಂಧೋ ಪ್ರಿಯಕರೇತಿ। ಇದಮತ್ರ ಜ್ಞೇಯಂ— ಭಾಗವತಮಪಿ ದೇವದುರ್ಗಮಾನೇಕಾರ್ಥಗರ್ಭಿತಂ ಪರಂತು- ಆಪಾತತೋ ಮಂದಾನುಗ್ರಹಾಯ ಸರ್ವವೇದೇತಿಹಾಸಬ್ರಹ್ಮಸೂತ್ರಾದಿ**

**ಸಾರಸಂಗ್ರಹರೂಪತಯಾ ತೇಷಾಮಪಿ ಸುಗ್ರಹಮಿತ್ಯನೇನಾಭಿಪ್ರಾಯೇಣ ಮಂದಾಧಿಕಾರಿಕತ್ವವರ್ಣನಮಿತಿ । ಅನ್ಯಥಾ ಬ್ರಹ್ಮಾದೀನ್ಪ್ರತ್ಯುಪದೇಶಾ-ಯೋಗಾದಿತಿ ॥**



**ವಿದುರನು ಮುಂದುವರಿದು ಮೈತ್ರೇಯರಿಗೆ ಹೇಳುತ್ತಾನೆ— 'ಅಜ್ಞ ಮಾನವರಿಗೆ ಭಾರತಮಾತ್ರದಿಂದ ಪ್ರಯೋಜನ ಕೈಗೆ ಎಟುಕದಿರುವುದರಿಂದ ಎಲ್ಲರಿಗೂ ಎಲ್ಲ ಪುರುಷಾರ್ಥಗಳು ಸುಲಭವಾಗಿ ಸಿಗುವುದಕ್ಕಾಗಿ ದುಂಬಿಗಳು ಹೂಗಳಿಂದ ಮಕರಂದವನ್ನೆತ್ತಿ ಜೇನಿನ ರೂಪದಲ್ಲಿ ಕೊಡುವಂತೆ, ಮೈತ್ರೇಯರೆ, ಆರ್ತ ಬಂಧುಗಳಾದ ತಾವು ಕಥೆಗಳಲ್ಲೆಲ್ಲ ಶ್ರೇಷ್ಠವಾದ ಪಾವನಕೀರ್ತಿಉಳ್ಳ ಹರಿಕಥೆಯನ್ನೇ ಹೇಳುವ ಭಾಗವತ ಪುರಾಣವನ್ನು ಹೇಳಿರಿ' ಎಂದು.**

ಭಾಗವತರಚನೆ ಮಂದಮಾನವರ ಸಲುವಾಗಿ ಎಂದಮಾತ್ರಕ್ಕೆ ದೇವಋಷಿ ಮುಂತಾದವರಿಗೆ ಇದು ಅನಪೇಕ್ಷಿತವೆಂದು ತಿಳಿಯಬಾರದು. 'ವಿದ್ಯಾವತಾಂ ಭಾಗವತೇ ಪರೀಕ್ಷಾ' ಎನ್ನುವಂತೆ ಭಾಗವತದಲ್ಲಿ ದೇವತೆಗಳಿಗೂ ದುರ್ಗಮ ವಾದ ಅನೇಕ ಉತ್ತಮ ರಹಸ್ಯಾರ್ಥಗಳು ಎಲ್ಲೆಡೆ ತುಂಬಿಯೇ ಇವೆ. ಆದರಿಂದಲೆ ಬ್ರಹ್ಮಾದಿಗಳಿಗೆ ಭಾಗವತೋಪದೇಶ ಮಾಡಿದ್ದು ಯುಕ್ತವೆನಿಸುತ್ತದೆ. ಆದರೂ ಸರ್ವವೇದ ಪುರಾಣ ಭಾರತ ಬ್ರಹ್ಮಸೂತ್ರಾದಿಗಳ ಸುಲಭಸಾರಸಂಗ್ರಹ ರೂಪವಾದ್ದರಿಂದ ಪಂಡಿತರು ಪಾಮರರೆನ್ನದೆ ಎಲ್ಲರಿಗೂ ಉಪಯುಕ್ತವಾದ ಪುರಾಣರಾಜ ಇದು ಶ್ರೀಮದ್ಭಾಗವತ ಎನ್ನುವುದು ಈ ಕಥೆಯಿಂದ ಸೂಚಿತವಾಗುತ್ತದೆ.



–೧೧–

**ಅನೇಕ ಭಕ್ತರ ಕಥೆಗಳೂ ಭಾಗವತದಲ್ಲಿ ಇರುವುದರಿಂದ ಅದನ್ನು ಹೇಳಬೇಕೆಂದು ಪ್ರಾರ್ಥನೆ**

ಕಲಿಮಲ ಸಂಸೃತಿ ಕಾಲನೋಽಖಿಲೇಶೋ
ಹರಿರಿತರತ್ರ ನ ಗೀಯತೇ ಹ್ಯಭೀಕ್ಷ್ಣಂ ।

**ಇಹ ತು ಪುನರ್ಭಗವಾನಶೇಷಮೂರ್ತಿಃ**
**ಪರಿಪಠಿತೋಽನುಪದಂ ಕಥಾಪ್ರಸಂಗೈಃ ॥**

(ಭಾ.೧೨.೧೨.೬೫)

ನನು ಗ್ರಾಮ್ಯಕಥಾನಿಮಿತ್ತಂ ಭಾರತಾದ್ ಬಿಭ್ಯತಾ ಭವತಾ ಭಾಗವತ ಪ್ರಾರ್ಥನಾ ಕೃತಾ । ತತ್ರಾಪಿ ಸ ಏವಾಸ್ತಿ ಚೇನ್ನೂನಂ ಘಟ್ಟಕುಟೀಪ್ರಭಾತ-ನ್ಯಾಯಮನುಸರಸೀತ್ಯತೋ ನ ತತ್ರ ಸೋಽಸ್ತೀತ್ಯಾಹ ॥ **ಕಲೀತಿ** ॥ ಇತರತ್ರ ಇತರಗ್ರಂಥೇಷು ಕಲಿಮಲಾಖ್ಯಂ ಬಂಧಂ ಕಾಲಯತಿ ನಾಶಯತೀತಿ ಸ ಜಗದೀಶೋ ಹರಿರಭೀಕ್ಷ್ಣಂ ನ ಪ್ರತಿಪಾದ್ಯತೇ । ಇಹ ಭಾಗವತೇ ತು ವಿಶೇಷೇಣ ಪ್ರತಿಪಾದ್ಯತೇ । ಕೋ ವಿಶೇಷಃ । ಅನುಪದಂ ಸರ್ವತ್ರಾಪಿ । ನನ್ವತ್ರಾಪಿ ಬಹವಃ ಕಥಾಪ್ರಸಂಗಾಃ ಸಂತಿ । ಸತ್ಯಂ । ತೈಸ್ತೈಃ ಕಥಾಪ್ರಸಂಗೈರಪಿ ಭಗವಾನೇವ ಬಹುಶಃ ಪರಿಪಠಿತಃ । ಅನ್ಯೇ ತು ಕಿಯತ್ಯೈವ ನಿಬಂಧೇನ । ಅನ್ಯತ್ರ ತೇ ಬಾಹುಲ್ಯೇನೈವ । ಯಥಾಹುಃ—

'ಯಥಾ ಧರ್ಮಾದಯೋ ಹ್ಯಾರ್ಥಾ ಮುನಿವರ್ಯಾನುವರ್ಣಿತಾಃ ।
ನ ತಥಾ ವಾಸುದೇವಸ್ಯ ಮಹಿಮಾ ಹ್ಯನುವರ್ಣಿತ' ಇತಿ ।

ತಥಾಪಿ ಕಿಯತಾ ನಿಬಂಧೇನ ನಿವೇಶನಮಪಿ ಕುತ ಇತಿ ಚೇತ್ ನಿರಾಕರಿಷ್ಯಾಮಸ್ತವ ಚಮತ್ಕಾರಂ ಮಾ ತ್ವರಿಷ್ಠಾ ಇತಿ ಭಾವೇನ ವಿಶೇಷಾಂತರಂ ಚಾಹ ॥ **ಅಶೇಷಮೂರ್ತಿರಿತಿ** ॥ ಅಶೇಷಾ ಮೂರ್ತಯೋ ಯಸ್ಯಾಸಾವಶೇಷಮೂರ್ತಿರಿಹ ಪರಿಪಠಿತ ಇತಿ ಅಶೇಷಾ ಅಪಿ ಭಗವನ್ಮೂರ್ತ-ಯೋಽತ್ರ ಸಂಕಲಯ್ಯ ಪ್ರತಿಪಾದ್ಯಂತ ಇತಿ । ಭಗವದ್ವಿಭೂತಿವಿಪುಲೀ-ಕರಣಾರ್ಥಮೇವ ಭಾಗವತಸ್ಯ ಪ್ರವೃತ್ತೇರಿತಿ ಹಿಶಬ್ದೇನಾಹ । ಅಪರಂ ಚ ವಿಶೇಷಂ ದರ್ಶಯತಿ । **ಇಹೇತಿ** ॥ ಇಹ ಪುನಃ ಪುನಃ ಪರಿಪಠಿತ ಇತಿ । ಪುನಃ ಪುನರುಕ್ತೌ ಪುನರುಕ್ತಿಃ ಕಥಂ ನ ಭವೇದಿತ್ಯತ ಆಹ । **ಕಥಾಪ್ರಸಂಗೈರಿತಿ** ॥ ಭಿನ್ನೈಃ ಕ್ವಚಿದ್ವಕ್ತೃಭೇದಾತ್ ಕ್ವಚಿಚ್ಛ್ರೋತೃಭೇದಾತ್ ಅನ್ಯತ್ರ ಪ್ರಸಕ್ತಿಭೇದಾದಿತ್ಯೇವಂ ಪುನಃ ಪುನರುದಿತ ಇತಿ ಕುತಃ ಪೌನರುಕ್ತ್ಯಮಿತಿ । ಯಥಾಹುಃ—

''ಅತ್ರಾನುವರ್ಣ್ಯತೇಽಭೀಕ್ಷ್ಣಂ ವಿಶ್ವಾತ್ಮಾ ಭಗವಾನ್ಹರಿಃ ।
ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಶ್ಚ ಕ್ರೋಧಸಂಭವ'' ಇತಿ ॥



ಸೂತರು ಶೌನಕಾದಿಗಳಿಗೆ ಹೇಳುತ್ತಾರೆ— ಬಂಧಕವಾದ ಕಲಿಮಲವನ್ನು

**ತೊಡೆದುಹಾಕುವ ಸರ್ವೇಶ ಶ್ರೀಹರಿ ಈ ಭಾಗವತ ಪುರಾಣದಲ್ಲಿ ಪುನಃ ಪುನಃ ವರ್ಣಿತನಾಗುತ್ತಾನೆ. ಬೇರೆ ರಾಜಸ ತಾಮಸ ಪುರಾಣಗಳಲ್ಲಿ ಇಂಥ ವರ್ಣನೆ ಹೆಚ್ಚಾಗಿ ಸಿಗಲಾರದು. ಇಲ್ಲಿ ಪದೇಪದೇ ಬೇರೆ ಬೇರೆ ಕಥಾಪ್ರಸಂಗಗಳಿಂದ ಪೂರ್ಣಗುಣಸ್ವರೂಪನಾದ ಶ್ರೀಹರಿಯ ಎಲ್ಲ ಅವತಾರ ರೂಪಗಳೂ ಒಂದು ಕಡೆ ವರ್ಣಿತವಾಗಿ ಸಿಗುತ್ತವೆ.**

ಸೂತರು ಇಲ್ಲಿ ಶ್ರೋತೃಗಳ ಪ್ರಶ್ನೆಗಳಿಗೆ ಸಮಾಧಾನ ನೀಡುತ್ತಾರೆ. ಭಾರತಾದಿ ಗ್ರಂಥಗಳಲ್ಲಿ ವಿಷಯಸುಖಭೋಗದ ಕಥೆಗಳೇ ಹೆಚ್ಚು ಎಂದು ಭಯಪಟ್ಟು ಭಾಗವತ ಶ್ರವಣಕ್ಕೆ ಎಂದು ಬಂದರೆ ಇಲ್ಲಿಯೂ ಅದೇ ಗೋಳು. ಅಂಥ ಕಥೆಗಳೇ ಎಲ್ಲೆಡೆ ಕಂಡುಬರುತ್ತವೆ. ಉದಾ: ನವಮಸ್ಕಂಧ ಇಡಿ ಬೇರೆಬೇರೆ ರಾಜರ ಕಥೆಗಳೇ ಇವೆ. ಇದು ಘಟ್ಟಕುಟೀಪ್ರಭಾತ ನ್ಯಾಯ. ತೆರಿಗೆಕಳ್ಳನೊಬ್ಬ ರಾತ್ರಿಯಲ್ಲಿ ಸುಂಕದ ಕಟ್ಟೆಯ ದಾರಿ ಬಿಟ್ಟು ಬೇರೆ ದಾರಿಯಲ್ಲೇ ನಡೆಯುತ್ತಾನೆ. ಆದರೆ ದಾರಿತಪ್ಪಿ ರಾತ್ರಿ ಇಡೀ ಸುತ್ತಿಸುತ್ತಿ ಬೆಳಗಾಗುವಾಗ ಸರಿಯಾಗಿ ಸುಂಕದಕಟ್ಟೆಗೇ ಬರುತ್ತಾನೆ! ಹೀಗಾಯಿತು ಭಾಗವತ ಶ್ರೋತೃಗಳ ಸ್ಥಿತಿ' ಎಂದು ಪ್ರಶ್ನೆ. ಭಗವಂತನ ಅವತಾರಗಳನ್ನು ಪುನಃಪುನಃ ಹೇಳಿದರೆ ಪುನರುಕ್ತಿಯಾಗುವುದಿಲ್ಲವೆ ಎಂದು ಇನ್ನೊಂದು ಪ್ರಶ್ನೆ.

ಇದಕ್ಕೆ ಸೂತರು ಹೇಳುತ್ತಾರೆ—ಭಾಗವತದಲ್ಲಿ ಬೇರೆ ರಾಜರ ಕಥೆ ಗಳಿದ್ದರೂ ಬೇರೆ ಪುರಾಣಗಳಂತೆ ಅವೇ ಹೆಚ್ಚಿನ ಸಂಖ್ಯೆಯಲ್ಲಿಲ್ಲ. ಅಲ್ಪಸಂಖ್ಯೆ ಯಲ್ಲಾದರೂ ಬೇರೆ ರಾಜರ ಕಥೆಗಳನ್ನು ಇಲ್ಲಿ ಏಕೆ ಸೇರಿಸಬೇಕಿತ್ತು? ಎಂದರೆ ಅವು ಕೂಡ ಭಗವಂತನ ಆಯಾ ಅವತಾರರೂಪಗಳ ವರ್ಣನೆಯ ಉದ್ದೇಶ ದಿಂದಲೆ ಹೊರಟಿವೆ ಎನ್ನುತ್ತಾರೆ ಸೂತರು. ಅವತಾರವರ್ಣನೆಗಳಲ್ಲಿ ಕೆಲವೆಡೆ ಪ್ರಸಂಗಗಳು ಬೇರೆಬೇರೆ ಇರುತ್ತವೆ. ಕೆಲವೆಡೆ 'ಹೇಳುವವರು ಬೇರೆಬೇರೆ' 'ಕೇಳುವವರು ಬೇರೆಬೇರೆ' 'ಹೇಳುವ ಕೇಳುವ ಪ್ರಸಂಗಗಳು ಬೇರೆಬೇರೆ' ಇರುವುದರಿಂದ ಪುನರುಕ್ತಿಯೂ ಇಲ್ಲ ಎನ್ನುತ್ತಾರೆ.

ಅತ್ರಾನುವರ್ಣ್ಯತೇಽಭೀಕ್ಷ್ಣಂ ವಿಶ್ವಾತ್ಮಾ ಭಗವಾನ್ ಹರಿಃ ।
ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಃ ಕ್ರೋಧ ಸಮುದ್ಭವಃ ॥

(ಭಾ.೧೨.೪.೪೪)

'ಸರ್ವಶಕ್ತನಾದ ಭಗವಾನ್ ಶ್ರೀಹರಿ ಪುನಃಪುನಃ ಈ ಭಾಗವತದಲ್ಲಿ ವರ್ಣಿತನಾಗುತ್ತಾನೆ. ಉದಾ: ಹರಿಯ ಜ್ಞಾನಶಕ್ತಿ ಪ್ರತಿಬಿಂಬನಾಗಿ ಬ್ರಹ್ಮನೂ ಸಂಹಾರಶಕ್ತಿ ಪ್ರತಿಬಿಂಬನಾಗಿ ರುದ್ರನೂ ಜನಿಸಿದನೆಂದು'. ಇದು ಶುಕಮುನಿ ಪರೀಕ್ಷಿತನಿಗೆ ಹೇಳಿದ ಮಾತು. ಇದಕ್ಕೆ ಅನುಸಾರವಾಗಿಯೇ ವಿದುರನು ಮೈತ್ರೇಯರಲ್ಲಿ ಭೂಭಾರಹರಣ ಮಾಡುತ್ತಿರುವ ಶ್ರೀಕೃಷ್ಣನ ಅವತಾರ ಕಥೆಗಳನ್ನು ಹೇಳಿರಿ ಎಂದು ಮೈತ್ರೇಯರಲ್ಲಿ ಕೇಳಿಕೊಳ್ಳುತ್ತಾನೆ. ಏಕೆಂದರೆ ಅವನು ಉದ್ಧವನ ಮುಖದಿಂದ ಯಾದವಕುಲವಿಡೀ ಅಂತಃಕಲಹದಿಂದ ನಾಶವಾಗುವುದೆಂದು ಮುನಿಶಾಪ ಬಂದಿದ್ದನ್ನು ಕೇಳಿದ್ದ. ಉದ್ಧವ ಶ್ರೀಕೃಷ್ಣನಿಂದ ಭಾಗವತೋಪದೇಶ ಪಡೆದಿದ್ದ. ಮೈತ್ರೇಯರೂ ಆಗ ಅವನ ಜೊತೆಗಿದ್ದು ಶ್ರವಣ ಮಾಡಿದ್ದರು.



—೧೨—

**ಶೇಷದೇವರು ಸನಕಾದಿಗಳಿಗೆ ಹೇಳಿದ ಭಾಗವತವನ್ನು ಹೇಳುತ್ತೇನೆ ಎನ್ನುತ್ತಾರೆ ಮೈತ್ರೇಯರು**

**ಸೋಽಹಂ ನೃಣಾಂ ಕ್ಷುಲ್ಲಸುಖಾಯ ದುಃಖಂ**
**ಮಹದ್ ಗತಾನಾಂ ವಿರಮಾಯ ತುಭ್ಯಂ ।**
**ಪ್ರವರ್ತಯೇ ಭಾಗವತಂ ಪುರಾಣಂ**
**ಯದಾಹ ಸಾಕ್ಷಾದ್ ಭಗವಾನ್ ಋಷಿಭ್ಯಃ ॥**

(ಭಾ.೩.೮.೨)

**ತದೇವಂ ನಿಪುಣತರಂ ವಿಜ್ಞಾಪಿತಸ್ವಾಶಯಂ ವಿದುರಂ ಪ್ರತಿ ಮೈತ್ರೇಯಃ ಕಿಮುಕ್ತವಾನಿತ್ಯತ ಆಹ ॥ ಸ ಇತಿ ॥ ಏವಂ ತ್ವಯಾ ಪ್ರಾರ್ಥಿತೋಽಹಂ ಸಾಕ್ಷಾದ್ಭಗವಾನ್ಪೂಜ್ಯತಮಃ ಋಷಿಭ್ಯೋ ಯದಾಹ ತದ್ಭಾಗವತಂ ಪುರಾಣಂ ಕ್ಷುಲ್ಲಸುಖಾಯ ಮಹದ್ದುಃಖಂ ಗತಾನಾಂ ನೃಣಾಂ ತಸ್ಯ ದುಃಖಸ್ಯ ವಿರಮಾಯ ನಿವೃತ್ತಯೇ ತುಭ್ಯಂ ಪ್ರವರ್ತಯೇ ಕಥಯಾಮಿ ॥**



ಹರಿದ್ವಾರದಲ್ಲಿ ಗಂಗಾತೀರದಲ್ಲಿ ಮೈತ್ರೇಯರು ವಿದುರನಿಗೆ ಹೇಳು

ತ್ತಾರೆ—ಅಜ್ಞಮಾನವರು ಕ್ಷುದ್ರಸುಖಕ್ಕಾಗಿ ಯತ್ನಿಸಿ ಮಹತ್ತಾದ ದುಃಖವನ್ನು ತಂದುಕೊಳ್ಳುತ್ತಿರುವುದರಿಂದ ಅವರ ದುಃಖ ನಿವಾರಣೆಗಾಗಿ ನಾನು ನಿನಗೆ ಭಾಗವತವನ್ನು ಹೇಳುತ್ತೇನೆ. ಅದು ಜೀವಾಭಿಮಾನಿಯಾದ ಪೂಜ್ಯ ಸಂಕರ್ಷಣ ದೇವನು ಸನಕಾದಿ ಮುನಿಗಳಿಗೆ ಉಪದೇಶಿಸಿದ ಪುರಾಣ.



—೧೩—

**ಸನಕಾದಿಗಳು ಶೇಷದೇವರಲ್ಲಿ ಕೇಳಿಕೊಳ್ಳುತ್ತಾರೆ**

ಆಸೀನಮುರ್ವ್ಯಾಂ ಭಗವಂತಮಾದ್ಯಂ
ಸಂಕರ್ಷಣಂ ದೇವಮಕುಂಠಸತ್ತ್ವಂ ।
ವಿವಿತ್ಸವಸ್ತತ್ತ್ವಮತಃ ಪರಸ್ಯ
ಕುಮಾರಮುಖ್ಯಾ ಮುನಯೋಽನ್ವಪೃಚ್ಛನ್ ॥ (ಭಾ.೩.೯.೩)

ನನು ಕೋಽಯಂ ಭಗವಾನ್ಯೋ ಭಾಗವತಮಾಹ ಋಷಿಭ್ಯಃ । ಕೇ ಚ ತೇ ಋಷಯೋ ಯೇ ತದುಕ್ತಂ ಸಂಶುಶ್ರುವುಃ । ತಥಾಪಿ ತವ ಭಾಗವತೋಪದೇಶಃ ಕಥಮಿತ್ಯೇವಂ ವಿದುರಮನೋಗತಂ ಶಂಕಾತ್ರಯಂ ಪರಿಹರತಿ ಶ್ಲೋಕಚತುಷ್ಟಯೇನ । ತತ್ರಾದೌ ಶಂಕಾದ್ವಯಂ ಪರಿಹರಂಸ್ತೃತೀಯಶಂಕಾ-ಪರಿಹಾರಸ್ಯ ಪೀಠಿಕಾಮಾರಚಯತಿ ॥ ಆಸೀನಮಿತಿ ॥ ಸನತ್ಕುಮಾರೋ ಮುಖ್ಯೋ ಯೇಷಾಂ ತ ಇತಿ । ಅನೇನ ದ್ವಿತೀಯಶಂಕಾಪರಿಹಾರಃ । ಮುನಯಃ ಕದಾಚಿತ್ ಉರ್ವ್ಯಾಂ ಪಾತಾಲೇ ಆಸೀನಂ ಸ್ಥಿತಂ । ಲೋಕತ್ರಯವಿವಕ್ಷಯಾ ಪಾತಾಲಸ್ಯಾಪ್ಯುರ್ವೀತ್ವೇನ ತಥೋಕ್ತಿರಿತಿ ಜ್ಞೇಯಂ । ಅಪ್ರತಿಹತಬಲಂ ಆದ್ಯಂ ಜೀವೋತ್ತಮಂ । ಅತ ಏವ ಪೂಜ್ಯಂ ಸಂಕರ್ಷಣಾಖ್ಯಂ ದೇವಂ । ಅನೇನ ಪ್ರಥಮಶಂಕಾ ಪರಿಹೃತಾ । ಪ್ರತ್ಯಾಗತ್ಯ ಅತಃ ಶೇಷದೇವಸ್ಯ ಸಕಾಶಾತ್ಪರಮಾತ್ಮನೋ ಮಹಿಮಾನಂ ಜ್ಞಾತುಕಾಮಾಃ ಪ್ರಶ್ನಮಕುರ್ವನ್ । ಅನೇನ ತೃತೀಯಶಂಕಾಪರಿಹಾರಸ್ಯ ಪೀಠಿಕಾ ರಚಿತಾ ಭವತಿ ॥



ಮೈತ್ರೇಯರು ವಿದುರನಿಗೆ ಹೇಳುತ್ತಾರೆ—'ಉರ್ವ್ಯಾಂ ಆಸೀನಂ' 'ಉರ್ವೀ' ಎಂದರೆ ಇಲ್ಲಿ ಪಾತಾಳ. ಪೃಥಿವಿ–ಅಂತರಿಕ್ಷ–ಸ್ವರ್ಗ ಎಂದು ಬ್ರಹ್ಮಾಂಡದ ಎಲ್ಲ ಲೋಕಗಳನ್ನು ಮೂರು ಲೋಕವಾಗಿ ವಿಭಾಗಮಾಡುವಾಗ

ಪಾತಾಳವು ಪೃಥಿವಿಯಲ್ಲಿಯೇ ಸೇರುತ್ತದೆ. ಆದರಿಂದ 'ಉರ್ವಿಯಲ್ಲಿ' ಅಂದರೆ ಪಾತಾಳದಲ್ಲಿ ಆಸೀನನಾದ ಅಪ್ರತಿಹತಬಲಜ್ಞಾನ ಸ್ವರೂಪನಾದ 'ಸಂಕರ್ಷಣ' ಅಂದರೆ ಸಂಕರ್ಷಣ ಎಂಬ ಭಗವನ್ಮೂರ್ತಿಯ ವಿಶೇಷ ಆವೇಶಪಾತ್ರನಾದ ಆದಿಶೇಷನು 'ಆದ್ಯ' ಅಂದರೆ ಜೀವಾಭಿಮಾನಿಯಾದ್ದರಿಂದ ಜೀವೋತ್ತಮ ನೆನಿಸುತ್ತಾನೆ. ಜೀವರ ಮೇಲಿನ ಕರುಣೆಯಿಂದ ಅವನು ತಾನು ನಾರಾಯಣ ನಿಂದ ಕೇಳಿ ತಿಳಿದಿದ್ದ ಭಾಗವತವನ್ನು ಉಪದೇಶಿಸಬೇಕೆಂದು ಪರತತ್ವಜಿಜ್ಞಾಸು ಗಳಾದ ಸನತ್ಕುಮಾರಾದಿ ಮುನಿಗಳು ಕೇಳಿಕೊಂಡರು.



—೧೪—

**ಶೇಷದೇವರಿಂದ ಸನಕಾದಿಗಳು ಅವರಿಂದ**
**ಸಾಂಖ್ಯಾಯನರು ಭಾಗವತ ಶ್ರವಣ ಮಾಡಿದರು**

ಪ್ರೋಕ್ತಂ ಕಿಲೈತದ್ ಭಗವತ್ತಮೇನ
ನಿವೃತ್ತಧರ್ಮಾಭಿರತಾಯ ತೇನ ।
ಸನತ್ಕುಮಾರಾಯ ಸ ಚಾಹ ಪೃಷ್ಟಃ
ಸಾಂಖ್ಯಾಯನಾಯಾಂಗ ಧೃತವ್ರತಾಯ ॥ (ಭಾ.೩.೮.೭)

ತೇನೈವಂ ಮುನಿಭಿಃ ಪೃಷ್ಟೇನ ಪೂಜ್ಯತಮೇನ ಸಂಕರ್ಷಣೇನ ನಿವೃತ್ತಧರ್ಮಾಭಿರತಾಯ ಸನತ್ಕುಮಾರಾಯಾನ್ಯೇಭ್ಯೋ ಮುನಿಭ್ಯಶ್ಚ ಯತ್ಪ್ರೋಕ್ತಂ। ಏತಚ್ಚ ಪ್ರಸಿದ್ಧಮಿತಿ ಕಿಲೇತ್ಯನೇನ ಸೂಚಯತಿ। ಸ ಚ ಸನತ್ಕುಮಾರಃ ಸಾಂಖ್ಯಾಯನೇನ ಪೃಷ್ಟಃ ಸನ್ ಧೃತವ್ರತಾಯ ಸಾಂಖ್ಯಾಯನಾಯ ಯದಾಹ।



ಮೈತ್ರೇಯರು ವಿದುರನಿಗೆ ಹೇಳಿದರು—'ಪರಮಪೂಜ್ಯನಾದ ಶೇಷದೇವನು ನಿಷ್ಕಾಮಕರ್ಮಿಗಳಾದ ಸನತ್ಕುಮಾರ ಮುನಿಗಳಿಗೆ ಈ ಭಾಗವತ ಪುರಾಣವನ್ನು ಹೇಳಿದನೆಂದೂ ಮುಂದೆ ಸನತ್ಕುಮಾರ ಮುನಿ ಅದನ್ನು ವಿಷ್ಣುವ್ರತನಿಷ್ಠರಾದ ಸಾಂಖ್ಯಾಯನ ಮುನಿಗಳಿಗೆ ಉಪದೇಶಿಸಿದರೆಂದೂ ಕೇಳಿದ್ದೇನೆ.'

—೧೫—

**ಸಾಂಖ್ಯಾಯನರು ಪರಾಶರರಿಗೂ ಬೃಹಸ್ಪತಿಗೂ ಭಾಗವತ ಹೇಳಿದರು**

ಸಾಂಖ್ಯಾಯನಃ ಪಾರಮಹಂಸ್ಯಮುಖ್ಯೋ
ವಿವಕ್ಷಮಾಣೋ ಭಗವದ್ ವಿಭೂತೀಃ ।
ಜಗಾದ ಸೋಽಸ್ಮದ್ ಗುರವೇಽನ್ವಿತಾಯ
ಪರಾಶರಾಯಾಥ ಬೃಹಸ್ಪತೇಶ್ಚ ॥

(ಭಾ.೩.೯.೮)

ಯಃ ಪಾರಮಹಂಸ್ಯಧರ್ಮೇ ಮುಖ್ಯೋ ಯಸ್ಯ । ಅತ ಏವ ಭಗವತೋ ವಿಭೂತೀರ್ವಿವಕ್ಷಮಾಣಃ ಸೋಽಪಿ ಸಾಂಖ್ಯಾಯನೋಽಸ್ಮದ್ಗುರವೇ, ಅನ್ವಿತಾಯ ಶಿಷ್ಯಯೋಗ್ಯೈರ್ಗುರುಭಕ್ತ್ಯಾದಿ- ಗುಣೈಃ, ಪರಾಶರಾಯ ತಥಾ ಬೃಹಸ್ಪತೇಶ್ಚ ಯಜ್ಜಗಾದ ।

❖❖❖

ಮೈತ್ರೇಯರು ವಿದುರನಿಗೆ ಹೇಳಿದರು—ಪರಮಹಂಸ ಶ್ರೇಷ್ಠರಾದ ಸಾಂಖ್ಯಾಯನರು ಹರಿಯ ಗುಣಗಳನ್ನು ಹೇಳಲು ಸದ್ಗುಣಿಗಳಾದ ನಮ್ಮ ಗುರು ಪರಾಶರರಿಗೂ ಬೃಹಸ್ಪತಿಗೂ ಉಪದೇಶಿಸಿದರು.

❖❖❖

—೧೬—

**ಪರಾಶರರು ತನಗೆ ಭಾಗವತ ಉಪದೇಶಿಸಿದರೆಂದು ಮೈತ್ರೇಯರು ಹೇಳುತ್ತಾರೆ**

ಪ್ರೋವಾಚ ಮಹ್ಯಂ ಸ ದಯಾಳುರುಕ್ತೋ
ಮುನಿಃ ಪುಲಸ್ತ್ಯೇನ ಪುರಾಣ ಮಾದ್ಯಂ ।
ಸೋಽಹಂ ಬತ್ತೈತತ್ ಕಥಯಾಮಿ ವತ್ಸ
ಶ್ರದ್ಧಾಳವೇ ನಿತ್ಯಮನುವ್ರತಾಯ ॥

(ಭಾ.೩.೯.೯)

ಸ ಚ ಮುನಿಃ ಪರಾಶರಃ ಸ್ವಪಿತಾ ರಾಕ್ಷಸೇನ ಭಕ್ಷಿತ ಇತಿ ಶ್ರುತ್ವಾ

**ರಾಕ್ಷಸಕುಲನಾಶಾಯ ಯಜ್ಞೇ ಪ್ರವೃತ್ತೋ ವಸಿಷ್ಠವಚನಾನ್ನಿವೃತ್ತಃ। ತತಃ ಸ್ವಸಂತತಿರಕ್ಷಣತುಷ್ಟೇನ ಪುಲಸ್ತ್ಯೇನ ಪುರಾಣಪ್ರವರ್ತಕೋ ಭವಿಷ್ಯಸೀತಿ ದತ್ತವರೋ ದಯಾಲುರಾದ್ಯಂ ಪುರಾಣಂ ಯನ್ಮಹ್ಯಂ ಪ್ರೋವಾಚ। ಹೇ ಅಂಗ ವತ್ಸ ಏತದೇವ ತದುಪದಿಷ್ಟೋಽಹಂ ನಿತ್ಯಂ ಶ್ರದ್ಧಾಯುಕ್ತಾಯಾನುವ್ರತಾಯ ತುಭ್ಯಂ ಕಥಯಾಮಿ। ಕಥನೇ ಸ್ವಸ್ಯ ಆದರಸೂಚನಾಯ ಪುನರುಕ್ತಿಃ। ಕಥನಂ ಚ ಪರಮಾನಂದಕರಮಿತಿ ಬರ್ತೇತ್ಯ ನೇನಾಹ। ಅನೇನ ತೃತೀಯಶಂಕಾ ಪರಿಹೃತಾ। ತದನೇನ ಶ್ರೀನಾರಾಯಣೇನ ಸಾಕ್ಷಾದ್ಬ್ರಹ್ಮಾಣಂ ಪ್ರತ್ಯುಪದೇಶಸಮಯ ಏವ ಶೇಷಾಯ ಪ್ರೋಕ್ತಂ ಶೇಷೇಣ ಸನತ್ಕುಮಾರಾಯ ತೇನ ಸಾಂಖ್ಯಾಯನಾಯ ತೇನ ಪರಾಶರಾಯ ತೇನ ಮೈತ್ರೇಯಾಯ ತೇನ ವಿದುರಾಯೇತಿ ಪ್ರಕಾರಾಂತರೇಣಾಪಿ ಲೋಕೇ ಭಾಗವತಾಗತಿರುಕ್ತಾ ಭವತಿ। ತದನೇನ ಶ್ರವಣಾದಿರೂಪದ್ವಿತೀಯೇ' ನವಕೇ ಸ್ಮರಣಾಖ್ಯೋ ಭಾಗವತಧರ್ಮಃ ಸೂಚಿತೋ ಭವತಿ। ಯಥಾಹುಃ—**

**''ಬ್ರಹ್ಮಾಣಂ ನಾರದಮೃಷಿಂ ಭವಂ ಪ್ರಹ್ಲಾದಮೇವ ಚ।**
**ದಾಕ್ಷಾಯಣೀಂ ಧರ್ಮಪತ್ನೀಂ ಸೋಮಕಶ್ಯಪಯೋರಪಿ॥**

**ಗಂಗಾಂ ಸರಸ್ವತೀಂ ನಂದಾಂ ಕಾಲಿಂದೀಂ ಸಿತವಾರಣಂ।**
**ಧ್ರುವಂ ಬ್ರಹ್ಮರ್ಷೀನ್ಸಪ್ತ ಪುಣ್ಯಶ್ಲೋಕಾಂಶ್ಚ ಮಾನವಾನ್॥**

**ಉತ್ಥಾಯಾಪರರಾತ್ರಾಂತೇ ಪ್ರಯತಾಃ ಸುಸಮಾಹಿತಾಃ।**
**ಸ್ಮರಂತಿ ಮಮ ರೂಪಾಣಿ ಮುಚ್ಯಂತೇ ತೇಽಂಹಸೋಽಖಿಲಾತ್'' ಇತಿ॥**



**ಮೈತ್ರೇಯರು ವಿದುರನಿಗೆ ಹೇಳಿದರು—ನಾನು ದಯಾಳುಗಳಾದ ಪರಾಶರಮುನಿಗಳನ್ನು ಕೇಳಿಕೊಂಡಾಗ ಪುಲಸ್ತ್ಯಮುನಿಯ ವರದಿಂದ ಅವರು ನನಗೆ ಈ ಉತ್ತಮವಾದ ಪುರಾಣವನ್ನು ಉಪದೇಶಿಸಿದರು. ನಾನೀಗ ಅದನ್ನು ಶ್ರದ್ಧಾಳುವಾದ ಸದಾ ವಿಧೇಯನಾದ ನಿನಗೆ ಹೇಳುವೆನು.**

ಪರಾಶರರು ತನ್ನ ತಂದೆ ಶಕ್ತಿ ಮುನಿಯನ್ನು ವಿಶ್ವಾಮಿತ್ರರು ಕಳಿಸಿದ ಒಬ್ಬ ರಾಕ್ಷಸ ಹಿಡಿದು ತಿಂದುದನ್ನು ತಿಳಿದು, ಸರ್ವರಾಕ್ಷಸ ಸಂಹಾರಕ್ಕೆ ಯಜ್ಞ ಮಾಡಲು ತೊಡಗಿದರು. ವಸಿಷ್ಠಮುನಿ ಬಂದು ತಡೆದುದರಿಂದ ಸುಮ್ಮ ನಾದರು. ರಾಕ್ಷಸರು ಪುಲಸ್ತ್ಯಮುನಿಗಳ ಸಂತತಿ. ಮುನಿ ಸಂತುಷ್ಟರಾಗಿ

ಪರಾಶರರಿಗೆ ನೀನು ಪುರಾಣವಕ್ತಾರನಾಗುವಿ ಎಂದು ವರ ನೀಡಿದರು. ವಸಿಷ್ಠರೂ ಹಾಗೇ ವರ ನೀಡಿದರು. ಪರಾಶರರು ಹೀಗೆ ಹೇಳಿದ ಪುರಾಣವು ವಿಷ್ಣುಪುರಾಣವೆಂದು ಪ್ರಸಿದ್ಧಿ ಇದೆ. ವಿಷ್ಣುಪುರಾಣದಲ್ಲಿಯೆ ಪ್ರಾರಂಭದಲ್ಲಿ ಈ ಕಥೆಯೂ ಬರುತ್ತದೆ. ಪ್ರಕೃತ ಭಾಗವತವನ್ನೂ ಕೂಡ ಪರಾಶರರು ಹೇಳಿದರೆಂದು ಭಾಗವತ ಹೇಳುತ್ತಿದೆ.

ಹೀಗೆ ಬ್ರಹ್ಮದೇವರಿಂದ ನಾರದಾದಿ ಪರಂಪರೆಯ ಮೂಲಕ ಮತ್ತು ಶೇಷದೇವರಿಂದ ಸನಕಾದಿ ಪರಂಪರೆಯ ಮೂಲಕ ಎಂದು ಎರಡು ರೀತಿಯಿಂದ ಭಾಗವತ ಪುರಾಣವು ಲೋಕದಲ್ಲಿ ಪ್ರಸಾರಗೊಂಡಿದ್ದರಿಂದ ಈ ಎಲ್ಲ ಭಾಗವತ ಪ್ರವರ್ತಕರನ್ನೂ ನೆನೆಯುವುದು 'ಸ್ಮರಣ'ವೆಂಬ ಭಾಗವತ ಧರ್ಮಾನುಷ್ಠಾನವಾಗುವುದು. ಇದು ಭಾಗವತದಲ್ಲಿಯೆ ಸ್ಪಷ್ಟವಿದೆ.

ಬ್ರಹ್ಮಾಣಂ ನಾರದಮೃಷಿಂ ಭವಂ ಪ್ರಹ್ಲಾದಮೇವ ಚ
ದಾಕ್ಷಾಯಣೀಂ ಧರ್ಮಪತ್ನೀಂ ಸೋಮಕಶ್ಯಪಯೋರಪಿ
ಗಂಗಾಂ ಸರಸ್ವತೀಂ ನಂದಾಂ ಕಾಳಿಂದೀಂ ಸಿತವಾರಣಂ
ಧ್ರುವಂ ಬ್ರಹ್ಮಋಷೀನ್ ಸಪ್ತ ಪುಣ್ಯಶ್ಲೋಕಾಂಶ್ಚ ಮಾನವಾನ್
ಉತ್ಥಾಯಾಪರರಾತ್ರಾಂತೇ ಪ್ರಯತಾಃ ಸುಸಮಾಹಿತಾಃ
ಸ್ಮರಂತಿ ಮಮ ರೂಪಾಣಿ ಮುಚ್ಯಂತೇ ತೇಽಂಹಸೋಽಖಿಲಾತ್ ॥

ಬ್ರಹ್ಮ–ನಾರದ–ರುದ್ರ–ಪ್ರಹ್ಲಾದ–ಧರ್ಮಪತ್ನಿ ಮೂರ್ತಿದೇವಿ– ಚಂದ್ರ–ಚಂದ್ರಪತ್ನಿಯರು ಇಪ್ಪತ್ತೇಳು ತಾರೆಯರು–ಕಶ್ಯಪ–ಕಶ್ಯಪಪತ್ನಿಯರು– ಗಂಗೆ–ಸರಸ್ವತಿ–ಅಲಕನಂದೆ–ಯಮುನೆ–ಐರಾವತಗಜ–ಧ್ರುವ–ಸಪ್ತ ಬ್ರಹ್ಮರ್ಷಿಗಳು–ಸಪ್ತಮನುಗಳು–ಉತ್ತಮ ಕೀರ್ತಿಶಾಲಿಗಳಾದ ಇತರ ವಿಷ್ಣುಭಕ್ತರು ಇವರನ್ನು ಬೆಳಗು ಮುಂಜಾನೆಗಳಲ್ಲಿ ಎದ್ದು ಶುಚಿಯಾಗಿ ಶ್ರದ್ಧೆಯಿಂದ ನನ್ನ ರೂಪಗಳೆಂದು ಪ್ರತಿಮೆಗಳೆಂದು ನೆನೆವವರು ಸಕಲ ಪಾಪಗಳಿಂದ ಮುಕ್ತರಾಗುವವರು ಎಂದು ಭಾಗವತ (೮.೪.೨೪)ದಲ್ಲಿ ಶ್ರೀಹರಿ ಗಜೇಂದ್ರನಿಗೆ ವರ ನೀಡುತ್ತಾನೆ.

ಭಾಗವತದಲ್ಲಿ ಸ್ಮರಣವು ಎರಡು ನವಕಗಳಲ್ಲಿ ಬರುತ್ತದೆ—

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ ॥

(ಭಾ.೭.೫.೨೨)

ಇದು ಪ್ರಹ್ಲಾದನು ಹಿರಣ್ಯಕಶಿಪುವಿಗೆ ಹೇಳಿದ ಶ್ರವಣಾದಿ ನವಕ. ಮುಂದೆ—

ಶ್ರವಣಂ ಕೀರ್ತನಂ ಚಾಸ್ಯ ಸ್ಮರಣಂ ಮಹತಾಂಗತೇಃ ।
ಸೇವೇಜ್ಯಾವನತಿಃ ಸಖ್ಯಂ ದಾಸ್ಯಮಾತ್ಮಸಮರ್ಪಣಂ ॥

(ಭಾ.೭.೧೨.೧೧)

ಎಂದು ನಾರದರು ಧರ್ಮರಾಜನಿಗೆ ಮೂವತ್ತು ಭಾಗವತಧರ್ಮಗಳನ್ನು ಹೇಳು ವಾಗ ಹೇಳಿದ ಇನ್ನೊಂದು ಶ್ರವಣಾದಿ ನವಕ.

ಈ ಎರಡನೇ ಶ್ರವಣಾದಿನವಕವೇ ಅನುಷ್ಠಾನಯೋಗ್ಯವಾದ ಭಾಗವತ ಧರ್ಮ. ಮೊದಲಿನ ಶ್ರವಣಾದಿನವಕವು ಭಕ್ತನಲ್ಲಿ ತೋರಿಬರುವ ಅವನ ಭಕ್ತಿಯ ವ್ಯಾಪಾರಗಳೆಂದು 'ಭಕ್ತಿಶ್ಚೇನ್ನವಲಕ್ಷಣಾ' ಎಂದು ಪ್ರಹ್ಲಾದನು ಹೇಳುತ್ತಿದ್ದಾನೆ. ಅದರಿಂದ ದ್ವಿತೀಯ ನವಕದಲ್ಲಿ ಬರುವ 'ಸ್ಮರಣೆ'ಯನ್ನು ಇಲ್ಲಿ ಹೇಳಿದ್ದಾರೆ.

ಪ್ರಥಮನವಕವು ಭಕ್ತಿಯ ವ್ಯಾಪಾರ. ಅದಕ್ಕೆ ಬೇರೆ ಫಲವಿಲ್ಲ. ಅದು ಸ್ವಯಂ ಫಲರೂಪ. ದ್ವಿತೀಯ ನವಕವು ಭಕ್ತನು ಅವಶ್ಯ ಅನುಷ್ಠಾನ ಮಾಡ ಬೇಕಾಗಿರುವ ಭಾಗವತಧರ್ಮ. ಅದಕ್ಕೆ ಪಾಪಪರಿಹಾರಾದಿ ಮಹಾಫಲಗಳಿವೆ.



# ೨. ರಾಜವಿರಾಗ ಪ್ರಕರಣ

## ಪ್ರಕರಣ ಸಾರಾಂಶ

ಪರೀಕ್ಷಿದ್ರಾಜ ಆಮರಣ ಉಪವಾಸ ವ್ರತದಿಂದ ಶರೀರ ತ್ಯಾಗ ಮಾಡಲು ಬಯಸಿದ್ದೇಕೆ? ಮೋಸದಿಂದ ಪರರ ರಾಜ್ಯವನ್ನು ಕಸಿದು ಲೋಕನಿಂದೆಗೊಳಗಾಗಿ ಸಾಯಲು ಬಯಸಿದನೆ?

ಇಲ್ಲ, ಅಖಂಡ ಭೂಮಂಡಲಾಧಿಪತಿಯಾಗಿ ಧರ್ಮರಾಜನಿಂದ ಪಟ್ಟಾಭಿಷಿಕ್ತನಾಗಿದ್ದವನು ಪರೀಕ್ಷಿದ್ರಾಜ. ಹಾಗಾದರೆ ಶತ್ರುರಾಜರ ಆಕ್ರಮಣಕ್ಕೆ ಬಲಿಯಾಗಿ ಹತಾಶತೆಯಿಂದ ಸಾಯಲು ಬಯಸಿದನೆ?

ಅದೂ ಇಲ್ಲ. ಧರ್ಮದಿಂದ ಆಳುತ್ತಿದ್ದ ರಾಜನಮೇಲೆ ಪರರಾಜರು ಆಕ್ರಮಣವೆಸಗಬೇಕೆಂದರೆ ಕಲಿಪ್ರೇರಣೆಯೇ ಅದಕ್ಕೆ ಕಾರಣವೆನ್ನ ಬೇಕು. ಆದರೆ, ಪರೀಕ್ಷಿದ್ರಾಜ ಕಲಿಯನ್ನೇ ನಿಗ್ರಹಿಸಿದ ಧೀರ.

ಹಾಗಾದರೆ ಅವನು ಸಾಯಲು ಬಯಸಿದ್ದೇಕೆ? ದೊಡ್ಡವರು ತಮ್ಮ ಸುಖಕ್ಕಾಗಿ ಬದುಕುವುದಿಲ್ಲ. ಪರರ ಸುಖಕ್ಕಾಗಿ ಬದುಕುತ್ತಾರೆ. ಅವರ ಶರೀರ ಪ್ರಜೆಗಳ ರಕ್ಷಣೆಗಾಗಿ ಪ್ರಜೆಗಳ ಹಿತಸಾಧನೆ ಗಾಗಿಯೇ ಇರುತ್ತದೆ. ಅಂತಹ ಶರೀರವನ್ನು ಪರೀಕ್ಷಿದ್ರಾಜ ತ್ಯಜಿಸಲು ಉಪವಾಸವ್ರತವನ್ನೇಕೆ ಕೈಗೊಂಡ? ಇತ್ಯಾದಿ ಪ್ರಶ್ನೆಗಳ ಸರಮಾಲೆಯೇ ಇದೆ. ಎಲ್ಲಕ್ಕೂ ಭಾಗವತವೆ ಸಮಾಧಾನ ನೀಡುತ್ತದೆ.

ಎತ್ತಿನ ರೂಪದಿಂದ ನಿಂತ ಧರ್ಮದೇವತೆಯ ಮೂರು ಕಾಲು ಗಳನ್ನು ಮುರಿದು ಉಳಿದ ಒಂದೇ ಕಾಲನ್ನೂ ಮುರಿಯಲು ಕೋಲು ಹಿಡಿದು ನಿಂತ ಶೂದ್ರರಾಜವೇಷಧಾರಿಯಾದ ಕಲಿ ಯನ್ನು ಕಣ್ಣಾರೆ ಕಂಡ ಪರೀಕ್ಷಿದ್ರಾಜ.

ಅವನನ್ನು ಕೊಲ್ಲಲು ಕತ್ತಿ ಹಿರಿದ. ಕಲಿ ಕಾಲಿಗೆ ಬಿದ್ದು ಶರಣಾದ.

ಕಲಿಯು ಶೂರನೇನಲ್ಲ. ಧರ್ಮಾಚರಣೆಯಲ್ಲಿ ದುರ್ಬಲರಾದ

ವ್ಯಕ್ತಿಗಳು ಸ್ವಲ್ಪ ಎಡವಿದರೂ ಒಡನೆ ಅವರ ಮೇಲೆ ಆಕ್ರಮಣ ಮಾಡುವ. ಅಂಥ ಹೇಡಿಯನ್ನು ಕೊಂದರೆ ಕ್ಷತ್ರಿಯನಾದ ಪಟ್ಟಾಭಿಷಿಕ್ತ ದೊರೆಯಾದ ರಾಜನಿಗೆ ಶೋಭೆ ತರುವುದಿಲ್ಲ ಮಾತ್ರವಲ್ಲ. ಕಲಿ ಬದುಕಿರಬೇಕು. ಅವನ ಕಾಲದಲ್ಲಿ ಪ್ರಜೆಗಳ ಧರ್ಮಾಚರಣೆಗೆ ಮಹಾಫಲ, ಅಧರ್ಮಾಚರಣೆಗೆ ಅಲ್ಪಶಿಕ್ಷೆ ಇರುತ್ತದೆ.

ಅದರಿಂದ ಕಲಿ ಶರಣಾದುದರ ನೆಪದಿಂದ ರಾಜ ಅವನಿಗೆ ಅಭಯ ನೀಡಿ, ವಾಸಕ್ಕೆ ಜೂಜು ಮದ್ಯಪಾನ ಸ್ತ್ರೀಸಂಗ ಹಿಂಸಾಚಾರ ಗಳಲ್ಲಿಯೂ ಬಂಗಾರದಲ್ಲಿಯೂ ಸ್ಥಾನಗಳನ್ನಿತ್ತ. ಕಲಿಗೆ ಪ್ರಿಯ ವಾದ ಅಧರ್ಮಾಚರಣೆಗಳೆಲ್ಲ ನಡೆಯುವುದು ಈ ಐದು ಸ್ಥಾನಗಳಲ್ಲಿಯೆ.

ಇಲ್ಲಿ ಪ್ರಶ್ನೆ ಬರುತ್ತದೆ. ಈ ಸ್ಥಾನಗಳಲ್ಲಿ ವಾಸಮಾಡುವ ಕಲಿಯು ಅಲ್ಲಿ ನಿಶ್ಚಿಂತೆಯಿಂದ ಅಧರ್ಮಪ್ರೇರಣೆ ಮಾಡುತ್ತಾನೆ ಎಂದ ಮೇಲೆ, ರಾಜ ಬಂಗಾರದ ಕಿರೀಟ ಧರಿಸಿದವನು, ಆ ಬಂಗಾರ ದಲ್ಲಿಯೇ ಕಲಿಗೆ ಆಶ್ರಯನೀಡಿ ಅಚಾತುರ್ಯ ಮಾಡಿಬಿಟ್ಟನೆ? ಮುಂದೆ ರಾಜ ಕಲಿಪ್ರೇರಣೆಗೊಳಗಾಗಿ ತಾನೇ ಶಮೀಕಮುನಿಯ ಕೊರಳಿಗೆ ಸತ್ತಹಾವಿನ ಹೆಣವನ್ನು ಮಾಲೆಹಾಕಿ, 'ಇಂದಿನಿಂದ ಏಳನೆ ದಿನದಲ್ಲಿ ತಕ್ಷಕನ ಕಡಿತದಿಂದ ರಾಜ ಸಾಯಲೆಂ'ದು ಮುನಿಶಾಪ ಪಡೆದ ತಾನೆ?

ಈ ಪ್ರಶ್ನೆಗೆ ಭಾಗವತತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು ಸಮಾಧಾನ ನೀಡುತ್ತಾರೆ—

'ವಿಹಿತಾತಿರೇಕೇಣ ನ ಸೇವೇತೇತಿ' 'ಶಾಸ್ತ್ರ ಸಮ್ಮತವಲ್ಲದ ರೀತಿ ಯಲ್ಲಿ ಜೂಜು ಮುಂತಾದವನ್ನು ಸೇವಿಸಬಾರದು ಸೇವಿಸಿದರೆ ಪಾಪ'. ಶಾಸ್ತ್ರವಿಹಿತ ರೀತಿಯಿಂದ ಸೇವಿಸಬೇಕು. ಅದರಿಂದ ಪುಣ್ಯವೆ.

ಬಂಗಾರವನ್ನು 'ಪಾದಾದೌ ನ ಧಾರ್ಯಂ' ಇತ್ಯಾದಿ ನಿಷೇಧಗಳಿಗೆ

ಅನುಸಾರವಾಗಿ ಕರ್ಣವೇಧಾದಿ ವಿಹಿತರೀತಿಯಿಂದ ಕರ್ಣ ಕುಂಡಲ ಕಿರೀಟ ಹಾರಾದಿರೂಪಗಳಿಂದ ಬಂಗಾರದ ಧಾರಣ ಮಾಡಿದರೆ ಶರೀರಕ್ಕೆ ಪಾವಿತ್ರ್ಯ ಪುಣ್ಯಲಾಭಗಳಿವೆ.

ಅದರಿಂದ ಶಾಸ್ತ್ರವಿಹಿತವಲ್ಲದ ನಿಷಿದ್ಧವಾದ ರೀತಿಯಿಂದ ರಾಜ ಬಂಗಾರವನ್ನು ಧರಿಸಲಿಲ್ಲ. ಹೀಗಾಗಿ ಇಲ್ಲಿ ಅಚಾತುರ್ಯವೇನೂ ನಡೆದೇ ಇಲ್ಲ.

ಮುನಿಶಾಪದಿಂದಲೇ ತನಗೆ ಮರಣ ನಿಶ್ಚಿತವಾಗಿ ಬರುತ್ತಿರುವಾಗ ಆಮರಣ ಉಪವಾಸದಿಂದ ರಾಜ ಶರೀರತ್ಯಾಗಕ್ಕೆ ಏಕೆ ಉದ್ಯುಕ್ತ ನಾದ ಎಂಬ ಪ್ರಶ್ನೆಗೆ ಉತ್ತರ—

ಮುನಿಶಾಪದಿಂದ ತಕ್ಷಕ ಕಚ್ಚಿ ರಾಜ ಸತ್ತರೆ ಅದು ದುರ್ಮರಣ, ಪಾಪಕರವಾಗುವುದು. ಅದನ್ನು ತಪ್ಪಿಸಿಕೊಳ್ಳಬೇಕು. ಉಪವಾಸ ವ್ರತದಿಂದ ಮರಣ ಬಂದರೆ ಅದು ಪುಣ್ಯಕರವಾಗುವುದರಿಂದ ರಾಜ ಉಪವಾಸಕ್ಕೆ ಕುಳಿತ.

ಅನ್ನ ನೀರು ಬಿಟ್ಟ ಮಾತ್ರಕ್ಕೆ ಅದು ಉಪವಾಸ ವ್ರತವಾಗುವುದಿಲ್ಲ. ಉಪವಾಸವಿದ್ದು ಹರಿಧ್ಯಾನ ಮಾಡುತ್ತಿರಬೇಕು. ಅದಕ್ಕೆ ಶುಕಮುನಿ ಬಂದು ಭಾಗವತ ಉಪದೇಶ ನೀಡಿ ದುರ್ಮರಣ ವಾಗದಂತೆ ವರವನ್ನು ನೀಡಿ ಅವನಿಂದ ಹರಿಧ್ಯಾನ ಮಾಡಿಸಿದರು.

'ನೀನು ಧ್ಯಾನ ಮಾಡು. ಶರೀರ ಇಂದ್ರಿಯ ಮನಸುಗಳ ಮೇಲಿನ ಅಭಿಮಾನ ತ್ಯಾಗ ಮಾಡಿಬಿಡು. ಆಗ ತಕ್ಷಕ ಕಚ್ಚಿದರೂ ಅದು ನಿನ್ನ ಮರಣಕ್ಕೆ ಕಾರಣವಾಗುವುದಿಲ್ಲ. ಕಚ್ಚಿದಾಗ ವಿಷಾಗ್ನಿ ಶರೀರವನ್ನು ಸುಡುವುದರೊಳಗೇ ನೀನು ಯೋಗಬಲದಿಂದ ಅಸಂಪ್ರಜ್ಞಾತ ಸಮಾಧಿಸ್ಥನಾಗಿ ಶರೀರಾದ್ಯಭಿಮಾನತ್ಯಾಗ ಮಾಡಿರುವಿ. ಅಂದರೆ ಮರಣ ಹೊಂದಿರುವಿ. ಈ ಮರಣ ನಿನಗೆ ಪುಣ್ಯಕರ' ಎಂದು ಶುಕಮುನಿ ವರನೀಡಿ ಹೊರಟುಹೋದರು.

ಇತ್ತ, ಸಪ್ತಾಹಶ್ರವಣದ ಉದ್ಯಾಪನಾಂಗವಾಗಿ ಬ್ರಾಹ್ಮಣರಿಗೆ ಫಲದಾನ ಮಾಡುತ್ತ ಫಲವು ಕ್ರಿಮಿದುಷ್ಟವಾಗಿರಬಹುದೆ? ಎಂದು

ಪರೀಕ್ಷಿತ ಪರೀಕ್ಷಿಸಿದ. ಒಂದು ಕೃಮಿ ಕಂಡು ಬಂತು.

'ಇದೇ 'ತಕ್ಷಕ'ನಾಗಿ ನನ್ನನ್ನು ಕಚ್ಚಲಿ. ಋಷಿವಾಕ್ಯ ಸತ್ಯವಾಗುವುದು, ನಾನೂ ಸಾಯುವುದಿಲ್ಲ, ಅಂದರೆ ನನ್ನ ದುರ್ಮರಣಕ್ಕೆ ಅದು ಕಾರಣವಾಗುವುದಿಲ್ಲ. ಏಕೆಂದರೆ ನಾನೀಗಲೇ ಕ್ಷಣದಲ್ಲಿ ಸಮಾಧಿಸ್ಥನಾಗಿ ಶರೀರತ್ಯಾಗ ಮಾಡಿರುತ್ತೇನೆ. ಶರೀರವು ವಿಷಾಗ್ನಿಯಿಂದ ಸುಟ್ಟುಬೂದಿಯಾಗುವುದು. ನಾನು ಮಾತ್ರ ಅದರಿಂದ ಮರಣ ಹೊಂದುವುದಿಲ್ಲ' ಎನ್ನುತ್ತಾನೆ.

'ನೀನು ಧ್ಯಾನದಲ್ಲಿರುವುದರಿಂದ ತಕ್ಷಕ ನಿನ್ನನ್ನು ಕಚ್ಚುವುದಿಲ್ಲ' 'ನ ತ್ವಾಂ ಧಕ್ಷ್ಯತಿ ತಕ್ಷಕಃ'–ಇದು ಶುಕವಾಕ್ಯ. 'ತಕ್ಷಕನು ನಿನ್ನ ಶರೀರವನ್ನು ಕಚ್ಚಿದರೂ ನಿನ್ನನ್ನು ಅವನು ಕಚ್ಚುವುದಿಲ್ಲ' ಎಂದರ್ಥ.

ಭಾರತ ಯುದ್ಧದಲ್ಲಿ ಧೃಷ್ಟದ್ಯುಮ್ನ ದ್ರೋಣಾಚಾರ್ಯರ ಶಿರಶ್ಛೇದ ಮಾಡಿದ. ಆದರೆ ಅವರನ್ನು ವಧಿಸಲಿಲ್ಲ. ಏಕೆಂದರೆ ಅವರು ಆ ಕ್ಷಣದಲ್ಲಿ ಯೋಗಬಲದಿಂದ ಶರೀರವನ್ನು ತ್ಯಜಿಸಿ ಮೇಲೆ ಹೊರಟು ಹೋಗಿದ್ದರು! ಪರೀಕ್ಷಿತನ ಅವಸಾನವೂ ಅಂಥದೇ ಇನ್ನೊಂದು ಚಮತ್ಕಾರ!

ಬ್ರಾಹ್ಮಣರಾದ ದ್ರೋಣರು ಶಸ್ತ್ರಹಿಡಿದು ಯುದ್ಧ ಮಾಡಿದರೂ ಶಸ್ತ್ರದಿಂದ ಮರಣ ಬಂದರೆ ದುರ್ಮರಣವಾಗುತ್ತಿತ್ತು. ದ್ರೋಣರು ಅದರಿಂದ ಪಾರಾದರು ತಾನೆ?



–೧೭–

**ರಾಜನು ನಿರಶನ ವ್ರತಕ್ಕೆ ಸಂಕಲ್ಪಿಸಲು ಕಾರಣವೇನು?**

**ಶಿವಾಯ ಲೋಕಸ್ಯ ಭವಾಯ ಭೂತಯೇ**
**ಯ ಉತ್ತಮಶ್ಲೋಕ ಪರಾಯಣಾ ಜನಾಃ ।**
**ಜೀವಂತಿ ನಾತ್ಮಾರ್ಥಮಸೌ ಪರಾಂ ಶ್ರಿಯಂ**
**ಮುಮೋಚ ನಿರ್ವಿದ್ಯ ಕುತಃ ಕಲೇವರಂ ॥** (ಭಾ.೧.೪.೧೧)

**ಶ್ರೀಕಪಿಲಾಯ ನಮಃ। ವೈಯಾಸಕಿರ್ನೃಪತಿಂ ಯದಾಹೇತ್ಯುಕ್ತಂ ಪೂರ್ವಪ್ರಕರಣೇ ತತ್ರೇಯಮಾಶಂಕಾ। ರಾಜಾ ಮಹಾಸಾಮ್ರಾಜ್ಯಂ ಜೀವಿತಾಶಾಂ ಚ ತ್ಯಕ್ತ್ವಾ ಗಂಗಾತೀರೇ ನಿರಶನಃ ಶುಶ್ರಾವೇತಿ ತಾವದವಿವಾದಂ। ತತ್ರೋಭಯತ್ಯಾಗೇ ಚ ಸಂಭಾವಿತಮುಭಯಂ, ಯತ್ಪರಚಕ್ರವರ್ತಿಭೀ ರಾಜ್ಯಹರಣಂ, ಯಚ್ಚ ಸ್ವಕುಟುಂಬಲೋಲುಪತಯಾ ಪರೇಷಾಂ ಸರ್ವಸ್ವ-ಪ್ರಾಣಹರಣಾದಿನಾಽಪಕೀರ್ತೌ ಸತ್ಯಾಂ, ಲೋಕತೋ ಲಜ್ಜೇತಿ । ನ ತಾವದಾದ್ಯಮತ್ರಾಸ್ತಿ। ಅಖಂಡಭೂಮಂಡಲಾಧಿಪತಿತ್ವೇನ ಪರೇಷಾಂ ಶಂಕಿತುಮಪ್ಯಶಕ್ಯತ್ವಾತ್। ನಾಪಿ ದ್ವಿತೀಯಃ। ನಾರಾಯಣಪರಾಯಣೇ ಪರಮಭಾಗವತೇ ತಸ್ಮಿಂಸ್ತಸ್ಯ ಮನಸಾಪಿ ಸ್ಮರ್ತುಮನುಚಿತತ್ವಾತ್। ಅತಃ ಕಿನ್ನಿಮಿತ್ತೋಽಯಂ ರಾಜ್ಯಾದಿತ್ಯಾಗ ಇತಿ। ಅನೇನೈವಾಭಿಪ್ರಾಯೇಣ ಪೃಚ್ಛತಿ।। ಶಿವಾಯೇತಿ ।। ಯ ಉತ್ತಮಶ್ಲೋಕಪರಾಯಣಾಸ್ತೇ ಲೋಕಸ್ಯ ಶಿವಾದಿಪ್ರಾಪ್ತಯ ಏವ ಜೀವಂತಿ। ನಾತ್ಮಾರ್ಥಂ। ಯತಸ್ತಸ್ಮಾದಸೌ ಪರಾಂ ಶ್ರಿಯಂ ನಿರ್ವಿದ್ಯ ಕಲೇವರಂ ಕುತಃ ಕಾರಣಾನ್ಮುಮೋಚೇತ್ಯನ್ವಯಃ। ಭವಃ ಉತ್ಪತ್ತಿಃ ಪುತ್ರಪೌತ್ರಾದೀನಾಂ। ಶಿವಂ ಕ್ಷೇಮಂ। ಭೂತಿರೈಶ್ವರ್ಯಂ। ಭೌಮಾಂತರಿಕ್ಷ-ದಿವ್ಯಭೇದೇನ ತ್ರಿವಿಧೋಪದ್ರವಪರಿಹಾರೋ ವಾ ಶಿವಾದಿಪದಾರ್ಥಃ । ಪರಾಮಿತಿ ವಿಶೇಷಣೇನಾಖಂಡಾಧಿಪತಿತ್ವಂ ಸೂಚಿತಂ। ಉತ್ತಮಶ್ಲೋಕ-ಪರಾಯಣಾ ಇತಿ ಭಾಗವತೋತ್ತಮತ್ವಮಿತಿ ।।**



**ಶೌನಕರು ಸೂತರನ್ನು ಕೇಳುತ್ತಿದ್ದಾರೆ— ಭಗವದ್ಭಕ್ತರು ಯಾವಾಗಲೂ ಲೋಕದ ಕಲ್ಯಾಣಕ್ಕಾಗಿ ಸುಖಕ್ಕಾಗಿ ಐಶ್ವರ್ಯಸಮೃದ್ಧಿಗಾಗಿ ಬದುಕುತ್ತಾರೆ. ತಮಗಾಗಿ ತಮ್ಮ ಶರೀರವನ್ನು ಧಾರಣ ಮಾಡುವುದಿಲ್ಲ. ಆದರೂ ಪರೀಕ್ಷಿತನು ಪರೋಪಕಾರಕ್ಕಾಗಿಯೆ ರಕ್ಷಿಸಿಕೊಳ್ಳುತ್ತಿದ್ದ ತನ್ನ ಶರೀರದಲ್ಲಿ ರಕ್ಷಣೆಯ ಆಸ್ಥೆತೊರೆದು ನಿರಶನ ವ್ರತದಿಂದ ತ್ಯಾಗ ಮಾಡಿದ್ದೇಕೆ?' ಎಂದು.**

ರಾಜಾ ಪರೀಕ್ಷಿತನು ತನ್ನ ಶರೀರದಲ್ಲಿ ಅನಾಸ್ಥೆತಾಳಿ ಗಂಗಾತೀರದಲ್ಲಿ ಆಮರಣ ಉಪವಾಸಪೂರ್ವಕ ಭಾಗವತ ಶ್ರವಣಮಾಡಿ ಶರೀರತ್ಯಾಗ ಮಾಡಿದನೆನ್ನುವಲ್ಲಿ ವಿವಾದವಿಲ್ಲ. ಆದರೂ ಅವನು ತನ್ನ ವಿಶಾಲವಾದ ಸಾಮ್ರಾಜ್ಯದಲ್ಲಿಯೂ ಶರೀರದಲ್ಲಿಯೂ ಅನಾಸ್ಥೆ ತಾಳಿ ತ್ಯಾಗ ಮಾಡಿದನೆಂದರೆ ಎರಡು ಕಾರಣಗಳು ಸಂಭಾವಿತವಾಗಿವೆ. ಒಂದು, ಅವನ ರಾಜ್ಯವನ್ನು

ಶತ್ರುಗಳು ಅಪಹರಿಸಿರಬಹುದೆಂದು. ಇನ್ನೊಂದು, ಅವನು ತನ್ನ ಹಾಗೂ ಕುಟುಂಬದ ಪೋಷಣೆಗಾಗಿ ಮಾಡಬಾರದ ಅಕೃತ್ಯಗಳನ್ನು ಮಾಡಿ ಅದಕ್ಕೆ ನಾಚಿ, ವೈರಾಗ್ಯ ಹೊಂದಿರಬಹುದು ಎಂದು. ಪರೀಕ್ಷಿತನಲ್ಲಿ ಇವು ಎರಡೂ ಇಲ್ಲ. 'ಪರಾಂ ಶ್ರಿಯಂ ನಿರ್ವಿದ್ಯ' 'ಅಖಂಡ ಭೂಮಂಡಲದ ಆಧಿಪತ್ಯ' ಅವನದಾಗಿತ್ತು. ಶತ್ರುಗಳು ಅವನ ರಾಜ್ಯವನ್ನು ಅಪಹರಿಸಲಿಲ್ಲ. ಮತ್ತು 'ಉತ್ತಮ ಶ್ಲೋಕ ಪರಾಯಣಾ ಜನಾಃ' ಪರೀಕ್ಷಿತನು ಮಹಾ ಭಗವದ್ ಭಕ್ತನಾಗಿದ್ದನೆಂದಮೇಲೆ ಅವನು ತನ್ನ ಸ್ವಾರ್ಥಕ್ಕಾಗಿ ಅಕೃತ್ಯಗಳನ್ನು ನಡೆಸುವವನಲ್ಲ' ದೊಡ್ಡವರು ಸ್ವಾರ್ಥಕ್ಕಾಗಿ ಬದುಕುವುದಿಲ್ಲ. ಕೇವಲ ಪರೋಪಕಾರಕ್ಕಾಗಿ ಬದುಕುತ್ತಾರೆ. 'ಜೀವಂತಿ ನಾತ್ಮಾರ್ಥಂ' ಎಂದಮೇಲೆ ಪರೀಕ್ಷಿತ ಪರೋಪಕಾರಕ್ಕಾಗಿಯೆ ಇರುವ ಶರೀರವನ್ನೇಕೆ ತ್ಯಜಿಸಿದನೆಂಬ ಪ್ರಶ್ನೆ ಬರುತ್ತದೆ.

ಸೂತರು ಈ ಪ್ರಶ್ನೆಗೆ ಉತ್ತರಕೊಡುತ್ತ ಪರೀಕ್ಷಿತನು ಅಖಂಡ ಭೂಮಂಡಲಾಧಿಪತಿಯಾಗಿದ್ದುದನ್ನೂ ಮಹಾಭಾಗವತೋತ್ತಮನಾಗಿದ್ದುದನ್ನೂ ಮೊದಲಿಗೆ ಒಪ್ಪಿಕೊಳ್ಳುತ್ತಾರೆ. ಏಕೆಂದರೆ ಮಹಾಭಾಗವತೋತ್ತಮನೂ ಪರಾಕ್ರಮದಿಂದ ಸಮಗ್ರ ಭೂಮಂಡಲವನ್ನು ಗೆದ್ದವನೂ ಆಗಿರುವ ಆತನನ್ನು ಪರರಾಜರು ಆಕ್ರಮಿಸುವರೆಂದರೆ ಅವರು ಕಲಿಯಿಂದ ಪ್ರೇರಿತರೇ ಆಗಿರ ಬೇಕು. ಆದರೆ ಪರೀಕ್ಷಿತನು ಅಂಥ ಕಲಿಯನ್ನೇ ನಿಗ್ರಹಿಸಿದ ಮಹಾಮಹಿಮ. ಅವನು ಗೈದ ಕಲಿನಿಗ್ರಹವನ್ನು ಶ್ರವಣ ಮಾಡಿದರೂ ಕಲಿ ಬಾಧೆ ಎಂದೂ ಉಂಟಾಗದು ಎಂದು ಮೂರು ಪದ್ಯಗಳಲ್ಲಿ ಆ ವೃತ್ತಾಂತವನ್ನು ಹೇಳುತ್ತಾರೆ, ಸೂತರು—



–೧೮–

**ರಾಜನು ಕಲಿನಿಗ್ರಹಕ್ಕೆ ಹೊರಟಿದ್ದಾನೆ**

**ಯದಾ ಪರೀಕ್ಷಿತ್ ಕುರುಜಾಂಗಲೇ ವಸನ್**
**ಕಲಿಂ ಪ್ರವಿಷ್ಟಂ ನಿಜಚಕ್ರವರ್ತಿತೇ ।**
**ನಿಶಮ್ಯ ವಾರ್ತಾಮನತಿಪ್ರಿಯಾಂ ತತಃ**
**ಶರಾಸನಂ ಸಂಯುಗರೋಚಿರಾದದೇ ॥**

ಏವಂ ಪೃಷ್ಟಸ್ಯೋತ್ತರಂ ವದನ್ಯತ್ತ್ವಯೋಕ್ತಂ ಮಹಾಭಾಗವತತ್ವ-ಮಖಂಡಾಧಿಪತಿತ್ವಂ ಚೇತ್ಯುಭಯಂ ತತ್ಸತ್ಯಮಿತಿ ತದುಪಪಾದಕಂ ತನ್ಮಾಹಾತ್ಮ್ಯಂ ಕಲಿನಿಗ್ರಹರೂಪಂ ತಚ್ಛ್ರೋತೃಣಾಂ ಕಲಿಬಾಧಃ ಕದಾಪಿ ನ ಭವೇದಿತ್ಯಾಶಯೇನ ಶ್ಲೋಕತ್ರಯೇಣಾಹ ।। ಯದೇತ್ಯಾದಿನಾ ।। ತತ್ರಾದೌ ಕಲಿವಾರ್ತಾಂ ಶ್ರುತ್ವಾ ತತ್ಕ್ಷಣಾದೇವ ಯುದ್ಧಾರ್ಥಂ ಗಚ್ಛತೋ ದಿಗ್ವಿಜಯಪ್ರಕಾರಮಾಹ ।। ಯದೇತಿ ।। ಕುರುಕ್ಷೇತ್ರೇ ತತ್ರಾಪಿ ಹಸ್ತಿನಾಪುರೇ ಯದಾ ವಸನ್ ಆಸೀತ್ತದೈವ ಪರೀಕ್ಷಿದ್ರಾಜಾ ಕಲಿಂ ನಿಜಚಕ್ರವರ್ತಿತೇ ಸ್ವಾಜ್ಞಯಾ ಪ್ರವರ್ತಿತೇ ದೇಶೇ । ಪ್ರವಿಷ್ಟಂ ಶುಶ್ರಾವ । ಅಪ್ರಿಯಾಂ ವಾರ್ತಾಂ ನಿಶಮ್ಯ ತತಸ್ತತ್ಕ್ಷಣಾದೇವ ಸಂಯುಗರೋಚಿಃ ಯುದ್ಧಸೂಚಕಂ ಧನುರ್ಗೃಹೀತವಾನ್ । ಗೃಹೀತ್ವಾ ಚ ದಿಗ್ವಿಜಯಂ ಕೃತ್ವಾ ಸರ್ವತ್ರ ಬಲಿಂ ಗೃಹೀತ್ವಾ ತತ್ರ ತತ್ರ ಶ್ರೀಕೃಷ್ಣಮಹಿಮಾನಂ ಗಾಯದ್ಭ್ಯೋ ನೃಭ್ಯೋಽಪೇಕ್ಷಿತಾನ್ ಸರ್ವಾನ್ ಪುಮರ್ಥಾನ್ ದದಾವಿತಿ ವಕ್ತವ್ಯಂ । ಯಥಾಹುಃ—

''ಭದ್ರಾಶ್ವಂ ಕೇತುಮಾಲಂ ಚ ಭಾರತಂ ಚೋತ್ತರಾನ್ಕುರೂನ್ ।
ಕಿಂಪುರುಷಾದೀನಿ ಸರ್ವಾಣಿ ವಿಜಿತ್ಯ ಜಗೃಹೇ ಬಲಿಂ ।।

ತತ್ರತತ್ರೋಪಶೃಣ್ವಾನಃ ಸ್ವಪೂರ್ವೇಷಾಂ ಮಹಾತ್ಮನಾಂ ।
ಪ್ರಗೀಯಮಾನಂ ಪುರತಃ ಕೃಷ್ಣಮಾಹಾತ್ಮ್ಯಸೂಚಕಂ ।।

ತೇಭ್ಯಃ ಪರಮಸಂತುಷ್ಟಃ ಪ್ರೀತ್ಯುಜ್ಜೃಂಭಿತಲೋಚನಃ ।
ಮಹಾಧನಾನಿ ವಾಸಾಂಸಿ ದದೌ ಹಾರಾನ್ಮಹಾಮನಾಃ'' ಇತಿ ।।

ಏವಂ ದಿಗ್ವಿಜಯಂ ಕೃತ್ವಾ ತತ್ರ ಕುತ್ರಾಪಿ ಕಲಿಮದೃಷ್ಟ್ವಾ ಪುನಃ ಪ್ರತ್ಯಾಗಮನಸಮಯೇ ಕಸ್ಮಿಂಶ್ಚಿದ್ದಿನೇ ರಥಮಾರುಹ್ಯ ಪ್ರಾಚ್ಯಾಭಿಮುಖ್ಯೇನ ಸ್ಯಂದಮಾನಸರಸ್ವತೀತೀರಮಾಜಗಾಮ । ತತ್ರ ಚ ದಂಡಹಸ್ತಂ ನೃಪವೇಷಂ ವೃಷಲಂ ತೇನ ಪದಾ ಹನ್ಯಮಾನಾಂ ವಿವತ್ಸಾಮಶ್ರುವದನಾಂ ಕ್ಷುಧಾರ್ತಾಂ ಗಾಂ, ತಥಾ ತದ್ಭಯಾಚ್ಛಕೃನ್ಮೂತ್ರಂ ಮುಞ್ಚಂತಮಿವ ಸ್ಥಿತಂ ಭಗ್ನಪಾದತ್ರಯಂ ಏಕೇನೈವ ಪದಾ ಚರಂತಂ ವೃಷಭಂ ಚ ದೃಷ್ಟ್ವಾಪಿ ತತಃ ಸ್ಪಷ್ಟಮುತ್ತರಮಲಭಮಾನಃ ಸ್ವಬುದ್ಧ್ಯೈವ ತಪಃ ಶೌಚಂ ದಯಾ ಸತ್ಯಮಿತಿ ಪಾದಚತುಷ್ಟಯೋಪೇತಃ ಶ್ರೀಕೃಷ್ಣಗಮನಪರ್ಯಂತಂ ತೇನ ರಕ್ಷಿತಃ, ಇದಾನೀಂ ರಕ್ಷಕವಿಹೀನಃ ಸ್ಮಯಸಂಗಮದಾಖ್ಯೈರಧರ್ಮಾಂಗೈರ್ಭಗ್ನಪಾದತ್ರಯ ಉತ್ತರತ್ರಾನೃತಾಖ್ಯಾಧರ್ಮಾಂಗೇನ ತುರೀಯೇಣ ಭಜ್ಯಮಾನತುರೀಯ-

**ಪಾದೋ ವೃಷಭೋಽಯಂ ಧರ್ಮೋ ಭವಿತುಮರ್ಹತಿ। ಇಯಂ ಚ ಗೌಃ ಶ್ರೀಹರಿಣಾವರೋಪಿತಭಾರಾ ತತ್ಪದಾಂಕಿತಾ ತ್ರಿಲೋಕಾಧಿಕಾ ಸತೀ ತದ್ವಿಯೋಗಾದಬ್ರಾಹ್ಮಣ್ಯಾ ನೃಪಾ ಮಾಂ ಭೋಕ್ಷ್ಯಂತೀತಿ ಭಾವಿದುಃಖಾಚ್ಚಾಶ್ರು ಮುಖೀ ಭೂಮಿರೇವ। ಏತಯೋರ್ದುಃಖದೋಽಯಂ ಕಲಿರೇವೇತಿ ನಿಶ್ಚಿತ್ಯ ಖಡ್ಗಮಾದಾಯ ತಸ್ಯ ಶಿರಶ್ಛೇತ್ತುಮುದ್ಯತಃ। ತದ್ವೀಕ್ಷ್ಯ ಸ ವೃಷಲೋ ನೃಪಚಿಹ್ನಂ ಪರಿತ್ಯಜ್ಯ ಪಾದಮೂಲೇ ಪತಿತಃ। ತಂ ದೀನವತ್ಸಲೋ ನಾವಧೀತ್।**



**ಸೂತರು ಹೇಳಿದರು—ಕುರುದೇಶದಲ್ಲಿ ವಾಸಮಾಡುತ್ತ ಪರೀಕ್ಷಿತನು ರಾಜ್ಯಭಾರ ಮಾಡುತ್ತಿದ್ದಾಗಲೇ ತನ್ನ ರಾಷ್ಟ್ರದಲ್ಲಿ ಕಲಿ ಪ್ರವೇಶವಾಗಿದೆ ಎನ್ನುವ ಅನತಿಪ್ರಿಯ ವಾರ್ತೆಯನ್ನು ಕೇಳಿ ಒಡನೆ ಯುದ್ಧ ಸೂಚಕವಾದ ಬಿಲ್ಲನ್ನೆತ್ತಿ ಕೊಂಡು ದಿಗ್ವಿಜಯ ಮಾಡಿದ. ಎಲ್ಲೆಡೆ ಕಪ್ಪಕಾಣಿಕೆ ಸ್ವೀಕರಿಸಿ, ತನ್ನನ್ನು ಹೊಗಳುವ, ಶ್ರೀಕೃಷ್ಣನ ಗುಣಗಾನ ಮಾಡುವ ಸಜ್ಜನರಿಗೆ ಬೇಡಿದ್ದನ್ನೆಲ್ಲ ದಾನಮಾಡುತ್ತ ಸಂಚರಿಸಿದ.**

ಭದ್ರಾಶ್ವಂ ಕೇತುಮಾಲಂ ಚ ಭಾರತಂ ಚೋತ್ತರಾನ್ ಕುರೂನ್ ।
ಕಿಂಪುರುಷಾದೀನಿ ಸರ್ವಾಣಿ ವಿಜಿತ್ಯ ಜಗೃಹೇ ಬಲಿಂ ॥
ತತ್ರತತ್ರೋಪಶೃಣ್ವಾನಃ ಸ್ವಪೂರ್ವೇಷಾಂ ಮಹಾತ್ಮನಾಂ
ಪ್ರಗೀಯಮಾನಂ ಪುರತಃ ಕೃಷ್ಣಮಾಹಾತ್ಮ್ಯಸೂಚಕಂ
ತೇಭ್ಯಃ ಪರಮಸಂತುಷ್ಟಃ ಪ್ರೀತ್ಯುಜ್ಜೃಂಭಿತಲೋಚನಃ
ಮಹಾಧನಾನಿ ವಾಸಾಂಸಿ ದದೌ ಹಾರಾನ್ ಮಹಾಮನಾಃ ॥

(ಭಾ.೧.೬.೧೩, ೧೪, ೧೬)

ಆದರೆ ಎಲ್ಲಿಯೂ ರಾಜನಿಗೆ ಕಲಿ ಕಂಡುಬರಲಿಲ್ಲ. ಹಿಂತಿರುಗಿ ಬರುವಾಗ ಸರಸ್ವತೀತೀರದಲ್ಲಿ ಒಂದುಕಡೆ ಕಲಿ ಕಣ್ಣಿಗೆ ಬೀಳುತ್ತಾನೆ.

ಧರ್ಮಾಭಿಮಾನಿ ಯಮಧರ್ಮನು ಎತ್ತಿನ ರೂಪದಲ್ಲಿಯೂ ಭೂದೇವಿ ಹಸುವಿನ ರೂಪದಲ್ಲಿಯೂ ನಿಂತಿದ್ದಾರೆ. ಎತ್ತು ಮೂರುಕಾಲು ಮುರಿದು ಕೊಂಡು ಒಂಟಿಕಾಲಲ್ಲಿ ನಿಂತಿದೆ. ಕರು ಇಲ್ಲದ ಹಸು, ಕಣ್ಣೀರಿಡುತ್ತಿದೆ. ರಾಜವೇಷ ಧರಿಸಿ ಕೋಲು ಹಿಡಿದ ಶೂದ್ರನಾಗಿ ಕಲಿ ಈ ಹಸು ಎತ್ತುಗಳ ಜೋಡಿಯನ್ನು ಒದೆಯುತ್ತಿದ್ದಾನೆ.

ಈ ದೃಶ್ಯವನ್ನು ಕಂಡು ಪರೀಕ್ಷಿತನು ನಿಂತು, (ಮೊದಲಿಗೆ) ಹಸು ಎತ್ತುಗಳ ಪರಸ್ಪರ ಸಂಭಾಷಣೆಯನ್ನಾಲಿಸಿದ.

ಈ ಎತ್ತಿನ ರೂಪದಲ್ಲಿ ನಿಂತವನು ಧರ್ಮದೇವತೆ. ಅವನ ನಾಲ್ಕು ಪಾದಗಳು ತಪಸ್ಸು ಶೌಚ ದಯಾ ಮತ್ತು ಸತ್ಯಗಳು. ಶ್ರೀಕೃಷ್ಣ ಭೂಮಿಯಲ್ಲಿ ಇದ್ದಷ್ಟು ಕಾಲ ಅವನ ರಕ್ಷಣೆಯಲ್ಲಿ ಆತ ನಾಲ್ಕು ಕಾಲೂರಿ ನಿಂತಿರುತ್ತಿದ್ದ. ಇದೀಗ ರಕ್ಷಕರಿಲ್ಲದೆ ತಪಸ್ಸು ಶೌಚ ದಯೆ ಎಂಬ ಮೂರು ಕಾಲುಗಳು ಮುರಿದಿವೆ. ಅಹಂಕಾರ ವಿಷಯಾಸಕ್ತಿ ಮದ ಎಂಬ ಅಧರ್ಮದ ಅಂಗಗಳು ಬಲಿತು ಧರ್ಮದ ಮೂರು ಕಾಲುಗಳನ್ನು ಮುರಿದು ಹಾಕಿವೆ. ಸತ್ಯ ಎಂಬ ಒಂದೇ ಕಾಲು ಈಗ ಉಳಿದಿದೆ.

ಹಸುವಿನ ರೂಪದಲ್ಲಿ ನಿಂತವಳು ಭೂದೇವಿ. ಶ್ರೀಕೃಷ್ಣನು ಭೂಮಿಯ ಭಾರವನ್ನಿಳುಹಿ ತನ್ನ ಪಾದಕಮಲಗಳ ಹೆಜ್ಜೆಗುರುತುಗಳಿಂದ ಅಲಂಕರಿಸಿದ್ದರಿಂದ ಭೂಮಿ ಆಗ ಮೂಲೋಕಕ್ಕಿಂತ ಹೆಚ್ಚು ಶ್ರೇಷ್ಠಳಾಗಿ ಮೆರೆದಿದ್ದಳು. ಇದೀಗ ಶ್ರೀಕೃಷ್ಣನ ವಿರಹದಿಂದ ಮತ್ತು ಬ್ರಾಹ್ಮಣವಿರೋಧಿ ರಾಜರೇ ಮುಂದೆ ಭೂಮಿಯಾಳುವರೆಂಬ ಆತಂಕದಿಂದ ಕಣ್ಣೀರು ಸುರಿಸುತ್ತಿದ್ದಾಳೆ.

ಈ ಎತ್ತು ಹಸುಗಳಿಗೆ ದುಃಖ ನೀಡುವ ಈತನು ತನ್ನ ಪ್ರಜೆಗಳ ಧರ್ಮ ನಾಶಕನೆಂದು ಕಲಿಯೆ ಎಂದು ಪರೀಕ್ಷಿತನು ನಿಶ್ಚಯಿಸಿದ. ಕತ್ತಿ ಹಿರಿದು ಅವನ ಶಿರಚ್ಛೇದ ಮಾಡಲು ಉದ್ಯುಕ್ತನಾದ. ಒಡನೆ ಶೂದ್ರನು ರಾಜವೇಷವನ್ನು ತೊರೆದು ರಾಜನ ಕಾಲುಗಳಿಗೆ ಬಿದ್ದು ಶರಣಾದ. ರಾಜ ಅವನನ್ನು ಕೊಲ್ಲದೆ ಬಿಟ್ಟ. ಭೀತರಾಗಿ ಶರಣು ಬಂದವರಿಗೆ ಅಭಯ ನೀಡುವುದು ರಾಜರಿಗೆ ಧರ್ಮವೆಂದು ಬಗೆದ. ಇದು ಮುಂದಿನ ಶ್ಲೋಕದಲ್ಲಿ ಸ್ಪಷ್ಟವಾಗುತ್ತದೆ.



–೧೯–

**ಶರಣಾಗತನಾದ ಕಲಿಯನ್ನು ಕೊಲ್ಲದೆ ಬಿಟ್ಟದ್ದಾನೆ ರಾಜ**

**ನ ತೇ ಗುಡಾಕೇಶಯಶೋಧರಾಣಾಂ**
**ಬದ್ಧಾಂಜಲೇರ್ಭೋರ್ ಭಯಮಸ್ತಿ ಕಿಂಚಿತ್ ।**

**ನ ವರ್ತಿತವ್ಯಂ ಭವತಾ ಕಥಂಚಿತ್**
**ಕ್ಷೇತ್ರೇ ಮದೀಯೇ ತ್ವಮಧರ್ಮಬಂಧುಃ ॥** (ಭಾ.೧.೧೭.೩೦)

**ಕಿಂಚ ಭೀತಾಭಯಪ್ರದಾನಂ ರಾಜ್ಞಾಂ ಪರಮೋ ಧರ್ಮ ಇತಿ ಜಾನನ್ನಭಯಂ ಚ ದತ್ತವಾನಿತ್ಯಾಹ ॥ ನ ತೇ ಗುಡಾಕೇಶೇತಿ ॥ ಯಥಾಹುಃ—**

**''ಸರ್ವವೇದಾಶ್ಚ ಯಜ್ಞಾಶ್ಚ ತಪೋ ದಾನಾನಿ ಚಾನಘ ।**
**ಜೀವಾಭಯಪ್ರದಾನಸ್ಯ ನ ಕುರ್ವೀರನ್ಕಲಾಮಪೀ''ತಿ ॥**

**ಭೋ ಇತ್ಯೇವ ಸಂಬೋಧನೇನ ತಂ ತುಚ್ಛೀಕರೋತಿ । ಬದ್ಧೋಽಂಜಲಿರ್ಯೇನ ತಸ್ಯ ತೇ । ಗುಡಾಕೇಶೋಽರ್ಜುನಸ್ತಸ್ಯ ಯಶೋ ಬಿಭ್ರತಾಂ ತದನುವರ್ತಿನಾಂ ಸಕಾಶಾತ್ಕಿಂಚಿದಪ್ಯವಯವಚ್ಛೇದನಾದಿರೂಪಂ ಪ್ರಾಣಹರಣಾದಿರೂಪಂ ವಾ ಭಯಂ ನಾಸ್ತಿ । ಪರಂ ತು ದೇಶತ್ಯಾಗಮಾತ್ರಂ ಕುರ್ವಿತ್ಯಾಹ ॥ ನೇತಿ ॥ ಭವತಾ ಮದೀಯೇ ಕ್ಷೇತ್ರೇ ದೇಶೇ ಕಥಂಚಿತ್ ವಿರೋಧೇನಾನುವೃತ್ತ್ಯಾ ವಾ ಶ್ರೈಷ್ಠ್ಯೇನ ದಾಸತಯಾ ವಾ ನ ವರ್ತಿತವ್ಯಂ । ಯತಸ್ತ್ವಮಧರ್ಮಸ್ಯ ಬಂಧುಃ ಪ್ರಿಯೋಽತ ಇತಿ ॥**



**ಪರೀಕ್ಷಿದ್ರಾಜನು ಕಲಿಗೆ ಅಭಯ ದಾನ ಮಾಡುತ್ತಾನೆ—'ಭೋ' 'ಎಲೋ' ಎಂದು ಅವನನ್ನು ಕರೆಯುತ್ತಾನೆ, ನೀಚನಾದ್ದರಿಂದ ಅವನನ್ನು 'ಕಲಿಯೆ!' ಎಂದು ಹೆಸರು ಹಿಡಿದು ಕರೆಯಲಿಲ್ಲ. ಭೀತರಿಗೆ ಅಭಯ ದಾನ ಮಾಡುವ ಶರಣಾಗತರಿಗೆ ರಕ್ಷಣೆ ನೀಡುವ 'ಗುಡಾಕೇಶ' ಅರ್ಜುನನ ಆದರ್ಶವನ್ನು ಅನುಸರಿಸುವವನು ಅವನ ವಂಶಜನಾದ ನಾನು. ಅದರಿಂದ ನಾನು ನಿನ್ನ ಶಿರಶ್ಛೇದ ಮಾಡುವುದಿಲ್ಲ. ಆದರೆ ನೀನು ನನ್ನ ರಾಜ್ಯದಿಂದ ಹೊರಗೇ ಇರಬೇಕು. ನನಗೆ ವಿರೋಧಿಯಾಗಿಯೂ ಸ್ನೇಹಿತನಾಗಿ ನನಗಿಂತ ಮೇಲೆನಿಸಿಯೂ ಸೇವಕನಾಗಿಯೂ ನನ್ನ ಬಳಿ ಇರಲು ನೀನು ಯೋಗ್ಯನಲ್ಲ. ನಿನಗೆ ಅಧರ್ಮ ಪುರುಷರೇ ಬಂಧುಗಳು' ಎಂದ.**

ಪರೀಕ್ಷಿತನೇಕೆ ಕಲಿಗೆ ಅಭಯ ದಾನಮಾಡಿದನೆಂದರೆ—

ಸರ್ವವೇದಾಶ್ಚ ಯಜ್ಞಾಶ್ಚ ತಪೋದಾನಾನಿ ಚಾನಘ ।
ಜೀವಾಭಯಪ್ರದಾನಸ್ಯ ನ ಕುರ್ವೀರನ್ ಕಲಾಮಪಿ ॥

'ಸರ್ವವೇದಾಧ್ಯಯನವಾಗಲಿ ಯಜ್ಞ ತಪಸ್ಸು ದಾನಗಳಾಗಲಿ ಎಲ್ಲ ಸೇರಿದರೂ ಜೀವರಿಗೆ ಅಭಯದಾನ ಮಾಡುವುದಕ್ಕೆ ಹದಿನಾರನೆ ಒಂದಂಶಕ್ಕೂ ಸಮವಾಗಲಾರವು'.



–೨೦–

## ಕಲಿಯನ್ನು ನಿಗ್ರಹಿಸಿ ಐದು ಸ್ಥಾನ ಮಾತ್ರ ಅವನಿಗೆ ಸಮ್ಮತಿಸಿದ್ದಾನೆ ರಾಜ

**ತ್ವಾಂ ವರ್ತಮಾನಂ ನರದೇವದೇಹೇ-**
**ಷ್ವನುಪ್ರವೃತ್ತೋಽಯಮಧರ್ಮಯೂಥಃ ।**
**ಲೋಭೋಽನೃತಂ ಚೌರ್ಯಮನಾರ್ಯ ಮೋಹೋ**
**ಜ್ಯೇಷ್ಠಾ ಚ ಮಾಯಾ ಕಲಹಶ್ಚ ದಂಭಃ ॥**

(ಭಾ.೧.೧೭.೩೧)

**ಅಧರ್ಮಬಂಧುತ್ವಮೇವ ಪ್ರಕಟಯತಿ ॥ ತ್ವಾಮಿತಿ ॥ ತವ ಲೋಕೇ ಅವಸ್ಥಾನೇ ಸತಿ ಶನೈಃ ರಾಜದೇಹಮೇವಾಕ್ರಮ್ಯ ತಿಷ್ಠಸಿ । ತತ್ರ ಸ್ಥಿತಂ ತ್ವಾಮನುಸೃತ್ಯ ಲೋಭಾದಿದಂಭಪರ್ಯಂತೋಽಯಮಧರ್ಮಸಮೂಹಃ ಪ್ರವೃತ್ತೋ ಭವೇತ್ । ಯತೋಽತಸ್ತ್ವಮಧರ್ಮಬಂಧುರಿತಿ । ಹೇಽನಾರ್ಯ ಅನುಪಾಸಿತಮಹಚ್ಚರಣೇತಿ ಸಂಬೋಧನೇನ ಮಹತಾಂ ನಿಕಟೇ ವರ್ತನೇ ತವ ಯೋಗ್ಯತಾ ನಾಸ್ತೀತಿ ಜ್ಞಾಪಯತಿ । ಏವಂ ನಿಷ್ಕಾಸ್ಯಮಾನಃ ಸ ಕಲಿರ್ಯಾಂ ಯಾಂ ದಿಶಮವಲೋಕಿತವಾಂಸ್ತತ್ರ ಸರ್ವತ್ರ ತಮೇವೋದ್ಯತಾಯುಧಂ ದೃಷ್ಟ್ವಾ ಶರಣಮನ್ಯಮಲಭಮಾನೋಽತ್ಯಂತಂ ಭೀತಃ ಪ್ರಾರ್ಥಯಾಮಾಸ ಸ್ಥಾನಂ ನಿರ್ದಿಶ ತತ್ರೈವ ವತ್ಸ್ಯಾಮಿ । ಸರ್ವತ್ರೈವ ತ್ವಾಮುದ್ಯತಾಯುಧಂ ಪಶ್ಯನ್ ಕಥಂ ತವಾಜ್ಞೋಲ್ಲಂಘನಂ ಕರೋಮೀತ್ಯೇವಂ ತೇನ ಪ್ರಾರ್ಥಿತಸ್ತಸ್ಮೈ ಚತ್ವಾರಿ ಸ್ಥಾನಾನಿ ದದೌ । ಪುನರಪಿ ಯಾಚಮಾನಾಯ ಪಂಚಮಂ ಚ । ಯಥಾಹುಃ—**

**''ಅಭ್ಯರ್ಥಿತಸ್ತದಾ ತಸ್ಮೈ ಸ್ಥಾನಾನಿ ಕಲಯೇ ದದೌ ।**
**ದ್ಯೂತಂ ಪಾನಂ ಸ್ತ್ರಿಯಃ ಸೂನಾ ಯತ್ರಾಧರ್ಮಶ್ಚತುರ್ವಿಧಃ ॥**

**ಪುನಶ್ಚ ಯಾಚಮಾನಾಯ ಜಾತರೂಪಮದಾತ್ಪ್ರಭುಃ ।**
**ತತೋಽನೃತಂ ಮದಃ ಕಾಮೋ ರಜೋ ವೈರಂ ಚ ಪಂಚಮಂ ॥**

ಅಮೂನಿ ಪಂಚ ಸ್ಥಾನಾನಿ ಹ್ಯಧರ್ಮಪ್ರಭವಃ ಕಲಿಃ ।
ಔತ್ತರೇಯೇಣ ದತ್ತಾನಿ ನ್ಯವಸತ್ತನ್ನಿದೇಶಕೃದಿ''ತಿ ॥

ಸತ್ಯಂ। ತಥಾಪಿ ಸ ಹಂತವ್ಯ ಏವ। ರಾಜ್ಞಾ ಯನ್ನ ನಿಹತಸ್ತದೇವಾನುಚಿತಂ। ಸ್ಥಾನದಾನಂ ತು ಸುತರಾಮಿತಿ ಭಾತೀತಿ ಚೇತ್। ಮೈವಂ। ತಥಾ ಸತಿ ರಾಜ್ಞೋಽಪ್ರೇಕ್ಷಾವತ್ತ್ವಪ್ರಸಂಗಾತ್। ಸ ಹಿ ಪ್ರೇಕ್ಷಾವಾನಿತ್ಯುಚ್ಯತೇ ಯಸ್ಯ ವ್ಯಾಪಾರೇಣ ಸತಾಮನಿಷ್ಟಂ ನ ಭವೇತ್। ಕಲಿಹನನೇ ತು ಸತಾಮನಿಷ್ಟಂ ಭವತಿ। ಕಲಿರ್ಹಿ ಸತಾಮಿಷ್ಟಃ। ಬಹುಫಲಸಾಧಕತ್ವಾತ್ । ಯಥಾಹುಃ—

''ಕಲಿಂ ಸಭಾಜಯಂತ್ಯಾರ್ಯಾ ಗುಣಜ್ಞಾಃ ಸಾರಭಾಗಿನಃ ।
ಯತ್ರ ಸಂಕೀರ್ತನೇನೈವ ಸರ್ವಃ ಸ್ವಾರ್ಥೋಽಭಿ ಲಭ್ಯತೇ ॥

ಕೃತಾದಿಷು ಜನಾ ರಾಜನ್ ಕಲಾವಿಚ್ಛಂತಿ ಸಂಭವಂ ।
ಯತ್ರ ಸಂಕೀರ್ತಿತೋ ನೃಣಾಂ ಹರಿರ್ದಾಸ್ಯತ್ಯಸಂಭವಮಿ''ತಿ ॥

ಅತಸ್ತದ್ವಧೇ ಕಥಂ ಸತಾಮನಿಷ್ಟಂ ನ ಭವೇದಿತ್ಯೇವಂ ತಸ್ಮಿನ್ಗುಣಂ ಪರೀಕ್ಷ್ಯೈವ ನ ತಂ ಜಘಾನ ಸ್ಥಾನಂ ಚ ದತ್ತವಾನಿತಿ—

''ನಾನುದ್ವೇಷ್ಟಿ ಕಲಿಂ ಸಮ್ರಾಟ್ ಸಾರಂಗ ಇವ ಸಾರಭುಕ್ ।
ಕುಶಲಾನ್ಯಾಶು ಸಿದ್ಧ್ಯಂತಿ ನೇತರಾಣಿ ಕೃತಾನಿ ಯತ್ ॥

ಕಿಮು ಬಾಲೇಷು ಶೂರೇಣ ಕಲಿನಾ ಶೂರಭೀರುಣಾ ।
ಅಪ್ರಮತ್ತಃ ಪ್ರಮತ್ತೇಷು ಯೋ ವೃಕೋ ನೃಷು ವರ್ತತ'' ಇತಿ ॥

ತದೇತದಭಿಪ್ರೇತ್ಯ ಪದಾಂತರಪರಿತ್ಯಾಗೇನ ಪರೀಕ್ಷಾರ್ಥಂ ಪರೀಕ್ಷಿದಿತಿ ಪದಮೇವ ಪ್ರಾಯುಂಕ್ತೇತಿ। ಅನೇನಾಂತರಶತ್ರುನಿಗ್ರಹಕಥನೇನಾಖಂಡಾಧಿಪತ್ಯಂ ಪರಮಭಾಗವತೋತ್ತಮತ್ವಂ ಚೋಪಪಾದಿತಂ ಭವತಿ। ಏತಚ್ಛ್ರವಣೇನ ಕಲಿಬಾಧೋ ನ ಭವತಿ ಮಹತ್ಪುಣ್ಯಮೇವ ಲಭ್ಯತ ಇತಿ। ಯಥಾಹುಃ—

''ಉಪವರ್ಣಿತಮೇತದ್ವಃ ಪುಣ್ಯಂ ಪಾರೀಕ್ಷಿತಂ ಮಯಾ ।
ವಾಸುದೇವಕಥೋಪೇತಮಾಖ್ಯಾನಂ ಯದಪೃಚ್ಛಥ''ತಿ ॥



ಪರೀಕ್ಷಿದ್ರಾಜ ಕಲಿಗೆ ಹೇಳುತ್ತಾನೆ—'ನೀನು ರಾಜ್ಯದಲ್ಲಿದ್ದರೆ ಮೊದಲು ನಿಧಾನವಾಗಿ ರಾಜರ ಶರೀರವನ್ನೇ ಆಕ್ರಮಿಸಿ ನಿರ್ಭೀತಿಯಿಂದ ವಾಸ ಮಾಡುವೆ.

**ನಿನ್ನನ್ನು ಅನುಸರಿಸಿ ಲೋಭಾದಿ ಅಧರ್ಮಪುರುಷರೂ ರಾಜದೇಹವನ್ನು ಆಕ್ರಮಿಸುತ್ತಾರೆ. ಎಲೋ ಅನಾರ್ಯ! ಪಾಪಿಯೇ ಎಂದು.**

ಲೋಭ ಮುಂತಾದವರು ಕಲಿಯ ಮಕ್ಕಳು, ಜ್ಯೇಷ್ಠಾ ಅವನ ಹೆಂಡತಿ. ಇವರೆಲ್ಲರೂ ಕಲಿಯ ಬಲದಿಂದ ಅವನೊಂದಿಗೇ ರಾಜರ ಶರೀರವನ್ನಾಕ್ರಮಿಸಿ ಕುಳಿತು ರಾಜರ ಮೂಲಕ ತಾವೇ ರಾಜ್ಯಭಾರ ಮಾಡುವರು. ಇದಕ್ಕೆ ಸಾತ್ವಿಕ ಗಂಧರ್ವಾವತಾರನಾದ ಧೃತರಾಷ್ಟ್ರನೆ ಸಾಕ್ಷಿ. ಕಲ್ಯಾವೇಶದಿಂದಲೇ ಅವನು ಪಾಂಡವರಿಗೆ ಹಿಂಸೆ ಕೊಟ್ಟ. ಹಾಗೇ ದ್ಯೂತಸಭೆಯಲ್ಲಿ ಅವರಿಗೆ ಅವಮಾನ ಮಾಡಿದ. ಕಾಡಿಗೆ ಕಳಿಸಿದ. ಸಭಾಸದರೆಲ್ಲರೂ ಕಲ್ಯಾವೇಶದಿಂದ ಮೂಕಪ್ರೇಕ್ಷಕ ರಾದರು. ಯಾರೂ ವಿರೋಧ ಮಾಡದಿದ್ದುದು ಅದ್ಭುತ! ಅದರಿಂದ ಪರೀಕ್ಷಿತ ಹೇಳುತ್ತಾನೆ— **'ನೀನು ನನ್ನ ರಾಜ್ಯದಲ್ಲಿರಬಾರದು'.**

ಆದರೆ ಅವನು ಎಲ್ಲಿಗೆ ಹೋಗಬೇಕು. ಅಖಂಡ ಭೂಮಂಡಲವೆ ಪರೀಕ್ಷಿತನ ಸಾಮ್ರಾಜ್ಯವಾಗಿತ್ತು! ಕಲಿ ಎಲ್ಲಿಗೆ ಓಡಿದರೂ ಅಲ್ಲಿ ಧನುರ್ಧಾರಿ ಪರೀಕ್ಷಿತ ಕಂಡುಬರುತ್ತಾನೆ! ಅದಕ್ಕೆ, ಪರೀಕ್ಷಿತನೇ ದ್ಯೂತ–ಮದ್ಯಪಾನ–ಸ್ತ್ರೀಸಂಗ– ಹಿಂಸಾಚಾರ–ಬಂಗಾರ ಎಂದು ಕೇವಲ ಐದು ಸ್ಥಳದಲ್ಲಿ ಮಾತ್ರ ಕಲಿಗೆ ಇರಲು ಅವಕಾಶ ನೀಡಿದ.

ಇಲ್ಲಿ ಪ್ರಶ್ನೆ ಬರುತ್ತದೆ. ಕಲಿಗೆ ಈ ಸ್ಥಳಗಳಲ್ಲಿ ವಾಸಮಾಡುತ್ತ ತನ್ನ ದುಷ್ಟಕಾರ್ಯಗಳನ್ನು ಯಾರಿಗೂ ತಿಳಿಯದಂತೆ ಮಾಡಲು ರಾಜ ಅವಕಾಶ ಕೊಟ್ಟಂತಾಯಿತು. ಇದರ ಪರಿಣಾಮವನ್ನು ರಾಜ ಆಲೋಚಿಸದೆ ದುಡುಕಿದ ಎನ್ನಬೇಕಾಗುತ್ತದೆ. ಏಕೆಂದರೆ ರಾಜನು ಬೇಟೆಗೆ ಹೋಗುವಾಗ ಕಲಿಯ ಸ್ಥಾನವಾದ ಬಂಗಾರದ ಕಿರೀಟ ಆಭರಣಗಳನ್ನು ತೊಟ್ಟಿದ್ದ. ಅದರಿಂದ ಮುನಿಯ ಕೊರಳಿಗೆ ಸತ್ತ ಹಾವನ್ನು ಮಾಲೆ ಹಾಕುವ ದುರ್ಬುದ್ಧಿ ಅವನಿಗೆ ಬಂದಿತು. ಮುನಿಶಾಪ ಅವನ ಮೇಲೆರಗಿತು! ಅರಮನೆಗೆ ಬಂದು ಕಿರೀಟವನ್ನು ಕಳಚಿಟ್ಟೊಡನೆ, ತನ್ನ ಹೀನಕೃತ್ಯಕ್ಕೆ ಪಶ್ಚಾತ್ತಾಪ ಮೂಡಿತು. ವೈರಾಗ್ಯ ಉಂಟಾಯಿತು. ಆದರೂ ಶರೀರದ ಮೇಲಿನ ಮೋಹದಿಂದ ತಕ್ಷಕನ ಕಡಿತವನ್ನು ತಪ್ಪಿಸಿಕೊಳ್ಳಲು ನಾನಾ ಉಪಾಯಗಳನ್ನು ಕೈಗೊಂಡ. ಗಂಗಾ ಪ್ರವಾಹದ ನಡುವೇ ಏಕಸ್ತಂಭದ ಮೇಲೆ ನಿರ್ಮಿತವಾದ ಅರಮನೆಯಲ್ಲಿ ಎಲ್ಲ ಅಂಗರಕ್ಷಕ

ರೊಂದಿಗೆ ವಿಷವೈದ್ಯರ ಸಮೂಹಗಳೊಂದಿಗೆ ಸುರಕ್ಷಿತವಾಗಿ ವಾಸಮಾಡಿದ. ಆದರೇನು? ಕೊನೆಗೂ ತಕ್ಷಕ ಸರ್ಪ ಕಚ್ಚಿ ಬಿಟ್ಟ. ತನ್ನ ಮರಣವನ್ನು ತಪ್ಪಿಸಿ ಕೊಳ್ಳಲು ಅವನಿಂದಾಗಲೆ ಎಲ್ಲ!

ಹೀಗೆ ಪ್ರಶ್ನೆಗಳ ಮಾಲೆ. ಇವುಗಳನ್ನು ಕೇಳುವುದೇ ಮಹಾಪಾಪ.

ವಸ್ತುತಃ ಪರೀಕ್ಷಿತನು ತನ್ನ 'ಪರೀಕ್ಷಿತ್' ಎಂಬ ಹೆಸರಿಗೆ ತಕ್ಕಂತೆ ಎಲ್ಲವನ್ನೂ ಪರೀಕ್ಷಿಸಿಯೆ ಕಾರ್ಯಮಾಡುತ್ತಿದ್ದ. ಎಲ್ಲಿಯೂ ಅವನು ದುಡುಕುವವನಲ್ಲ. ಸರ್ಪ ಕಚ್ಚಿ ಸಾಯುವ ಅಪಮೃತ್ಯುಯೋಗ ಜಾತಕದಲ್ಲಿಯೇ ಇದ್ದುವು. ಅದು ಅವನಿಗೆ ಗೊತ್ತು. ಭಾಗವತ ಅದನ್ನು ಹೀಗೆ ಹೇಳುತ್ತಿದೆ—

ತಕ್ಷಕಾದಾತ್ಮನೋ ಮೃತ್ಯುಂ ದ್ವಿಜಪುತ್ರೋಪಸರ್ಜಿತಾತ್ ।
ಪ್ರಪತ್ಸ್ಯತ ಉಪಶ್ರುತ್ಯ ಮುಕ್ತಸಂಗಃ ಪದಂ ಹರೇಃ ॥
ಜಿಜ್ಞಾಸಿತಾತ್ಮ ಯಾಥಾತ್ಮ್ಯೋ ಮುನೇರ್ವ್ಯಾಸಸುತಾದಸೌ ।
ಹಿತ್ವೇದಂ ನೃಪ ಗಂಗಾಯಾಂ ಯಾಸ್ಯತ್ಯದ್ಧಾಽಕುತೋಭಯಂ ॥
(ಭಾ.೧.೧೧.೨೭,೨೮)

'ಜಾತಕ ನೋಡಿ ಫಲ ಹೇಳುವುದರಲ್ಲಿ ನಿಷ್ಣಾತರಾದ ಬ್ರಾಹ್ಮಣರು ಧರ್ಮರಾಜನಿಗೆ ಹೇಳುತ್ತಾರೆ, 'ಈ ಪರೀಕ್ಷಿತನು 'ಪ್ರಹ್ಲಾದ ಇವ ಸದ್‌ಗ್ರಹಃ' ಪ್ರಹ್ಲಾದನಂತೇ ಕೃಷ್ಣನೆಂಬ ಗ್ರಹದಿಂದ ಆವಿಷ್ಟನಾಗಿ ಭಕ್ತನಾಗಿದ್ದು ಅನೇಕ ಅಶ್ವಮೇಧಯಾಗ ಮಾಡುತ್ತ ಅಧರ್ಮಿಗಳಿಗೆ ಶಾಸನ ಮಾಡುತ್ತ ಭೂದೇವಿಯ ಧರ್ಮದೇವತೆಯ ಮತ್ತು ಪ್ರಜೆಗಳ ಹಿತಕ್ಕಾಗಿ ಕಲಿಯನ್ನು ನಿಗ್ರಹಿಸುತ್ತಾನೆ. ಮುನಿಶಾಪದಿಂದ ತಕ್ಷಕನಿಂದ ಮರಣ ಬರುವುದನ್ನು ತಿಳಿದು ಶರೀರದಲ್ಲಿ ವಿರಕ್ತಿ ತಳೆದು ಗಂಗಾತೀರದಲ್ಲಿ ಶುಕಮುನಿಯ ಬಳಿ ಭಾಗವತ ಶ್ರವಣ ಮಾಡಿ ನಿರ್ಭೀತಿಯಿಂದ ನಿರ್ಭಯವಾದ ವೈಕುಂಠವನ್ನು ಹೋಗಿ ಸೇರುತ್ತಾನೆ' ಎಂದು.

ಪರೀಕ್ಷಿತನಿಗೆ ಇದು ಗೊತ್ತು. ಅದರಿಂದ ಅವನು ಮುಂದೆ ಎಲ್ಲರನ್ನೂ 'ಈತ ತಕ್ಷಕ ನಿರಬಹುದೆ?' ಎಂದು ಪರೀಕ್ಷಿಸುತ್ತಿದ್ದುದರಿಂದ ಪರೀಕ್ಷಿತನೆಂದು ಪ್ರಸಿದ್ಧನಾದ. ಹೀಗೆ ಮುನಿಶಾಪ ಪಡೆದು ತಕ್ಷಕನಿಂದ ಮರಣ ಹೊಂದುವ ಪ್ರಾರಬ್ಧ ಅಪರಿಹಾರ್ಯವಾಗಿತ್ತು. ಅದರಿಂದಲೆ ಹರೀಚ್ಛೆಯಿಂದ ಅವನು ಮುನಿಯ ಕೊರಳಿಗೆ ಸತ್ತಹಾವನ್ನು ಮಾಲೆ ಹಾಕಿದ ಶಾಪ ತಂದುಕೊಂಡ

ಹೊರತು ಕಲಿಪ್ರಭಾವದಿಂದಲ್ಲ. ಅವನು ಪ್ರಹ್ಲಾದನಂತೆ 'ಕೃಷ್ಣಗ್ರಹಗೃಹೀತಾತ್ಮ' ಹರ್ಯಾವೇಶಯುಕ್ತನಾದ್ದರಿಂದ ಪ್ರಹ್ಲಾದನಂತೇ ಅಸುರಾವೇಶರಹಿತ ಕಲಿಬಾಧಾರಹಿತ.

ಹಾಗಾದರೆ ಕಲಿಯನ್ನೇಕೆ ಕೊಲ್ಲದೆ ಬಿಟ್ಟ? ಆಗಲೇ ಅವನನ್ನು ವಧಿಸ ಬೇಕಿತ್ತು, ಹೊರತು ಮಹಾಪಾಪಿ ಕಾಲಿಗೆ ಬಿದ್ದ ಮಾತ್ರಕ್ಕೆ ಅವನಿಗೇಕೆ ಅಭಯದಾನ ಮಾಡಿದ?' ಎಂದರೆ, ಕಲಿಯನ್ನು ಆಗಲೇ ಕೊಲ್ಲುವುದು ಭಗವಂತನಿಗೇ ಇಷ್ಟವಿರಲಿಲ್ಲ. ಕಲಿಕಾಲ ಬರುವುದೇ ಅವನಿಗೆ ಇಷ್ಟವಾಗಿತ್ತು. ದುಃಶಾಸನನು ದ್ರೌಪದಿಯ ಸೀರೆ ಸೆಳೆಯುತ್ತಿದ್ದಾಗ ಶ್ರೀಕೃಷ್ಣ ಅವನನ್ನು ಆಗಲೆ ಕೊಲ್ಲಬಹುದಿತ್ತು. ಕೊಲ್ಲದೆ ಬಿಟ್ಟು, ದ್ರೌಪದಿಗೇ ಅಕ್ಷಯಾಂಬರವಿತ್ತು ಕಾಪಾಡಿದ. ಪಾಂಡವರೂ ಕೌರವರನ್ನು ಆಗಲೆ ಸಂಹರಿಸದೆ ಅವರ ಪಾಪದ ಕೊಡ ತುಂಬಲಿ ಎಂದು, ತಮ್ಮ ರಾಜ್ಯವನ್ನೇ ಜೂಜಿನಲ್ಲಿ ಸೋತು ಅವರಿಗೆ ಬಿಟ್ಟುಕೊಟ್ಟರು. ಪರೀಕ್ಷಿತನೂ ಹೀಗೇ ಕಲಿಯನ್ನು ಕ್ಷಮಿಸಿದ. ಆ ಮೂಲಕ ಹರಿಸೇವೆಯನ್ನೇ ಮಾಡಿದ. ಅದಕ್ಕೆ ಇನ್ನೊಂದು ಮುಖ್ಯವಾದ ಕಾರಣವಿತ್ತೆಂದು ಭಾಗವತವೇ ಹೇಳುತ್ತಿದೆ—

ಕಲಿಂ ಸಭಾಜಯಂತ್ಯಾರ್ಯಾ ಗುಣಜ್ಞಾಃಸಾರಭಾಗಿನಃ ।
ಯತ್ರ ಸಂಕೀರ್ತನೇನೈವ ಸರ್ವಃ ಸ್ವಾರ್ಥೋಽಭಿಲಭ್ಯತೇ ॥
(ಭಾ.೧೧.೫.೩೬)

'ಹಿರಿಯರು ಗುಣಜ್ಞರು, ಕಲಿಯುಗವನ್ನು ಹೊಗಳುತ್ತಾರೆ. ಏಕೆಂದರೆ, ಕಲಿಯುಗದಲ್ಲಿ ಹರಿನಾಮಸಂಕೀರ್ತನದಿಂದಲೇ ಜನರಿಗೆ ಎಲ್ಲ ಪುರುಷಾರ್ಥ ಲಾಭವಿದೆ. ಕೃತಾದಿಯುಗಗಳಲ್ಲಿ ಹಾಗಿಲ್ಲ'.

ನಾನುದ್ವೇಷ್ಟಿ ಕಲಿಂ ಸಮ್ರಾಟ್ ಸಾರಂಗ ಇವ ಸಾರಭುಕ್ ।
ಕುಶಲಾನ್ಯಾಶು ಸಿಧ್ಯಂತಿ ನೇತರಾಣಿ ಕೃತಾನಿ ಯತ್ ॥
ಕಿಂನು ಬಾಲೇಷು ಶೂರೇಣ ಕಲಿನಾ ಶೂರಭೀರುಣಾ ।
ಅಪ್ರಮತ್ತಃ ಪ್ರಮತ್ತೇಷು ಯೋ ವೃಕೋ ನೃಷು ವರ್ತತೇ ॥
(ಭಾ.೧.೧೮.೭೮)

'ಪರೀಕ್ಷಿತನಿಗೆ ವಸ್ತುತಃ ಕಲಿಯನ್ನು ಕೊಲ್ಲುವ ಅಭಿಪ್ರಾಯವಿರಲಿಲ್ಲ.

ಪಾಪಿಗಳಿಂದ ಪಾಪಮಾಡಿಸಲು ಪರಮಪಾಪಿ ಕಲಿ ಬೇಕಾಗಿರುವುದರಿಂದ ಇವನಿರುವುದು ಹರಿಗೆ ಇಷ್ಟವೇ ಆಗಿದ್ದರಿಂದ ಕಲಿಕಾಲದಲ್ಲಿ ಪರೀಕ್ಷಿತನಿಗೆ ದ್ವೇಷ ವಿರಲಿಲ್ಲ. ದುಂಬಿಯಂತೆ ಸಾರವನ್ನು ಗ್ರಹಿಸುವ ಸ್ವಭಾವದವನಾದ ಅವನು ಕಲಿಕಾಲದಲ್ಲಿಯೂ ಒಂದು ಉತ್ತಮ ಗುಣವನ್ನು ಕೂಡ ಕಂಡುಕೊಂಡಿದ್ದ. ಅದೇನೆಂದರೆ ಕಲಿಯುಗದಲ್ಲಿ ತನ್ನ ರಾಜ್ಯದಲ್ಲಿ ಪ್ರೀತಿಯ ಪ್ರಜೆಗಳಿಗೆ ಅನಾಯಾಸ ಪುಣ್ಯಕಾರ್ಯ ಬೇಗ ಫಲಿಸುತ್ತದೆ. ಪಾಪಕಾರ್ಯ ಬೇಗ ಫಲಿಸುವುದಿಲ್ಲ. ಮತ್ತು ಕಲಿಯು ದುರ್ಬಲರಾದ, ವಿಷಯಾಸಕ್ತಿಗೆ ಸುಲಭವಾಗಿ ಬಲಿಯಾಗುವ ವ್ಯಕ್ತಿಗಳಲ್ಲಿ ಮಾತ್ರ ತನ್ನ ಶೌರ್ಯವನ್ನು ಮೆರೆಸುತ್ತಾನೆ. ತನ್ನ ಪ್ರಜೆಗಳಾದ ಧೀರ ಪುರುಷರಿಗೆ ತಾನೇ ಭಯಪಡುತ್ತಾನೆ. ಪಾಪಿಗಳಾದ ದುರ್ಬಲವ್ಯಕ್ತಿಗಳು ಮಾತ್ರ ಧರ್ಮಾಚರಣೆಯಲ್ಲಿ ಸ್ವಲ್ಪ ಎಡವಿದರೂ ಒಡನೆ ಅವರ ಮೇಲೆ ತೋಳನಂತೆ ಎರಗುತ್ತಾನೆ ಕಲಿ. ಇಂಥ ಹೇಡಿಯಾದ ಕಲಿಯ ಮುಂದೆ ತಾನೇಕೆ ಪೌರುಷವನ್ನು ತೋರಬೇಕೆಂದು ಪರೀಕ್ಷಿತ ಕಲಿಯನ್ನು ಬಿಟ್ಟುಬಿಟ್ಟ' ಎಂದು ಭಾಗವತ ಹೇಳುತ್ತಿದೆ.

ಹರಿಗೆ ಇಷ್ಟವಾದ ಕಲಿಕಾಲದಲ್ಲಿ ಕಲಿಯನ್ನು ಕೊಲ್ಲುವುದು ಶಕ್ಯವಿಲ್ಲ ವೆಂಬುದು ರಾಜನಿಗೆ ಮೊದಲೇ ಗೊತ್ತಿತ್ತು. ಆದರೂ ನಿಗ್ರಹಿಸಿ ಸಜ್ಜನರಲ್ಲಿ ಅವನ ಪ್ರಭಾವ ತಗ್ಗಿಸಲು ಶಕ್ಯವಿದೆ. ಅದೊಂದು ಪುಣ್ಯಕಾರ್ಯಕ್ಕೆ ತನಗೆ ಅತಿಪ್ರಿಯ ವಲ್ಲದಿದ್ದರೂ ಪ್ರಿಯವಾದ ಅವಕಾಶ ಬಂದಿದೆ ಎಂದೇ 'ನಿಶಮ್ಯ ವಾರ್ತಾ ಮನತಿಪ್ರಿಯಾಂ' ಎಂದು ಹಿಂದೆ ಹೇಳಿದ್ದಾರೆ.

ಕ್ಷತ್ರಿಯಾದಿ ವರ್ಣಗಳಿಗೆ ಅನಿಷಿದ್ಧವಾಗಿರುವ ದ್ಯೂತ ಮದ್ಯಪಾನಗಳು ಗೃಹಸ್ಥಾಶ್ರಮಿಗಳಿಗೆ ವಿಹಿತವಾದ ಸ್ವಸ್ತ್ರೀಸಂಗ, ಯಜ್ಞಗಳಲ್ಲಿರುವ ಪಶುಹಿಂಸೆ, ಶರೀರದಲ್ಲಿ ಪಾವಿತ್ರ್ಯಕ್ಕಾಗಿ ಬಂಗಾರವನ್ನು ಧರಿಸುವುದು ಇವುಗಳಲ್ಲಿ ಕಲಿಯ ಪ್ರಭಾವವೇನೂ ನಡೆಯುವುದಿಲ್ಲ. ವಿಧಿವಿರುದ್ಧವಾಗಿ ಕೇವಲ ವಿಷಯಾಸಕ್ತಿ ಯಿಂದ ಸೇವಿಸುವ ಈ ದ್ಯೂತ ಮದ್ಯ ಮುಂತಾದವುಗಳಲ್ಲಿ ಮಾತ್ರ ಕಲಿಯು ದರ್ಬಾರು ನಡೆಸುತ್ತಾನೆ. ನಡೆಸಬೇಕು. ಅದಕ್ಕೆ ಪರೀಕ್ಷಿತನು ಅವನಿಗೆ ಪೂರ್ಣ ಅವಕಾಶ ನೀಡಿದ್ದಾನೆ. ಹೊರತು ತನ್ನ ಪ್ರೀತಿಯ ಸಾತ್ವಿಕ ಪ್ರಜೆಗಳು ಮಾಡುವ ವಿಹಿತವಾದ ಅನಿಷಿದ್ಧವಾದ ದ್ಯೂತಾದಿಗಳಲ್ಲಿ ಅವನಿಗೆ ಅವಕಾಶ ನೀಡಲಿಲ್ಲ.

'ಅಧ್ಯೈತಾನಿ ನ ಸೇವೇತ'(ಭಾ.೧.೧೭.೪) ಜೂಜು ಮುಂತಾದುವನ್ನು

ಮಾಡಲೇ ಬಾರದೆಂದು ಭಾಗವತ ಹೇಳಿದಂತೆ ಕಾಣುತ್ತದೆ. ಆದರೆ ತಾತ್ಪರ್ಯ ದಲ್ಲಿ ಶ್ರೀಮದಾಚಾರ್ಯರು—

'ವಿಹಿತಾತಿರೇಕೇಣ ನ ಸೇವೇತೇತಿ'

'ಶಾಸ್ತ್ರವಿಹಿತವಾದುದನ್ನು ಹೊರತು ಬೇರೆ ವಿಧಿವಿರುದ್ಧವಾದ 'ದ್ಯೂತಾದಿಗಳನ್ನು ಮಾಡಬಾರದೆ'ನ್ನುತ್ತಾರೆ.

ಹೀಗಾಗಿ ಪರೀಕ್ಷಿತನು ತಾನೇ ಬಂಗಾರದ ಕಿರೀಟ ಧರಿಸಿ ಕಲಿಪ್ರಭಾವ ಕ್ಕೊಳಗಾಗಿ ಮುನಿಶಾಪ ತಂದುಕೊಂಡನೆನ್ನುವುದು ಭಾಗವತ ತಾತ್ಪರ್ಯಕ್ಕೆ ವಿರುದ್ಧವಾಗುತ್ತದೆ. ಬಹಳ ಅಸಂಗತವಾಗುತ್ತದೆ.

ಪರೀಕ್ಷಿತನು ಗಂಗಾ ಪ್ರವಾಹದ ನಡುವೆ ಏಕಸ್ತಂಭದ ಅರಮನೆಯಲ್ಲಿ ಸುರಕ್ಷಿತವಾಗಿ ಅಡಗಿ ಕುಳಿತನೆಂದು ಭಾರತವು ಹೇಳಿದ ಮಾತ್ರಕ್ಕೆ ರಾಜನಿಗೆ ಮರಣಭಯ, ಶರೀರದ ಮೇಲೆ ಅತಿಯಾದ ಮೋಹಗಳಿತ್ತೆಂದು ತಿಳಿಯುವುದೂ ಸರಿಯಲ್ಲ.

'ಶಿವಾಯ ಲೋಕಸ್ಯ ಭವಾಯ ಭೂತಯೇ' ಎಂದು ಹಿಂದೆ ಹೇಳಿದಂತೆ ಪರೀಕ್ಷಿತನು ಲೋಕದ ಒಳಿತಿಗಾಗಿ ಪ್ರಜೆಗಳ ರಕ್ಷಣೆಗಾಗಿ ಬದುಕಿದ್ದವನು. 'ಜೀವಂತಿ ನಾತ್ಮಾರ್ಥಂ' ತನ್ನ ವಿಷಯಸುಖಭೋಗಕ್ಕಾಗಿ ಅವನು ಬದುಕಲೇ ಇಲ್ಲ. ದುರ್ಮರಣದಿಂದ ಶರೀರತ್ಯಾಗ ಮಾಡಿದರೆ, ಪಾಪಮಾತ್ರವಲ್ಲ ತಾನು ಧರ್ಮರಾಜನಿಂದ ಪಟ್ಟಾಭಿಷಿಕ್ತನಾದ ಚಕ್ರವರ್ತಿಯಾಗಿದ್ದು ಅಖಂಡ ಭೂ ಮಂಡಲದ ಸತ್‌ಪ್ರಜೆಗಳ ಧರ್ಮರಕ್ಷಣೆ ಮಾಡುವ ತನ್ನ ಕರ್ತವ್ಯಕ್ಕೆ ಚ್ಯುತಿ ಬರುತ್ತದೆ. 'ಧ್ರುವೋ ರಾಜಾ ವಿಶಾಮಯಂ' 'ಸ್ಥಿರವಾಗಿ ಈತ ಪ್ರಜಾಪಾಲನ ಮಾಡಲಿ' ಎಂದು ಧರ್ಮರಾಜನು ಅವನಿಗೆ ಪಟ್ಟಾಭಿಷೇಕ ಮಾಡಿ ಪ್ರಜಾಪಾಲನ ಕರ್ತವ್ಯವನ್ನು ಆದೇಶಿಸಿರುವಾಗ ತಾನು ತಕ್ಷಕನಿಂದ ಮರಣ ಹೊಂದಿದರೆ ಅವಶ್ಯ ಮಾಡ ಬೇಕಾಗಿದ್ದ ಕರ್ತವ್ಯಕ್ಕೆ ಚ್ಯುತಿ ತಂದಂತಾದೀತೆಂದು ಅಪಮೃತ್ಯುದೋಷ ಬಂದೀತೆಂದು ಮೊದಲೇ, ಮುನಿಶಾಪ ಬರುವುದಕ್ಕೆ ಮೊದಲೇ ಏಕಸ್ತಂಭದ ಅರಮನೆಯಲ್ಲಿದ್ದ. ಹೊರತು ಶಾಪಬಂದ ಬಳಿಕವೆ ಪ್ರಾಣಭಯದಿಂದ ಒಂದು ವಾರದೊಳಗೆ ಆ ಅರಮನೆ ಕಟ್ಟಿಸಿ ಅದರೊಳಗೆ ಹೊಕ್ಕು ಅಡಗಿಕುಳ್ಳಿರಲಿಲ್ಲ.

ಮರಣಭಯದಿಂದಲೇ ಅಲ್ಲಿ ಅಡಗಿದ್ದನೆನ್ನುವುದಾದರೆ, ನಿರಶನವ್ರತದಿಂದ ಮರಣವನ್ನು ಹೊಂದಲು ಹೇಗೆ ಬಯಸಿದ? ಮತ್ತು ಶಾಪ ಪ್ರಯುಕ್ತ ಮರಣಭಯದಿಂದಲೇ ಆತ ಅಲ್ಲಿ ಅಡಗಿದ್ದನೆಂದರೆ ಶಾಪಬರುವುದಕ್ಕೆ ಮೊದಲೇ ಏಕೆ ಅಲ್ಲಿ ವಾಸಮಾಡುತ್ತಿದ್ದ ?

'ಪರೀಕ್ಷಿತನು ಅರಮನೆಗೆ ಹೋಗಿ, ಬಂಗಾರದ ಕಿರೀಟವನ್ನು ಇಳಿಸಿದೊಡನೇ, ತಾನು ಮುನಿಗೆ ಅಪಚಾರಗೈದುದಕ್ಕೆ ಪಶ್ಚಾತ್ತಾಪ ಪಡುತ್ತಾನೆ. ಅದರಿಂದ, ಇದು ಬಂಗಾರದಲ್ಲಿ ಕಲಿಗೆ ಸ್ಥಾನ ಕೊಟ್ಟಿದ್ದರ ಪರಿಣಾಮ' ಎನ್ನುವುದಂತೂ ಭಾಗವತಕ್ಕೇ ವಿರುದ್ಧ. ಭಾಗವತದಲ್ಲಿ ರಾಜ ಅರಮನೆಯ ದಾರಿಯಲ್ಲಿಯೇ ಪಶ್ಚಾತ್ತಾಪಪಟ್ಟನೆಂದಿದೆ.

'ಮುನಿಶಾಪದಿಂದ ತನಗೆ ಮರಣ ನಿಶ್ಚಿತವೇ ಆಗಿದ್ದರೂ ಮರಣಕ್ಕಾಗಿ ನಿರಶನ ವ್ರತವನ್ನೇಕೆ ಕೈಗೊಂಡ?' ಎಂದರೆ, ನಿರಶನವ್ರತವೆಂದರೆ ಅನ್ನ ನೀರು ಬಿಟ್ಟು ಪ್ರಾಣ ಬಿಡುವುದೇ ಅಲ್ಲ. ಅನ್ನ ನೀರು ಮುಂತಾದ ಈ ಜಡಪ್ರಪಂಚದ ಪ್ರಜ್ಞೆಯೇ ಇಲ್ಲದಿರುವಂತೆ ಬಾಹ್ಯಶರೀರವನ್ನು ಬಾಹ್ಯಇಂದ್ರಿಯ ಮನಸುಗಳನ್ನು ಪೂರ್ತಿ ಮರೆತು ಅಭಿಮಾನ ತ್ಯಜಿಸಿ ಕೇವಲ ಅಸಂಪ್ರಜ್ಞಾತ ಸಮಾಧಿರೂಪ ಹರಿಧ್ಯಾನದಲ್ಲಿ ಮುಳುಗಿರುವ ಅವಸ್ಥೆಯೇ ನಿರಶನವ್ರತ. ಹೀಗೆ ಮರಣಕಾಲದಲ್ಲಿ ಹರಿಧ್ಯಾನ ಮಾಡುತ್ತ ಹರಿಯ ಸುಂದರ ಮೂರ್ತಿಯನ್ನು ಕಾಣುತ್ತಿದ್ದರೆ, ಇತ್ತ ಮುನಿಶಾಪಪ್ರಯುಕ್ತವಾಗಿ ತಕ್ಷಕನಿಂದ ಬಾಹ್ಯಶರೀರವು ವಿಷಾಗ್ನಿಯಲ್ಲಿ ಸುಡುತ್ತಿದ್ದರೂ ಅದರ ಅರಿವು ಜೀವಾತ್ಮನಿಗೆ ಬರುವುದಿಲ್ಲ.

ವಿಷಾಗ್ನಿಯಿಂದ ಶರೀರ ಸುಡುವ ಅನುಭವ ಬಂದಿತೆಂದರೆ ಅದು ಅಪಮೃತ್ಯು , ದುರ್ಮರಣ, ದೋಷಕರವಾಗುತ್ತದೆ. ಪ್ರಕೃತದಲ್ಲಿ ಮುನಿಶಾಪದಿಂದ ಬರುತ್ತಿದ್ದ ಈ ದುರ್ಮರಣವನ್ನು ಪರೀಕ್ಷಿತನು ನಿವಾರಿಸಿಕೊಳ್ಳಲೆಂದು ನಿರಶನವ್ರತವನ್ನು ಸಂಕಲ್ಪಿಸಿದ. 'ನ ತ್ವಾಂ ಧಕ್ಷ್ಯತಿ ತಕ್ಷಕಃ' ಅಂದರೆ 'ನಿನ್ನ ಶರೀರವನ್ನು ತಕ್ಷಕ ಕಚ್ಚಿದರೂ ನಿನ್ನನ್ನು ಅವನು ಸುಡುವುದಿಲ್ಲ!' ಎಂದು ಶುಕಮುನಿಗಳ ವರದಿಂದ, ಅನಿವಾರ್ಯವಾಗಿ ಬರುತ್ತಿದ್ದ ಅಪಮೃತ್ಯುವನ್ನು ನಿವಾರಿಸಿಕೊಂಡು, ಜೀವನಯಜ್ಞದ ಅವಭೃಥರೂಪವಾದ ಒಳ್ಳೆಯ ಮರಣವನ್ನೇ ಸಾಧಿಸಿಕೊಂಡ.

'ಪರೀಕ್ಷಿದ್ರಾಜ ಪರೀಕ್ಷಿಸದೆ ತುಂಬ ಎಡವಿದ. ಮೊದಲಿಗೆ ಕಲಿಯನ್ನು

ಕೊಲ್ಲದೆ ಬಿಟ್ಟಿದ್ದೇ ತಪ್ಪು, ಅದರಮೇಲೆ, ಅವನಿಗೆ ಐದು ಸ್ಥಳಗಳಲ್ಲಿ ತತ್ರಾಪಿ ಪವಿತ್ರವಾದ ತಾನು ತೊಡುವ ಬಂಗಾರದಲ್ಲಿ ನಿರ್ಭೀತಿಯಿಂದ ವಾಸಮಾಡಲು ಅವಕಾಶ ಕೊಟ್ಟಿದ್ದು ಇನ್ನೂ ದೊಡ್ಡ ತಪ್ಪು' ಎನ್ನುವ ಪ್ರಶ್ನೆಗಳಿಗೆ ಈಗ ಅವಕಾಶವೇ ಇಲ್ಲ ಎಂಬುದು ಸ್ಪಷ್ಟವಾಯಿತು.

ಅಭ್ಯರ್ಥಿತಸ್ತದಾ ತಸ್ಮೈಸ್ಥಾನಾನಿ ಕಲಯೇಽಕರೋತ್
ದ್ಯೂತಂ ಪಾನಂ ಸ್ತ್ರಿಯಃ ಸೂನಾ ಯತ್ರಾಧರ್ಮಶ್ಚತುರ್ವಿಧಃ
ಪುನಶ್ಚ ಯಾಚಮಾನಾಯ ಜಾತರೂಪಮದಾತ್ ಪ್ರಭುಃ
ತತೋಽನೃತಂ ಮದಃ ಕಾಮೋ ರಜೋ ವೈರಂ ಚ ಪಂಚಮಂ
ಅಮೂನಿ ಪಂಚ ಸ್ಥಾನಾನಿ ಹ್ಯಧರ್ಮಪ್ರಭವಃ ಕಲಿಃ
ಔತ್ತರೇಯೇಣ ದತ್ತಾನಿ ನ್ಯವಸತ್ ತನ್ನಿದೇಶಕೃತ್ ॥

(ಭಾ.೧.೧೭.೩೭,೩೮,೩೯)

'ಕಲಿ ಬೇಡಿದಾಗ ಪರೀಕ್ಷಿತನು ಅವನಿಗೆ ಜೂಜು ಮದ್ಯಪಾನ ಸ್ತ್ರೀಸಂಗ ಪ್ರಾಣಿಹಿಂಸೆ ಎಂದು ನಾಲ್ಕು ಸ್ಥಾನಗಳನ್ನಿತ್ತ. ಅದರಿಂದ ಜೂಜಿನಲ್ಲಿ ಅಸತ್ಯ, ಮದ್ಯದಿಂದ ಮದ, ಸ್ತ್ರೀಸಂಗದಿಂದ ವಿಷಯಾಸಕ್ತಿ, ಹಿಂಸೆಯಿಂದ ಕ್ರೌರ್ಯ ಹೀಗೆ ನಾಲ್ಕು ಬಗೆಯ ಅಧರ್ಮಕಾರ್ಯಗಳು ಉಂಟಾಗುತ್ತವೆ. ಕಲಿ ಪುನಃ ಬೇಡಿ—'ಈ ನಾಲ್ಕು ಅಧರ್ಮಗಳು ಜೊತೆಗೆ ಸಜ್ಜನರಲ್ಲಿ ವೈರವೆಂಬ ಅಧರ್ಮ ಒಂದೆಡೆ ಜೊತೆಗೇ ಉದ್ಭವಿಸುವಂಥ ಬೇರೆ ಒಂದು ಸ್ಥಾನವನ್ನು ಕೊಡು' ಎಂದು. 'ಬಂಗಾರವನ್ನು ಶಾಸ್ತ್ರ ವಿಹಿತವಲ್ಲದ ರೀತಿಯಲ್ಲಿ ಸೇವಿಸಿದಾಗ ಮಾತ್ರ ಈ ನಾಲ್ಕೂ ಅಧರ್ಮಗಳು, ಜೊತೆಗೆ ವೈರವೆಂಬ ಐದನೆ ಅಧರ್ಮಗಳುಂಟಾಗುವುದರಿಂದ, ಬಂಗಾರದಲ್ಲಿ ನೀನಿರು' ಎಂದ ರಾಜ.

ಹೀಗೆ ಹೇಳದಿದ್ದರೆ ನಾವು ದೇವರಿಗೇ ಸುವರ್ಣರಥ ಸುವರ್ಣ ಸಿಂಹಾಸನ ಸುವರ್ಣಾಭರಣ ಸುವರ್ಣದಕ್ಷಿಣೆಗಳನ್ನು ನೀಡುವಂತಿಲ್ಲ. ನಾವೂ ಕರ್ಣವೇಧ ಮಾಡಿಕೊಂಡು ಕರ್ಣಕುಂಡಲ ಧರಿಸುವಂತಿಲ್ಲ. ಬೆರಳಿಗೆ ಬಂಗಾರದ ಪವಿತ್ರದುಂಗುರ ಧರಿಸುವಂತಿಲ್ಲ! ಏಕೆಂದರೆ ಅವೆಲ್ಲವೂ ಕಲಿಯ ಸ್ಥಾನಗಳು! ಅದರಿಂದ ಕರ್ಮಾಧಿಕಾರವಿಲ್ಲವಾದೀತು!

ಕಲಿ ಅವನಾಜ್ಞೆಯಂತೇ ಐದು ಸ್ಥಾನಗಳಲ್ಲಿ ಇರುತ್ತಾನೆ. ಅಲ್ಲಿ ತನ್ನ

ಪ್ರಭಾವ ತೋರುತ್ತಾನೆ. ಆದರಿಂದಲೆ ಶಾಸ್ತ್ರವಿಹಿತವಲ್ಲದ ರೀತಿಯಲ್ಲಿ ಸೇವಿಸುವಾಗಲೇ ಈ ಐದು ಸ್ಥಾನಗಳಲ್ಲಿ ಕಲಿಯ ಪ್ರಭಾವ ಕಂಡುಬರುತ್ತದೆ. ಶಾಸ್ತ್ರವಿಹಿತವಾದ ರೀತಿಯಿಂದ ಇವುಗಳನ್ನು ಸೇವಿಸುವ ಸಜ್ಜನರಿಗೆ ಕಲಿಬಾಧೆ ಸರ್ವಥಾ ಇರುವುದಿಲ್ಲ.

ಅದ್ದರಿಂದ ಚೆನ್ನಾಗಿ ಪರೀಕ್ಷಿಸಿಯೇ ಎಲ್ಲ ಕಾರ್ಯಭಾರವನ್ನು ನಡೆಸುವವನು ಪರೀಕ್ಷಿತ್ ಎಂಬ ಅಭಿಪ್ರಾಯದಿಂದ, 'ಯದಾ ಪರೀಕ್ಷಿತ್ ಕುರುಜಾಂಗಲೇ ವಸನ್' ಎಂಬಲ್ಲಿ ಪರೀಕ್ಷಿತನನ್ನು ವಿಷ್ಣುರಾತ ಔತ್ತರೇಯ ಮುಂತಾದ ಅವನ ನಾಮಗಳನ್ನು ಬಿಟ್ಟು 'ಪರೀಕ್ಷಿತ್' ಎಂದೇ ಶ್ರೀವ್ಯಾಸರು ಅವನನ್ನು ಕರೆದರು.

ಎಲ್ಲ ಬಾಹ್ಯಶತ್ರುಗಳಿಗಿಂತಲೂ ಅಂತಃಶತ್ರುಗಳು ಹೆಚ್ಚು ಬಲಿಷ್ಠರು. ಅಂತಃಶತ್ರುಗಳಲ್ಲಿಯೂ ಕಲಿಯೇ ಹೆಚ್ಚು ಬಲಿಷ್ಠ. ಅವನನ್ನೇ ಲೀಲಾಜಾಲವಾಗಿ ಗೆದ್ದ ಪರೀಕ್ಷಿತನು ನಿಜವಾಗಿ ಅಖಂಡಾಧಿಪತಿ, ಮಹಾಭಾಗವತೋತ್ತಮ ಎನ್ನುವುದರಲ್ಲಿ ಸಂಶಯವಿಲ್ಲ. ಅವನು ಮಾಡಿದ ಈ ಕಲಿನಿಗ್ರಹದ ಕಥೆಯನ್ನು ಕೇಳಿದರೂ ಸಾಕು, ಶ್ರೋತೃಗಳಿಗೆ ಕಲಿಬಾಧೆ ಇರುವುದಿಲ್ಲ. ಮಹಾಪುಣ್ಯವೇ ಲಭಿಸುವುದು.

ಉಪವರ್ಣಿತಮೇತದ್ ವಃ ಪುಣ್ಯಂ ಪಾರೀಕ್ಷಿತಂ ಮಯಾ ।
ವಾಸುದೇವಕಥೋಪೇತಂ ಆಖ್ಯಾನಂ ಯದಪೃಚ್ಛಥ ॥ (ಭಾ.೧.೧೮.೯)

'ಶೌನಕರೆ, ನೀವು ಕೇಳಿದ ಕೇಳಿದರೆ ಪುಣ್ಯಕರವಾದ ರಾಜಾ ಪರೀಕ್ಷಿತನ ಕಲಿನಿಗ್ರಹ ಕಾರ್ಯವನ್ನು ನಿಮಗೆ ವರ್ಣಿಸಿದ್ದೇನೆ' ಎನ್ನುತ್ತಾರೆ ಸೂತರು ಇಲ್ಲಿ. 'ಪುಣ್ಯಂ ಪಾರೀಕ್ಷಿತಂ' 'ಪರೀಕ್ಷಿತನ ಕಥೆ ಪುಣ್ಯಕರ' ಎಂದು.



–೨೧–

**ಅದಮ್ಯ ಪರಾಕ್ರಮಿ ಪ್ರಜಾಪಾಲಕ ರಾಜಾ ಪರೀಕ್ಷಿತ**

**ನ ವೈ ನೃಭಿರ್ನರದೇವೋಽಪರಾಧ್ಯಃ**
**ತಂ ಶಪ್ತುಮರ್ಹಸ್ಯವಿಪಕ್ವಬುದ್ಧೇ ।**

**ಯತ್ತೇಜಸಾ ದುರ್ವಿಷಹೇಣ ಗುಪ್ತಾ**
**ವಿಂದಂತಿ ಭದ್ರಾಣ್ಯಕುತೋಭಯಾಃ ಪ್ರಜಾಃ ॥**

(ಭಾ.೧.೧೮.೪೨)

ಏವಂ ಶ್ರೋತೃಣಾಂ ಕಲಿಬಾಧೋ ನ ಭವೇದಿತಿ ಕಲಿನಿಗ್ರಹರೂಪಮಾಹಾತ್ಮ್ಯಕಥನೇನಾಖಂಡಾಧಿಪತ್ಯಂ ಪರಮಭಾಗವತತ್ವಂ ತದುದಿತಮುಪಪಾದಿತಂ । ಇದಾನೀಂ ಕಿಂನಿಮಿತ್ತೋ ರಾಜ್ಯಾದಿತ್ಯಾಗ ಇತಿ ಪ್ರಶ್ನಸ್ಯೋತ್ತರಮಾಹ ॥ ನ ವಾ ಇತ್ಯಾದಿನಾ ಶ್ಲೋಕದ್ವಯೇನ ॥ ಅತ್ರೇತ್ಥಂ ಕಥಾ ಕದಾಚಿನ್ಮಹಾರಾಜಃ ಪರೀಕ್ಷಿದ್ಧನುರ್ಗೃಹೀತ್ವಾ ವನಂ ಗತಸ್ತತ್ರ ಮೃಗಗವೇಷಣೇನ ಪರಿಶ್ರಾಂತಃ ಕ್ಷುಧಿತಸ್ತೃಷಿತಶ್ಚ ಕಸ್ಯಚಿದೃಷೇರಾಶ್ರಮಂ ಪ್ರವಿಶ್ಯ ತತ್ರ ಮೀಲಿತಲೋಚನಮಾಸೀನಂ ಸಮಾಧಿಸ್ಥಂ ಮುನಿಮವೇಕ್ಷ್ಯ ಶುಷ್ಯತ್ತಾಲುರುದಕಮಯಾಚತ । ತಥಾಪಿ ತಸ್ಮಾದಲಬ್ಧೋದಕ ಆಸನಾದ್ಯುಪಚಾರವಿರಹಿತಸ್ತೇನಾವಜ್ಞಾತಮಾತ್ಮಾನಂ ಮನ್ವಾನೋಽಯಂ ಸಮಾಧಿಸ್ಥಶ್ಚೇನ್ಮದಾಕ್ರೋಶನೇನೋತ್ತಿಷ್ಠೇತ । ನೋತ್ತಿಷ್ಠತೇ ಚ । ತೇನ ಮುಧಾ ಸಮಾಧಿರಿವ ಭಾತಿ । ಕಿಮತಃ । ಕಿಮನೇನ ಕ್ಷತ್ರಬಂಧುನಾಸ್ಮಾಕಂ ಸ್ಯಾದಿತಿ । ಕಥಂ ವಾ ಭವತು ಕಿಂ ತೇನಾಸ್ಮಾಕಮೃಷಿಣೇತಿ ಗಚ್ಛನ್ ತತ್ರೈವ ಮೃತಮುರಗಂ ಧನುಷ್ಕೋಟ್ಯಾ ತಸ್ಯಾಂಸೇ ನಿಧಾಯ ಸ್ವಪುರಂ ಜಗಾಮ । ತತಸ್ತಸ್ಯ ಪುತ್ರೋ ಬಾಲಕೈಃ ಸಹ ಕ್ರೀಡಾರ್ಥಂ ಗತಃ ಕೇನಚಿದ್ರಾಜಾಗತಿಸಮಯೇ ದೂರಮೇವ ವಿಜ್ಞಾತಗತಿನಾ ಸ್ಥಿತೇನ ಪುರುಷೇಣ ರಾಜ್ಞಾ ಋಷಯೇ ಕೃತಂ ಮೃತಸರ್ಪಕಲೇವರಸ್ಯ ಕಂಠೇ ನಿಕ್ಷೇಪರೂಪಮಪರಾಧಂ ಶ್ರುತ್ವಾ ತತ್ರೈವ ಬಾಲಕಾನಾಂ ನಿಕಟೇ ''ಇತಃ ಸಪ್ತಮೇಽಹನಿ ಸ ರಾಜಾ ತಕ್ಷಕೇಣ ದಗ್ಧಾಂಗೋ ಭೂಯಾ''ದಿತಿ ಶಾಪಂ ದತ್ವಾಽಽಶ್ರಮಂ ಪ್ರತ್ಯಾಗತ್ಯ ಪಿತರಂ ತದುಕ್ತಪ್ರಕಾರೇಣ ಗಲಸ್ಥಿತಸರ್ಪ-ಕಲೇವರಂ ದೃಷ್ಟ್ವಾ ತದುದ್ಬೋಧನಾಯ ರುರೋದ । ಸ ಚಾಪಿ ಮುನಿಃ ಸುತರೋದನಂ ಶ್ರುತ್ವಾ ನೇತ್ರೇ ಉನ್ಮೀಲ್ಯ ಗಲೇ ಸ್ಥಿತಂ ಸರ್ಪಶರೀರಂ ದೂರತಃ ಪ್ರಕ್ಷಿಪ್ಯ ಕಿಮರ್ಥಂ ರೋದಿಷೀತಿ ಪೃಷ್ಟೇ ಸತಿ ಸುತೋದಿತಂ ಸರ್ವಂ ಶ್ರುತ್ವಾ ಕಿಮರೇ ಬಾಲಕ ಅಪರಾಧಾದಧಿಕಂ ದಂಡಂ ಕೃತವಾನಸೀತಿ ಬಹುಶಸ್ತಂ ನಿಂದಿತವಾನಿತಿ । ತತಃ ಕಿಮಕರೋದಿತ್ಯತ ಆಹ ॥ ನ ವಾ ಇತಿ ॥

ಹೇ ಅವಿಪಕ್ವಬುದ್ಧೇ ಇತಿ ಪುತ್ರಂ ಪ್ರತಿ ಪಿತುಃ ಸಂಬೋಧನಂ । ಯಸ್ಮಾತ್ ದುರ್ವಿಷಹೇಣ ಯಸ್ಯ ತೇಜಸಾ ಗುಪ್ತಾಃ ಪ್ರಜಾಃ ನ ವಿದ್ಯತೇ ಕುತೋಽಪಿ ಭಯಂ ಯಾಸಾಂ ತಾದೃಶಾಃ ಭವಂತಿ । ಭದ್ರಾಣಿ ವಿಂದಂತಿ ಪ್ರಾಪ್ನುವಂತಿ ಚ ।

**ತಸ್ಮಾತ್ಸ ನರದೇವೋ ನೃಭಿಸ್ತದ್ದೇಶಸ್ಥಿತೈರಪರಾಧ್ಯೋ ನ ಭವತಿ । ವಾ ಇತ್ಯನೇನ ವಿಪಕ್ಷೇ ಬಾಧಕಂ ಸೂಚಯತಿ । ತ್ವಂ ತ್ವವಿಪಕ್ವಬುದ್ಧಿತ್ವಾದೇವ ತಂ ಶಪ್ತವಾನಸಿ । ಅತಸ್ತ್ವಯಾ ಅಕಾರ್ಯಮೇವ ಕೃತಮಿತಿ ಪ್ರೋವಾಚೇತಿ । ಕೇವಲಂ ಧರ್ಮೇಣ ರಾಜ್ಯಪಾಲಕೋ ಮಹಾಭಾಗವತಃ ಕ್ಷುತ್ತೃಟ್ಪರೀತ ಆಶ್ರಮಮಾಗತಶ್ಚೇದಸ್ಮಾ-ಭಿಸ್ತೃಣಫಲಾಂಬುಸೂನೃತಾದಿಭಿರರ್ಹಣೀಯ ಏವೇತ್ಯಾಶಯೇನೋಕ್ತಂ ನರದೇವ ಇತಿ ॥**



**ಶಮೀಕಮುನಿ ಪುತ್ರನಾದ ಶೃಂಗಿಗೆ ಹೇಳುತ್ತಾನೆ—'ರಾಜನು ಪ್ರಜೆಗಳನ್ನು ದಂಡಿಸಬೇಕು ಹೊರತು ಪ್ರಜೆಗಳೇ ರಾಜನಿಗೆ ದಂಡಿಸುವ ಅಪರಾಧ ಮಾಡಬಾರದು. ರಾಜನ ಅದಮ್ಯಪರಾಕ್ರಮದ ರಕ್ಷಣೆ ಇದ್ದರೇ ಪ್ರಜೆಗಳಿಗೆ ಸುಖವೇ ಹೊರತು ಯಾವ ಭಯವೂ ಇರುವುದಿಲ್ಲ. ನಿನಗೆ ಈ ವಿವೇಕವಿಲ್ಲ'**

ಒಮ್ಮೆ ರಾಜ ಬೇಟೆಗೆ ಹೋದಾಗ ಒಂದು ಜಿಂಕೆ ತಪ್ಪಿಸಿಕೊಂಡು ಓಡಿ ಕಣ್ಮರೆಯಾಯಿತು. ಅದನ್ನು ಅರಸುತ್ತ ರಾಜ ಹಸಿದು ಬಾಯಾರಿ ಶಮೀಕ ಮುನಿಯಾಶ್ರಮಕ್ಕೆ ಹೋದರೆ ಮುನಿ ಕಣ್ಮುಚ್ಚಿ ಧ್ಯಾನದಲ್ಲಿದ್ದ. ರಾಜ 'ನೀರು!' ಎಂದರೆ ಮುನಿ ನೀರು ಕೊಡಲಿಲ್ಲ. ರಾಜ ಅವಮಾನವಾಯಿತೆಂದು ಸಿಟ್ಟಾಗಿ, ಇದೇನು ಸಮಾಧಿಯ ನಟನೆಯೋ ಅಥವಾ ಈ ಕ್ಷತ್ರಿಯನಿಂದ ನನಗೇನಾಗಬೇಕಿದೆ ಎಂದು ಅನಾದರವೋ? ಕ್ಷತ್ರಿಯನಿಂದ ಮುನಿಗೇನಾಗ ಬೇಕೆನ್ನುವುದಾದರೆ ಮುನಿಯಿಂದ ಕ್ಷತ್ರಿಯನಿಗೇನಾಗಬೇಕು? ಎಂದುಕೊಂಡು ಆಶ್ರಮದಿಂದ ಹೊರಗೆ ನಡೆದಾಗ ಹರೀಚ್ಚೆಯಿಂದ ಒಂದು ಸತ್ತಹಾವು ಗೋಚರಿ ಸಿತು. ಅದನ್ನು ಬಿಲ್ಲಿನ ತುದಿಯಿಂದೆತ್ತಿ ಮುನಿಯ ಕೊರಳಿಗೆ ಮಾಲೆ ಹಾಕಿದ.

ಆದರೆ ಮುಂದೆ ದಾರಿಯಲ್ಲಿ ತನ್ನ ಈ ವರ್ತನೆ ತನಗೇ ಸರಿದೋರಲಿಲ್ಲ. ಮುನಿ ನಿಜವಾಗಿ ಹರಿಧ್ಯಾನ ನಿರತನಾಗಿದ್ದನೆ? ಅಥವಾ ಈ ಕ್ಷತ್ರಿಯನಿಗೆ ಸತ್ಕಾರ ನೀಡಿ ಏನು ಪುಣ್ಯ ಗಳಿಸಬೇಕಿದೆ ಎಂದು ಸಮಾಧಿಯ ಸೋಗಿನಲ್ಲಿದ್ದನೆ? ಎಂದು ಸಂದೇಹಪಟ್ಟೇ ಅರಮನೆ ಕಡೆಗೆ ನಡೆದ.

ಇತ್ತ ಬಾಲಕರೊಂದಿಗೆ ಆಟವಾಡುತ್ತಿದ್ದ ಮುನಿಪುತ್ರ ಶೃಂಗಿಗೆ ಮರೆಯಲ್ಲಿ ನಿಂತು ನೋಡುತ್ತಿದ್ದ ಪ್ರತ್ಯಕ್ಷದರ್ಶಿ ಯಾದ ಒಬ್ಬ ವ್ಯಕ್ತಿ 'ನಿಮ್ಮಪ್ಪನ ಕೊರಳಿಗೆ ಸತ್ತ ಹಾವನ್ನು ಸುತ್ತಿ ಹೊರಟು ಹೋದ, ರಾಜ' ಎಂದ. ಇದನ್ನು ಕೇಳಿ ಮುಗ್ಧ

ಬಾಲಕನು ಸಿಟ್ಟಾಗಿ 'ಇಂದಿಗೆ ಏಳನೆ ದಿನದಲ್ಲಿ ರಾಜನು ತಕ್ಷಕ ಕಚ್ಚಿ ಸತ್ತು ಹೋಗಲಿ' ಎಂದು ಶಪಿಸಿದ. ತಂದೆಯ ಬಳಿ ಬಂದು ಅಳುತ್ತ ನಿಂತ. ಮುನಿ ಕಣ್ಣು ತೆರೆದು, ಬಾಲಕನು ರಾಜನಿಗೆ ಶಾಪ ಕೊಟ್ಟಿದ್ದನ್ನು ಕೇಳಿ, 'ಒಂದು ಸಣ್ಣ ತಪ್ಪಿಗೆ, ಅತಿ ದೊಡ್ಡ ಶಿಕ್ಷೆ ನೀಡಿದೆ, ನಿನಗೆ ಬುದ್ಧಿ ಇಲ್ಲ' ಎಂದ.

ಶಮಿಕನದು ಸಾಧಾರಣ ಸಮಾಧಿಸ್ಥಿತಿಯಾಗಿದ್ದರೆ ರಾಜ ಬಂದುದು ತಿಳಿಯುತ್ತಿತ್ತು. ಅಸಂಪ್ರಜ್ಞಾತ ಸಮಾಧಿಯಾಗಿದ್ದರೆ ಬಾಲಕನ ಅಳುವಿಗೆ ಎಚ್ಚರವಾಗಬಾರದಿತ್ತು! ನಿಜ. ಆದರೆ ಅಸಂಪ್ರಜ್ಞಾತ ಸಮಾಧಿಸ್ಥಿತಿ ಮುಗಿದಾಗ ಪ್ರಾರಬ್ಧದಿಂದಲೇ ಜ್ಞಾನಿಗಳಿಗೆ ಎಚ್ಚರವಾಗುತ್ತದೆ.



–೨೨–

## ರಾಜನಿಲ್ಲದಿದ್ದರೆ ರಾಜ್ಯನಾಶವಾದೀತು

**ಅರಕ್ಷಮಾಣೇ ನರದೇವ ನಾಮ್ನಿ**
**ರಥಾಂಗಪಾಣಾವಯಮಂಗ ಲೋಕಃ ।**
**ತದಾ ಹಿ ಚೋರ ಪ್ರಚುರೋ ವಿನಂಕ್ಷ್ಯ**
**ತ್ಯರಕ್ಷ್ಯಮಾಣೋ ವಿವರೂಥವತ್ ಕ್ಷಣಾತ್ ॥**

(ಭಾ.೧.೧೮.೪೩)

ಮಹಾಪಾಪಂ ಚ ಕೃತವಾನಸೀತ್ಯಾಹ । **ಅರಕ್ಷಮಾಣ ಇತಿ ॥** ಹೇ ಅಂಗ ನರದೇವದೇಹಮಧಿಷ್ಠಾಯ ತನ್ನಾಮವಾಚ್ಯೇ ಹರಾವರಕ್ಷಮಾಣೇ ರಕ್ಷಣಮಕುರ್ವತಿ ಸತಿ ತದ್ವೈವಾಯಂ ಲೋಕಶ್ಚೋರಪ್ರಚುರೋ ಭವತಿ । ತತಸ್ತತ್ಕ್ಷಣಾದೇವ ವಿನಂಕ್ಷ್ಯತಿ ಚೋರೈರಪಹೃತಾರ್ಥಾದಿರ್ಭವತಿ । ನಹಿ ತದಾನೀಂ ವಾರಯಿತಾ ಕೋ ವಾಸ್ತೀತ್ಯಾಶಯೇನಾಹ ॥ **ಅರಕ್ಷಮಾಣ ಇತಿ ॥** ತತ್ರ ದೃಷ್ಟಾಂತೋ **ವಿವರೂಥವದಿತಿ ॥** ಯಥಾ ಹಿ ಸೇನಾ ಸ್ವಪತಿವಿರಹಿತಾ ಪರೈರಪಹೃತಾರ್ಥಾದಿರ್ಭವತಿ ನಹಿ ತದಾ ನಿವಾರಕಃ ಕೋಽಪ್ಯಸ್ತಿ ತಥೇತಿ । ಅತ ಏವ ಪರೀಕ್ಷಿದಿತ್ಯನುಕ್ತ್ವಾ ನರದೇವಪದಂ ಪ್ರಾಯುಂಕ್ತೇತಿ । ಏವಮಪಕ್ವಬುದ್ಧಿನಾ ಮತ್ಪುತ್ರೇಣ ಕೃತಂ ಮಹಾಪಾಪಂ ಭಗವಾನೇವ ಕ್ಷಂತುಮರ್ಹತೀತ್ಯೇವ ಮಾದಿರೂಪೇಣ ಪಶ್ಚಾತ್ತಪ್ತೋಽಭೂನ್ಮುನಿರಿತಿ ಸೂಚಯಿತುಂ ನರದೇವೇಽ-ರಕ್ಷಮಾಣ ಇತಿ ವಕ್ತವ್ಯೇ ನರದೇವನಾಮ್ನಿ ರಥಾಂಗಪಾಣಾವಿತ್ಯುಕ್ತಂ । ತದನೇನ

**ಬಾಲ್ಯಮಾರಭ್ಯ ಜಾತಕಕೋವಿದವಿಪ್ರ ಮುಖಶ್ರುತತಕ್ಷಕನಿಮಿತ್ತಾತ್ಮಮೃತ್ಯೋಃ ಸಂತತಮೇವ ತಂ ಪರೀಕ್ಷತೋಽತ ಏವ ಪರೀಕ್ಷಿದಿತಿ ಜನೈಃ ಪರಿಭಾಷ್ಯಮಾಣಸ್ಯ, ವಸ್ತುತೋ ಗರ್ಭೇ ವಿಷ್ಣುನಾ ರಕ್ಷಿತತ್ವನಿಮಿತ್ತತ್ವೇನ ವಿಷ್ಣುರಾತಾಽಭಿಧಾನಸ್ಯ ಪರಮಭಾಗವತಸ್ಯ ಜಂಬೂದ್ವೀಪಪತೇರ್ದೈವಾದಾಸಾದಿತಾಲ್ಪತರವಿಪ್ರವಿಪ್ರ-ಕೃತೇಸ್ತತ ಏವ ಸ್ವಪುರಂ ಪ್ರತಿ ಗಮನಸಮಯೇ ಮಾರ್ಗ ಏವಾಹೋಽ-ಸಾಧ್ವಿದಂ ಮಯಾನುಷ್ಠಿತಮಿತ್ಯನುತಪ್ಯಮಾನಹೃದಯಸ್ಯ ರಾಜರ್ಷಿಪ್ರವರಸ್ಯ ತತ್ಪುತ್ರಶಾಪಮಿಷೇಣ ಪ್ರಾರಬ್ಧಕರ್ಮಣೈವ ರಾಜ್ಯಾದಿತ್ಯಾಗ ಇತಿ ತತ್ಪ್ರಶ್ನಸ್ಯೋತ್ತರಮುದಿತಂ ಭವತಿ ॥**



**ಶಮೀಕಮುನಿ ಪುತ್ರ ಶೃಂಗಿಗೆ ಹೇಳುತ್ತಾನೆ, ರಾಜರೊಳಗೆ ನಿಂತು ಚಕ್ರಧರನಾದ ನಾರಾಯಣನೇ ಪ್ರಜೆಗಳನ್ನು ಕಾಪಾಡುತ್ತಾನೆ. ಅವನು ಕಾಪಾಡ ದಿದ್ದರೆ ಆಗ ಎಲ್ಲೆಡೆ ಕಳ್ಳಕಾಕರೇ ತುಂಬುತ್ತಾರೆ. ಸೇನಾಧಿಪತಿ ಇಲ್ಲದ ಸೈನ್ಯದಂತೆ ರಾಜ್ಯವು ಕ್ಷಣದಲ್ಲಿ ನಾಶವಾಗುತ್ತದೆ.**

ಈ ರಾಜನು ಧರ್ಮರಕ್ಷಕನಾದ ಕೀರ್ತಿಶಾಲಿಯಾದ ರಾಜರ್ಷಿ. ಮಹಾಭಗವದ್‌ಭಕ್ತ. ಬಹು ಅಶ್ವಮೇಧಯಾಗಗಳನ್ನು ಮಾಡಿದವನು. ಅವನು ಹಸಿವು ಬಾಯಾರಿಕೆಗಳಿಂದ ಬಳಲಿ ನಮ್ಮ ಆಶ್ರಮಕ್ಕೆ ಬಂದಾಗ ನಾವು ಸತ್ಕಾರ ನೀಡಬೇಕಾಗಿತ್ತು. ಕೇವಲ ಹುಲ್ಲಿನ ಆಸನವನ್ನಾದರೂ ಕೊಟ್ಟು ಹಣ್ಣು-ನೀರು-ಒಳ್ಳೆಯ ಮಾತುಗಳಿಂದಲಾದರೂ ಉಪಚಾರ ಮಾಡಬೇಕಿತ್ತು. ನಾವೇನೂ ಮಾಡದೆ, ಮರಣದ ಶಾಪ ನೀಡಿದೆವು. ನಾವು ರಾಜನಿಗೆ ಕೊಟ್ಟ ಶಾಪದಿಂದ, ಅವನೊಳಗಿರುವ ಸಾಕ್ಷಾತ್ ನಾರಾಯಣದೇವನಿಗೇ ಶಾಪ ಕೊಟ್ಟಂತಾಯಿತು. ನಿನಗಿನ್ನೂ ಬುದ್ಧಿ ಬಲಿತಿಲ್ಲ! ಹೇ ಹರಿ! ನಿರಪರಾಧಿಯಾದ ನಿನ್ನ ಭಕ್ತನಲ್ಲಿ ಬಾಲಕನು ತಿಳಿಯದೇ ಅಪರಾಧ ಗೈದಿದ್ದಾನೆ. ಸರ್ವಾಂತರ್ಯಾಮಿ ನೀನೇ ಬಾಲಕನನ್ನು ಕ್ಷಮಿಸಬೇಕು ಎಂದು ಶಮೀಕಮುನಿ ಪಶ್ಚಾತ್ತಾಪದಿಂದ ಬೇಡಿ ಕೊಂಡರು.

ಅತ್ತ ರಾಜನು 'ನಾನು ತಪ್ಪು ಮಾಡಿದೆ. ನಾನು ರಾಜ, ಈತನೊಬ್ಬ ಬಡಬ್ರಾಹ್ಮಣ. ನನಗೆ ಈತ ಸತ್ಕಾರ ಮಾಡಲಿಲ್ಲ ಎಂದು ಅಸಮಾಧಾನಪಟ್ಟು ಮುನಿಗೆ ಅಪಚಾರಗೈದೆ. ಹರಿಭಕ್ತನಿಗೆ ಮಾಡಿದ ಅಪಚಾರವಿದು, ಹರಿಗೇ ಮಾಡಿದ ಅಪಚಾರವಾಯಿತು! ಅದರಿಂದ ನನಗೆ ಆಪತ್ತು ಬರುವುದು ನಿಶ್ಚಿತ.

ಅದು ಬರಬೇಕು ಮುಂದೆ ಎಂದೂ ನಾನು ಇಂಥ ಪಾಪ ಮಾಡದಂತೆ ನನ್ನ ರಾಜ್ಯ ಸೈನ್ಯ ಬೊಕ್ಕಸವೆಲ್ಲ ಬ್ರಾಹ್ಮಣನ ಕೋಪಕ್ಕೆ ಆಹುತಿಯಾಗಬೇಕು' ಎಂದುಕೊಂಡ. ಅದರಿಂದ ಮುನಿಶಾಪ ನೆವದಿಂದ ಪ್ರಾರಬ್ಧವೇ ರಾಜನಿಂದ ರಾಜ್ಯ ತ್ಯಾಗಮಾಡಿಸಿತ್ತು. ರಾಜ ಒಡನೆ ಸಪ್ತಾಹಭಾಗವತ ಶ್ರವಣ ಮಾಡಿದ.

ಏಳನೇದಿನ ತಕ್ಷಕ ಒಂದು ಹಣ್ಣಿನೊಳಗಿನ ಕೃಮಿರೂಪದಿಂದ ರಾಜನ ಕೈಸೇರಿದ.

'ಇದು ಕೃಮಿ. ಇದು ತಕ್ಷಕಸರ್ಪವಾಗಲಿ ನನ್ನನ್ನು ಕಚ್ಚಲಿ! ಬ್ರಾಹ್ಮಣ ಶಾಪ ಸುಳ್ಳಾಗಬಾರದು. ಅದನ್ನು ನಿಜವಾಗಿಸಿ ನಾನು ಬ್ರಾಹ್ಮಣಪ್ರಿಯನಾದ ಭಗವಂತನ ಆರಾಧನೆಗೈಯಬೇಕು' ಎನ್ನುತ್ತಲೆ ಕ್ಷಣದಲ್ಲಿ ತಾನು ಅಸಂಪ್ರಜ್ಞಾತ ಸಮಾಧಿಸ್ಥನಾಗಿ ಶರೀರಾಭಿಮಾನ ತ್ಯಾಗ ಮಾಡಿದ.

ಅಸಂಪ್ರಜ್ಞಾತ ಸಮಾಧಿಸ್ಥಿತಿಯಲ್ಲಿ ಪೃಥುರಾಜನ ಬಗ್ಗೆ ಭಾಗವತ(೪.೨೩.೧೨) ಹೇಳುವಂತೇ ಬಾಹ್ಯಮನಸ್ಸು ಉಪರತವಾಗಿರುತ್ತದೆ. ಭೇರಿತಾಡನಾದಿಗಳೂ ಕೂಡ ಅದನ್ನು ಎಚ್ಚರಿಸಲಾರವು. ಇದು ಭಾಗವತ ಯಾದುಪತ್ಯದಲ್ಲಿ ಸ್ಪಷ್ಟವಿದೆ— 'ಬಾಹ್ಯಾಂತಃಕರಣಂ ಅಚ್ಛಿನತ್ ತದ್‌ವೃತ್ತಿ ಜ್ಞಾನಂ ತತ್ಯಜೇ ಪ್ರಾಯೇಣ ತ್ಯಕ್ತವಾನ್' ಎಂದು.

'ಸ್ವರೂಪಚೈತನ್ಯೇನೈವ ಆತ್ಮಾನಮೀಶ್ವರಂ ಚ ಯೋಗಸ್ಥಃ ಪಶ್ಯತಿ' 'ಸ್ವರೂಪ ಮನಸಿನಿಂದಲೇ ತನ್ನನ್ನೂ ಭಗವಂತನನ್ನೂ ಯೋಗಸಮಾಧಿಯ ಅವಸ್ಥೆಯಲ್ಲಿ ಕಾಣುತ್ತಾನೆ ಜೀವ' ಎಂದು ಈಕ್ಷತ್ಯಧಿಕರಣ ತತ್ವಪ್ರದೀಪದಲ್ಲಿಯೂ ಇದು ಸ್ಪಷ್ಟವಿದೆ.

ಅದರಿಂದ ತಕ್ಷಕ ಕಚ್ಚಿ ಅವನ ಶರೀರವನ್ನು ವಿಷಾಗ್ನಿಯಿಂದ ಸುಟ್ಟಿದ್ದು ರಾಜನಿಗೆ ಏನೂ ಅನುಭವಕ್ಕೇ ಬರಲೆ ಇಲ್ಲ. ಅಪಮೃತ್ಯು ದೋಷ ಅವನನ್ನು ಸುತ್ತಿಕೊಳ್ಳಲಿಲ್ಲ. ಆಗಲೆ ನೇರ ವೈಕುಂಠಕ್ಕೇ ತೆರಳಿದ ರಾಜ.

'ಭೇಜೇ ಖಗೇಂದ್ರಧ್ವಜಪಾದಮೂಲಂ ।'



—೨೩—

**ಗಂಗಾಪ್ರವಾಹದ ನಡುವೇ ನಿರಶನ ವ್ರತಕ್ಕೆ ಕುಳಿತಿದ್ದಾನೆ ರಾಜ**

**ಅಥೋ ವಿಹಾಯೇಮಮಮುಂ ಚ ಲೋಕಂ**
**ವಿಮೃಶ್ಯ ತೌ ಹೇಯತಯಾ ಪುರಸ್ತಾತ್ ।**
**ಕೃಷ್ಣಾಂಘ್ರಿಸೇವಾಮಭಿಮನ್ಯಮಾನ**
**ಉಪಾವಿಶತ್ ಪ್ರಾಯಮಮರ್ತ್ಯನದ್ಯಾಂ ॥**

(ಭಾ.೧.೧೯.೫)

ತತೋ ರಾಜಾ ಸ್ವಪುರಮಾಗತ್ಯ ಮುನಿಪುತ್ರೇಣ ದತ್ತಶಾಪಂ ಶ್ರುತವಾನ್ । ಶ್ರುತ್ವಾ ಚ ಕಿಮಕರೋದಿತ್ಯತ ಆಹ ॥ **ಅಥೋ ಇತಿ** ॥ ಶಾಪಶ್ರವಣಾನಂತರಮೇವ ಕ್ಷಣಮಪ್ಯವಿಹಾಯೇಮಮಮುಂ ಚ ಲೋಕಮೈಹಿಕಾಮುಷ್ಮಿಕಪುರುಷಾರ್ಥೌ ವಿಹಾಯ । **ಕೋಽರ್ಥಃ** । ತೌ ಹೇಯತಯಾ ವಿಮೃಶ್ಯೇತಿ । ವಿಮರ್ಶನಂ ಚೇತೋಽಪಿ ಪುರಸ್ತಾದಸ್ತೀತ್ಯಭಿಪ್ರೇತ್ಯೋಕ್ತಂ **ಪುರಸ್ತಾದೇವೇತಿ** ॥ ತದನಂತರಂ ಕೃಷ್ಣಾಂಘ್ರಿಸೇವಾಮೇವೋಪಾದೇಯಾಂ ಮನ್ಯಮಾನೋಽಮರ್ತ್ಯನದ್ಯಾಂ ಪ್ರವಾಹಸ್ಥಿತಪ್ರಾಸಾದೇ ಪ್ರಾಯಮುಪಾವಿಶತ್ ಪ್ರಾಯೋಪವೇಶಂ ಕೃತವಾನ್ । ಪ್ರಾಯೋಪವೇಶೋಽನಶನವ್ರತಂ ॥



**'ಪುರಸ್ತಾತ್' ಹಿಂದಿನಿಂದಲೂ ಈ ಲೋಕ ಪರಲೋಕ ಭೋಗಗಳನ್ನು ಹೇಯವೆಂದು ತಿಳಿದು ವಿರಕ್ತಿ ತಾಳಿದವನೇ ಈ ಪರೀಕ್ಷಿತ. ಈಗ ಶಾಪ ಬಂದುದನ್ನು ಕೇಳಿದ ಬಳಿಕ ಮರಣಕ್ಕೆ ಮುನ್ನ ಶ್ರೀಕೃಷ್ಣನ ಚರಣ ಸೇವಾರೂಪವಾಗಿ ಭಾಗವತ ಶ್ರವಣ ಮಾಡಲೆಂದು ಗಂಗಾಪ್ರವಾಹದ ನಡುವೇ ಏಕಸ್ತಂಭದ ಅರಮನೆಯಲ್ಲಿ ನಿರಶನವ್ರತ ಕೈಗೊಂಡು ಕುಳಿತ.**

ಸಪ್ತಾಹ ಶ್ರವಣವನ್ನೂ ನಿರ್ವಿಘ್ನವಾಗಿ ಪೂರೈಸಿ, ಹಾವು ಕಡಿವ ದುರ್ಮರಣವನ್ನು ತಪ್ಪಿಸಿಕೊಂಡ. 'ನ ತ್ವಾಂ ಧಕ್ಷ್ಯತಿ ತಕ್ಷಕಃ' 'ನಿನಗೆ ತಕ್ಷಕ ಕಡಿದರೂ ಸುಡುವುದಿಲ್ಲ ಅಂದರೆ ಅಪಮೃತ್ಯುದೋಷ ನಿನಗೆ ಬರುವುದಿಲ್ಲ ವೆಂ'ದು ಶುಕಮುನಿ ವರನೀಡಿ ಹೋಗಿದ್ದಾರೆ.

ಆದಿಪರ್ವದಲ್ಲಿ (ಅ.೪೩.೩೫) ಹೇಳಿದಂತೆ ಒಂದು ಹಣ್ಣಿನೊಳಗಿನ ಕೃಮಿ

ರೂಪದಿಂದ ತಕ್ಷಕ ರಾಜನ ಕೈಸೇರಿ ಕಚ್ಚಲು ಸಮಯವನ್ನು ಇದಿರು ನೋಡು ತ್ತಿದ್ದ. ರಾಜ ಕೃಮಿಯನ್ನು ಕಂಡು ನಕ್ಕು 'ಈತ ನನಗೆ ಕಚ್ಚಲಿ ಎನ್ನುತ್ತಾನೆ! ನಗು ತ್ತಾನೆ. ಇದು ಅಪಹಾಸ್ಯದ ನಗುವಲ್ಲ. ಧನ್ಯತೆಯ ತೃಪ್ತಿಯ ನಗು. 'ಅವನು ಕಚ್ಚುವ ಮೊದಲೇ ತಾನು ಯೋಗಬಲದಿಂದ ಶರೀರತ್ಯಾಗ ಮಾಡು ತ್ತೇನೆ. ಹಾಗೆ ಶುಕಮುನಿಗಳ ವರ ತನಗಿದೆ. ತನಗೆ ಶರೀರದ ಮೇಲೆ ಎಂದೂ ಅಭಿಮಾನವಿಲ್ಲ'.

ರಹೂಗಣರಾಜ ಜಡಭರಿತನಿಗೆ 'ದಂಡನೆ ನೀಡುವೆನೆಂ'ದಾಗ ಅವನೂ ಹೀಗೆ ನಕ್ಕು ಬಿಟ್ಟ.

ಶುಕಮುನಿ ಹೇಳಿದಂತೇ ರಾಜ ಕ್ಷಣದಲ್ಲಿ ಸಮಾಧಿಸ್ಥಿತಿಗೇ ಏರಿದ. ಶರೀರದ ಮೇಲಿನ ಅಭಿಮಾನವನ್ನು ಪರಿತ್ಯಜಿಸಿದ. ಅದೇಕಾಲದಲ್ಲಿ ತಕ್ಷಕ ಕಚ್ಚಿ ವಿಷಾಗ್ನಿ ಯಿಂದ ಶರೀರವನ್ನು ಸುಟ್ಟ. ಸುಟ್ಟಬೂದಿ ಗಂಗಾಪ್ರವಾಹದಲ್ಲಿ ಸೇರಿ ಹೋಯಿತು. ರಾಜ ಕೊನೆಕ್ಷಣದಲ್ಲಿಯೂ ಬ್ರಾಹ್ಮಣಾಂತರ್ಗತನ ಆರಾಧನೆ ಮಾಡಿ ನೇರವಾಗಿ 'ಭೇಜೇ ಖಗೇಂದ್ರಧ್ವಜ ಪಾದಮೂಲಂ' 'ಹರಿಪಾದವನ್ನು ಸೇರಿದ,

ನೆರೆದಿದ್ದ ಮುನಿಗಳೆಲ್ಲರೂ ಪ್ರೀತಿಯಿಂದ ಅವನನ್ನು ಬೀಳ್ಕೊಟ್ಟರು. ಅವನಿಗೆ ಹೀಗೆ ದುರ್ಮರಣದೋಷ ಬರಲಿಲ್ಲ, ಬೂದಿರೂಪದಿಂದ ಗಂಗಾಪ್ರವಾಹ ಪತನದ ಮಹಾಪುಣ್ಯವೇ ಲಭಿಸಿತು!

ಭಾರತ ಯುದ್ಧದಲ್ಲಿ ದ್ರೋಣಾಚಾರ್ಯರೂ ಹೀಗೇ ಯೋಗಬಲದಿಂದ ಶರೀರಾಭಿಮಾನ ತೊರೆದು ದೇವಲೋಕಕ್ಕೆ ಹೊರಟು ಹೋದುದನ್ನು ಯೋಧರು ಕಣ್ಣಾರೆ ಕಂಡಿದ್ದಾರೆ. ಇತ್ತ ದೃಷ್ಟದ್ಯುಮ್ನ ಆಚಾರ್ಯರ ಶಿರಶ್ಛೇದಗೈದರೂ ಬ್ರಾಹ್ಮಣನಿಗೆ ಶಸ್ತ್ರಮರಣದಿಂದಾಗಬಹುದಿದ್ದ ದೋಷವಿಲ್ಲವಾಯಿತು.

ಯದ್ಯಪಿ ಆದಿಪರ್ವದಲ್ಲಿ ಹೇಳಿದಂತೆ ರಾಜ ಹಣ್ಣುಬಿಡಿಸಿ ಕೃಮಿಯನ್ನು ಕಂಡನೆಂದರೆ ಅವನು ನಿರಶನವ್ರತವನ್ನು ಭಂಗ ಮಾಡಿಕೊಂಡನೆ? ಎಂಬ ಸಂಶಯ ಬರಬಹುದು. ಆದರೆ ಜನ್ಮಾಷ್ಟಮೀವ್ರತದಂತೆ ಸಪ್ತಾಹಕ್ಕೂ ಉದ್ಯಾಪನ ಮಾಡಬೇಕು. ಆಗ,

ವಿಪ್ರೇಭ್ಯೋ ಯಾಚಕೇಭ್ಯಶ್ಚ ವಿತ್ತಮನ್ನಂ ಪ್ರದೀಯತಾಂ ।
ದ್ವಾದಶ ಬ್ರಾಹ್ಮಣಾನ್ ಪಶ್ಚಾದ್ ಭೋಜಯೇತ್ ಮಧುಪಾಯಸೈಃ ॥

ಎಂಬ ವಿಧಿಯಂತೆ ಸಪ್ತಾಹಯಜ್ಞದ ಅಂಗವಾಗಿ ಅದರ ಸಮಾಪ್ತಿಯಲ್ಲಿ ಬ್ರಾಹ್ಮಣ ಭೋಜನ ಮಾಡಿಸಿ ತಾನೂ ಪ್ರಸಾದವನ್ನು ಸ್ವೀಕರಿಸುವುದರಿಂದ ವ್ರತಭಂಗ ದೋಷವಿಲ್ಲ.

ಅಥವಾ ಬ್ರಾಹ್ಮಣರಿಗೆ ಕೊಡಲು 'ಹಣ್ಣು ಕ್ರಿಮಿದುಷ್ಟವೇ?' ಎಂದು ಪರೀಕ್ಷಿಸುವುದಕ್ಕಾಗಿಯೇ ಪರೀಕ್ಷಿತ ಹಣ್ಣು ಬಿಡಿಸಿದ್ದ! ತಾನು ತಿನ್ನುವುದಕ್ಕಾಗಿ ಅಲ್ಲ ಎನ್ನಲು ಬರುತ್ತದೆ. ಆದರಿಂದ ಭಾಗವತಕ್ಕೆ ಭಾರತ ವಿರೋಧವಿಲ್ಲ.

ಗಂಗೆಯ ದಕ್ಷಿಣ ತೀರದಲ್ಲಿ ರಾಜ ಪ್ರಾಯೋಪವೇಶಕ್ಕೆ ಕುಳಿತನೆಂದು ಭಾಗವತ (೧.೧೯.೧೭)ದಲ್ಲಿ ಹೇಳಿದೆ. ಭಾರತದಲ್ಲಿ ಗಂಗಾಪ್ರವಾಹದ ನಡುವೇ ರಾಜನಿಗೆ ಒಂದು ಏಕಸ್ತಂಭದ ಅರಮನೆ ಇದ್ದಿತ್ತೆಂದಿದೆ. ಇಲ್ಲಿಯೂ ವಿರೋಧ ವಿಲ್ಲ. ಭಾಗವತದಲ್ಲಿ 'ತೀರದಲ್ಲಿ ರಾಜ ಕುಳಿತ'ನೆಂದರೆ ತೀರದ ಸಮೀಪ ಪ್ರವಾಹ ಮಧ್ಯದಲ್ಲಿಯೇ ಕುಳಿತನೆಂದು ಅರ್ಥೈಸಲು ಬರುತ್ತದೆ ತಾನೆ?

'ರಾಜ್ಯಲೋಭ ಶರೀರಮೋಹಗಳಿಗೊಳಗಾಗಿದ್ದ ರಾಜಾ ಪರೀಕ್ಷಿತನು ತನಗೆ ಮುನಿಶಾಪ ಬಂದಾಗ ಮರಣ ಭಯದಿಂದಲೇ ತನ್ನ ಶರೀರವನ್ನು ಹೇಗಾದರೂ ಕಾಪಾಡಿಕೊಳ್ಳಬೇಕೆಂದು ಬಯಸಿ ಗಂಗಾ ಪ್ರವಾಹದ ನಡುವೇ ಏಕಸ್ತಂಭದ ಅರಮನೆ ಕಟ್ಟಿಸಿ ಹೊಕ್ಕು ಅಡಗಿ ಕುಳಿತು ಸುತ್ತಲೂ ರಾಜ್ಯರಕ್ಷಕರಾದ ಮಂತ್ರಿಗಳಿಂದ ರಾಜ್ಯಭಾರವನ್ನೂ ಮಾಡಿಸಿಕೊಂಡ. ವಿಷವೈದ್ಯರುಗಳ ಸಮೂಹದಿಂದ ಶರೀರ ರಕ್ಷಣೆಯನ್ನೂ ಮಾಡಿಕೊಂಡ. ಆದರೂ ಅವನಿಗೆ ಮರಣ ತಪ್ಪಲಿಲ್ಲ!' ಎಂದು ಕನಿಕರಪಡುವವರಿಗೆ ನಾವು ಕನಿಕರಪಡಬೇಕು!

ಮುನಿಶಾಪ ಬಂದಾಗ ರಾಜನಿಗೆ ಮರಣಭಯ ಉಂಟಾಗಲಿಲ್ಲ. ಹೇಯತಯಾ 'ಪುರಸ್ತಾತ್' ಶಾಪವೃತ್ತಾಂತವನ್ನು ತಿಳಿಯುವ ಮುನ್ನವೆ 'ನನ್ನ ಈ ಶರೀರಕ್ಕಾಗಿ ರಾಜ್ಯ ಸೈನ್ಯ ತುಂಬಿದ ಬೊಕ್ಕಸ ಎಲ್ಲವೂ ಹೇಯ. ಬ್ರಾಹ್ಮಣನ ಕೋಪಾಗ್ನಿಯಲ್ಲಿ ಇಂದೇ ಸುಟ್ಟು ಬೂದಿಯಾಗಬೇಕು. ಪಾಪಿ ನಾನು ಇನ್ನು ಹೆಚ್ಚಿನ ಪಾಪ ಮಾಡದಂತಾಗಬೇಕು' ಎಂದು ಪಶ್ಚಾತ್ತಾಪಪಡುತ್ತಾನೆ.

ಶಾಪ ಬಂದುದನ್ನು ತಿಳಿದಾಗ 'ಇದೇ ಸರಿ, ತಕ್ಷಕನಿಂದ ತನಗೆ ಮರಣ ಬರಬೇಕು' ಎಂದುಕೊಂಡ. ಆದರೂ ಹಾವು ಕಚ್ಚಿ ಸಾಯುವ ಅಪಮೃತ್ಯು ದೋಷ ತನಗೆ ಬರಬಾರದು ಎಂದು ಶುಕಮುನಿಯಲ್ಲಿ ಬೇಡಿಕೊಂಡ. ಹೀಗೆ

ವರಪಡೆದು, ಅತ್ತ ಬ್ರಾಹ್ಮಣಶಾಪವೂ ಹುಸಿಯಾಗಬಾರದು. ಇತ್ತ ತನಗೆ ಅಪಮೃತ್ಯುದೋಷವೂ ಬರಬಾರದು' ಎಂದು ಎರಡು ಉದ್ದೇಶವನ್ನು ಜಾಣ್ಮೆಯಿಂದ ಸಾಧಿಸಿಕೊಂಡು ವೈಕುಂಠಯಾತ್ರೆಯನ್ನೂ ಅನಾಯಾಸವಾಗಿ ಮಾಡಿದ ಪರೀಕ್ಷಿತ.



–೨೪–

## ಪರೀಕ್ಷಿತನ ಬಳಿಗೆ ಮುನಿಗಳ ಆಗಮನ

ಯಾ ವೈ ಲಸಚ್ಛ್ರೀತುಲಸೀವಿಮಿಶ್ರ-
ಕೃಷ್ಣಾಂಘ್ರಿರೇಣ್ವಭ್ಯಧಿಕಾಂಬು ನೇತ್ರೀ ।
ಪುನಾತ್ಯಶೇಷಾನ್ ಉಭಯತ್ರ ಲೋಕಾನ್
ಕಸ್ತಾಂ ನ ಸೇವೇತ ಮರಿಷ್ಯಮಾಣಃ ॥

(ಭಾ.೧.೧೯.೬)

ನದ್ಯಂತರಂ ವಿಹಾಯಾಮರ್ತ್ಯನದ್ಯಾಮೇವ ಕುತಃ ಪ್ರಾಯೋಪವಿಷ್ಟ ಇತ್ಯತಸ್ತದಪೇಕ್ಷಯಾಧಿಕತೀರ್ಥಾಭಾವಾದಿತ್ಯಾಶಯೇನ ತನ್ಮಹಿಮಾನಂ ಲೇಶತೋ ದರ್ಶಯತಿ ॥ **ಯಾ ವಾ ಇತಿ** ॥ ಲಸಚ್ಛ್ರೀತುಲಸೀಭಿರ್ವಿಮಿಶ್ರಾ ಯೇ ಕೃಷ್ಣಾಂಘ್ರಿರೇಣವಸ್ತೈರಭ್ಯಧಿಕಾನಾಂ ಪವಿತ್ರಾಣಾಮಂಬೂನಾಂ ನೇತ್ರೀ । ಅತ ಏವ ಚ ಯಾ ಉಭಯತ್ರ ಮನುಷ್ಯಲೋಕೇ ದೇವಲೋಕೇ ಚ ವಿದ್ಯಮಾನಾನಶೇಷಾನ್ ಲೋಕಾನ್ ಜನಾನ್ ಪುನಾತಿ ತಾಂ ಕೋ ನ ಸೇವೇತ ಸ್ನಾನಾದಿನಾ । ತತ್ರಾಪಿ ಮರಿಷ್ಯಮಾಣಃ ಕೋ ವಾ ನ ಸೇವೇತಾತೋ ಮಹಾಮಹಿಮತ್ವಾತ್ಸೈವಾವಶ್ಯಂ ಸೇವ್ಯೇತಿ ।

**ಯಥಾಹುಃ**— ''ತಚ್ಚರಣಪಂಕಜಾವನೇಜನಾರುಣ ಕಿಂಜಲ್ಕೋಪ-ರಂಜಿತಾಖಿಲ ಜಗದಘ ಮಲಾಪಹೋಪಸ್ಪರ್ಶನಾಮಲಾ ಸಾಕ್ಷಾದ್ಭಗವತ್ ಪದೀತ್ಯನುಪಲಕ್ಷಿತವಚೋಭಿರಭಿಧೀಯಮಾನಾತಿಮಹತಾ ಕಾಲೇನ ಯುಗಸಹಸ್ರೋಪಲಕ್ಷಣೇನ ದಿವೋ ಮೂರ್ಧನ್ಯವತತಾರ । ಯತ್ತದ್ವಿಷ್ಣುಪದಮಾಹುಃ ಯತ್ರ ಹ ವಾವ ವೀರವ್ರತ ಔತ್ತಾನಪಾದಿಃ ಪರಮಭಾಗವತೋಽಸ್ಮತ್ಕುಲದೇವತಾಹರಿಚರಣಾರವಿಂದೋದಕಮಿತಿ ಯಾಮಧುನಾಪಿ ಪರಮಾದರೇಣ ಶಿರಸಾ ವಿಬಿರ್ತಿ ।

ತತಃ ಸಪ್ತರ್ಷಯಸ್ತತ್ಪ್ರಭಾವಜ್ಞಾ ಮುಕ್ತಿಮಿವಾಗತಾಂ ಮುಮುಕ್ಷವಃ ಸಬಹುಮಾನಮೇವಾದ್ಯಾಪಿ ಜಟಾಜೂಟೈರುದ್ವಹಂತಿ। ತತೋಽನೇಕ-ಸಹಸ್ರಕೋಟಿವಿಮಾನಾನೀಕ ಸಂಕುಲದೇವಯಾನೇನಾವತರಂತೀಂದು-ಮಂಡಲಮಾಪ್ಲಾವ್ಯ ಬ್ರಹ್ಮಸದನೇ ನಿಪತತಿ। ತತ್ರ ಚತುರ್ಧಾ ಭಿದ್ಯಮಾನಾ ಚತುರ್ಭಿರ್ನಾಮಭಿಶ್ಚತುರ್ದಿಶಮಭಿಸ್ಯಂದಂತೀ ನದನದೀಪತಿಮೇವಾಭಿನಿವಿಶತಿ ಸೀತಾಽಲಕನಂದಾ ಚಕ್ಷುರ್ಭದ್ರೇತಿ। ಸೀತಾ ತು ಭದ್ರಾಶ್ವವರ್ಷೇ ಪ್ರಾಚ್ಯಾಂ ದಿಶಿ ಕ್ಷಾರಸಮುದ್ರಂ ಪ್ರವಿಶತಿ। ಕೇತುಮಾಲಮಭಿ ಚಕ್ಷುಃ ಪ್ರತೀಚ್ಯಾಂ ದಿಶಿ ಸರಿತ್ಪತಿಂ ಪ್ರವಿಶತಿ। ಭದ್ರಾ ಚೋತ್ತರಾನ್ಕುರೂನತಿಕ್ರಮ್ಯೋದೀಚ್ಯಾಂ ದಿಶಿ ಲವಣಾರ್ಣವಂ ಪ್ರವಿಶತಿ। ತಥೈವಾಲಕನಂದಾ ಭಾರತ ಏವ ವರ್ಷೇ ದಕ್ಷಿಣಸ್ಯಾಂ ದಿಶಿ ಜಲನಿಧಿಂ ಪ್ರವಿಶತಿ'' ॥

''ತಥೇತಿ ರಾಜ್ಞಾಭಿಹಿತಃ ಸರ್ವಲೋಕಹಿತಃ ಶಿವಃ।
ದಧಾರಾವಹಿತೋ ಗಂಗಾಂ ಪಾದಪೂತಜಲಾಂ ಹರೇಃ ॥

ಭಗೀರಥೋಽಪಿ ರಾಜರ್ಷಿರ್ನಿನ್ಯೇ ಭುವನಪಾವನೀಂ।
ಯತ್ರ ಸ್ವಪಿತೄಣಾಂ ದೇಹಾ ಭಸ್ಮೀಭೂತಾಃ ಸ್ಮ ಶೇರತೇ ॥

ರಥೇನ ವಾಯುವೇಗೇನ ಪ್ರಯಾಂತಮನುಧಾವತೀ।
ದೇಶಾನ್ ಪುನಂತೀ ನಿರ್ದಗ್ಧಾನಸಿಂಚತ್ಸಗರಾತ್ಮಜಾನ್ ॥

ಯಜ್ಜಲಸ್ಪರ್ಶಮಾತ್ರೇಣ ಬ್ರಹ್ಮದಂಡಹತಾ ಅಪಿ।
ಸಗರಾತ್ಮಜಾ ದಿವಂ ಜಗ್ಮುಃ ಕೇವಲಂ ದೇಹಭಸ್ಮಭಿಃ ॥

ಭಸ್ಮೀಭೂತಾಂಗಸಂಗೇನ ಸ್ವರ್ಯಾತಾಃ ಸಗರಾತ್ಮಜಾಃ।
ಕಿಂ ಪುನಃ ಶ್ರದ್ಧಯಾ ದೇವೀಂ ಯೇ ಸೇವಂತೇ ಧೃತವ್ರತಾಃ ॥

ನ ಹ್ಯೇತತ್ಪರಮಾಶ್ಚರ್ಯಂ ಸ್ವರ್ಧುನ್ಯಾ ಯದಿಹೋದಿತಂ।
ಅನಂತಚರಣಾಂಭೋಜಪ್ರಸೂತಾಯಾ ಭವಚ್ಛಿದ'' ಇತಿ ॥



ನಳನಳಿಸುವ ಎಳೆ ತುಳಸಿ ಮಿಶ್ರವಾದ ಶ್ರೀಕೃಷ್ಣನ ಪಾದಧೂಳಿಯನ್ನು ಹೊತ್ತುತರುವ ಸರ್ವಶ್ರೇಷ್ಠವಾದ ಜಲವನ್ನು ಗಂಗೆ ತಂದುಕೊಡುತ್ತಾಳೆ, ಎಲ್ಲ ಲೋಕಕ್ಕೂ ಒಳಗೆ ಹೊರಗೆ ಶುದ್ಧಿ ನೀಡುತ್ತಾಳೆ. ಸಾವಿನ ಅಂಚಿನಲ್ಲಿರುವ ಯಾವ ವಿವೇಕಿಯು ಅದನ್ನು ಸೇವಿಸದಿರುತ್ತಾನೆ?

ಪಂಚಮಸ್ಕಂಧದ ಭಾಗೀರಥೀಗದ್ಯದಲ್ಲಿ ಗಂಗೆಯ ಮಹಿಮೆಯನ್ನು ಭಾಗವತ ಸುಂದರವಾಗಿ ಬಣ್ಣಿಸಿದೆ— ತ್ರಿವಿಕ್ರಮನ ಪಾದಕಮಲವನ್ನು ಬ್ರಹ್ಮದೇವರು ತೊಳೆದಾಗ ಹರಿಪಾದರಜದಿಂದ ಮಿಶ್ರಿತವಾದ ಸಕಲ ಲೋಕದ ಪಾಪಮಲವನ್ನು ತೊಳೆಯುವ, ಸಾಕ್ಷಾತ್ ವಿಷ್ಣುಪಾದವನ್ನು ತೊಳೆದ ನೀರಾಗಿರುವುದರಿಂದ 'ವಿಷ್ಣುಪದೀ' ಎನ್ನುವ ಹೆಸರಿನಿಂದ ಮುಖ್ಯವಾಗಿ ಕರೆಸಿಕೊಳ್ಳುವ ಗಂಗಾನದಿಯೂ ಸಾವಿರಾರು ಯುಗಗಳ ಕಾಲ ಹರಿದು ವಿಷ್ಣುಪದವೆನಿಸುವ ದ್ಯುಲೋಕದ ತುದಿಯಲ್ಲಿ ಬಂದು ಕುಳಿತಳು. ಶಿಂಶುಮಾರಮೂರ್ತಿಯಾದ ವಿಷ್ಣುವಿನ ವಾಸಸ್ಥಾನವಾದ್ದರಿಂದ ಇದು 'ವಿಷ್ಣುಪದ'ವೆನಿಸಿದೆ.

ಈ ಶಿಂಶುಮಾರಲೋಕದಲ್ಲಿ ದೃಢವ್ರತನಾದ ಪರಮಭಾಗವತನಾದ ಧ್ರುವರಾಜನು ಇದು ನಮ್ಮ ವೈಷ್ಣವಕುಲ ದೇವತೆಯಾದ ಹರಿಯ ಚರಣಾರವಿಂದದ ತೀರ್ಥವೆಂದು ಪರಮಾದರದಿಂದ ಇಂದಿಗೂ ಶಿರದಲ್ಲಿ ಧರಿಸಿರುವನು. ಅವಳ ಪ್ರಭಾವವನ್ನು ಚೆನ್ನಾಗಿ ತಿಳಿದಿರುವ ಸಪ್ತರ್ಷಿಗಳು ಮುಕ್ತಿಯೆ ಕರಗತವಾಯಿತೆಂದು ಮೋಕ್ಷೇಚ್ಛುಗಳಾಗಿ ಆದರದಿಂದ ಜಟಾಜೂಟಗಳಲ್ಲಿ ಧರಿಸಿದರು.

ಬಳಿಕ ಅನೇಕ ಕೋಟಿ ದೇವವಿಮಾನಗಳಿಂದ ನಿಬಿಡವಾದ ದೇವಯಾನ ಮಾರ್ಗದಿಂದ ಕೆಳಗೆ ಇಳಿದು ಚಂದ್ರಮಂಡಲವನ್ನು ಆವರಿಸಿ ಅಲ್ಲಿಂದ ಮೇರುಪರ್ವತದ ಶತಕೋಟಿ ಬ್ರಹ್ಮಮಂದಿರದ ಪ್ರಾಂಗಣದಲ್ಲಿ ಹರಿದಳು! ವೇಗದಿಂದ ಅಲ್ಲಿ ಬಿದ್ದು ನಾಲ್ಕು ಭಾಗವಾಗಿ ನಾಲ್ಕು ನಾಮಗಳಿಂದ ನಾಲ್ಕು ದಿಕ್ಕುಗಳಿಗೆ ಹರಿದಳು.

ಸೀತಾ ಅಲಕನಂದಾ ಚಕ್ಷು ಭದ್ರಾ ಎಂದು ನಾಲ್ಕು ಭಾಗಗಳು. ಸೀತಾನದಿ ಪೂರ್ವದಿಕ್ಕಿನ ಭದ್ರಾಶ್ವ ವರ್ಷದಲ್ಲಿ ಹರಿದು ಪೂರ್ವ ಲವಣಸಮುದ್ರವನ್ನು ಪ್ರವೇಶಿಸುತ್ತಾಳೆ. ಚಕ್ಷುನದಿ ಪಶ್ಚಿಮದ ಕೇತುಮಾಲವರ್ಷವನ್ನು ದಾಟಿ ಪಶ್ಚಿಮ ಲವಣಸಮುದ್ರವನ್ನು ಸೇರುವಳು. ಭದ್ರಾನದಿ ಉತ್ತರ ಕುರು ವರ್ಷದಲ್ಲಿ ಹರಿದು ಉತ್ತರ ಲವಣ ಸಮುದ್ರವನ್ನು ಸೇರುವಳು. ಅಲಕನಂದಾನದಿ ಭಾರತ ವರ್ಷದಲ್ಲಿ ಹರಿದು ದಕ್ಷಿಣ ಲವಣ ಸಮುದ್ರವನ್ನು ಸೇರುವಳು.

ಸಗರಚಕ್ರವರ್ತಿಯ ವಂಶದಲ್ಲಿ ಬಂದ ಭಗೀರಥನು ತಪಸಿನಿಂದ ದೇವ ಗಂಗೆಯನ್ನು ಒಲಿಸಿಕೊಂಡು ಭೂಮಿಗೆ ಕರೆಸಿಕೊಂಡ. 'ನಾನು ಭೂಮಿಗೆ ಇಳಿಯುವಾಗಿನ ರಭಸವನ್ನು ಯಾರಾದರೂ ತಡೆಯಬೇಕು. ಇಲ್ಲದಿದ್ದರೆ ನಾನು ಭೂಮಿಯನ್ನು ಭೇದಿಸಿ ರಸಾತಳಕ್ಕೆ ಇಳಿಯುವೆನು' ಎಂದು ದೇವಿ ನುಡಿದಾಗ 'ನಿನ್ನ ವೇಗವನ್ನು ಶಿವನು ತಡೆಯುತ್ತಾನೆ' ಎಂದು ಭಗೀರಥ ನುಡಿದು, ಅದಕ್ಕಾಗಿ ಶಿವನನ್ನು ಒಲಿಸಿಕೊಂಡ. ಅವನ ಪ್ರಾರ್ಥನೆಯಂತೆ ಶಿವನು ಗಂಗೆಯನ್ನು ಶ್ರದ್ಧೆಯಿಂದ ತಲೆಯಮೇಲೆ ಧರಿಸಿದ. ಕಪಿಲದೇವನ ಕೋಪಾಗ್ನಿ ಯಿಂದ ಸುಟ್ಟುಬೂದಿಯಾಗಿದ್ದ ಸಗರಪುತ್ರರ ಸದ್ಗತಿಪ್ರಾಪ್ತಿಗಾಗಿ ಭಗೀರಥನು ಗಂಗೆ ಯನ್ನು ಕರೆದುಕೊಂಡು ಹೋಗಿ ಆ ಬೂದಿಯಮೇಲೆ ಹರಿಸಿದನು. ಸಗರ ಪುತ್ರರು ಶರೀರದಿಂದ ಗಂಗಾಸ್ನಾನ ಮಾಡಿರದಿದ್ದರೂ ಅವರ ಭಸ್ಮದ ಮೇಲೆ ಗಂಗೆ ಹರಿದ ಮಾತ್ರಕ್ಕೇ ಅವರಿಗೆ ಸ್ವರ್ಗ ಲಭಿಸಿತು. ಎಂದಮೇಲೆ ಶ್ರದ್ಧೆಯಿಂದ ತಾವಾಗಿ ಹೋಗಿ ಗಂಗಾನದಿಯಲ್ಲಿ ಸ್ನಾನ ಮಾಡುವವರು ಸ್ವರ್ಗವನ್ನು ಪಡೆಯುವರೆಂದು ಬೇರೇನು ಹೇಳಬೇಕು?

ಅನಂತಮಹಿಮನಾದ ಮುಕುಂದನ ಪಾದಾರವಿಂದದಿಂದ ಹರಿದು ಬಂದ ಮಂದಾಕಿನಿಗೆ ಪಾಪನಾಶಕತ್ವ-ಪುಣ್ಯದಾಯಕತ್ವ. ಮಹಿಮೆಗಳು ಎರಡು ಇರುವುದರಲ್ಲಿ ಏನೂ ಆಶ್ಚರ್ಯವಿಲ್ಲ. ಇದು ಭಾಗೀರಥಿಯ ಮಹಿಮೆ. ಅದರಿಂದ ಪರೀಕ್ಷಿತನು ಬೇರೆ ನದಿಗಳನ್ನು ಬಿಟ್ಟು ಗಂಗೆಯ ಪ್ರವಾಹ ಮಧ್ಯದಲ್ಲಿ ಅರಮನೆ ಮಾಡಿಕೊಂಡಿದ್ದ.

ಗಂಗೆ ಇಷ್ಟು ಮಹಿಮೋಪೇತಳಾಗಿದ್ದರೂ ಅವಳಲ್ಲಿ ಶರೀರತ್ಯಾಗ ಮಾಡಲು ಹೊರಟ ಪರೀಕ್ಷಿತನಿಗೆ ಮಹಾಫಲಕ್ಕಾಗಿ ವಿಶೇಷ ಹರಿಭಕ್ತಿ ಉಂಟಾಗ ಬೇಕಾಗಿತ್ತು. ಅದಕ್ಕೆ ಗಂಗಾ ಸನ್ನಿಧಿಯಲ್ಲಿ ವಿಶೇಷವಾಗಿ ಹರಿಕಥಾಶ್ರವಣವನ್ನೂ ಹರಿಭಕ್ತರಾದ ಬ್ರಾಹ್ಮಣರ ಆರಾಧನೆಯನ್ನೂ ಮಾಡಬೇಕಾಗಿತ್ತು. ಅದರಂತೆ ಗಂಗಾತೀರದಲ್ಲಿ ಹರಿಭಕ್ತರ ಸಮಾಗಮವೂ ರಾಜನಿಗೆ ಲಭಿಸಿತು. ಹಾಲಿಗೆ ಸಕ್ಕರೆ ಬೆರೆಸಿದಂತಾಯಿತು. ಅದನ್ನು ಹೇಳುತ್ತಿದ್ದಾರೆ—



—೨೫—

**ತೀರ್ಥಗಳನ್ನೆ ಪವಿತ್ರಗೊಳಿಸುವ ಮಹಾನುಭಾವರು ಮುನಿಗಳು**

ತತ್ರೋಪಜಗ್ಮುರ್ಭುವನಂ ಪುನಾನಾ
ಮಹಾನುಭಾವಾ ಮುನಯಃ ಸಶಿಷ್ಯಾಃ ।
ಪ್ರಾಯೇಣ ತೀರ್ಥಾಭಿಗಮಾಪದೇಶೈಃ
ಸ್ವಯಂ ಹಿ ತೀರ್ಥಾನಿ ಪುನಂತಿ ಸಂತಃ ॥ (ಭಾ.೧.೧೯.೮)

ಸತ್ಯಂ ಶ್ರೀಮದ್ಭಾಗೀರಥ್ಯಾ ಮಹಾಮಾಹಾತ್ಮ್ಯಂ ತತಸ್ತಸ್ಯಾ ಏವಾನ್ಯಪರಿತ್ಯಾಗೇನ ಸೇವ್ಯತಾಪಿ । ಶ್ರೀಹರಿಕಥಯಾ ತದ್ಭಕ್ತಸಂಗೇನ ಚ ತತ್ರ ಭಾವ್ಯಂ । ಅನ್ಯಥಾ ಮರಿಷ್ಯಮಾಣಸ್ಯ ಶ್ರೀಹರಿಭಕ್ತಿವಿಶೇಷಾನುದಯೇನ ಪುರುಷಾರ್ಥನ್ಯೂನತಾ ಸ್ಯಾದಿತ್ಯತಸ್ತದ್ಭಕ್ತಾನಾಮಪಿ ತತ್ರ ಸಂಗಮಃ ಕ್ಷೀರೇ ಶರ್ಕರಾಯಾ ಇವ ಬಭೂವೇತ್ಯಾಹ ॥ **ತತ್ರೇತಿ** ॥ ಭುವನಮೇವ ಪವಿತ್ರೀಕುರ್ವಂತಃ ಮಹಾಮಹಿಮೋಪೇತಾಃ । ಅಧಿಗಮೋ ಯಾತ್ರಾ, ಅಪದೇಶಾ ವ್ಯಾಜಾಃ, ಸ್ವಯಂ ಹಿ ಸ್ವಯಮೇವ ಪುನಂತಿ ಪವಿತ್ರಯಂತಿ । ಕಿಯತೀ ನಮ್ರತಾಽಹೋಽತ್ರ ಸತಾಂ ಯತ್ತೀರ್ಥಾನಿ ಸ್ವಯಮೇವ ಪುನಂತೋಽಪಿ ವಯಂ ಸ್ನಾನಾರ್ಥಂ ಗಚ್ಛಾಮ ಇತಿ ವದಂತೀತಿ ಭಾವಃ ಅತ ಏವ ಭಗೀರಥೇನಾಪ್ಯೇವಮೇವೋಕ್ತಂ ॥ **ತಥಾಹಿ**— ಭಗೀರಥತಪಸಾ ತುಷ್ಟಾ ಗಂಗಾ ಬ್ರವೀತಿ । ಅಹಂ ತು ತ್ವಯ್ಯನುಗ್ರಹೇಣ ಯಾಸ್ಯಾಮಿ ಭೂಮಿಂ । ಮದ್ವೇಗಧಾರಕಃ ಕಃ । ಅನ್ಯಥಾ ಭೂಮ್ಯಾಮೇವ ಪತನೇ ಭೂಮಿಂ ಭಿತ್ತ್ವಾ ರಸಾತಲಮೇವ ಯಾಸ್ಯೇ । ತಥಾ ಸತಿ ತ್ವತ್ಪ್ರಯತ್ನೋ ವ್ಯರ್ಥಃ ಸ್ಯಾತ್ । ಕಿಂಚ ಭೂಮಿಂ ಮಯಿ ಪ್ರಾಪ್ತಾಯಾಂ ಪಾಪಿನಃ ಸ್ನಾತ್ವಾ ಮಯ್ಯೇವ ಪಾಪಾನಿ ತ್ಯಕ್ಷ್ಯಂತಿ ತೇಷಾಂ ಪರಿಹಾರಕಶ್ಚ ಕ ಇತಿ । ಏವಂ ಗಂಗಯೋದಿತೇ ಭಗೀರಥೇನೋಕ್ತಂ । ಮಹಾದೇವೋ ವೇಗಧಾರಕಃ । ಮಹಾಂತಃ ಪಾಪಪರಿಹಾರಕಾ ಇತಿ । **ಯಥಾಹುಃ**—

''ಧಾರಯಿಷ್ಯತಿ ತೇ ವೇಗಂ ರುದ್ರಸ್ತ್ವಾತ್ಮಾ ಶರೀರಿಣಾಂ ।
ಯಸ್ಮಿನ್ನೋತಮಿದಂ ಪ್ರೋತಂ ವಿಶ್ವಂ ಶಾಟೀವ ತಂತುಷು ॥

ಸಾಧವೋ ನ್ಯಾಸಿನಃ ಶಾಂತಾಃ ಬ್ರಹ್ಮಿಷ್ಠಾ ಲೋಕಪಾವನಾಃ ।
ಹರಂತ್ಯಘಂ ತೇಽಂಗಸಂಗಾದ್ಯೇ ಪ್ರಾಪ್ತಾಃ ಸ್ವಹೃದಾ ಹರಿ''ಮಿತಿ ॥



**ರಾಜಾ ಪರೀಕ್ಷಿತನ ಬಳಿಗೆ ಲೋಕಪಾವನರಾದ ಮಹಾನುಭಾವರಾದ ಮುನಿಗಳು ಶಿಷ್ಯರೊಂದಿಗೆ ತಾವಾಗಿ ಬಂದರು. ಅವರು ತೀರ್ಥಕ್ಷೇತ್ರಯಾತ್ರೆಯ ನೆಪದಿಂದ ಸ್ವತಃ ತೀರ್ಥಕ್ಷೇತ್ರಗಳನ್ನೇ ಪಾವನಗೊಳಿಸುವ ಸಜ್ಜನರು. ಏನು ವಿನಯ ಈ ಸಜ್ಜನರದು! ಇವರು ಸ್ವತಃ ತೀರ್ಥವನ್ನು ಪವಿತ್ರಗೊಳಿಸುವವರು, ತಾವು 'ಸ್ನಾನ'ಕ್ಕಾಗಿ ತಮ್ಮ ಶರೀರ ಅಂತಃಕರಣಗಳ ಪಾವಿತ್ರ್ಯ ಸಂಪಾದನೆಗಾಗಿ ತೀರ್ಥಾಟನ ಮಾಡುತ್ತಿದ್ದೇವೆ ಎನ್ನುತ್ತಾರೆ!**

ಭಗೀರಥನೂ ಕೂಡ ಗಂಗೆಯ ಬಗ್ಗೆ ಹೀಗೇ ಹೇಳಿದ್ದಾನೆ. ಭಗೀರಥನ ತಪಸಿಗೆ ಸಂತುಷ್ಟಳಾದ ಗಂಗಾದೇವಿ ಕೇಳಿದಳು, 'ನಾನೇನೋ ನಿನ್ನಲ್ಲಿ ಅನುಗ್ರಹ ಮಾಡಿ ಭೂಮಿಗೆ ಇಳಿದು ಬರುತ್ತೇನೆ. ಆದರೆ ಇಲ್ಲಿ ಎರಡು ಸಮಸ್ಯೆಗಳಿವೆ, ಒಂದು ನನ್ನ ವೇಗವನ್ನು ತಡೆಯಬಲ್ಲವರು ಯಾರು? ಯಾರೂ ತಡೆಯದಿದ್ದರೆ ನಾನು ವೇಗದಿಂದ ಭೂಮಿಯನ್ನು ಸೀಳಿ ರಸಾತಳಕ್ಕೇ ಹೋಗಿಬಿಡುತ್ತೇನೆ. ಆಗ ನಿನ್ನ ಪೂರ್ವಿಕರ ಸದ್ಗತಿ ಸಾಧನೆಯ ಪ್ರಯತ್ನ ಫಲಿಸದೆ ಹೋದೀತು. ಎರಡನೆ ಸಮಸ್ಯೆ ಇದು, ನಾನು ಭೂಸ್ಪರ್ಶ ಮಾಡಿದೆನೆಂದರೆ ಅಲ್ಲಿ ಸ್ನಾನ ಮಾಡುವ ಪಾಪಿ ಜನರು ತಮ್ಮ ಪಾಪಗಳನ್ನು ನನ್ನಲ್ಲಿ ಬಿಟ್ಟು ಬಿಡುವರು. ಆ ಪಾಪಗಳಿಂದ ನನಗೆ ಮುಕ್ತಿ ಹೇಗೆ ಎಂದು. ಭಗೀರಥನು ಹೇಳುತ್ತಾನೆ, ನಾನು ಮಹಾದೇವ ನನ್ನು ಒಲಿಸಿಕೊಳ್ಳುವೆನು. ಮಹಾದೇವ ನಿನ್ನ ವೇಗವನ್ನು ಧರಿಸುವನು. ನಿನ್ನಲ್ಲಿ ಹತ್ತಿಕೊಳ್ಳುವ ಪಾಪಗಳನ್ನು ತಪಸ್ವಿಗಳಾದ ಮುನಿಗಳು ಸಜ್ಜನರು ಸ್ನಾನದ ಮೂಲಕ ಕಳೆಯುವರು ಎಂದು.

ಧಾರಯಿಷ್ಯತಿ ತೇ ವೇಗಂ ರುದ್ರಸ್ತ್ವಾತ್ಮಾ ಶರೀರಿಣಾಂ ।
ಯಸ್ಮಿನ್ನೋತಮಿದಂ ಪ್ರೋತಂ ವಿಶ್ವಂ ಶಾಟೀವ ತಂತುಷು ॥
ಸಾಧವೋ ನ್ಯಾಸಿನಃ ಶಾಂತಾ ಬ್ರಹ್ಮಿಷ್ಠಾ ಲೋಕಪಾವನಾಃ ।
ಹರಂತ್ಯಘಂ ತೇಽಂಗಸಂಗಾದ್ ಯೇ ಪ್ರಾಪ್ತಾಃ ಸ್ವಹೃದಾ ಹರಿಂ ॥
(ಭಾಗವತ ೧.೮.೩೮,೩೭)

ರಾಜಾ ಭಗೀರಥ ನುಡಿದ—'ದೇವಿ, ನಿನ್ನ ವೇಗವನ್ನು ರುದ್ರನು ತಡೆಯುತ್ತಾನೆ. ಅವನು ಶರೀರಿಗಳಿಗೆ ಶರೀರಾಭಿಮಾನಿಯಾಗಿ ಪ್ರಭುವಾಗಿದ್ದಾನೆ. ಚಿಂದಿಬಟ್ಟೆಯನ್ನು ದಾರದಿಂದ ಹೊಲಿದರೆ ಆ ದಾರದಲ್ಲಿ ಬಟ್ಟೆ ಹೇಗೆ

ನಿಂತಿರುತ್ತದೋ ಹಾಗೆ ಶರೀರಾಭಿಮಾನಿ ರುದ್ರನಲ್ಲಿ ಶರೀರಿಗಳೆಲ್ಲರೂ ಆಶ್ರಯಿಸಿರುತ್ತಾರೆ.

ವಿರಕ್ತರೂ ಭಗವದ್‌ಭಕ್ತರೂ ಬ್ರಹ್ಮಜ್ಞಾನಿಗಳೂ ಆದ ಸಾಧುಜನರು ಲೋಕಪಾವನರು. ತಮ್ಮ ಹೃದಯದಲ್ಲಿ ಹರಿಯನ್ನು ನಿಲ್ಲಿಸಿಕೊಂಡವರು. ಆದರಿಂದ ಅವರು ನಿನ್ನಲ್ಲಿ ಸ್ನಾನ ಮಾಡುವ ಜನರ ಪಾಪಗಳನ್ನು ಕಳೆಯುವರು. ಹರಿಧ್ಯಾನಬಲದಿಂದಲೇ ಸಜ್ಜನರು ಹೀಗೆ ಪಾವನರೆಂದಮೇಲೆ ಹರಿಪಾದ ಕಮಲದಲ್ಲಿ ನೆಲೆಸಿದ ನಿನಗೆಲ್ಲಿಯ ಪಾಪ? ಆದರೂ ಪಾಪವಿದೆ ಎನ್ನುವಿಯಾದರೆ ಅದನ್ನು ಸಜ್ಜನರು ಸ್ನಾನಮಾಡುವ ಮೂಲಕ ಅಂಗಸಂಗದಿಂದ ಪರಿಹರಿಸುವರು ಎಂದು.



–೨೬–

**ಮುನಿಗಳಲ್ಲಿ ಮುಖ್ಯರಾದವರು ಕೆಲವರು**

**ಅತ್ರಿರ್ವಸಿಷ್ಠಶ್ಚ್ಯವನಃ ಶರದ್ವಾನ್**
**ಅರಿಷ್ಟನೇಮಿ ರ್ಭೃಗುರಂಗಿರಾಶ್ಚ ।**
**ಪರಾಶರೋ ಗಾಧಿಸುತೋಽಥ ರಾಮಃ**
**ಉತಥ್ಯ ಇಂದ್ರಪ್ರಮತೀಧ್ಮವಾಹೌ ॥**

(ಭಾ.೧.೧೯.೯)

**ಪರೀಕ್ಷಿನ್ಮಹಾರಾಜೋ ಯತ್ರ ಪ್ರಾಯೋಪವಿಷ್ಟಸ್ತತ್ರೈವ ಮುನಯೋಽಪ್ಯಾಜಗ್ಮುರಿತ್ಯುಕ್ತಂ । ತತ್ರ ಕೇ ತೇ ಮುನಯ ಇತ್ಯತಃ ಪ್ರಧಾನಾನಾಂ ಕೇಷಾಂಚಿನ್ನಾಮಾನ್ಯಾಹ । ಅತ್ರಿರಿತ್ಯಾದಿನಾ ಶ್ಲೋಕತ್ರಯೇಣ ॥ ಗಾಧಿಸುತೋ ವಿಶ್ವಾಮಿತ್ರಃ ರಾಮೋ ಭಾರ್ಗವಃ । ಇಂದ್ರಪ್ರಮದಶ್ಚೇಧ್ಮವಾಹಶ್ಚ ॥ ಕುಂಭಯೋನಿರಗಸ್ತ್ಯಃ । ಭಗವಾನ್ ದ್ವೈಪಾಯನಃ ॥**



ಪರೀಕ್ಷಿದ್ರಾಜನು ಪ್ರಾಯೋಪವೇಶಕ್ಕೆ ಕುಳಿತ ಸ್ಥಳಕ್ಕೆ ಮುನಿಗಳು ಬಂದರು. ಅವರಲ್ಲಿ ಮುಖ್ಯರಾದವರು ಕೆಲವರು—ಅತ್ರಿ ವಸಿಷ್ಠ ಚ್ಯವನ ಶರದ್ವಾನ್

ಅರಿಷ್ಟ ನೇಮಿ ಭೃಗು ಅಂಗಿರಸ ಪರಾಶರ ವಿಶ್ವಾಮಿತ್ರ ಪರಶುರಾಮ ಉತಥ್ಯ ಇಂದ್ರಪ್ರಮತಿ ಇಧ್ಮವಾಹ.

❖❖❖

–೨೭–

**ಮುನಿಗಳಲ್ಲಿ ಮುಖ್ಯರು ಇನ್ನು ಕೆಲವರು**

ಮೇಧಾತಿಥಿ ರ್ದೇವಲ ಆರ್ಷ್ಟಿಷೇಣೋ
ಭರದ್ವಾಜೋ ಮುದ್ಗಲೋ ಗೌತಮಶ್ಚ ।
ಮೈತ್ರೇಯ ಔರ್ವಃ ಕವಷಃ ಕುಂಭಯೋನಿ
ರ್ದ್ವೈಪಾಯನೋ ಭಗವಾನ್ ನಾರದಶ್ಚ ॥

(ಭಾ.೧.೧೯.೧೦)

ಮೇಧಾತಿಥಿ ದೇವಲ ಆರ್ಷ್ಟಿಷೇಣ ಭರದ್ವಾಜ ಮುದ್ಗಲ ಗೌತಮ ಮೈತ್ರೇಯ ಔರ್ವ ಕವಷ ಅಗಸ್ತ್ಯ ಭಗವಾನ್ ವ್ಯಾಸ ನಾರದ.

❖❖❖

–೨೮–

**ಮುನಿಗಳನ್ನು ಸತ್ಕರಿಸಿ ವಂದಿಸುತ್ತಾನೆ ರಾಜ**

ಅನ್ಯೇ ಚ ದೇವರ್ಷಿ ಬ್ರಹ್ಮರ್ಷಿವರ್ಯಾ
ರಾಜರ್ಷಿವರ್ಯಾ ಅರುಣಾದಯಶ್ಚ ।
ನಾನಾರ್ಷೇಯ ಪ್ರವರಾನ್ ಸಮೇತಾನ್
ಅಭ್ಯರ್ಚ್ಯ ರಾಜಾ ಶಿರಸಾ ವವಂದೇ ॥ (ಭಾ.೧.೧೯.೧೧)

ನಾರದಾದನ್ಯೇ ದೇವರ್ಷಯಃ ವಸಿಷ್ಠಾದನ್ಯೇ ಬ್ರಹ್ಮರ್ಷಯ ಇತಿ । ಅನ್ಯೇ ಚ ತತ್ರೋಪಜಗ್ಮುರಿತ್ಯನ್ವಯಃ । ನಾನಾಋಷಿಗೋತ್ರೇಷು ಶ್ರೇಷ್ಠಾನ್ । ಭಾಗೀರಥೀನಿಮಿತ್ತಂ ವಾ ರಾಜ್ಞೋಽರ್ಥೇ ವಾ ಸಮಾಗತಾಸ್ತಾನ್ ರಾಜಾ ಪೂಜಯಾಮಾಸ ನ ವೇತ್ಯತ ಆಹ ॥ **ಸಮೇತಾನಿತಿ** ॥

❖❖❖

**ಇನ್ನೂ ಬೇರೆ ದೇವರ್ಷಿ ಬ್ರಹ್ಮರ್ಷಿ ರಾಜರ್ಷಿಗಳು ಅರುಣಾದಿ ಕಾಂಡರ್ಷಿಗಳು ನಾನಾ ಗೋತ್ರ ಪ್ರವರಗಳ ಮುನಿಗಳು ಬಂದರು. ರಾಜ ಎಲ್ಲರಿಗೂ ತಲೆಬಾಗಿ ನಮಿಸಿದ.**

ಪರೀಕ್ಷಿತ ಒಬ್ಬ ರಾಜನಾದರೂ ಮಹಾಜ್ಞಾನಿ ಭಕ್ತ. ಚರಮ ಶರೀರಿ. ಇನ್ನು ಪುನರ್ಜನ್ಮವಿಲ್ಲದವ. ನೇರ ವೈಕುಂಠಕ್ಕೇ ಹೋದನೆಂದು ಭಾಗವತ (೧.೧೮.೧೭) ಹೇಳಿದೆ. ಗಂಗಾ ಸನ್ನಿಧಿಯಲ್ಲಿ ನಿರಶನ ವ್ರತದಲ್ಲಿ ಭಾಗವತಶ್ರವಣ ಮಾಡಿದ್ದರಿಂದ ನೇರ ವೈಕುಂಠಕ್ಕೆ ಹೋಗುವನೆಂದು ಪ್ರೀತಿವಾತ್ಸಲ್ಯಗಳಿಂದ ಸಂತೋಷದಿಂದ ಬೀಳ್ಕೊಡಲೆಂದೇ ಎಲ್ಲ ಮುನಿಗಳೂ ಬಂದಿದ್ದರು. ಅವನಿಗೆ ಪ್ರಾರಬ್ಧದಿಂದ ದುರ್ಮರಣ ಯೋಗವಿದ್ದರಿಂದ ಅದನ್ನು ತಪ್ಪಿಸಲೆಂದೇ ಶುಕಮುನಿ ಬಂದಿದ್ದರು.



–೨೯–

**ಸಜ್ಜನರ ಉದ್ಧಾರಕ್ಕಾಗಿಯೆ ಮುನಿಗಳ ಸಂಚಾರ**

**ಸಮಾಗತಾಃ ಸರ್ವತ ಏವ ಸರ್ವೇ**
**ವೇದಾ ಯಥಾ ಮೂರ್ತಿಧರಾಸ್ತ್ರಿಪೃಷ್ಠೇ ।**
**ನೇಹಾಥ ವಾಽಮುತ್ರ ಚ ಕಶ್ಚನಾರ್ಥ**
**ಋತೇ ಪರಾನುಗ್ರಹಮಾತ್ಮಶೀಲಾಃ ॥** (ಭಾ.೧.೧೯.೨೪)

**ಸಂಪೂಜ್ಯ ನಮಸ್ಕೃತ್ಯ ಸ್ತೌತಿ ಚೇತ್ಯಾಹ ॥ ಸಮಾಗತಾ ಇತಿ ॥ ತ್ರಿಪೃಷ್ಠೇ ಸತ್ಯಲೋಕೇ ಮೂರ್ತಿಧರಾ ವೇದಾ ಯಥಾ ತತ್ಸದೃಶಾಃ। ಸರ್ವೇಽಪಿ ಸರ್ವದೇಶೇಭ್ಯ ಆಗತಾ ಇತ್ಯೇತದಾಗಮನಂ ಸಂ ಸಮ್ಯಕ್ ಸ್ವಾಗತಮಿತಿ। ಪರಾನುಗ್ರಹಂ ವಿನಾ ಇಹಾಮುತ್ರ ವಾ ಕಶ್ಚನಾರ್ಥೋ ನಾಸ್ತಿ। ಕುತಃ। ಚೋ ಯಸ್ಮಾದಿತ್ಯರ್ಥೇ। ಯಸ್ಮಾದಾತ್ಮನಿ ಪರಮಾತ್ಮನ್ಯೇವ ವಿನ್ಯಸ್ತಸರ್ವಸ್ವಾಃ। ಅಥ ತಸ್ಮಾದಿತ್ಯರ್ಥೇ। ಮಯ್ಯನುಗ್ರಹಾರ್ಥಮೇವ ಭವತಾಮಾಗಮನಮಿತಿ ॥**



ಸತ್ಯಲೋಕಾದಿಗಳಲ್ಲಿ ವೇದಾಭಿಮಾನಿ ದೇವತೆಗಳು ಮೂರ್ತಿಮತ್ತಾಗಿ ಕಾಣಿಸಿಕೊಳ್ಳುವಂತೆ ಭೂಲೋಕದಲ್ಲಿ ನೀವು ಕಾಣಿಸಿಕೊಳ್ಳುತ್ತಿರುವಿರಿ. ಪರರಿಗೆ

ಅನುಗ್ರಹ ಮಾಡುವುದೊಂದನ್ನು ಬಿಟ್ಟರೆ ಇನ್ನಾವ ಐಹಿಕ ಅಥವಾ ಪಾರತ್ರಿಕ ಉದ್ದೇಶಗಳೂ ನಿಮಗಿಲ್ಲ. ಅದರಿಂದ ಕೇವಲ ನನ್ನ ಮೇಲೆ ಅನುಗ್ರಹ ಮಾಡಲೆಂದೇ ಬಂದಿರುವಿರಿ.



–೩೦–

**'ಸಾಧು ಸಂಗವಾಗಲಿ' ಎಂದು ಬೇಡಿಕೊಳ್ಳುತ್ತಾನೆ ರಾಜ**

ಪುನಶ್ಚ ಭೂಯಾದ್ ಭಗವತ್ಯನಂತೇ
ರತಿಃ ಪ್ರಸಂಗಶ್ಚ ತದಾಶ್ರಯೇಷು ।
ಮಹತ್ಸು ಯಾಂ ಯಾಮುಪಯಾಮಿ ಸೃಷ್ಟಿಂ
ಮೈತ್ರ್ಯಸ್ತು ಸರ್ವತ್ರ ನಮೋ ದ್ವಿಜೇಭ್ಯಃ ॥

(ಭಾ.೧.೧೯.೧೬)

ಇತಿ ಸ್ತುತ್ವಾ ಪ್ರಾರ್ಥಯತೇ ಚ ॥ ಪುನಶ್ಚೇತಿ ॥ ಅನಂತೇ ಭಗವತಿ ರತಿಸ್ತದಾಶ್ರಯೇಷು ಮಹತ್ಸು ಪ್ರಸಂಗಶ್ಚ ಪುನಃ ಪುನಃ । ಯಾಂ ಯಾಂ ಸೃಷ್ಟಿಂ ಯೋನಿಂ ತತ್ರ ಸರ್ವತ್ರ ಮೈತ್ರೀ ಭಕ್ತಿರ್ಭವಾದೃಶಾನಾಮಸ್ತು । ದ್ವಿಜೇಭ್ಯೋ ಭವಾದೃಶೇಭ್ಯೋ ಮದೀಯಂ ನಮೋಽಸ್ತ್ವಿತಿ । ತದನೇನ ದ್ವಿತೀಯೇ ನವಕೇ ತನ್ಮಾಹಾತ್ಮ್ಯಶ್ರವಣಂ ಕೀರ್ತನಂ ತಸ್ಯ ತನ್ನಾಮ್ನಾಂ ಚ ಅರ್ಚನಂ ವಂದನಂ ಸಖ್ಯಮಿತಿ ಪಂಚಕಂ ಸೂಚಿತಂ ಭವತಿ ॥



ಜನ್ಮಾಂತರದಲ್ಲಿಯೂ ನನಗೆ ಹರಿಗುರುಗಳಲ್ಲಿ ಭಕ್ತಿ ಹೆಚ್ಚಲಿ, ಸಮಾನಿಕರಲ್ಲಿ ಪ್ರೀತಿ ಕಿರಿಯರಲ್ಲಿ ದಯೆ ಉಂಟಾಗಲಿ.ಯಾವ ಶರೀರದಿಂದ ಹುಟ್ಟಿದರೂ ನನಗೆ ದ್ವಿಜರಲ್ಲಿ ಗೌರವಾದರ ಭಾವನೆ ಇರಲಿ. ಎಲ್ಲ ಮುನಿಗಳಿಗೂ ನಮಿಸುವೆನು.

ಪರೀಕ್ಷಿತನೀಗ ಹರಿಮಹಾತ್ಮ್ಯಶ್ರವಣ ಹರಿನಾಮಕೀರ್ತನ ಹರಿಸ್ಮರಣ ಹರಿಭಕ್ತರ ಅರ್ಚನ ವಂದನ ಪಾದಸೇವೆಗಳನ್ನು ಮಾಡುತ್ತಿದ್ದಾನೆ. ಹರಿಯೂ ಹರಿಭಕ್ತರೂ ನೀವು ತಾವಾಗಿ ಬಂದು ಆಶೀರ್ವದಿಸುತ್ತ ಅನಿಮಿತ್ತ ಪರಮೋಪ ಕಾರ ಮಾಡುತ್ತಿರುವಿರಿ ಎಂದು ಕೃತಜ್ಞತೆಯಿಂದ ಸ್ತುತಿಸುತ್ತ ಸಖ್ಯಭಕ್ತಿಯನ್ನೂ ಮಾಡುತ್ತಿದ್ದಾನೆ.

ಮುಂದೆ ಬಾಹ್ಯರೂಪ–ಬಿಂಬರೂಪಗಳ ಸೇವಾರೂಪವಾದ ದಾಸ್ಯ ಆತ್ಮನಿವೇದನಗಳನ್ನೂ ಸಪ್ತಾಹಶ್ರವಣಕಾಲದಲ್ಲಿ ಮಾಡುತ್ತಿದ್ದಾನೆ.

ಹೀಗೆ ನವವಿಧವಾದ ಭಾಗವತ ಧರ್ಮಾನುಷ್ಠಾನವನ್ನು ಲೋಕಕ್ಕೆ ಕಲಿಸುತ್ತಿದ್ದಾನೆ ಪರೀಕ್ಷಿತ.

'ಭೇಜೇ ಖಗೇಂದ್ರಧ್ವಜ ಪಾದಮೂಲಂ' ಎಂಬಂತೆ,

ಈಗ ಚರಮಶರೀರಿಯಾಗಿರುವ ರಾಜನಿಗೆ ಮುಂದೆ ಹುಟ್ಟೇ ಇಲ್ಲದಿದ್ದರೂ 'ನಾನು ಯಾವ ಶರೀರದಿಂದ ಜನಿಸಿದರೂ ನನಗೆ ಬ್ರಾಹ್ಮಣರಲ್ಲಿ ಭಕ್ತಿ ಇರಲಿ' ಎಂದು ಬೇಡಿಕೊಳ್ಳುವುದು ಯುಕ್ತವೆ? ಎಂಬ ಪ್ರಶ್ನೆ ಇಲ್ಲಿ ಸಹಜ. ಆದರೂ ಮುಕ್ತಿ ಹೊಂದುವ ಜ್ಞಾನಿಗೆ ಸ್ವರೂಪಶರೀರದಲ್ಲಿಯೇ ಪುನಃ ಜನನ ಮುಕ್ತಿಲೋಕದಲ್ಲಿ ಉಂಟೆಂದು ಬೃಹದಾರಣ್ಯಕ ಉಪನಿಷತ್ತಿನಲ್ಲಿದೆ—

ಅನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ (ಬೃ.ಉ.೬.೪.೪)

'ಸಂಸಾರದಲ್ಲಿ ಎಂದೂ ಕಾಣದಿದ್ದ ಅತ್ಯಂತ ನೂತನವಾದ ಮಂಗಳಕರ ವಾದ ಅವರವರಿಗೆ ಯೋಗ್ಯವಾದ ಬೇರೆಯೆ ಸ್ವರೂಪಶರೀರವನ್ನು ಮುಕ್ತರಿಗೆ ಶ್ರೀಹರಿ 'ಕುರುತೇ' ಸೃಷ್ಟಿ ಮಾಡುತ್ತಾನೆ' ಅಂದರೆ ವ್ಯಕ್ತ ಮಾಡುತ್ತಾನೆ ಎಂದಿದೆ.

'ಶ್ವೇತದ್ವೀಪದಲ್ಲಿ ಮುಕ್ತರು ಶ್ರೀವಾಸುದೇವನಿಂದ ಮಾಯಾದೇವಿಯಲ್ಲಿ ತಮ್ಮ ಚರಮಶರೀರ ಸಮಾನಾಕಾರವಾದ ಸುಂದರ ಜ್ಞಾನಾನಂದಾದ್ಯಾತ್ಮಕವಾದ ಆತ್ಯಂತಾಭಿನ್ನ ಸ್ವರೂಪಶರೀರದಿಂದ ಪುತ್ರರಾಗಿ ಜನಿಸುತ್ತಾರೆ' ಎಂದು ಆನಂದಮಾಲಾದಲ್ಲಿ ಹೇಳಿದ್ದಾರೆ. ಇಲ್ಲಿ 'ಜನಿಸುತ್ತಾರೆ' ಎಂದರೆ ಹುಟ್ಟುವುದಲ್ಲ 'ವ್ಯಕ್ತರಾಗುತ್ತಾರೆ' ಎಂದರ್ಥ. ಸಂಸಾರದಲ್ಲಿ ಹುಟ್ಟೂ ಕೂಡ ಬಾಹ್ಯಶರೀರದಲ್ಲಿ ವ್ಯಕ್ತವಾಗವುದೆ ತಾನೆ? ರಾಜನು ಇಲ್ಲಿ ತನಗೆ ತಿಳಿದೋ ತಿಳಿಯದೆಯೋ ಮುನಿಗಳ ಮುಂದೆ ನಿಜವನ್ನೇ ಹೇಳುತ್ತಿದ್ದಾನೆ'.



# ೩. ಶುಕಾಗಮನ ಪ್ರಕರಣ

## ಪ್ರಕರಣ ಸಾರಾಂಶ

ಶುಕಮುನಿ ಸನ್ಯಾಸಿಯಾಗಿ ಹೊರಟುಹೋದಾಗ ಶ್ರೀವ್ಯಾಸರು ಪುತ್ರಶೋಕವನ್ನು ತೋರುತ್ತ 'ಭೋಪುತ್ರ!' ಎಂದಾಗ ಪುತ್ರ ಶುಕರ ಪರವಾಗಿ ಗಿಡಮರಗಳೂ ಕೂಡ 'ಭೋ' ಎಂದು ಪ್ರತ್ಯುತ್ತರ ನೀಡಿದುವು.

ಮೋಕ್ಷಧರ್ಮ ಪ್ರಕಾರ, ಇದು ಕೇವಲ ಉತ್ಪ್ರೇಕ್ಷೆ ಏನಲ್ಲ. ಎಲ್ಲ ಜೀವಿಗಳ ಹೃದಯದಲ್ಲಿ ನೆಲೆಸಿರುವ ರುದ್ರಾವತಾರರಾದ ಶುಕರು ಜೀವಿಗಳಿಗೆ 'ಭೋ' ಎಂದು ಉತ್ತರ ನೀಡಲು ಕಲಿಸಿದ್ದರು!

ಹೀಗೆ ಮೊದಲೇ ಅಂತರ್ಗುರುವಾಗಿದ್ದರು ಶುಕಮುನಿ. ಅದರಿಂದ ಪರೀಕ್ಷಿತನು ಪ್ರತ್ಯೇಕವಾಗಿ ಸತ್ಕಾರ ಮಾಡಿದ್ದು ಯುಕ್ತವೆ.

ಯದ್ಯಪಿ ವಿಶ್ವಾಮಿತ್ರಾದಿ ಮುನಿಗಳೂ ಕೂಡ ತತ್ವಾಭಿಮಾನಿ ಗಳಾಗಿದ್ದು ಎಲ್ಲ ಜೀವಿಗಳಿಗೆ ಅಂತರ್ಗುರುಗಳೇ. ಆದರೂ ಶುಕಮುನಿಯ ಅಂತರ್ಗುರುತ್ವವು ಸ್ಪಷ್ಟವಾಗಿ ಮೋಕ್ಷಧರ್ಮದಲ್ಲಿ ವಿಸ್ತಾರವಾಗಿ ಹೇಳಿದ್ದು ವಿಶೇಷ.



—೩೧—

**ಸರ್ವಜೀವರ ಅಂತರ್ಗುರು ಶುಕಮುನಿ**

**ಯಂ ಪ್ರವ್ರಜಂತಮನುಪೇತ ಮಪೇತಕೃತ್ಯಂ**
**ದ್ವೈಪಾಯನೋ ವಿರಹಕಾತರ ಆಜುಹಾವ ।**
**ಪುತ್ರೇತಿ ತನ್ಮಯತಯಾ ತರವೋಽಪಿ ನೇದು-**
**ಸ್ತಂ ಸರ್ವಭೂತಹೃದಯಂ ಮುನಿಮಾನತೋಽಸ್ಮಿ ॥**

(ಭಾ.೧.೨.೨.)

**ನನು ತತ್ರೋಪಜಗ್ಮುರಿತ್ಯಾದಿನಾ ಸರ್ವೇಷಾಂ ಮುನೀನಾಮಾಗಮಃ, ರಾಜ್ಞಾ ಕೃತಸ್ತೇಷಾಂ ಸತ್ಕಾರಶ್ಚಾಭಿಹಿತಃ। ತತ್ರ ಶುಕಾಚಾರ್ಯಸ್ಯ ಕುತೋ**

ನೋದಿತೌ। ನ ಹ್ಯತ್ರ ಸ ಸರ್ವಥಾ ನಾಯಾತ ಇತಿ ವಕ್ತುಮುಚಿತಂ। ಬಹುವಿಪ್ಲವಾಪಾತಾತ್। ನಾಪೀದಾನೀಮನಾಗತೋಽಪ್ಯುತ್ತರತ್ರಾಯಾಸ್ಯ-ತೀತಿ। ಇದಾನೀಮನಾಗಮನಂ ಕಿಮನ್ಯತ್ರ ಪ್ರಯೋಜನಸದ್ಭಾವೇನ ವಾಽತ್ರ ಪ್ರಯೋಜನಾಭಾವೇನ ವಾ। ನಾದ್ಯಃ। ನಿರಪೇಕ್ಷಸ್ಯ ಪ್ರಯೋಜನಾಭಾವಾತ್। ದ್ವಿತೀಯೇಽಪ್ಯುತ್ತರತ್ರಾಪ್ಯನಾಗಮನಪ್ರಸಂಗಾತ್। ತಸ್ಮಾದಾಗತ ಇತ್ಯೇವ ವಾಚ್ಯಂ। ನ ಚಾಗತಸ್ಯಾಪಿ ನ ಸತ್ಕಾರಃ ಕೃತ ಇತಿ ವಕ್ತುಂ ಶಕ್ಯಂ। ಮಹಾನರ್ಥಪ್ರಸಂಗಾತ್। ಇತಿ ಚೇದಸ್ಯೋತ್ತರಂ ವದಿಷ್ಯನ್ ಶುಕೋ ನಾಮ ಕಶ್ಚನ ಮುನಿರಿತಿ ನ ಮಂತವ್ಯಂ ಕಿಂ ತ್ವಶೇಷಾಣಾಂ ದೇಹಿನಾಂ ಗುರುಃ। ಗುರುತ್ವಂ ಚ ದ್ವೇಧಾ-ಅಂತರ್ಬಹಿರಿತಿ। ತತ್ರಾದ್ಯಂ ಗುರುತ್ವಂ ತಾವದುಪಪಾದಯತಿ। **ಯಮಿತಿ** ॥ ವಿರಹೇ ವಿಯೋಗೇ ಕಾತರೋಽಧೀರ ಇವ ಸ್ಥಿತಃ। ದ್ವೈಪಾಯನೋ ನದೀದ್ವೀಪೋತ್ಪತ್ತಿಮತ್ತ್ವಾತ್ ಸ ವ್ಯಾಸೋಽನುಪೇತಂ ದೇಹಾದ್ಯಭಿಮಾನ-ರಹಿತಂ। ಅತ ಏವಾಪೇತಂ ಕೃತ್ಯಂ ಯಸ್ಮಾತ್ತಂ ಕೃತಕೃತ್ಯಂ। ಪ್ರವ್ರಜಂತಂ ಸರ್ವಂ ಪರಿತ್ಯಜ್ಯ ಪರಮಹಂಸಚರ್ಯಯಾ ಗಚ್ಛಂತಂ। ಯಂ ಪುತ್ರೇತ್ಯಾಜುಹಾವ ಆಹೂತವಾನ್ ಯದಾ ತದಾ ತರವೋಽಪಿ ಕದಾಪಿ ವಚನಶೂನ್ಯಾ ನೇದುಃ ಪ್ರತ್ಯುತ್ತರಂ ದದುಃ। ಪುತ್ರಸ್ಯಾಹ್ವಾನೇ ತರೂಣಾಮುತ್ತರಂ ಕಥಮಿತ್ಯತ ಉಕ್ತಂ ತನ್ಮಯತಯೇತಿ। ವೃಕ್ಷಾಣಾಮಪಿ ತದಧಿಷ್ಠಾನತಯಾಽಧಿಷ್ಠಾತುರೇವ **ತದ್ವಚನಮಿತಿ** ॥ ಶುಕಸ್ಯ ಕಥಂ ವೃಕ್ಷಾಧಿಷ್ಠಾತೃತ್ವಮಿತ್ಯತ ಉಕ್ತಂ **ಸರ್ವಭೂತಹೃದಯಮಿತಿ** ॥ ಮನೋನಿಯಾಮಕರುದ್ರಾವತಾರತಯಾ ಸರ್ವಭೂತಮನಃ ಸ್ಥಿತತ್ವೇನ ವೃಕ್ಷಾಧಿಷ್ಠಾತೃತ್ವಂ ಸಂಭವತೀತಿ। ಈದೃಶಂ ತಂ ಮುನಿಂ ಭಕ್ತಿಪೂರ್ವಕಂ ನತೋಽಸ್ಮಿ। ಅನೇನಾಂತಸ್ಸ್ಥಿತ್ವಾ ಸರ್ವೋಪದೇಷ್ಟೃತ್ವ-ರೂಪಮಾಂತರಂ ಗುರುತ್ವಮುಪಪಾದಿತಂ ಭವತಿ ॥



ಸೂತ ಪುರಾಣಿಕರು ಶುಕಮುನಿಗಳಿಗೆ ಸರ್ವಜೀವರ ಅಂತರ್ಗುರುವೆಂದು ನಮಿಸುತ್ತಾರೆ—ದೇಹಾಭಿಮಾನವನ್ನು ತೊರೆದ ಶುಕಮುನಿ ಗೃಹಸ್ಥಕರ್ಮಗಳನ್ನು ತೊರೆದು ಯತಿಯಾಗಿ ಯೋಗಬಲದಿಂದ ಗಗನಮಾರ್ಗವಾಗಿ ಮೇಲೆ ಹೋಗುವಾಗ ತಂದೆ ಶ್ರೀವ್ಯಾಸರು ಪುತ್ರವಿಯೋಗ ಕಾತರರಾದಂತೆ ತೋರಿಕೊಂಡು 'ಭೋಪುತ್ರ!' ಎಂದು ಕರೆದರು. ಎಲ್ಲ ಸ್ಥಾವರಜಂಗಮಗಳ ಶರೀರ ಮನೋಭಿಮಾನಿಯಾಗಿ ಒಳಗೆ ಹೃದಯದಲ್ಲಿರುವವರು ವಾಯ್ವಾವೇಶ ಯುತರಾದ ಶಿವಾವತಾರ ಶುಕರು. ರಚನಾನುಪಪತ್ತ್ಯಧಿಕರಣ ಸುಧಾದಲ್ಲಿ

**ಹೇಳಿದಂತೆ ಶ್ರೀಹರಿ ಜೀವಾಂತಃಕರಣಗಳಲ್ಲಿ ಜ್ಞಾನೇಚ್ಛಾ ಕೃತಿರೂಪ ಪರಿಣಾಮ ಉಂಟುಮಾಡಿ ಅದರಮೇಲೆ ತನ್ನದೆನ್ನುವ ಅಭಿಮಾನವನ್ನು ಜೀವನಿಗೆ ಕೊಡುವುದರಿಂದ ಮುಖ್ಯಅಂತರ್ಗುರುವಾಗಿದ್ದಾನೆ. ಶ್ರೀಹರಿಯಂತೆ ಬ್ರಹ್ಮ ರುದ್ರರೂ ಅಂತರ್ಗುರುಗಳು. ಅದರಿಂದ ಶಿವಾವತಾರರಾದ ಶುಕಮುನಿ ಮರ ಗಿಡಗಳಿಗೆ ಶ್ರೀವ್ಯಾಸರು ನುಡಿದ 'ಭೋ' ಶಬ್ದವನ್ನು ಒಳಗೆ ಹೃದಯದಲ್ಲಿಯೇ ಹೇಳಿಕೊಟ್ಟರು. ಅದರಿಂದ 'ತರವೋऽಪಿ' ಗಿಡಮರಗಳೂ ಕೂಡ 'ಭೋ' ಎಂದು ಅನೂಚ್ಚಾರಣ ಮಾಡಿದುವು. ಮಾರ್ದನಿಯಿಂದ ಉತ್ತರ ನೀಡಿದುವು.**

ಪಿತಾ ಯದ್ಯನುಗಚ್ಛೇನ್ಮಾಂ ಕ್ರೋಶಮಾನಃ ಶುಕೇತಿ ವೈ ।
ತತಃ ಪ್ರತಿವಚೋ ದೇಯಂ ಸರ್ವೈರೇವ ಸಮಾಹಿತೈಃ ।
ಏತನ್ಮೇ ಸ್ನೇಹತಃ ಸರ್ವೇ ವಚನಂ ಕರ್ತುಮರ್ಹಥ ॥

(ಮೋಕ್ಷಧರ್ಮ ೧೬೪.೨೬)

ಮೋಕ್ಷಧರ್ಮದಲ್ಲಿ ಶುಕರು ಮರಗಿಡ ಪ್ರಾಣಿ ಪಶುಪಕ್ಷಿಗಳಿಗೆ ಉಪದೇಶಿಸಿದ್ದರು—'ನಮ್ಮ ತಂದೆ ಪ್ರೀತಿಯಿಂದ ನನ್ನನ್ನು ಹಿಂಬಾಲಿಸಿ 'ಭೋ' ಎಂದು ನನ್ನನ್ನು ಕರೆದಾಗ ಹಾಗೇ ನೀವು ಪ್ರತ್ಯುತ್ತರ ನೀಡಬೇಕು. ನನ್ನ ಮೇಲಿನ ಪ್ರೀತಿಯಿಂದ ನನ್ನ ಪರವಾಗಿ ಉತ್ತರ ನುಡಿಯಬೇಕು'

ಸರ್ವಭೂತ ಹೃದಯ ನಿಯಾಮಕರಾದ ಶುಕರ ಈ ಅಂತರ್ಗುರುತ್ವವನ್ನು ಶ್ರೀವ್ಯಾಸರೇ 'ಭೋ' ಎಂದು ಕರೆದು 'ಭೋ' ಎನ್ನುವ ಮಾರ್ದನಿಯನ್ನು ಸ್ವೀಕರಿಸುವ ಮೂಲಕ ಸ್ಪಷ್ಟಪಡಿಸಿದರು—

ತತ್ರ ಏಕಾಕ್ಷರಂ ನಾದಂ ಭೋ ಇತ್ಯೇವ ಸಮೀರಯತ್ ।
ಪ್ರತ್ಯಾಹರಜ್ಜಗತ್ ಸರ್ವಂ ಉಚ್ಚೈಃ ಸ್ಥಾವರ ಜಂಗಮಂ ॥

(ಮೋಕ್ಷಧರ್ಮ ೨೬೫.೨೪)

ಯಾರೇ ಆಗಲಿ ಎತ್ತರದ ಗುಡ್ಡವನ್ನೇರಿ 'ಭೋ' ಎಂದರೆ ಹಾಗೇ ಪ್ರತಿಧ್ವನಿ ಬರುವುದು ಸಹಜ. ಶ್ರೀವ್ಯಾಸರು 'ಭೋ' ಎಂದಾಗಲೂ ಹಾಗೇ ಮಾರ್ದನಿ ಕೇಳಿಸಿರಬಹುದು. ಅದನ್ನು ಪ್ರತ್ಯುತ್ತರವೆಂದು ಕವಿಯು ಉತ್ಪ್ರೇಕ್ಷೆ ಮಾಡಿದ್ದಾನಷ್ಟೆ. ಅದರಿಂದ ಶುಕಮುನಿಗೆ ಅಂತರ್ಗುರುತ್ವ ಹೇಗೆ ಸಿದ್ಧವಾಗುವುದು? ಎಂದರೆ, ಮೋಕ್ಷಧರ್ಮವಚನ ಹೇಳುತ್ತದೆ—

ತತಃ ಪ್ರಭೃತಿ ಚಾದ್ಯಾಪಿ ಶಬ್ದಾನುಚ್ಚಾರಿತಾನ್ ಪೃಥಕ್
ಗಿರಿಗಹ್ವರ ಪೃಷ್ಠೇಷು ವ್ಯಾಹರಂತಿ ಶುಕಂ ಪ್ರತಿ ॥
(ಮೋಕ್ಷಧರ್ಮ ೧೬೫.೨೫)

'ಪರ್ವತ ಗುಹೆಗಳಲ್ಲಿ ವಿಶಾಲ ಸಭಾಂಗಣಾದಿಗಳಲ್ಲಿ ಪ್ರತಿಧ್ವನಿಗಳು ಕೇಳಿಬರುವುದು ಅಂದಿನಿಂದ ಇಂದಿಗೂ ಕಂಡುಬರುತ್ತದೆ.'

ನಾವೇನೇ ಧ್ವನಿ ಮಾಡಿದರು ಅದು ನಮ್ಮ ಬಿಂಬನೆ ಮಾಡಿದ್ದು. ಪ್ರತಿಧ್ವನಿಯೂ ನಮ್ಮ ಸ್ವರೂಪಾಭಿಮಾನಿ ಶುಕನೆ ಮಾಡಿರುತ್ತಾನೆ. ಅದು ಪದಸಮನ್ವಯದಿಂದ ಹರಿಸ್ತುತಿಯೆ. ಅಂತರ್ಯಾಮಿಗಳಾದ ಹರಿ ಹರ ಬ್ರಹ್ಮಾದಿಗಳು ಅದನ್ನು ಬಲ್ಲರು. ಅವರೇ ಅದನ್ನು ಹೇಳಿಕೊಟ್ಟು ಮಾರ್ದನಿಯಿಂದ ಹೇಳಿಸುತ್ತಿದ್ದಾರೆ ಎಂದು ತಿಳಿಯಬೇಕು.

'ಭೋ' ಶಬ್ದಕ್ಕೆ ಹರಿಯಲ್ಲಿ ಪದಸಮನ್ವಯ ಹೀಗೆ ಸಾಧ್ಯ—'ಭಾತಿ' ಬೆಳಗುತ್ತಾನೆ ಶ್ರೀಹರಿ ಎಂಬ ಅರ್ಥದಲ್ಲಿ ಭಾ ದೀಪ್ತೌ ಧಾತುವಿಗೆ ಓಸ್ ಎಂಬ ಉಣಾದಿ ಪ್ರತ್ಯಯ, ಎಲ್ಲರ ಹೃದಯದೊಳಗೆ ಅಂತರ್ಯಾಮಿಯಾಗಿ ಬೆಳಗುವ ಪರಂಜ್ಯೋತಿ ಪರಮಾತ್ಮನ ನಾಮವಿದು.

ಹೀಗೆ ಶುಕಮುನಿ ಅಂತರ್ಗುರು ವಾಗಿರುವುದರಿಂದ ಅಂತರಂಗಕ್ಕೆ ತಟ್ಟುವಂತೆ ಮನಒಪ್ಪುವಂತೆ ಹರಿಕಥೆಗಳನ್ನು ಹೇಳಬಲ್ಲರೆಂದು ಆದರದಿಂದ ಪ್ರತ್ಯೇಕವಾಗಿ ಅವರಿಗೆ ಪರೀಕ್ಷಿತನು ಸತ್ಕಾರ ಮಾಡುತ್ತಾನೆ.

ಯದ್ಯಪಿ ವಿಶ್ವಾಮಿತ್ರಾದಿ ಮುನಿಗಳೂ ತತ್ವಾಭಿಮಾನಿಗಳಾಗಿದ್ದು ಅಂತರ್ಗುರುಗಳೆ ಆಗಿದ್ದಾರೆ. ಆದರೂ ಶುಕಮುನಿಗಳ ಅಂತರ್ಗುರುತ್ವವು ವಿಶೇಷವಾಗಿ ಮೋಕ್ಷಧರ್ಮೋಕ್ತವಾಗಿರುವುದು ವಿಶೇಷ.

ಜಿಜ್ಞಾಸಿತಾತ್ಮ ಯಾಥಾತ್ಮ್ಯೋ ಮುನೇ ರ್ವ್ಯಾಸಸುತಾದಸೌ ।
ಹಿತ್ವೇದಂ ನೃಪ ಗಂಗಾಯಾಂ ಯಾಸ್ಯತ್ಯದ್ಧಾऽಕುತೋಭಯಂ ॥
(ಭಾ.೧.೧೧.೨೮)

ಎಂದು ಭಾಗವತವೆ ಹೇಳುವಂತೆ ಧರ್ಮರಾಜನಿಗೆ ಪರೀಕ್ಷಿತನ ಜಾತಕಫಲವನ್ನು ನುಡಿದ ಬ್ರಾಹ್ಮಣರು ಅಂದೇ 'ಪರೀಕ್ಷಿತನಿಗೆ ಶುಕಮುನಿಯ ಉಪದೇಶ ಲಾಭವಿದೆ' ಎಂದು ಹೇಳಿದ್ದರು. ಬೇರೆ ಮುನಿಗಳೂ ಇದನ್ನು ತಿಳಿದೇ

ಭಾಗವತಾಮೃತರಸ ಪಾನಕ್ಕಾಗಿ ಈಗ ಬಂದು ನೆರೆದಿದ್ದರು. ಶುಕಮುನಿ ಬಂದಾಗ ಆಸನಗಳಿಂದ ಎದ್ದು ನಿಂತರು.



–೩೨–

**ಸರ್ವಜೀವರಿಗೆ ಬಾಹ್ಯಗುರುವೂ ಆಗಿದ್ದಾರೆ ಶುಕಮುನಿ**

**ಯಃ ಸ್ವಾನುಭಾವಮಖಿಲಶ್ರುತಿಸಾರಮೇಕಂ**
**ಅಧ್ಯಾತ್ಮದೀಪಮತಿತಿತೀರ್ಷತಾಂ ತಮೋಽಂಧಂ ।**
**ಸಂಸಾರಿಣಾಂ ಕರುಣಯಾಽಽಹ ಪುರಾಣ ಗುಹ್ಯಂ**
**ತಂ ವ್ಯಾಸಸೂನುಮುಪಯಾಮಿ ಗುರುಂ ಮುನೀನಾಂ ॥**

(ಭಾ.೧.೨.೩)

ದ್ವಿತೀಯಮಪ್ಯುಪಪಾದಯತಿ ॥ ಯ ಇತಿ ॥ ಯೋಽಖಿಲಶ್ರುತೀನಾಂ ಮುಖ್ಯತಾತ್ಪರ್ಯ ವಿಷಯಂ। ಅತ ಏವ ಪ್ರಧಾನಂ। ದೃಢನಿರೂಢ-ಮಜ್ಞಾನಾಖ್ಯಮಾಂತರತಮೋಽತಿತಿತೀರ್ಷತಾಂ ಸಂಸಾರಿಣಾಂ ಜನಾನಾಂ ದೇಹಾಂತರ್ದೀಪವತ್ ಸ್ಥಿತಂ ಪುರಾಣೇಷ್ವಪ್ರಕಾಶಿತಮಪರಾಧೀನಜ್ಞಾನಾತ್ಮಕಂ ಬ್ರಹ್ಮ। ಸಂಸಾರಿಷು ಕರುಣಯಾಽಽಹ ಭಾಗವತಪುರಾಣ ರೂಪೇಣ ಸಮ್ಯಕ್ ಪ್ರದರ್ಶಯಾಮಾಸ। ತಂ ಸರ್ವೇಷಾಂ ಜ್ಞಾನಿನಾಂ ಗುರುಂ ವ್ಯಾಸಸೂನುಂ ಶರಣಮುಪಯಾಮಿ। ಅನೇನ ಭಾಗವತಶಾಸ್ತ್ರಪ್ರವರ್ತಕತಯಾ ದ್ವಿತೀಯಂ ಬಾಹ್ಯಗುರುತ್ವಂ ಚೋಪಪಾದಿತಂ ಭವತಿ ॥



ಅಂತರ್ಗುರುಗಳಾಗಿದ್ದು ಬಾಹ್ಯದಲ್ಲಿಯೂ ಗುರುಗಳು ವ್ಯಾಸಪುತ್ರ ಶುಕಮುನಿ. ಮುನಿಗಳಿಗೂ ಗುರುಗಳು. ಅಜ್ಞಾನದ ಕತ್ತಲನ್ನು ಪೂರ್ತಿದಾಟಲು ಬಯಸುವ ಅಧ್ಯಾತ್ಮ ಸಾಧಕರಿಗೆ ತಮ್ಮ ಹೃದಯದಲ್ಲಿ 'ಭೋ' ಎಂಬ ಪರಂಜ್ಯೋತಿಯಾಗಿ ಬೆಳಗುವ ಸಕಲವೇದವೇದ್ಯನಾದ 'ಪುರಾಣ ಗುಹ್ಯಂ' ಪುರಾಣಗಳಲ್ಲಿ ಬೆಳಗಿಯೂ ಬೆಳಗದಂತಿರುವ ಸ್ವತಂತ್ರ ಸಾಮರ್ಥ್ಯ ಶಾಲಿಯಾದ ಪರಮಾತ್ಮನ ಬಗ್ಗೆ ಭಾಗವತದಲ್ಲಿ ಹೊರಗೂ ಕರುಣೆಯಿಂದ ಉಪದೇಶಿಸಿದ್ದಾರೆ. ಅವರನ್ನು ಶರಣುಹೊಂದುವೆನು ಎನ್ನುತ್ತ ಸೂತಪುರಾಣಿಕರು ನಮಿಸುತ್ತಾರೆ.



–೩೩–

**ಅವಧೂತಮುನಿಯನ್ನು ಬೀದಿಮಕ್ಕಳು ಸುತ್ತುವರಿದರು**

ತತ್ರಾಭವದ್ ಭಗವಾನ್ ವ್ಯಾಸಪುತ್ರೋ
ಯದೃಚ್ಛಯಾ ಗಾಮಟಮಾನೋಽನಪೇಕ್ಷಃ ।
ಅಲಕ್ಷ್ಯಲಿಂಗೋ ನಿಜಲಾಭತುಷ್ಟೋ
ವೃತಶ್ಚ ಬಾಲೈರವಧೂತವೇಷಃ ॥

(ಭಾ.೧.೨೦.೧)

ವಿಶಿಷ್ಯಭಕ್ತ್ಯುತ್ಪಾದನಾಯ ತನ್ಮಹಿಮಾನಂ ನಿರೂಪ್ಯ ತದಾಗಮನಪ್ರಕಾರಂ ವಕ್ತಿ ॥ **ತತ್ರೇತಿ** ॥ ಯತ್ರ ರಾಜಾ ಪ್ರಾಯಮುಪವಿಷ್ಟಃ। ನ ಬುದ್ಧಿಪೂರ್ವಂ ಮರಿಷ್ಯಮಾಣಮಹಾರಾಜದರ್ಶನೇಚ್ಛಯಾಽಽಗಮನಂ । ಕಿಂತು ಯದೃಚ್ಛಯಾ ಗಾಮಟಮಾನಸ್ಯ ಯದೃಚ್ಛಯೈವಾತ್ರಾಪ್ಯಾಗಮನಮಿತಿ ಸೂಚನಾಯ ತತ್ರಾಗಮದಿತಿ ವಕ್ತವ್ಯೇಽಭವದಿತ್ಯುಕ್ತಂ । ಕರಿಷ್ಯಮಾಣಜ್ಞಾನೋಪದೇಶೋಪ-ಯೋಗಿ ಜ್ಞಾನಾದಿಸೂಚನಾಯ ಭಗವಾನಿತಿ । ಪ್ರಯೋಜನಾರ್ಥಮೇವಾಗತ ಇತಿ ಕಿಂ ನ ಸ್ಯಾದಿತ್ಯತ ಉಕ್ತಂ— **ಅನಪೇಕ್ಷ ಇತಿ** ॥ ಸರ್ವಾಪೇಕ್ಷಾರಹಿತತ್ವಮಪಿ ಕುತ ಇತ್ಯತ ಉಕ್ತಂ **ನಿಜಲಾಭತುಷ್ಟ ಇತಿ** ॥ ಭಕ್ತಿರೇವ ಹಿ ಭಕ್ತಾನಾಂ ನಿಜೋಽನುತ್ತಮೋ ಲಾಭಃ । ಕಿಮಾಶ್ರಮೋಽಸಾವಿತಿ ತತ್ರಾಹ—**ಅಲಕ್ಷ್ಯಲಿಂಗ ಇತಿ** ॥ ಸರ್ವಾಶ್ರಮಚಿಹ್ನಾಭಾವೇ ಕಿಂವೇಷ ಇತಿ ತತ್ರೋಕ್ತಂ **ಅವಧೂತ ವೇಷ ಇತಿ** ॥ ದಿಗಂಬರತ್ವಾದಿಕಮೇವಾವಧೂತಚಿಹ್ನಂ । ಅತ ಏವ ಬಾಲೈರ್ವೃತಶ್ಚ ॥

❖❖❖

**ವ್ಯಾಸಪುತ್ರ ಶುಕಮುನಿಗಳು ದೈವಾತ್ ಅಲ್ಲಿಗೆ ಬಂದರು. ಯಾವ ವಿಷಯಭೋಗಾಭಿಲಾಷೆ ಇಲ್ಲದೆ ಕೇವಲ ಹರಿಧ್ಯಾನದಿಂದ ವ್ಯಕ್ತವಾಗುವ 'ನಿಜ–ಲಾಭ' ಸ್ವರೂಪಾನಂದಾನುಭವದಿಂದಲೇ ತುಷ್ಟರು. 'ಅಲಕ್ಷ್ಯಲಿಂಗ'ರು, ಬ್ರಹ್ಮಚರ್ಯಾದಿ ಯಾವುದೇ ಆಶ್ರಮಚಿಹ್ನ ಅವರಲ್ಲಿ ಕಂಡುಬರುತ್ತಿರಲಿಲ್ಲ. ಅವಧೂತರೇ ಆದ್ದರಿಂದ ದಿಗಂಬರತ್ವಾದಿ ಅವಧೂತ ಚಿಹ್ನೆ ಮಾತ್ರ ಕಾಣುತ್ತಿತ್ತು. ಅದರಿಂದ ಅವರು ಹೋದಲ್ಲೆಲ್ಲ ಬೀದಿಮಕ್ಕಳು ಸುತ್ತುವರಿಯುತ್ತಿದ್ದರು.**

ಹೀಗೆ ಸಂಚರಿಸುತ್ತ ದೈವಾತ್ ಪರೀಕ್ಷಿತನಲ್ಲಿಗೆ ಬಂದರು.

ನಿಜಲಾಭತುಷ್ಟರೆಂದರೆ ಅಪರೋಕ್ಷಜ್ಞಾನಿಗಳು ಅಸಂಪ್ರಜ್ಞಾತ ಸಮಾಧಿಯ ಅವಸ್ಥೆಯಲ್ಲಿ ಸ್ವರೂಪ ಮನಸಿನಿಂದಲೆ ತಮ್ಮ ಸ್ವರೂಪದೊಂದಿಗೆ ಭಗವಂತನ ಸುಂದರ ಆಕಾರವನ್ನು ಕಾಣುತ್ತ ಅದರಿಂದ ಅಭಿವ್ಯಕ್ತವಾಗುವ ತಮ್ಮ ಸ್ವರೂಪಾನಂದವನ್ನು ಉಂಡು ಸದಾ ಸಂತುಷ್ಟರಾಗಿರುತ್ತಾರೆ. ಅಜ್ಞಾನಿಗಳು ಸದಾ ಬಾಹ್ಯಮನಸಿನಲ್ಲಿ ಅಭಿಮಾನಪಡುತ್ತ ಅದರೊಳಗೆ ಇದ್ದಲಿನಲ್ಲಿ ಬೆಂಕಿಯಂತೆ ಪೂರ್ತಿ ತುಂಬಿ ಕೊಂಡು, ಆ ಜಡ ಮನಸ್ಸಿನಿಂದಲೆ ಇಂದ್ರಿಯಗಳ ಮೂಲಕ ವಿಷಯಸುಖವನ್ನು ಉಣ್ಣುತ್ತಾರೆ. ವಿಷಯಸುಖದಲ್ಲಿ ದುಃಖವೆ ಹೆಚ್ಚು. ಸುಖ ಅತ್ಯಲ್ಪ. ಕ್ಷಣಿಕ. ಅದರಿಂದ ಎಷ್ಟು ವಿಷಯಸುಖ ಉಂಡರೂ ತೃಪ್ತಿ ಇಲ್ಲ.

ಅಪರೋಕ್ಷಜ್ಞಾನಿಯು ಬಾಹ್ಯಮನಸ್ಸಿನಲ್ಲಿ ಅಭಿಮಾನ ತೊರೆದು ಸ್ವರೂಪ ಮನಸ್ಸನ್ನು ಯೋಗಬಲದಿಂದ ಭಗವಂತನ ಬಳಿಗೇ ಒಯ್ಯುತ್ತಾನೆ. ಅದಕ್ಕೆ ವಿಷಯಸಂಪರ್ಕ ಇಲ್ಲವಾಗುತ್ತದೆ. ಅದರಿಂದಲೆ ಪರೀಕ್ಷಿತ ಶುಕಮುನಿಯ ಉಪದೇಶದಿಂದ ವಾಸುದೇವಾಂಘ್ರಿಧ್ಯಾನದಲ್ಲಿ ಮುಳುಗಿದ್ದು ಬಾಹ್ಯಪ್ರಪಂಚದ ಸಂಪರ್ಕವನ್ನು ಕಡಿದುಕೊಂಡಿದ್ದರಿಂದ ತಕ್ಷಕನು ಕಚ್ಚಿದರೂ ಕಚ್ಚಿದಂತಾಗಲಿಲ್ಲ. ಕಚ್ಚಿದ್ದು ತಿಳಿಯಲೆ ಇಲ್ಲ—

ಬುದ್ಧ್ಯಾನುಮಾನಗರ್ಭಿಣ್ಯಾ ವಾಸುದೇವಾನುಚಿಂತಯಾ
ಚೋದಿತೋ ವಿಪ್ರವಾಕ್ಯೇನ ನ ತ್ವಾಂ ಧಕ್ಷ್ಯತಿ ತಕ್ಷಕಃ ॥

(ಭಾ.೧೨.೪.೫೩)

'ತಾನು ದಾಸ, ಅವನು ಈಶ'ಬಿಂಬ', ಎನ್ನುವ ಯುಕ್ತಿಯುಕ್ತವಾಗಿ 'ವಾಸುದೇವನು ಗುಣಪೂರ್ಣದೋಷದೂರ'ನೆಂದು ಮೈಮರೆತು ಧ್ಯಾನಿಸು. ಆಗ ಬ್ರಾಹ್ಮಣಶಾಪದಿಂದ ತಕ್ಷಕನು ಹೊರಗಿನ ಮೈಗೆ ಕಚ್ಚಿದರೂ ನಿನಗೆ ಕಚ್ಚಿದಂತಾಗುವುದಿಲ್ಲ. ಅಪಮೃತ್ಯುದೋಷ ನಿನಗೆ ಬರುವುದಿಲ್ಲ' ಎಂದು ಶುಕಮುನಿ ವರ ನೀಡಿದರು.



–೩೪–

**ಗುರುಲಕ್ಷಣ ಮೋಹನಾಕಾರ ಸಂಪನ್ನರು ಶುಕಮುನಿ**

**ತಂ ದ್ವ್ಯಷ್ಟವರ್ಷಂ ಸುಕುಮಾರಪಾದ**
**ಕರೋರು ಬಾಹ್ವಂಸಕಪೋಲ ಗಾತ್ರಂ ।**

**ಚಾರ್ವಾರುಣಾಕ್ಷೋನ್ನಸ ತುಲ್ಯಕರ್ಣಂ**
**ಶುಭ್ರಾನನಂ ಕಂಬುಸುಜಾತಕಂಠಂ ॥**

(ಭಾ.೧.೨೦.೨)

ಸರ್ವಗುರೋಃ ಶುಕಸ್ಯ ಧ್ಯಾನಮವಶ್ಯಂ ಮುಮುಕ್ಷುಭಿಃ ಕಾರ್ಯಮಿತ್ಯಾ-ಶಯೇನ ಪಾದಮಾರಭ್ಯ ಯಾವದ್ಧಸಿತಂ ಅವಯವಸನ್ನಿವೇಶಮಾಹ॥ **ತಮಿತ್ಯಾದಿಶ್ಲೋಕತ್ರಯೇಣ** ॥ ಗೂಢವರ್ಚಸಮಪಿ ತಂ ಶುಕಂ ತಲ್ಲಕ್ಷಣಜ್ಞಾತ್ವಾ-ನ್ಮುನಯ ಆಸನೇಭ್ಯಃ ಪ್ರತ್ಯುತ್ಥಿತಾಃ ಬಭೂವುಃ ಇತ್ಯನ್ವಯಃ। ಷೋಡಶವರ್ಷಂ। ಸುಕುಮಾರತ್ವಂ ವಿಶೇಷಣಂ। ಚಾರು ಈಷದ್ರಕ್ತಾಕ್ಷಶ್ಚಾಸೌ ಉನ್ನಸಶ್ಚಾಸೌ ತುಲ್ಯಕರ್ಣಶ್ಚ। ಶುಭ್ರಂ ಶೋಭನಂ। ತ್ರಿವಲಿತಯಾ ಕಂಬುಸಮಾನ-ಸುಲಕ್ಷಣಕಂಠಂ।

❖❖❖

ನೋಡಲು ಸದಾ ಹದಿನಾರು ವಯಸಿನಂತೇ ಇರುವವರು ಶುಕರು. ಬಲು ಕೋಮಲವಾದ ಪಾದ ಕೈ ತೊಡೆ ತೋಳು ಹೆಗಲು ಕೆನ್ನೆಗಳು, ಸುಂದರವಾದ ನಸುಗೆಂಪಾದ ಕಣ್ಣುಗಳು ಉನ್ನತವಾದ ಮೂಗು ಸಮವಾದ ಕಿವಿಗಳು ನಿರ್ಮಲ ವಾಗಿ ಹೊಳೆವ ಮುಖ ಶಂಖದಂತೆ ಮೂರು ರೇಖೆಗಳಿಂದೊಪ್ಪುವ ಕೊರಳು.

❖❖❖

—೩೫—

**ಶುಕಮುನಿಯ ಪರಮ ಸುಂದರಾಕಾರ**

ನಿಗೂಢಜತ್ರುಂ ಪೃಥುತುಂಗವಕ್ಷಸಂ
ಆವರ್ತನಾಭಿಂ ವಲಿವಲ್ಗೂದರಂ ಚ ।
ದಿಗಂಬರಂ ವಕ್ತ್ರ ವಿಕೀರ್ಣಕೇಶಂ
ಪ್ರಲಂಬಬಾಹುಂ ಸ್ವಮರೋತ್ತಮಾಭಂ ॥

(ಭಾ.೧.೨೦.೩)

ಪೀವರಜತ್ರುಂ। ನಿಮ್ನನಾಭಿಂ। ವಲಿಭೀ ರೇಖಾಭಿಃ। ಸಮ್ಯಕ್ ಅಮರೋತ್ತಮವದ್ಭಾಸಮಾನಂ।

❖❖❖

**ಶುಕಮುನಿಯ ದಿಗಂಬರ ಸುಂದರ ಆಕಾರ- ಎದ್ದು ಕಾಣದಂತಿರುವ ಹೆಗಲಿನ ಮೂಳೆ, ವಿಶಾಲವಾದ ಉನ್ನತವಾದ ಎದೆ, ಆಳವಾದ ಹೊಕ್ಕಳು, ತ್ರಿವಳಿಯಿಂದೆಸೆವ ಉದರ, ಹರವಿದ ಗುಂಗುರುಕೂದಲು, ನಿಡಿದಾದ ತೋಳು ಗಳು, ಶರೀರಕಾಂತಿಯಲ್ಲಿ ಸು-ಅಮರೋತ್ತಮರಾದ ದೇವೋತ್ತಮರಾದ ಹರಿವಾಯುಗಳಂತೇ ಕಾಣುತ್ತಾರೆ.**

ಯದ್ಯಪಿ ಗುರುವಿನ ಜ್ಞಾನಪಾಂಡಿತ್ಯಗಳ ಆಳ ವಿಸ್ತಾರಗಳನ್ನು ಬಣ್ಣಿಸು ವುದು ಉಚಿತವಾಗುತ್ತದೆ. ಬಾಹ್ಯಶರೀರ ಸೌಂದರ್ಯದಿಂದೇನು? ಎಂಬ ಪ್ರಶ್ನೆ ಬರುತ್ತದೆ. ಆದರೆ,

ಸಮ್ಯಗ್‌ಲಕ್ಷಣಸಂಪನ್ನೋ ಯದ್‌ದದ್ಯಾತ್ ಸುಪ್ರಸನ್ನಧೀಃ
ಶಿಷ್ಯಾಯ ಸತ್ಯಂ ಭವತಿ ತತ್ ಸರ್ವಂ ನಾತ್ರಸಂಶಯಃ ॥

ಎಂದು ನಿರ್ಣಯದಲ್ಲಿ ಹೇಳಿರುವುದರಿಂದ ಗುರುಲಕ್ಷಣಗಳು ಹೆಚ್ಚಿದಂತೆಲ್ಲ ಗುರುಗಳು ಉತ್ತಮರೆನಿಸುತ್ತಾರೆ. ಅವರ ಆಶೀರ್ವಾದ ಫಲಿಸುತ್ತದೆ. ಅದರಿಂದ,

ಆಪಾದ ಮೌಲಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।

ಅಡಿಯಿಂದ ಮುಡಿವರೆಗೆ ಗುರುಗಳ ಶರೀರದಲ್ಲಿರುವ ಗುರುಲಕ್ಷಣ ಗಳನ್ನು ಸ್ಮರಿಸಿ ಆರಾಧಿಸಬೇಕು. ಹರಿವಾಯುಗಳು ದ್ವಾತ್ರಿಂಶಲಕ್ಷಣ ಸಂಪನ್ನರು ರುದ್ರದೇವರು ಇಪ್ಪತ್ತೆಂಟು ಲಕ್ಷಣಉಳ್ಳವರು. ಇಂದ್ರಾದಿದೇವತೆಗಳು ಇಪ್ಪತ್ತ ನಾಲ್ಕರಿಂದ ಹದಿನಾರರವರೆಗೆ ಕಡಿಮೆ ಕಡಿಮೆಯಾಗಿ ಲಕ್ಷಣಉಳ್ಳವರು. ಅದರಿಂದ ಶುಕಮುನಿ ಹರಿವಾಯುಗಳಂತೆ ಪೂರ್ಣ ಮೂವತ್ತೆರಡು ಲಕ್ಷಣ ಗಳಿಲ್ಲದಿದ್ದರೂ ಇಂದ್ರಾದಿಗಳಿಗಿಂತ ಹೆಚ್ಚಾಗಿ ಇಪ್ಪತ್ತೆಂಟು ಲಕ್ಷಣ ಉಳ್ಳವರು.

ಕಾಂತ್ಯಾ ವಿಶ್ವವಿಮೋಹನಂ ಪಶುಪತಿಂ
ಮೃತ್ಯುಂಜಯಂ ಭಾವಯೇತ್ ॥

ಶರೀರಕಾಂತಿಯಿಂದ ವಿಶ್ವವನ್ನೇ ಬೆರಗುಗೊಳಿಸುವವರು ಶುಕಮುನಿಗಳು ಸರ್ವ ಗುರುಗಳಾದ್ದರಿಂದ ಆಪಾದಮೌಲಿ ಆಕೃತಿಯನ್ನು ಸರ್ವಮುಮುಕ್ಷುಗಳೂ ಧ್ಯಾನ ಮಾಡಬೇಕೆಂದು ತಿಳಿಸಲು ಇಲ್ಲಿ ಅವರ ಆಕೃತಿ ವರ್ಣನೆ ಮಾಡಿದ್ದಾರೆ.



–೩೬–

**ಅವಧೂತ ವೇಷದವರು ಶುಕಮುನಿಗಳು**

**ಶ್ಯಾಮಂ ಸದಾಪೀಚ್ಯವಯೋಽಂಗಲಕ್ಷ್ಮ್ಯಾ**
**ಸ್ತ್ರೀಣಾಂ ಮನೋಜ್ಞಂ ರುಚಿರಸ್ಮಿತೇನ ।**
**ಪ್ರತ್ಯುತ್ಥಿತಾ ಮುನಯಶ್ಚಾಸನೇಭ್ಯ-**
**ಸ್ತಲ್ಲಕ್ಷಣಜ್ಞಾ ಅಪಿ ಗೂಢವರ್ಚಸಂ ॥**

(ಭಾ.೧.೧೦.೪)

**ಆಪೀಚ್ಯಂ ವಯೋ ಯಸ್ಯ ತಚ್ಚ ತದಂಗಂ ಚ ತಸ್ಯ ಲಕ್ಷ್ಮ್ಯಾ ॥**

❖❖❖

ನೀಲವರ್ಣದ ಮೈಕಾಂತಿ, ಬಾಲ್ಯ ಯೌವನಗಳ ನಡುವಿನ ಆಪೀಚ್ಯ ವಯಸಿನ ಸೌಂದರ್ಯದಿಂದ, ಸುಂದರ ಮಂದಹಾಸದಿಂದ ಸ್ತ್ರೀಯರಿಗೆ **ಅತ್ಯಾಕರ್ಷಕರಾಗಿದ್ದರು. ತಾವು ಮಹಾಜ್ಞಾನಿಗಳೆಂದು ತೋರಗೊಡದೆ ಅವಧೂತವೇಷದಿಂದ ಬ್ರಹ್ಮಜ್ಞಾನದ ವರ್ಚಸ್ಸನ್ನು ಮರೆಮಾಡಿಕೊಂಡಿದ್ದರು. ಅವರ ಲಕ್ಷಣಗಳನ್ನು ತಿಳಿದಿದ್ದ ಎಲ್ಲ ಮುನಿಗಳು ಎದ್ದುನಿಂತು ಸ್ವಾಗತಿಸಿದರು.**

ಆಪೀಚ್ಯ ಬಾಲ್ಯ ಯೌವನಗಳ ಮಧ್ಯದ ವಯಸ್ಸೆಂದರೆ ಹದಿನಾರರ ಹರೆಯ. 'ದ್ವ್ಯಷ್ಟವರ್ಷ' ಅಂದರೆ, ಹದಿನಾರರ ವಯಸ್ಸು ಇದೆ. ಮತ್ತು ಹದಿನಾರರ ಹರೆಯದಿಂದ ಸ್ತ್ರೀಯರಿಗೆ ಮನೋಜ್ಞರೂ ಆಗಿದ್ದಾರೆ. ಅದರಿಂದ ಪುನರುಕ್ತಿ ಇಲ್ಲ.

❖❖❖

–೩೭–

**ವಿಶೇಷ ಅತಿಥಿ ಸತ್ಕಾರ ಮಾಡಿದ್ದಾನೆ ಪರೀಕ್ಷಿತ**

**ಸ ವಿಷ್ಣುರಾತೋಽತಿಥಯ ಆಗತಾಯ**
**ತಸ್ಮೈ ಸಪರ್ಯಾಂ ಶಿರಸಾಽಽಜಹಾರ ।**
**ತತೋ ನಿವೃತ್ತಾ ಹ್ಯಬುಧಾಃ ಸ್ತ್ರಿಯೋಽರ್ಭಕಾಃ**
**ಮಹಾಸನೇ ಚೋಪವಿವೇಶ ಪೂಜಿತಃ ॥** (ಭಾ.೧.೧೦.೫)

**ಏವಮಾಗತಾಯ ರಾಜಾ ಕಿಂ ಕೃತವಾನಿತ್ಯತ ಆಹ ॥ ಸ ಇತಿ ॥ ವಿಷ್ಣುನಾ ಸ್ವೀಕೃತೋ ರಕ್ಷಿತ ಇತಿ ಯಾವತ್ ವಿಷ್ಣುರಾತ ಇತಿ ಸರ್ವೈರ್ವ್ಯವಹ್ರಿಯ-ಮಾಣೋ ರಾಜಾ ಯದೃಚ್ಛಯಾಽಽಗತಾಯಾತಿಥಯೇ ತಸ್ಮೈ ಶುಕಾಯ ಸಪರ್ಯಾಂ ತತ್ಸಾಧನಂ ಶಿರಸಾಽಽಜಹಾರ ಆನಯಾಮಾಸ। ಪೂಜಾಯಾ-ಮತ್ಯಾದರಂ ಸೂಚಯತಿ ಶಿರಸೇತಿ ॥ ತತಃ ಪೂಜಾಸಾಧನ ಸಂಭಾರಾನಂತರಂ। ಅಬುಧಾಃ ಸ್ತ್ರಿಯೋಽರ್ಭಕಾಶ್ಚ ತತ್ರಸ್ಥೈರ್ಗಚ್ಛತೇತ್ಯುಕ್ತಾಸ್ತತಃ ಸ್ಥಾನಾನ್ನಿವೃತ್ತಾಃ। ತತೋ ಮಹಾಸನ ಉಪವಿವೇಶ। ತತ್ರ ಸ್ಥಿತಸ್ಸನ್ ಪೂಜಿತಶ್ಚಾಭವತ್। ಅನೇನ ಸರ್ವೇಷಾಂ ಮುನೀನಾಂ ಆಗಮನಸಮಕಾಲಮೇವ ಶುಕೋಽಪಿ ಯದೃಚ್ಛಯಾಽಽಗತಃ। ತಥಾಪಿ ನೃಪಸನ್ನಿಧಿಂ ಪ್ರತಿ ನಾಗತಃ। ಕಿಂತು ದಿಗಂಬರಮಪೂರ್ವಪುರುಷಂ ವೀಕ್ಷ್ಯ ವಿಸ್ಮಿತೈಃ ಜನೈಃ ವೀಕ್ಷ್ಯಮಾಣಃ ತತ್ರ ತತ್ರ ಕಿಂಚಿತ್ಕಾಲಂ ಯದೃಚ್ಛಯಾ ಅವಸ್ಥಾನೇನ ವ್ಯವಧಾನೇನ ನೃಪಸಮೀಪಮಾಗತಃ। ಏವಂ ಕಿಂಚಿದ್ವ್ಯವಧಾನೇನ ನೃಪಸಮೀಪಾಗಮನೇನ ತತ್ಪೂಜಾದೇರಪಿ ವ್ಯವಧಾನೇನ ಜಾತತಯಾ ತದಾಽಽಗಮನಪೂಜಾದೇಸ್ತತ್ಸಹಪಾಠೇನ ನೋಕ್ತಿರಿತಿ ಶಂಕಾಪರಿಹಾರ ಇತಿ ಜ್ಞೇಯಂ ॥**



**ಅತಿಥಿಯಾಗಿ ಬಂದ ಶುಕಮುನಿಗೆ ಪರೀಕ್ಷಿತನು ಅರ್ಘ್ಯಾದಿಗಳನ್ನು ತಲೆಮೇಲೆ ಹೊತ್ತು ತಂದ. ಸುತ್ತಲೂ ನೆರೆದಿದ್ದ ಅಜ್ಞ ಬಾಲಕರನ್ನೂ ಸ್ತ್ರೀಯರನ್ನೂ ದೂರಸರಿಸಿ ಮುನಿಯನ್ನು ಆಸನದ ಮೇಲೆ ಕೂಡಿಸಿ ಸತ್ಕಾರ ಮಾಡಿದ.**

'ಅತತಿ ಸಾತತ್ಯೇನ ಗಚ್ಛತಿ, ನ ತಿಷ್ಠತಿ' 'ಅತ್' ಧಾತುವಿಗೆ 'ಇಥಿನ್' ಎಂದು ಉಣಾದಿ ಪ್ರತ್ಯಯ. ಸಂಚರಿಸುತ್ತಲೇ ಇರುತ್ತಾನೆ ಎಲ್ಲಿಯೂ ನಿಲ್ಲುವುದಿಲ್ಲ. ಭಿಕ್ಷಾ ಸ್ವೀಕಾರಕ್ಕಾಗಿ ನಿಂತರೂ ಹಸುವಿನ ಹಾಲುಕರೆವಷ್ಟು ಹೊತ್ತು ಮಾತ್ರ ನಿಲ್ಲುತ್ತಾನೆ. ಇಂಥ ಅತಿಥಿ ಶುಕಮುನಿ. ಮತ್ತು ಇತರ ಮುನಿಗಳಂತೆ ಗಂಗಾಸ್ನಾನ ಕ್ಕಾಗಲಿ, ರಾಜದರ್ಶನಕ್ಕಾಗಿ ಬರಲಿಲ್ಲ. ಸಂಚರಿಸುತ್ತ ದೈವಾತ್ ರಾಜನ ಬಳಿಗೆ ಬಂದಿದ್ದರು. ಅದರಿಂದ ವಿಶೇಷ ಅತಿಥಿಸತ್ಕಾರ ಮಾಡಿದ್ದಾನೆ ರಾಜ.

ದೈವಾತ್ ಬಂದವರಾದ್ದರಿಂದ ನೇರವಾಗಿ ರಾಜನ ಬಳಿಗೆ ಎಲ್ಲ ಮುನಿ ಗಳಂತೆ ಬರಲಿಲ್ಲ. ಹೀಗಾಗಿ ಎಲ್ಲ ಮುನಿಗಳೊಂದಿಗೇ ಸತ್ಕಾರವಾಗಿರಲಿಲ್ಲ.

ಇಷ್ಟು ಮಾತ್ರದಿಂದಲೇ ಬೇರೆ ಮುನಿಗಳಿಗೆ ಗಂಗಾಸ್ನಾನದ ಅಥವಾ

ರಾಜದರ್ಶನದ ಅಪೇಕ್ಷೆ ಇತ್ತೆಂದು ತಿಳಿಯಬಾರದು. ಅವರಿಗೆ ಗಂಗಾಸ್ನಾನ ಮಾಡಬೇಕೆಂದು ಅಪೇಕ್ಷೆ ಇಲ್ಲ. ಅವರು ಗಂಗೆಗೇ ತಮ್ಮ ಸ್ನಾನದಿಂದ ಪಾವಿತ್ರ್ಯ ತಂದುಕೊಂಡುವವರು. ಆದರಿಂದ ಗಂಗೆಗೇ ಅವರ ಸ್ನಾನದಿಂದ ಪಾವಿತ್ರ್ಯ ವನ್ನು ಪಡೆಯುವ ಅಪೇಕ್ಷೆ. ಮತ್ತು ರಾಜದರ್ಶನದಿಂದ ಅವರಿಗೇನೂ ಲಾಭವಾಗಬೇಕಾಗಿರಲಿಲ್ಲ. ರಾಜನಿಗೇ ಅವರ ದರ್ಶನದಿಂದ ಲಾಭವಾಗ ಬೇಕಿತ್ತು. ರಾಜನು ಇನ್ನು ಶರೀರತ್ಯಾಗ ಮಾಡಿದರೆ ಅವನಿಗೆ ತಮ್ಮ ದರ್ಶನ ಇಲ್ಲವಾಗುವುದೆಂದು, ಅದಕ್ಕೆ ಮೊದಲೇ ಬಂದಿದ್ದಾರೆ, ಹರಿಪುರಕ್ಕೆ ತೆರಳುತ್ತಿದ್ದ ರಾಜನನ್ನು ಬೀಳ್ಕೊಡುವ ಉದ್ದೇಶವೂ ಅವರಿಗೆ ಇತ್ತು.

ಸಾಧವೋ ನಿರಾಶಿಷಃ ಶಾಂತಾ ಬ್ರಹ್ಮಿಷ್ಠಾ ಲೋಕಪಾವನಾಃ ।
ಹರಂತ್ಯಘಂ ತೇಽಂಗಸಂಗಾತ್‌ಯೇ ಪ್ರಾಪ್ತಾಃ ಸ್ವಹೃದಾ ಹರಿಂ ॥

'ಬೇರೆ ಯಾವ ಅಪೇಕ್ಷೆಯೂ ಇಲ್ಲದೆ ಹರಿಯ ಅನುಗ್ರಹ ಒಂದನ್ನೇ ಬಯಸುವ ಮುನಿಗಳು ನಿನ್ನ ಜಲದಲ್ಲಿ ಸ್ನಾನ ಮಾಡಿ ನಿನ್ನ ಪಾಪಗಳನ್ನು ಸಂಹರಿಸುವರು' ಎಂದು ಭಗೀರಥನೆ ಭಾಗೀರಥಿಗೆ ಹೇಳಿದ್ದಾನೆ.

'ತಂ ಮೋಪವಿಷ್ಟಂ ಪ್ರತಿಯಾಂತು ವಿಪ್ರಾಃ'

ನಾನು ಹರಿಧ್ಯಾನಕ್ಕೆ ಕುಳಿತಾಗ ಧ್ಯಾನ ಸಫಲವಾಗುವಂತೆ ನೀವು ನನ್ನನ್ನು ಹರಸಿರಿ, ದೃಷ್ಟಿಯಿಂದ ಪವಿತ್ರ ಗೊಳಿಸಿರಿ ಎಂದು ರಾಜ ಮುನಿಗಳಲ್ಲಿ ಬೇಡುತ್ತಾನೆ.



—೩೮—

**ಭಾಗವತೋಪದೇಶ ನೀಡಲು ಕೇಳಿಕೊಂಡಿದ್ದಾನೆ ರಾಜ**

**ಪ್ರಶಾಂತಮಾಸೀನಮಕುಂಠಮೇಧಸಂ**
**ಮುನಿಂ ನೃಪೋ ಭಾಗವತೋಽಭ್ಯುಪೇತ್ಯ ।**
**ಪ್ರಣಮ್ಯ ಮೂರ್ಧ್ನಾಽವಹಿತಃ ಕೃತಾಂಜಲಿ**
**ರ್ನತ್ವಾ ಗಿರಾ ಸೂನೃತಯಾಽನ್ವಪೃಚ್ಛತ್ ॥** (ಭಾ.೧.೨೦.೭)

**ಭಾಗವತೋ ನೃಪಃ ಪುನಃ ಕಿಮಕಾರ್ಷೀದಿತ್ಯತ ಆಹ ॥ ಪ್ರಶಾಂತಮಿತಿ ॥**

**ಭಾಗವತೋ ನೃಪೋ ಮುನಿಮಭ್ಯುಪೇತ್ಯ ಸಮೀಪೇ ಸ್ಥಿತ್ವಾ ಮೂರ್ಧ್ನಾ ತದುಪಲಕ್ಷಿತೈಃ ಸರ್ವಾಂಗೈಃ ಪ್ರಣಮ್ಯಾವಹಿತಃ ಕೃತಾಂಜಲಿರ್ಭೂತ್ವಾ ಸೂನೃತಯಾ ಗಿರಾ ಪ್ರಿಯವಚನೇನ ಸ್ತುತ್ವಾ ಪ್ರಷ್ಟವ್ಯಂ ಸಮ್ಯಗಪೃಚ್ಛದಿತಿ। ಯಥಾಹುಃ—**

**''ಯೇಷಾಂ ಸಂಸ್ಮರಣಾತ್ಪುಂಸಸ್ಸದ್ಯಶ್ಶುಧ್ಯಂತಿ ವೈ ಗೃಹಾಃ।**
**ಕಿಂ ಪುನರ್ದರ್ಶನಸ್ಪರ್ಶಪಾದಶೌಚಾಸನಾದಿಭಿಃ ॥**
**ಅತಃ ಪೃಚ್ಛಾಮಿ ಸಂಸಿದ್ಧಂ ಯೋಗಿನಾಂ ಪರಮಂ ಗುರುಂ।**
**ಪುರುಷಸ್ಯೇಹ ಯತ್ಕಾರ್ಯಂ ಮ್ರಿಯಮಾಣಸ್ಯ ಸರ್ವದೇ''ತಿ ॥**
**ಮ್ರಿಯಮಾಣಸ್ಯ ಮರಣಶೀಲಸ್ಯ। ಸರ್ವದಾ ಯತ್ಕಾರ್ಯಂ ॥ ೩೮ ॥**



**ಪ್ರಶಾಂತಮುಖ ಮುದ್ರೆಯಿಂದ ಆಸೀನನಾದ ಹರಿಭಕ್ತನಾದ ಶುಕಮುನಿಯನ್ನು ಹರಿಭಕ್ತನಾದ ರಾಜನು ಸಮೀಪಿಸಿ ತಲೆಬಾಗಿ ನಮಿಸಿ ಕೈಮುಗಿದು ಮಧುರಧ್ವನಿಯಿಂದ ಸವಿನುಡಿನುಡಿಯುತ್ತ ಗುರುಗಳಲ್ಲಿ ಶಿಷ್ಯನು ಕೇಳಬೇಕಾದುದನ್ನು ಭಕ್ತಿಯಿಂದ ಕೇಳಿದನು.**

ಗುರುಗಳಲ್ಲಿ ಸಾಧಕನು ಕೇಳಬೇಕಾದುದು ಭಗವಂತನ ಮಹಿಮೆಯನ್ನೇ. ಮತ್ತು ಅದು ಸಾಧಕನ ಕರ್ತವ್ಯವು ತಾನೆ? ಪ್ರತ್ಯೇಕ ಹೇಳದಿದ್ದರೂ ಅದು ತಿಳಿಯುತ್ತದೆ ಎಂಬ ಅಭಿಪ್ರಾಯದಿಂದ 'ಭಗವಂತನ ಮಹಿಮೆಯನ್ನು' ಎಂದು ಮುಂತಾಗಿ ಮಾತಿನಿಂದ ಹೇಳಲಿಲ್ಲ. ಸೂತರು ಇಲ್ಲಿ ಮಾತಿನಿಂದ ಹೇಳದಿದ್ದರೂ ಇಲ್ಲಿಯೆ ಮುಂದೆ ಹೇಳಿದ್ದಾರೆ—

ಯೇಷಾಂ ಸಂಸ್ಮರಣಾತ್ ಪುಂಸಃ ಸದ್ಯಃ ಶುಧ್ಯಂತಿ ವೈ ಗೃಹಾಃ ।
ಕಿಂ ಪುನರ್ದರ್ಶನ ಸ್ಪರ್ಶ ಪಾದಶೌಚಾಸನಾದಿಭಿಃ ॥
(ಭಾ.೧.೨೦.೯)

ಅತಃ ಪೃಚ್ಛಾಮಿ ಸಂಸಿದ್ಧಂ ಯೋಗಿನಾಂ ಪರಮಂ ಗುರುಂ ।
ಪುರುಷಸ್ಯೇಹ ಯತ್ ಕಾರ್ಯಂ ಮ್ರಿಯಮಾಣಸ್ಯ ಸರ್ವದಾ ॥
(ಭಾ.೧.೨೦.೧೩)

ಪರೀಕ್ಷಿತನು ಶುಕಮುನಿಯಲ್ಲಿ ಕೇಳುತ್ತಾನೆ— ನಿಮ್ಮಂಥವರ ಸ್ಮರಣ ಮಾತ್ರದಿಂದಲೆ ನಮ್ಮ ಅರಮನೆ ಪಾವನವಾಗುವುದು. ಇನ್ನು ನಿಮ್ಮ ದರ್ಶನ

ಸ್ಪರ್ಶನ ಪಾದಪ್ರಕ್ಷಾಲನ ಆಸನ ಅರ್ಘ್ಯಾದಿ ಉಪಚಾರಗಳನ್ನು ಮಾಡಿದರೆ ಏನು ಹೇಳಬೇಕು?

ಶ್ರೀಕೃಷ್ಣನ ದಯೆಯಿಂದ ತಾವು ನಮಗೆ ದರ್ಶನ ನೀಡಿರುವಿರಿ. ಅದರಿಂದ ತಮ್ಮಲ್ಲಿ ಕೇಳಿಕೊಳ್ಳುತ್ತೇನೆ. 'ಸಾವಿನ' ಅಂಚಿನಲ್ಲಿರುವ ಮುಮುಕ್ಷು ಅವಶ್ಯ ಏನು ಮಾಡಬೇಕು, ಹೇಳಿರಿ' ಎಂದು.

ಮುಂದೆ ದಶಮಸ್ಕಂಧದಲ್ಲಿ ಶ್ರೀಕೃಷ್ಣನ ಅವತಾರ ಲೀಲೆಗಳನ್ನು ಹೇಳಿರಿ ಎಂದು ಸ್ಪಷ್ಟವಾಗಿಯೇ ಕೇಳುತ್ತಾನೆ ರಾಜಾ ಪರೀಕ್ಷಿತ.

ಸಾವಿನ ಅಂಚಿನಲ್ಲಿರುವ ಸಾಧಕನು ಏನು ಮಾಡಬೇಕೆಂದು ರಾಜನು ತಿಳಿದವನೆ. 'ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ' ಎಂದು ಗೀತೆಯಲ್ಲಿ ಶ್ರೀಕೃಷ್ಣ ಹೇಳುವಂತೆ ಪರೀಕ್ಷಿತನೂ ಬಹು ಜನ್ಮಸಾಧನೆ ಗಳಿಂದ ಇದೀಗ ಚರಮಶರೀರ ಪಡೆದಿದ್ದಾನೆ. ಹಿಂದಿನಂತೇ ಈಗಲೂ ಮರಣ ಕಾಲ ಸಮೀಪಿಸಿದಾಗ ಏನು ಸಾಧನೆ ಮಾಡಬೇಕೆಂಬುದು ಅವನಿಗೆ ಗೊತ್ತು. ಆದರೂ ಭಗವದ್ಗೀತೆ ಹೇಗೆ ಅರ್ಜುನನಿಗಾಗಿಯೇ ಉಪದಿಷ್ಟವಾಗದೆ, ಜಗದ ಎಲ್ಲ ಸಾಧಕರಿಗಾಗಿಯೇ ಉಪದಿಷ್ಟವಾಗಿದೆಯೋ ಹಾಗೇ ಭಾಗವತವೂ ಎಲ್ಲ ಸಾಧಕರಿಗಾಗಿಯೇ ಹೊರಟಿದೆ. ಆ ಎಲ್ಲ ಸಾಧಕರಿಗೆ ಜ್ಞಾನ ಲಭಿಸಲೆಂದೇ ಅವರ ಪರವಾಗಿ ಪರೀಕ್ಷಿತ ಶುಕಮುನಿಗಳಲ್ಲಿ ಕೇಳುತ್ತಿದ್ದಾನೆ. ಕೇಳಬೇಕು ಇದು ಅವನ ಕರ್ತವ್ಯ. ವಿದುರನು ತಾನು ಯಮಧರ್ಮ ರಾಜನ ಅವತಾರವಾಗಿದ್ದು ಎಲ್ಲ ತಿಳಿದಿದ್ದರೂ ಅಜ್ಞ ಲೋಕಕ್ಕಾಗಿ ಮೈತ್ರೇಯರಲ್ಲಿ ಭಾಗವತೋಪದೇಶವನ್ನು ಬೇಡುತ್ತಾನೆ ಎಂದು ತಾತ್ಪರ್ಯದಲ್ಲಿ ಸ್ಪಷ್ಟ ಹೇಳಿದ್ದಾರೆ. ಹಾಗೇ ಇದು.



—೩೯—

**ದಶಮಸ್ಕಂಧ ಭಾಗವತ ಹೇಳಲು ಪ್ರಾರ್ಥನೆ**

**ಪಿತಾಮಹಾ ಮೇ ಸಮರೇऽಮರಂಜಯ್ಯೈ**
**ರ್ದೇವವ್ರತಾದ್ಯಾತಿರಥೈಸ್ತಿಮಿಂಗಿಲೈಃ ।**
**ದುರತ್ಯಯಂ ಕೌರವ ಸೈನ್ಯ ಸಾಗರಂ**
**ಕೃತ್ವಾऽತರನ್ ವತ್ಸಪದಂ ಸ್ಮ ಯತ್‌ಪ್ಲವಾಃ ॥** (ಭಾ.೧೦.೧.೫)

ಏವಂ ಸಾಮಾನ್ಯತಃ ಸಂಕ್ಷಿಪ್ಯ ರಾಜ್ಞಾ ಕೃತಂ ಪ್ರಶ್ನಂ ದರ್ಶಯಿತ್ವಾ ವಿಶೇಷತೋ ವಿಸ್ತರೇಣ ಕೃತಂ ದರ್ಶಯತಿ **ಶ್ಲೋಕತ್ರಯೇಣ** ॥ ತತ್ರಾದಾವಿಂದ್ರಿಯಾಣಾಂ ಬ್ರಹ್ಮಣಾ ಬಹಿರ್ಮುಖತಯೈವ ವಿನಿರ್ಮಿತಾನಾಂ ವಿಷಯಧ್ಯಾನೇನ ಬಹುದುಃಖಪ್ರದಾನಾಂ ಮುಮುಕ್ಷುವೈರಿಣಾಂ ದುರ್ಜಯಾನಾಂ ಕಥಂ ಜಯಃ ಸ್ಯಾದಿತ್ಯಭಿಪ್ರಾಯೇಣ ಸ್ವಪೂರ್ವಜೋಪಕಾರಕಾರಿತಯಾ ಶ್ರೀಹರಿಂ ಸ್ತೌತಿ ॥ **ಪಿತಾಮಹಾ ಇತಿ** ॥ ಮಮ ಪಿತಾಮಹಾ ಧರ್ಮಾದಯಃ। ಯಃ ಕೃಷ್ಣ ಏವ ಪ್ಲವ ಉಡುಪಂ ಯೇಷಾಂ ತಾದೃಶಾ ಭೂತ್ವಾ। ಯುದ್ಧೇ ಅಮರಾನಪಿ ಜಯಂತೀತಿ ತಾದೃಶೈಃ। ದೇವವ್ರತೋ ಭೀಷ್ಮಃ ಸ ಏವಾದ್ಯೋ ಯೇಷಾಮತಿರಥಾನಾಂ ತೈಸ್ತದ್ರೂಪೈಸ್ತಿಮಿಂಗಿಲೈಸ್ತನ್ನಾಮಕೈರ್ಮತ್ಸ್ಯವಿಶೇಷೈರ್ವಿದ್ಯಮಾನೈರ್ನಿಮಿತ್ತೈರತ್ಯೇತುಮಶಕ್ತಂ। ಕೌರವಾಣಾಂ ಸೈನ್ಯಾಖ್ಯಸಮುದ್ರಂ। ವತ್ಸಪದಂ ಕೃತ್ವಾ। ಆಯಾಸಂ ವಿನಾ। ಅತರನ್ಸ್ಮೇತಿ। ವತ್ಸಪದಸದೃಶಂ ಕೃತ್ವೇತಿ ಅವಯವಾರ್ಥವಿವಕ್ಷಾಯಾಂ ಯತ್ಪದಾರ್ಥಸ್ಯ ಪ್ಲವತ್ವಕಥನಂ ನ ಸ್ವರಸಂ ॥



'ಶ್ರೀಕೃಷ್ಣನ ಲೀಲೆಗಳನ್ನು ಹೇಳಿರಿ' ಎಂದು ಪರೀಕ್ಷಿತನು ಶುಕಮುನಿಗಳಲ್ಲಿ ಕೇಳಿಕೊಳ್ಳುತ್ತಾನೆ—

ಯುದ್ಧದಲ್ಲಿ ದೇವತೆಗಳನ್ನೂ ಮಣಿಸಬಲ್ಲ ಭೀಷ್ಮರಂಥ ಅತಿರಥರು ಕೌರವ ಸೈನ್ಯಾಧಿಪತಿಗಳಾಗಿದ್ದರು. ಕೌರವ ಸೈನ್ಯ ಸಾಗರದಲ್ಲಿ ತಿಮಿಂಗಿಲಗಳು ಭೀಷ್ಮಾದಿಗಳು. ನಮ್ಮ ತಾತಂದಿರು ಪಾಂಡವರು ಕೃಷ್ಣನೆಂಬ ನೌಕೆಯಿಂದ ಈ ಸೈನ್ಯ ಸಾಗರವನ್ನು ದಾಟಿದರು. ಕೃಷ್ಣನ ಅನುಗ್ರಹದಿಂದ ಸೇನಾಸಾಗರವನ್ನೆ ಕರುವಿನ ಹೆಜ್ಜೆಯಿಂದಾದ ತಗ್ಗಿನಂತೆ ಮಾಡಿಕೊಂಡು ಅಂದರೆ ಅನಾಯಾಸವಾಗಿ ದಾಟಿದರು—

ಮಯೈವೈತೇ ನಿಹತಾಃ ಪೂರ್ವಮೇವ ।
ನಿಮಿತ್ತ ಮಾತ್ರಂ ಭವ ಸವ್ಯಸಾಚಿನ್ ॥

(ಗೀ.೧೧.೩೩)

ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ
ಕರ್ಣಂ ತಥಾನ್ಯಾನಪಿ ಯೋಧವೀರಾನ್ ।

ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ
ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥ (ಗೀ.೧೧.೩೪)
'ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಚ್ಯುತ'

ಎಂದು ಅರ್ಜುನನು ತನ್ನ ರಥವನ್ನು ಎರಡು ಸೇನೆಗಳ ನಡುವೆ ತಂದು ನಿಲ್ಲಿಸಲು ಕೇಳಿಕೊಂಡು ಭೀಷ್ಮದ್ರೋಣಾದಿ ತಿಮಿಂಗಿಲಗಳಿಂದ ಕೂಡಿದ ಕೌರವ ಸೇನಾ ಸಾಗರವನ್ನು ನೋಡಿ ಯುದ್ಧವಿಮುಖನಾದಾಗ ಶ್ರೀಕೃಷ್ಣ ಎರಡೂ ಸೈನ್ಯಗಳನ್ನು ನೋಡಿ ಕಣ್ಣಿನಿಂದಲೇ ಎಲ್ಲ ಆಯುಷ್ಯವನ್ನು ಹೀರಿದ. ಆಗಲೆ ಎಲ್ಲರೂ ಪೂರ್ತಿ ಕ್ಷೀಣಾಯುಷಿಗಳಾದರು. ಇನ್ನು ಅರ್ಜುನ! ಅವರ ಮರಣಕ್ಕೆ ನೀನು ನಿಮಿತ್ತಮಾತ್ರವಾಗುತ್ತಿ, ನನ್ನಿಂದ ಮೊದಲೆ ಹತರಾಗಿ ಹೋದವರಂತೆ ಇರುವ ಅವರನ್ನು ನೀನು ಸುಲಭವಾಗಿ ಕೊಲ್ಲಬಲ್ಲೆ. ಸೈನ್ಯಸಾಗರ ನಿನಗೆ ಕರುವಿನ ಹೆಜ್ಜೆಯ ತಗ್ಗಿನಂತೆ ಅನಾಯಾಸ ದಾಟಲು ಶಕ್ಯವಾಗುವುದೆಂದು ಶ್ರೀಕೃಷ್ಣ ಹೇಳಿದ್ದಾನೆ.

ಅದರಿಂದ 'ಸೇನಾಸಾಗರವು ಕರುವಿನ ಹೆಜ್ಜೆಯ ತಗ್ಗಿನಂತಾದರೆ ಅದನ್ನು ದಾಟಲು ಒಂದು ನೌಕೆ ಬೇಕಾಗುವುದೆ? ಅದರಲ್ಲಿಯೂ ಶ್ರೀಕೃಷ್ಣ ನೆಂಬ ನೌಕೆ ಏಕೆ?' ಎಂದು ಕುಚೋದ್ಯ ಮಾಡಲು ಅವಕಾಶವಿಲ್ಲ. ಶ್ರೀಕೃಷ್ಣನೆಂಬ ನೌಕೆ ಯಿಂದಲೇ ಪಾಂಡವರು ಶ್ರೀಕೃಷ್ಣನ ಕಣ್ಣನೋಟದಿಂದ ಕ್ಷೀಣಾಯುಷಿಯಾದ ಸೇನಾಸಾಗರವನ್ನು ಅನಾಯಾಸ ದಾಟಿದ್ದರು. ಎಷ್ಟು ಅನಾಯಾಸ ದಾಟಿದ ರೆಂದರೆ ಕರುವಿನ ಹೆಜ್ಜೆಯ ತಗ್ಗನ್ನು ಕಾಲಿಂದಲೆ ದಾಟುವಂತೆ ಅನಾಯಾಸ ದಿಂದ' ಎಂದು ಗ್ರಹಿಸಬೇಕು. ಪಾಂಡವರಿಗೆ ಜಯ ತಂದು ಕೊಟ್ಟಿದ್ದು ಶ್ರೀಕೃಷ್ಣನ ಲೀಲೆ, ಲೀಲಾ ಮಾತ್ರದಿಂದ ಎಂಥ ಕಠಿನ ಪರಿಸ್ಥಿತಿಯಲ್ಲಿಯೂ ಭಗವಂತ ಭಕ್ತನನ್ನು ಕಾಪಾಡುತ್ತಾನೆ. ಪ್ರಕೃತ ಮುಮುಕ್ಷುಗಳಿಗೆ ದೊಡ್ಡ ವೈರಿಗಳೆಂದರೆ ಅವರ ಇಂದ್ರಿಯಗಳೆ. ಅವು ಬ್ರಹ್ಮನ ಸೃಷ್ಟಿಯಲ್ಲಿ ಸದಾ ಬಹಿರ್ಮುಖ ವಾಗಿರುತ್ತವೆ. ಹರಿಧ್ಯಾನ ವಿರೋಧಿಗಳಾಗಿವೆ. ಅವುಗಳನ್ನು ಗೆಲ್ಲಬೇಕಾದರೆ ಕೌರವ ಸೇನಾ ಸಾಗರವನ್ನು ಪಾಂಡವರಿಂದ ನಾಶಪಡಿಸಿದ ಶ್ರೀಕೃಷ್ಣನನ್ನೇ ನೆನೆಯಬೇಕು. ಅದರಿಂದ ಕೃಷ್ಣನ ಲೀಲೆಗಳನ್ನು ಹೇಳಿರಿ ಎಂದು ರಾಜ ಕೇಳಿಕೊಳ್ಳುತ್ತಿದ್ದಾನೆ.

-೪೦-

**ಅಶ್ವತ್ಥಾಮಾಸ್ತ್ರದಿಂದ ಪಾರಾದೆನೆಂದು ಅವರ**
**ಅಪರಾವತಾರ ಶುಕರಲ್ಲಿ ಹೇಳುತ್ತಾನೆ ಪರೀಕ್ಷಿತ!**

ದ್ರೌಣ್ಯಸ್ತ್ರ ವಿಪ್ಲುಷ್ಟಮಿದಂ ಮದಂಗಂ
ಸಂತಾನಬೀಜಂ ಕುರು ಪಾಂಡವಾನಾಂ ।
ಜುಗೋಪ ಕುಕ್ಷಿಂಗತ ಆತ್ತಚಕ್ರೋ
ಮಾತುಶ್ಚ ಮೇ ಯಃ ಶರಣಂ ಗತಾಯಾಃ ॥

(ಭಾ.೧೦.೧.೬)

ಮುಮುಕ್ಷುಣಾ ಮುಖ್ಯತಃ ಸಂಪಾದ್ಯಂ ದ್ವಯಮೇವ । ಭಗವತಿ ರತಿಃ । ಅರತಿಃ ಅನ್ಯತ್ರೇತಿ । ತತ್ರಾನ್ಯತ್ರಾರತಿಃ ಕಥಂ ಸ್ಯಾದಿತಿ ಪೃಷ್ಟಂ ಪೂರ್ವತ್ರ । ಅತ್ರ ಪುನರ್ಭಗವತಿ ರತಿಃ ಕಥಮಿತಿ ಭಾವೇನ ಸ್ವಸ್ಯೈವೋಪಕೃತಿಕರ್ತೃತಯಾ ತಂ ಸ್ತೌತಿ ॥ ದ್ರೌಣೀತಿ ॥ ದ್ರೌಣೇರಶ್ವತ್ಥಾಮ್ನೋಽಸ್ತ್ರೇಣ ವಿಪ್ಲುಷ್ಟಂ ದಹ್ಯಮಾನಂ । ಕುರೂಣಾಂ ತದ್ವಂಶ್ಯಾನಾಂ ಪಾಂಡವಾನಾಂ ತದ್ವಿಶೇಷಾಣಾಂ । ಪಾಂಡವಾನಾಂ ಕುರುತ್ವೇಽಪಿ ಗೋಬಲೀವರ್ದನ್ಯಾಯೇನ ಸಾಮಾನ್ಯವಿಶೇಷಭಾವಮಾಶ್ರಿತ್ಯ ಸಜಾತೀಯವೈಶಿಷ್ಟ್ಯಕಥನಾಯ ಪೃಥಗ್ವ್ಯವಹಾರ ಇತಿ ಜ್ಞೇಯಂ । ಏವಮತ್ರೈವ ಸ್ಥಾನಾಂತರೇಽಪಿ—

''ತೇ ಸಮೇತ್ಯ ಕುರುಕ್ಷೇತ್ರೇ ರಾಜಾನಃ ಕುರುಪಾಂಡವಾಃ ।
ಸ್ಯಮಂತಪಂಚಕೇ ಚಕ್ರವ್ಯೂಹಮುದ್ಯತಿ ಭಾಸ್ಕರೇ ॥

ಅಕ್ಷೌಹಿಣ್ಯಃ ಕೌರವಾಣಾಮೇಕಾದಶ ದುರಾತ್ಮನಾಂ ।
ಸಪ್ತ ಪಾಂಡುಸುತಾನಾಂ ಚ ಕರ್ಶಿತಾನಾಂ ವನೇ ಭೃಶಮಿ''ತಿ ॥

ಸಂತತೇರ್ಮೂಲಭೂತಂ । ಇದಂ ದೃಶ್ಯಮಾನಂ ಮಮ ಶರೀರಂ । ಮೇ ಮಾತುಃ ಕುಕ್ಷಿಂ ಗತಃ ಆತ್ತಚಕ್ರಸ್ಸನ್ ಸಂರಕ್ಷಿತವಾನ್ । ತಥಾ ಪಾಂಡವಾನಾಂ ಪಂಚಾನಾಂ ಶರೀರಂ ಚ । ತಥಾ ಸ್ವಾತ್ಮಾನಂ ಶರಣಂ ಪ್ರಾಪ್ತಾಯಾ ಮೇ ಮಾತುಶ್ಚ ಶರೀರಂ ತಸ್ಯೇತಿ । ಯಥಾಹುಃ—

''ಗಂತುಂ ಕೃತಮತಿರ್ಬ್ರಹ್ಮನ್ ದ್ವಾರಕಾಂ ರಥಮಾಸ್ಥಿತಃ ।
ಉಪಲೇಭೇಽಭಿಧಾವಂತೀಮುತ್ತರಾಂ ಭಯವಿಹ್ವಲಾಂ ॥

ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ
ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥ (ಗೀ.೧೧.೩೪)

'ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಚ್ಯುತ'

ಎಂದು ಅರ್ಜುನನು ತನ್ನ ರಥವನ್ನು ಎರಡು ಸೇನೆಗಳ ನಡುವೆ ತಂದು ನಿಲ್ಲಿಸಲು ಕೇಳಿಕೊಂಡು ಭೀಷ್ಮದ್ರೋಣಾದಿ ತಿಮಿಂಗಿಲಗಳಿಂದ ಕೂಡಿದ ಕೌರವ ಸೇನಾ ಸಾಗರವನ್ನು ನೋಡಿ ಯುದ್ಧವಿಮುಖನಾದಾಗ ಶ್ರೀಕೃಷ್ಣ ಎರಡೂ ಸೈನ್ಯಗಳನ್ನು ನೋಡಿ ಕಣ್ಣಿನಿಂದಲೇ ಎಲ್ಲ ಆಯುಷ್ಯವನ್ನು ಹೀರಿದ. ಆಗಲೆ ಎಲ್ಲರೂ ಪೂರ್ತಿ ಕ್ಷೀಣಾಯುಷಿಗಳಾದರು. ಇನ್ನು ಅರ್ಜುನ! ಅವರ ಮರಣಕ್ಕೆ ನೀನು ನಿಮಿತ್ತಮಾತ್ರವಾಗುತ್ತಿ, ನನ್ನಿಂದ ಮೊದಲೆ ಹತರಾಗಿ ಹೋದವರಂತೆ ಇರುವ ಅವರನ್ನು ನೀನು ಸುಲಭವಾಗಿ ಕೊಲ್ಲಬಲ್ಲೆ. ಸೈನ್ಯಸಾಗರ ನಿನಗೆ ಕರುವಿನ ಹೆಜ್ಜೆಯ ತಗ್ಗಿನಂತೆ ಅನಾಯಾಸ ದಾಟಲು ಶಕ್ಯವಾಗುವುದೆಂದು ಶ್ರೀಕೃಷ್ಣ ಹೇಳಿದ್ದಾನೆ.

ಆದರಿಂದ 'ಸೇನಾಸಾಗರವು ಕರುವಿನ ಹೆಜ್ಜೆಯ ತಗ್ಗಿನಂತಾದರೆ ಅದನ್ನು ದಾಟಲು ಒಂದು ನೌಕೆ ಬೇಕಾಗುವುದೆ? ಅದರಲ್ಲಿಯೂ ಶ್ರೀಕೃಷ್ಣ ನೆಂಬ ನೌಕೆ ಏಕೆ?' ಎಂದು ಕುಚೋದ್ಯ ಮಾಡಲು ಅವಕಾಶವಿಲ್ಲ. ಶ್ರೀಕೃಷ್ಣನೆಂಬ ನೌಕೆ ಯಿಂದಲೇ ಪಾಂಡವರು ಶ್ರೀಕೃಷ್ಣನ ಕಣ್ಣನೋಟದಿಂದ ಕ್ಷೀಣಾಯುಷಿಯಾದ ಸೇನಾಸಾಗರವನ್ನು ಅನಾಯಾಸ ದಾಟಿದ್ದರು. ಎಷ್ಟು ಅನಾಯಾಸ ದಾಟಿದ ರೆಂದರೆ ಕರುವಿನ ಹೆಜ್ಜೆಯ ತಗ್ಗನ್ನು ಕಾಲಿಂದಲೆ ದಾಟುವಂತೆ ಅನಾಯಾಸ ದಿಂದ' ಎಂದು ಗ್ರಹಿಸಬೇಕು. ಪಾಂಡವರಿಗೆ ಜಯ ತಂದು ಕೊಟ್ಟಿದ್ದು ಶ್ರೀಕೃಷ್ಣನ ಲೀಲೆ, ಲೀಲಾ ಮಾತ್ರದಿಂದ ಎಂಥ ಕಠಿನ ಪರಿಸ್ಥಿತಿಯಲ್ಲಿಯೂ ಭಗವಂತ ಭಕ್ತನನ್ನು ಕಾಪಾಡುತ್ತಾನೆ. ಪ್ರಕೃತ ಮುಮುಕ್ಷುಗಳಿಗೆ ದೊಡ್ಡ ವೈರಿಗಳೆಂದರೆ ಅವರ ಇಂದ್ರಿಯಗಳೆ. ಅವು ಬ್ರಹ್ಮನ ಸೃಷ್ಟಿಯಲ್ಲಿ ಸದಾ ಬಹಿರ್ಮುಖ ವಾಗಿರುತ್ತವೆ. ಹರಿಧ್ಯಾನ ವಿರೋಧಿಗಳಾಗಿವೆ. ಅವುಗಳನ್ನು ಗೆಲ್ಲಬೇಕಾದರೆ ಕೌರವ ಸೇನಾ ಸಾಗರವನ್ನು ಪಾಂಡವರಿಂದ ನಾಶಪಡಿಸಿದ ಶ್ರೀಕೃಷ್ಣನನ್ನೇ ನೆನೆಯಬೇಕು. ಆದರಿಂದ ಕೃಷ್ಣನ ಲೀಲೆಗಳನ್ನು ಹೇಳಿರಿ ಎಂದು ರಾಜ ಕೇಳಿಕೊಳ್ಳುತ್ತಿದ್ದಾನೆ.

—೪೦—

**ಅಶ್ವತ್ಥಾಮಾಸ್ತ್ರದಿಂದ ಪಾರಾದೆನೆಂದು ಅವರ**
**ಅಪರಾವತಾರ ಶುಕರಲ್ಲಿ ಹೇಳುತ್ತಾನೆ ಪರೀಕ್ಷಿತ!**

ದ್ರೌಣ್ಯಸ್ತ್ರ ವಿಪ್ಲುಷ್ಟಮಿದಂ ಮದಂಗಂ
ಸಂತಾನಬೀಜಂ ಕುರು ಪಾಂಡವಾನಾಂ ।
ಜುಗೋಪ ಕುಕ್ಷಿಂಗತ ಆತ್ತಚಕ್ರೋ
ಮಾತುಶ್ಚ ಮೇ ಯಃ ಶರಣಂ ಗತಾಯಾಃ ॥

(ಭಾ.೧೦.೧.೬)

ಮುಮುಕ್ಷುಣಾ ಮುಖ್ಯತಃ ಸಂಪಾದ್ಯಂ ದ್ವಯಮೇವ । ಭಗವತಿ ರತಿಃ । ಅರತಿಃ ಅನ್ಯತ್ರೇತಿ । ತತ್ರಾನ್ಯತ್ರಾರತಿಃ ಕಥಂ ಸ್ಯಾದಿತಿ ಪೃಷ್ಟಂ ಪೂರ್ವತ್ರ । ಅತ್ರ ಪುನರ್ಭಗವತಿ ರತಿಃ ಕಥಮಿತಿ ಭಾವೇನ ಸ್ವಸ್ಯೈವೋಪಕೃತಿಕರ್ತೃತಯಾ ತಂ ಸ್ತೌತಿ ॥ ದ್ರೌಣೀತಿ ॥ ದ್ರೌಣೇರಶ್ವತ್ಥಾಮ್ನೋಽಸ್ತ್ರೇಣ ವಿಪ್ಲುಷ್ಟಂ ದಹ್ಯಮಾನಂ। ಕುರೂಣಾಂ ತದ್ವಂಶ್ಯಾನಾಂ ಪಾಂಡವಾನಾಂ ತದ್ವಿಶೇಷಾಣಾಂ । ಪಾಂಡವಾನಾಂ ಕುರುತ್ವೇಽಪಿ ಗೋಬಲೀವರ್ದನ್ಯಾಯೇನ ಸಾಮಾನ್ಯವಿಶೇಷಭಾವಮಾಶ್ರಿತ್ಯ ಸಜಾತೀಯವೈಶಿಷ್ಟ್ಯಕಥನಾಯ ಪೃಥಗ್ವ್ಯವಹಾರ ಇತಿ ಜ್ಞೇಯಂ। ಏವಮತ್ರೈವ ಸ್ಥಾನಾಂತರೇಽಪಿ—

''ತೇ ಸಮೇತ್ಯ ಕುರುಕ್ಷೇತ್ರೇ ರಾಜಾನಃ ಕುರುಪಾಂಡವಾಃ ।
ಸ್ಯಮಂತಪಂಚಕೇ ಚಕ್ರವ್ಯೂಹಮುದ್ಯತಿ ಭಾಸ್ಕರೇ ॥

ಅಕ್ಷೌಹಿಣ್ಯಃ ಕೌರವಾಣಾಮೇಕಾದಶ ದುರಾತ್ಮನಾಂ ।
ಸಪ್ತ ಪಾಂಡುಸುತಾನಾಂ ಚ ಕರ್ಶಿತಾನಾಂ ವನೇ ಭೃಶಮಿ''ತಿ ॥

ಸಂತತೇರ್ಮೂಲಭೂತಂ । ಇದಂ ದೃಶ್ಯಮಾನಂ ಮಮ ಶರೀರಂ । ಮೇ ಮಾತುಃ ಕುಕ್ಷಿಂ ಗತಃ ಆತ್ತಚಕ್ರಸ್ಸನ್ ಸಂರಕ್ಷಿತವಾನ್ । ತಥಾ ಪಾಂಡವಾನಾಂ ಪಂಚಾನಾಂ ಶರೀರಂ ಚ । ತಥಾ ಸ್ವಾತ್ಮಾನಂ ಶರಣಂ ಪ್ರಾಪ್ತಾಯಾ ಮೇ ಮಾತುಶ್ಚ ಶರೀರಂ ತಸ್ಯೇತಿ । ಯಥಾಹುಃ—

''ಗಂತುಂ ಕೃತಮತಿರ್ಬ್ರಹ್ಮನ್ ದ್ವಾರಕಾಂ ರಥಮಾಸ್ಥಿತಃ ।
ಉಪಲೇಭೇಽಭಿಧಾವಂತೀಮುತ್ತರಾಂ ಭಯವಿಹ್ವಲಾಂ ॥

ಪಾಹಿ ಪಾಹಿ ಮಹಾಯೋಗಿನ್ ದೇವದೇವ ಜಗತ್ಪತೇ ।
ನಾನ್ಯಂ ತ್ವದಭಯಂ ಪಶ್ಯೇ ಯತ್ರ ಮೃತ್ಯುಃ ಪರಸ್ಪರಂ ॥

ಅಭಿದ್ರವತಿ ಮಾಮೀಶ ಶರಸ್ತಪ್ತಾಯಸೋ ವಿಭೋ ।
ಕಾಮಂ ದಹತು ಮಾಂ ನಾಥ ಮಾ ಮೇ ಗರ್ಭೋ ನಿಪಾತ್ಯತಾಂ ॥

ಉಪಧಾರ್ಯ ವಚಸ್ತಸ್ಯಾ ಭಗವಾನ್ ಭಕ್ತವತ್ಸಲಃ ।
ಅಪಾಂಡವಮಿದಂ ಕರ್ತುಂ ದ್ರೌಣೇರಸ್ತ್ರಮಬುಧ್ಯತ ।
ತರ್ಹ್ಯೇವಾಥ ಭೃಗುಶ್ರೇಷ್ಠ ಪಾಂಡವಾಃ ಪಂಚಸಾಯಕಾನ್ ।
ಆತ್ಮನೋಽಭಿಮುಖಾನ್ ದೀಪ್ತಾನಾಲಕ್ಷ್ಯಾಸ್ತ್ರಾಣ್ಯುಪಾದದುಃ ॥

ವ್ಯಸನಂ ವೀಕ್ಷ್ಯ ತತ್ತೇಷಾಮನನ್ಯ ವಿಷಯಾತ್ಮನಾಂ ।
ಸುದರ್ಶನೇನ ಸ್ವಾಸ್ತ್ರೇಣ ಸ್ವಾನಾಂ ರಕ್ಷಾಂ ವ್ಯಧಾದ್ವಿಭುಃ ।
ಅಂತಸ್ಥಸ್ಸರ್ವ ಭೂತಾನಾಮಾತ್ಮಾ ಯೋಗೇಶ್ವರೋ ಹರಿಃ ।
ಸ್ವಮಾಯಯಾಽಽವೃಣೋದ್ಗರ್ಭಂ ವೈರಾಟ್ಯಾಃ ಕುರುತಂತವೇ ॥

ಯದ್ಯಪ್ಯಸ್ತ್ರಂ ಬ್ರಹ್ಮಶಿರಸ್ತ್ವಮೋಘಂ ಚಾಪ್ರತಿಕ್ರಿಯಂ ।
ವೈಷ್ಣವಂ ತೇಜ ಆಸಾದ್ಯ ಸಮಶಾಮ್ಯದ್ಭೃಗೂದ್ವಹ ॥

ಮಾತುರ್ಗರ್ಭಗತೋ ವೀರಸ್ಸತದಾ ಭೃಗುನಂದನ ।
ದದರ್ಶ ಪುರುಷಂ ಕಶ್ಚಿದ್ದಹ್ಯಮಾನೋಽಸ್ತ್ರತೇಜಸಾ ।
ಅಂಗುಷ್ಠಮಾತ್ರಮಮಲಂ ಸ್ಫುರತ್ಪುರಟಮಾಲಿನಂ ।
ಅಪೀಚ್ಯ ದರ್ಶನಂ ಶ್ಯಾಮಂ ತಡಿದ್ವಾಸಸಮಚ್ಯುತಂ ॥

ಶ್ರೀಮದ್ದೀರ್ಘಚತುರ್ಬಾಹುಂ ತಪ್ತಕಾಂಚನಕುಂಡಲಂ ।
ಕ್ಷತಜಾಕ್ಷಂ ಗದಾಪಾಣಿಮಾತ್ಮನಸ್ಸರ್ವತೋದಿಶಂ ।
ಪರಿಭ್ರಮಂತಮುಲ್ಕಾಭಾಂ ಭ್ರಾಮಯಂತಂ ಗದಾಂ ಮುಹುಃ ।
ಅಸ್ತ್ರತೇಜಃ ಸ್ವಗದಯಾ ನೀಹಾರಮಿವ ಗೋಪತಿಃ ॥

ವಿಧಮಂತಂ ಸನ್ನಿಕರ್ಷೇ ಪರ್ಯೈಕ್ಷತ ಕ ಇತ್ಯಸೌ ।
ವಿಧೂಯ ತದಮೇಯಾತ್ಮಾ ಭಗವಾನ್ ವಿಶ್ವಭುಗ್ವಿಭುಃ ॥

ಮಿಷತೋ ದಶಮಾಸಸ್ಯ ತತ್ರೈವಾಂತರ್ದಧೇ ಹರಿ''ರಿತಿ ॥



**'ಅಂದು ಶ್ರೀಕೃಷ್ಣನು ತನ್ನನ್ನು ಮೊರೆಹೊಕ್ಕ ನನ್ನ ತಾಯಿ ಗರ್ಭಿಣಿ ಉತ್ತರೆಯ ಗರ್ಭವನ್ನು ಚಕ್ರಾದಿ ಆಯುಧಗಳನ್ನು ಹಿಡಿದು ಒಳಹೊಕ್ಕು ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ಕ್ಷಣದಲ್ಲಿ ಸುಟ್ಟು ಹೋಗಲಿದ್ದ ಕುರುಪಾಂಡವ ವಂಶದ ಕುಡಿಯಾದ ನನ್ನ ಶರೀರವನ್ನು ಚಕ್ರದಂತೆ ತಿರುಗುವ ಗದೆಯಿಂದ ಕಾಪಾಡಿದ್ದ. ಬ್ರಹ್ಮಾಸ್ತ್ರದಿಂದ ಸುಟ್ಟುಹೋಗಲಿದ್ದ ಪಂಚಪಾಂಡವರ ಶರೀರ ಗಳನ್ನು ಚಕ್ರದಿಂದ ಕಾಪಾಡಿದ, ಮೊರೆಹೊಕ್ಕ ನನ್ನ ತಾಯಿಯ ಶರೀರವನ್ನೂ ಚಕ್ರದಿಂದ ಕಾಪಾಡಿದ' ಎಂದು ಪರೀಕ್ಷಿತ ಹೇಳುತ್ತಾನೆ.**

ಹಿಂದಿನ ಶ್ಲೋಕಕ್ಕೆ ಅಧ್ಯಾತ್ಮಾರ್ಥ ಹೀಗೆ—ಇಂದ್ರಿಯಜಯವೆಂಬುದು ಸಾಧಕನು ಇಂದ್ರಿಯಗಳೊಂದಿಗೆ ಸತತವಾಗಿ ನಡೆಸುವ ಯುದ್ಧ. ಕೌರವರಲ್ಲಿ ಹನ್ನೊಂದು ಅಕ್ಷೋಹಿಣಿ ಸೈನ್ಯ ಸಾಗರ. ಅದರೊಳಗೆ ತಿಮಿಂಗಿಲದಂತೆ ಭೀಷ್ಮಾದಿಗಳು.

ಸಾಧಕನ ಹೃದಯದ ಕುರುಕ್ಷೇತ್ರದಲ್ಲಿ ಐದು ಜ್ಞಾನೇಂದ್ರಿಯ. ಐದು ಕರ್ಮೇಂದ್ರಿಯ ಮತ್ತು ಮನಸ್ಸೆಂಬ ಹನ್ನೊಂದು ತಿಮಿಂಗಿಲದಂತೆ ನುಂಗುವ ಶತ್ರುಗಳು. ಒಳಗೆ ದೇಹರಥವನ್ನು ಜೀವನಿಗಾಗಿ ನಡೆಸುವ ಬಿಂಬನು ಸಾರಥಿ. ಬಿಂಬನಲ್ಲಿಯೇ ವಿಷಯಭೋಗಸಾಗರದಲ್ಲಿ ತಿಮಿಂಗಿಲದಂತಿರುವ ಹನ್ನೊಂದು ಇಂದ್ರಿಯಗಳನ್ನು ಸಾಧಕನು ಸಮರ್ಪಿಸಬೇಕು. ಆಗ ಸಾರಥಿ ಬಿಂಬನು ಇಂದ್ರಿಯಗಳ ವಿಷಯಗಳ ಆಕರ್ಷಣಶಕ್ತಿಯನ್ನು ದೃಷ್ಟಿ ಮಾತ್ರದಿಂದ ಹೀರಿ ಸಾಧಕನಿಗೆ ಇಂದ್ರಿಯಗಳ ಮೇಲೆ ಜಯ ನೀಡುತ್ತಾನೆ, ಅಂದರೆ ಸಾಧಕನಿಗೆ ವಿಷಯ ವೈರಾಗ್ಯ ನೀಡುತ್ತಾನೆ. ಇಂದ್ರಿಯ ಜಯವನ್ನೂ ನೀಡುತ್ತಾನೆ. ತನ್ನಲ್ಲಿ ಭಕ್ತಿಯನ್ನೂ ನೀಡುತ್ತಾನೆ' ಎಂದು.

ಭಕ್ತಿಯನ್ನು ಭಗವಂತ ಹೇಗೆ ನೀಡುತ್ತಾನೆ ಎಂದರೆ ಪ್ರಕೃತ ಶ್ಲೋಕದಲ್ಲಿ 'ಶ್ರೀಹರಿಯ ಚಕ್ರಾದಿ ಆಯುಧಗಳಿಂದ ತನ್ನನ್ನೂ ತನ್ನ ಮಾತೆಯನ್ನೂ ಪಂಚಪಾಂಡವರನ್ನೂ ಕಾಪಾಡಿದ ಪರಮೋಪಕಾರ ಮಾಡಿದ ಪ್ರೀತಿಯ ಪ್ರಭು' ಎಂದು ಸ್ವಾನುಭವದಿಂದ ಪರೀಕ್ಷಿತನು ಕಂಡುಕೊಂಡು ಮಾಹಾತ್ಮ್ಯಜ್ಞಾನ ಪೂರ್ವಕ ಪರಮ ಪ್ರೇಮರೂಪವಾದ ಭಕ್ತಿಯನ್ನು ಭಗವಂತನಿಂದ ಪಡೆದಿದ್ದಾನೆ ಎಂದು ಹೇಳುತ್ತಿದ್ದಾರೆ.

ದಶಮಸ್ಕಂಧದಲ್ಲಿ ಇದರ ವಿವರ ಹೀಗೆ ಬರುತ್ತದೆ—

'ತೇ ಸಮೇತ್ಯ ಕುರುಕ್ಷೇತ್ರೇ ರಾಜಾನಃ ಕುರು ಪಾಂಡವಾಃ ।
ಸಮಂತಪಂಚಕೇ ಚಕ್ರುರ್ವ್ಯೂಹಮುದ್ಯತಿ ಭಾಸ್ಕರೇ ।
ಅಕ್ಷೌಹಿಣ್ಯಃ ಕೌರವಾಣಾಂ ಏಕಾದಶ ದುರಾತ್ಮನಾಂ ।
ಸಪ್ತ ಪಾಂಡುಸುತಾನಾಂ ಚ ಕರ್ಶಿತಾನಾಂ ವನೇ ಭೃಶಂ ॥'

(ಭಾ.೧೦.೯೭.೧೯,೨೦)

'ಕುರು ಪಾಂಡವರು ಕುರುಕ್ಷೇತ್ರದಲ್ಲಿ ಸೇರಿ ಸಮಂತ ಪಂಚಕದಲ್ಲಿ ಸೂರ್ಯೋದಯಕಾಲದಲ್ಲಿ ವ್ಯೂಹ ರಚಿಸಿ ನಿಂತರು. ದುರಾತ್ಮರಾದ ಕೌರವರ ಸೈನ್ಯ ಹನ್ನೊಂದು ಅಕ್ಷೋಹಿಣೆಯಷ್ಟಿತ್ತು. ವನವಾಸದಲ್ಲಿ ಬಹಳ ಕ್ಲೇಶಪಟ್ಟಿದ್ದ ಪಾಂಡವರ ಸೈನ್ಯವು ಕೇವಲ ಏಳು ಅಕ್ಷೋಹಿಣೆಯಷ್ಟಿತ್ತು'.

ಇಲ್ಲಿ 'ಕುರು ಪಾಂಡವ' ಎಂದರೆ ಕೌರವರು ಮತ್ತು ಪಾಂಡವರು ಎಂದರ್ಥವಲ್ಲ. ಆದರೆ ಪಾಂಡವರೂ ಕುರುವಂಶಜರಾದ್ದರಿಂದ ಕೌರವರೆ. ಆದ್ದರಿಂದ 'ಕೌರವರು' ಎಂದು. 'ಕೌರವ–ಪಾಂಡವರಿಬ್ಬರನ್ನೂ ಹೇಳಬಹುದು. ಆದರೂ 'ಎಲ್ಲ ಕೌರವರಲ್ಲಿ ಪಾಂಡವರೆಂಬ ಕೌರವರು ಶ್ರೇಷ್ಠರು' ಎಂಬ ಅಭಿಪ್ರಾಯದಿಂದ ಪಾಂಡವರನ್ನು 'ಕೌರವ' ಎಂಬ ಸಾಮಾನ್ಯ ಶಬ್ದದಿಂದ ಮಾತ್ರ ಹೇಳದೆ 'ಪಾಂಡವ'ರೆಂದೂ ವಿಶೇಷ ಶಬ್ದದಿಂದ ಕರೆಯುತ್ತಾರೆ. ಇದೇರೀತಿ 'ಗೋ ಬಲೀವರ್ದ' ಶಬ್ದವೂ ಗೋವುಗಳಲ್ಲಿ ಬಲಿಷ್ಠ ಶ್ರೇಷ್ಠವಾದ ಬಲೀವರ್ದ, ಅಂದರೆ ಎತ್ತು. ಎಂಬ ಅಭಿಪ್ರಾಯದಿಂದ ಗೋಪದದಿಂದಲೇ ಹೇಳಬಹುದಾದ ಎತ್ತುಗಳನ್ನು ಬಲೀವರ್ದ ಎಂಬ ವಿಶೇಷ ಶಬ್ದದಿಂದಲೂ ಗೋವುಗಳೊಂದಿಗೆ ಹೇಳುತ್ತಾರೆ. 'ಗೋವುಗಳಲ್ಲಿ ಶ್ರೇಷ್ಠವಾದ ಬಲೀವರ್ದಗಳು ಎತ್ತುಗಳು' ಎಂದು. ವಸ್ತುತಃ ಎತ್ತುಗಳೂ ಹಸುಗಳಂತೆ ಗೋವುಗಳೆ. ಇದನ್ನು ಗೋಬಲೀವರ್ದ ನ್ಯಾಯ ಅಥವಾ ಕುರುಪಾಂಡವ ನ್ಯಾಯ ಎನ್ನುತ್ತಾರೆ.

ಅಶ್ವತ್ಥಾಮಾಸ್ತ್ರ ಪರೀಕ್ಷಿತನನ್ನು ಕೊಲ್ಲಲು ಹೊರಟಿದ್ದು ದುರ್ಯೋಧನನ ಹಾಲು ಕುಡಿದಿದ್ದರಿಂದಲ್ಲ, ಕೇವಲ ದುರ್ಯೋಧನನ ಪಾಪಸಾಧನೆಗಾಗಿ ಎಂದು ಲಕ್ಷಾಲಂಕಾರದಲ್ಲಿ ವಾದಿರಾಜರು ಹೇಳುತ್ತಾರೆ. ಶುಕಶಾಸ್ತ್ರವು ಅದೇ ಪರೀಕ್ಷಿತನನ್ನು ಪ್ರೀತಿಯಿಂದ ಮರಣದಿಂದ ಮುಕ್ತಗೊಳಿಸಿ, ಅಮೃತತ್ವವನ್ನು ಹೊಂದಿಸಲು ಯತ್ನಿಸುವುದು ಇದಕ್ಕೆ ಸಾಕ್ಷಿ. ಅದರಿಂದ ಅಶ್ವತ್ಥಾಮಾಸ್ತ್ರದಿಂದ

ಪರೀಕ್ಷಿತನನ್ನು ಶ್ರೀಕೃಷ್ಣ ರಕ್ಷಿಸಿದ ಈ ಅಂಶ ಪ್ರಥಮಸ್ಕಂಧದಲ್ಲಿ ವಿಸ್ತಾರವಾಗಿ ಬರುತ್ತದೆ. ಸೂತರು ಶೌನಕರಿಗೆ ಹೇಳುತ್ತಾರೆ—

ಗಂತುಂ ಕೃತಮತಿರ್ಬ್ರಹ್ಮನ್ ದ್ವಾರಕಾಂ ರಥಮಾಸ್ಥಿತಃ ।
ಉಪಲೇಭೇಽಭಿಧಾವಂತೀಂ ಉತ್ತರಾಂ ಭಯ ವಿಹ್ವಲಾಂ ।
ಪಾಹಿಪಾಹಿ ಮಹಾಬಾಹೋ ದೇವದೇವ ಜಗತ್‌ಪತೇ ।
ನಾನ್ಯಂ ತ್ವದಭಯಂ ಪಶ್ಯೇ ಯತ್ರ ಮೃತ್ಯುಃ ಪರಸ್ಪರಂ ।
ಅಭಿದ್ರವತಿ ಮಾಮೀಶ ಶರಸ್ತಪ್ತಾಯಸೋ ವಿಭೋ ।
ಕಾಮಂ ದಹತು ಮಾಂ ನಾಥ ಮಾ ಮೇ ಗರ್ಭೋ ನಿಪಾತ್ಯತಾಂ ॥

'ದ್ವಾರಕೆಗೆ ಎಂದು ಹೊರಟು ಪಾಂಡವರಿಂದ ಬೀಳ್ಕೊಂಡು ಶ್ರೀಕೃಷ್ಣ ರಥವೇರಿದ. ಅಷ್ಟರಲ್ಲಿ ಉತ್ತರೆ ಭಯವಿಹ್ವಲತೆಯಿಂದ ಕೃಷ್ಣನ ಬಳಿಗೆ ಓಡೋಡಿ ಬಂದಳು.

'ಕಾಪಾಡು ಕಾಪಾಡು ಕೃಷ್ಣ ಮಹಾಯೋಗಿ, ದೇವದೇವ ಜಗನ್ನಾಥ! ನಿನ್ನ ಹೊರತು ನನಗಿನ್ನಾರು ಆಭಯ ನೀಡುವುದಿಲ್ಲ. ಎಲ್ಲರೂ ಪರಸ್ಪರ ಹೊಡೆದಾಡಿ ಸಾಯುವವರೆ.

'ಪ್ರಭು, ಕಾದ ಕಬ್ಬಿಣದ ಬಾಣ ನನ್ನನ್ನು ಬೆನ್ನಟ್ಟಿ ಬರುತ್ತಿದೆ. ನನ್ನನ್ನಾದರೂ ಅದು ಸುಡಲಿ. ನನ್ನ ಗರ್ಭದಲ್ಲಿರುವ ಶಿಶುವಿಗೆ ಏನು ಅಪಾಯ ಮಾಡದಿರಲಿ!

ಉಪಧಾರ್ಯ ವಚಸ್ತಸ್ಯಾ ಭಗವಾನ್ ಭಕ್ತ ವತ್ಸಲಃ ।
ಅಪಾಂಡವಮಿದಂ ಕರ್ತುಂ ದ್ರೌಣೇಃ ಶಸ್ತ್ರಂ ಅಬುಧ್ಯತ ।
ತರ್ಹ್ಯೇವಾಥ ಭೃಗುಶ್ರೇಷ್ಠ ಪಾಂಡವಾಃ ಪಂಚಸಾಯಕಾನ್ ।
ಆತ್ಮನೋಽಭಿಮುಖಾನ್ ದೀಪ್ತಾನ್ ಆಲಕ್ಷ್ಯಾಸ್ತ್ರಾಣ್ಯುಪಾದದುಃ ।
ವ್ಯಸನಂ ವೀಕ್ಷ್ಯ ತತ್ ತೇಷಾಂ ಅನನ್ಯ ವಿಷಯಾತ್ಮನಾಂ ।
ಸುದರ್ಶನೇನ ಸ್ವಾಸ್ತ್ರೇಣ ಸ್ವಾನಾಂ ರಕ್ಷಾಂ ವ್ಯಧಾದ್ ವಿಭುಃ ॥

'ಉತ್ತರೆಯ ಮೊರೆ ಕೇಳಿ ಭಕ್ತವತ್ಸಲನಾದ ಭಗವಾನ್ ಶ್ರೀಕೃಷ್ಣನು ತಿಳಿದ, 'ಇದು ಅಂದು ಅಶ್ವತ್ಥಾಮನು ಭೂಮಿಯ ಮೇಲೆ ಪಾಂಡವರಿರಕೂಡದೆಂದು ಪ್ರಯೋಗಿಸಿದ್ದ ಬ್ರಹ್ಮಾಸ್ತ್ರ. ತಾನು ಪಾಂಡವರ ಬಳಿ ಇದ್ದಷ್ಟು ಕಾಲ ಸುಮ್ಮನೆ

ದೂರ ನಿಂತಿತ್ತು. ಇದೀಗ ನಾನು ದ್ವಾರಕೆಗೆ ಹೊರಟೆನೆಂದು ತಿಳಿದು ತಿರುಗಿ ಪೀಡಿಸಲು ಬಂದಿದೆ' ಎಂದು.

'ಭೃಗುವಂಶೀಯರಾದ ಶೌನಕರೆ ಕೇಳಿ, ಅದೇ ಸಮಯದಲ್ಲಿ ಪಾಂಡವರೂ ತಮ್ಮ ಬಳಿಗೆ ಜ್ವಲಿಸುವ ಐದು ಬಾಣಗಳು ಬರುವುದನ್ನು ಕಂಡು ಆಯುಧಗಳನ್ನು ಕೈಗೆತ್ತಿಕೊಂಡಿದ್ದರು.

'ಅನನ್ಯಭಾವದಿಂದ ತನ್ನನ್ನು ಆರಾಧಿಸುವವರು ಪಾಂಡವರು ಅವರಿಗೆ ಆಪತ್ತು ಬಂದುದನ್ನು ಕಂಡು ಶ್ರೀಕೃಷ್ಣ ಸುದರ್ಶನ ಚಕ್ರದಿಂದ ಅವರನ್ನು ರಕ್ಷಿಸಿದ.

ಅಂತಸ್ಥಃ ಸರ್ವಭೂತಾನಾಮಾತ್ಮಾ ಯೋಗೇಶ್ವರೋ ಹರಿಃ ।
ಸ್ವಮಾಯಯಾಽಽವೃಣೋದ್ ಗರ್ಭಂ ವೈರಾಟ್ಯಾಃ ಕುರುತಂತವೇ ॥
ಯದ್ಯಪ್ಯಸ್ತ್ರಂ ಬ್ರಹ್ಮಶಿರಸ್ತ್ವಮೋಘಂ ಚಾಪ್ರತಿಕ್ರಿಯಂ ।
ವೈಷ್ಣವಂ ತೇಜ ಆಸಾದ್ಯ ಸಮಶಾಮ್ಯದ್ ಭೃಗೂದ್ವಹ ॥

'ಸರ್ವಾಂತರ್ಯಾಮಿ ಶ್ರೀಕೃಷ್ಣ ಪಾಂಡವರ ಸಂತತಿಯನ್ನು ಉಳಿಸಲು ಉತ್ತರೆಯ ಗರ್ಭವನ್ನು ಬ್ರಹ್ಮಾಸ್ತ್ರ ಸುಡದಂತೆ ಸುತ್ತಲು ಆವರಿಸಿ ನಿಂತ.

'ಯದ್ಯಪಿ ಬ್ರಹ್ಮಾಸ್ತ್ರವು ಎಂದೂ 'ಮೋಘ'ವಾಗುವುದಿಲ್ಲ ವ್ಯರ್ಥ ಆಗುವುದಿಲ್ಲ 'ಅಮೋಘವೆ. ಏಕೆಂದರೆ ಆ ಅಸ್ತ್ರಕ್ಕೆ ಪ್ರತ್ಯಸ್ತ್ರವಿಲ್ಲ. ಆದರೂ ವಿಷ್ಣುವಿನ ತೇಜಸ್ಸು ಗರ್ಭವನ್ನಾವರಿಸಿದ್ದರಿಂದ ಅದರ ಮುಂದೆ ಉರಿಯದೆ ಅದು ಶಾಂತವಾಯಿತು.

ಮಾತುರ್ಗರ್ಭಗತೋ ವೀರಃ ಸ ತದಾ ಭೃಗುನಂದನ ।
ದದರ್ಶ ಪುರುಷಂ ಕಂಚಿತ್ ದಹ್ಯಮಾನೋಽಸ್ತ್ರ ತೇಜಸಾ ॥
ಅಂಗುಷ್ಠಮಾತ್ರಮಮಲಂ ಸ್ಫುರತ್ ಪುರಟಮೌಳಿನಂ ।
ಅಪೀಚ್ಯದರ್ಶನಂ ಶ್ಯಾಮಂ ತಟಿದ್ವಾಸಸಮದ್ಭುತಂ ॥
ಶ್ರೀಮದ್ದೀರ್ಘ ಚತುರ್ಬಾಹುಂ ತಪ್ತಕಾಂಚನ ಕುಂಡಲಂ ।
ಕ್ಷತಜಾಕ್ಷಂ ಗದಾಪಾಣಿಂ ಆತ್ಮನಃ ಸರ್ವತೋ ದಿಶಂ ॥
ಪರಿಭ್ರಮಂತಮುಲ್ಕಾಭಾಂ ಭ್ರಾಮಯಂತಂ ಗದಾಂ ಮುಹುಃ ।

ಅಸ್ತ್ರತೇಜಃ ಸ್ವಗದಯಾ ನೀಹಾರಮಿವ ಗೋಪತಿಃ ।
ವಿಧಮಂತಂ ಸನ್ನಿಕರ್ಷೇ ಪರ್ಯೈಕ್ಷತ ಕ ಇತ್ಯಸೌ ॥
ವಿಧೂಯ ತದಮೇಯಾತ್ಮಾ ಭಗವಾನ್ ಧರ್ಮಗುಬ್‌ವಿಭುಃ ।
ಪಶ್ಯತೋ ದಶಮಾಸ್ಯಸ್ಯ ತತ್ರೈವಾಂತರ್ದಧೇ ಹರಿಃ ॥

(ಭಾ.೧.೧೧.೭-೧೧)

'ತಾಯಿಯ ಗರ್ಭದಲ್ಲಿರುವಾಗಲೆ ವೀರ ಪರೀಕ್ಷಿತನು ಬ್ರಹ್ಮಾಸ್ತ್ರದಿಂದ ತನ್ನನ್ನು ರಕ್ಷಿಸುತ್ತ ಒಬ್ಬ ವ್ಯಕ್ತಿ ತನ್ನ ಸುತ್ತಲೂ ತಿರುಗುತ್ತಿದ್ದುದನ್ನು ಕಂಡಿದ್ದ. ಆ ವ್ಯಕ್ತಿ ಶ್ರೀಕೃಷ್ಣನೇ. ಹದಿನಾರು ವಯಸಿನವನಂತೆ ಕಂಡರೂ ಗಾತ್ರದಲ್ಲಿ ಹೆಬ್ಬೆಟ್ಟಿನಷ್ಟಿದ್ದ. ನೀಲವರ್ಣದವನು ನಸುಗೆಂಪು ಕಣ್ಣಿನವರು ಪೀತಾಂಬರಧಾರಿ ಚಿನ್ನದ ಕಿರೀಟ ಕುಂಡಲಗಳನ್ನು ಧರಿಸಿದ್ದ. ಚತುರ್ಭುಜ ಅಜಾನುಬಾಹು ಗದಾಪಾಣಿ ಉಲ್ಕೆಯಂತೆ ಹೊಳೆವ ಗದೆಯನ್ನು ಚಕ್ರದಂತೆ ತಿರುಗಿಸುತ್ತ ತಾನು ತಿರುಗುತ್ತಿದ್ದ. ಸೂರ್ಯನು ಮಂಜನ್ನು ತಡೆಯುವಂತೆ ಅಸ್ತ್ರತೇಜಸನ್ನು ಅವನ ಗದೆ ತಡೆಯುತ್ತಿತ್ತು.

ಯಾರಿವನು? 'ಕಃ ಅಸೌ?' 'ಅಸೌ ಕಃ' ಪ್ರಾಣನಲ್ಲಿರುವ ಆನಂದಮಯ ಪರಮಾತ್ಮನೆ! ಎಂದು ಪರೀಕ್ಷಿತನು ಪರೀಕ್ಷೆ ಮಾಡಿ ಗರ್ಭದಲ್ಲಿರುವಾಗಲೇ ತಿಳಿದುಕೊಂಡ, ಮಹಾತ್ಮ.

ಪರೀಕ್ಷೆ ಮಾಡಿದ್ದರಿಂದ ಪರೀಕ್ಷಿತನೆಂದೇ ಪ್ರಖ್ಯಾತನಾದ. ವಿಷ್ಣುವಿನಿಂದ ರಕ್ಷಿತನಾದ್ದರಿಂದ 'ವಿಷ್ಣುರಾತ' ಎಂದೂ ಹೆಸರು.

ಗರ್ಭದಲ್ಲಿ ಹತ್ತು ತಿಂಗಳಕಾಲ ಅವನನ್ನು ಕಾಪಾಡಿ, ಒಮ್ಮೆ ಅವನು ನೋಡುತ್ತಿದ್ದಂತೇ ಶ್ರೀಕೃಷ್ಣನು ಅಂತರ್ಧಾನನಾದ. ಅಶ್ವತ್ಥಾಮನ ಬ್ರಹ್ಮಾಸ್ತ್ರವೂ ಅವನಿಗೆ ಪ್ರಿಯವಾಗಿದ್ದರಿಂದ ಅಮೋಘವಾದ ಆ ಅಸ್ತ್ರವೂ ತನ್ನ ಕಾರ್ಯವನ್ನು ಮಾಡಲಿ ಎಂದು ಅವಕಾಶ ನೀಡಿದ. ಬಳಿಕ ಪ್ರಸವ ಕಾಲದಲ್ಲಿ ಪ್ರಿಯ ಶಿಶುವನ್ನು ಶ್ರೀಕೃಷ್ಣನೇ ತಿರುಗಿ ಬದುಕಿಸಿದ.



—೪೧—

**ಬಿಂಬರೂಪ–ಕಾಲರೂಪಗಳು**

ವೀರ್ಯಾಣಿ ತಸ್ಯಾಖಿಲದೇಹ ಭಾಜಾಂ
ಅಂತರ್ಬಹಿಃ ಪೂರುಷ ಕಾಲ ರೂಪೈಃ ।
ಪ್ರಯಚ್ಛತೋ ಮೃತ್ಯುಮನಾಮಯಂ ಚ
ಮಾಯಾಮನುಷ್ಯಸ್ಯ ವದಸ್ವ ವಿದ್ವನ್ ॥ (ಭಾ.೧೦.೧.೭)

ನ ಕೇವಲಂ ಮಮ ಮಾತುಃ ಪೂರ್ವಜಾನಾಂ ಮಮ ಚೇತಿ ತ್ರಯಾಣಾಮೇವ ತೇನೋಪಕಾರಃ ಕೃತಃ। ಕಿಂತು ದೇಹಧಾರಿಣಾಂ ಸರ್ವೇಷಾಮಪಿ। ನನು ಸತ್ಯಂ ತ್ರಯಾಣಾಮುಪಕಾರಸ್ಯ ಕರ್ತೇತಿ। ತಸ್ಯ ತ್ವಯೈವೋದಿತತ್ವಾತ್ । ಸರ್ವೇಷಾಮುಪಕಾರಸ್ತು ಕೃಷ್ಣೇನ ಕೃತ ಇತಿ ಕಥಂ। ತಸ್ಯಾದರ್ಶನಾತ್ ಇತ್ಯತಃ ಕೃಷ್ಣೋ ನಾಮ ನಾಸ್ಮತ್ಸಂಬಂಧೀ ಕಶ್ಚನ ಪುರುಷಃ ಕಿಂತು ಸರ್ವೇಷಾಂ ದೇಹಧಾರಿಣಾಮಂತಃ ಪುರುಷೋ ನಿಯಾಮಕೋ ಬಹಿಸ್ತು ಯಃ ಕಾಲೋಽಸ್ತಿ ಸ ಏವ । ತಾಭ್ಯಾಂ ಕ್ರಿಯಮಾಣ ಉಪಕಾರಸ್ತು ಸರ್ವೇಷಾಂ ಅನುಭವಸಿದ್ಧ ಇತ್ಯಾಶಯೇನ ತನ್ಮಹಿಮಾನಂ ಪೃಚ್ಛತಿ ॥ **ವೀರ್ಯಾಣಿ ತಸ್ಯೇತಿ** ॥ ಮೃತ್ಯುಂ ಸಂಸಾರಂ ಅನಾಮಯಂ ಮೋಕ್ಷಂ ಚ ಪ್ರಯಚ್ಛತೋ ವೀರ್ಯಾಣೀತ್ಯನೇನ ಬಂಧಮೋಕ್ಷಪ್ರಕಾರಃ ಕಥಮಿತಿ। ದೇಹಭಾಜಾಮಂತಃಪುರುಷ-ರೂಪೈರಿತ್ಯನೇನ ಬಿಂಬರೂಪಂ ಕೀದೃಶಮಿತಿ। ಬಹಿಃ ಕಾಲರೂಪೈರಿತ್ಯನೇನ ತದುಪಯೋಗಃ ಕಥಮಿತಿ ವಿಶೇಷವಿಷಯತ್ವಂ ವಿಸ್ತೃತತ್ವಂ ಚ ಪ್ರಶ್ನಸ್ಯ ಸೂಚಿತಂ ಭವತಿ। ಕೃಷ್ಣ ಈದೃಶಶ್ಚೇದ್ ವೃಷ್ಣಿಷ್ವೇಕೋ ಭೂತ್ವಾ ಇತಸ್ತತಃ ಕಿಮಿತಿ ಸಂಚರತೀತ್ಯತ ಉಕ್ತಂ ಮಾಯಯಾ ಸ್ವೇಚ್ಛಯಾ। ವಸ್ತುತೋಽಮಾನುಷಸ್ಯಾಪಿ ಕಾಪಟ್ಯೇನ ಮನುಷ್ಯಭೂತಸ್ಯೇತಿ । **ಯಥಾಹುಃ—**

ಲೀಲಾ ವಿದಧತಃ ಸ್ವೈರಮೀಶ್ವರಸ್ಯಾತ್ಮ ಮಾಯಯಾ । ೧ ।೧೧ ।೧೮ ।
ಏಕೋನವಿಂಶೇ ವಿಂಶತಿಮೇ ವೃಷ್ಣಿಷು ಪ್ರಾಪ್ಯ ಜನ್ಮನೀ ।
ರಾಮಕೃಷ್ಣಾವಿತಿ ಭುವೋ ಭಗವಾನಹರದ್‌ಭರಂ ॥ (೧.೩.೨೩)

'ಎಲ್ಲ ದೇಹಿಗಳಲ್ಲಿಯೂ ಒಳಗೆ 'ಪುರುಷ'ನಾಮಕ ಬಿಂಬರೂಪದಿಂದಲೂ ಹೊರಗೆ 'ಕಾಲ'ನಾಮಕ ವ್ಯಾಪ್ತರೂಪದಿಂದಲೂ ನಿಂತು ಅವರವರ ಯೋಗ್ಯತಾನುಸಾರ ಸಾಧಕರಿಗೆ ಮೋಕ್ಷಸಾಧನವಾದ 'ಮೃತ್ಯು'ವನ್ನು ಅಂದರೆ

**ಸಂಸಾರವನ್ನು, ಸಿದ್ಧರಿಗೆ ಸಾಧನಫಲವಾದ 'ಅನಾಮಯ'ವನ್ನು ಮುಕ್ತಿಯನ್ನು ಕೊಡುವವನು ಶ್ರೀಕೃಷ್ಣನೊಬ್ಬನೆ. ಇಂಥ ಮಹಾಮಹಿಮನು ಸ್ವೇಚ್ಛೆಯಿಂದ 'ಮಾಯಾಮನುಷ್ಯ' ಸ್ವೇಚ್ಛೆಯಿಂದ ಮನುಷ್ಯನಂತೆ ಕಾಣುವವನು. ಅವನ 'ವೀರ್ಯ'ಗಳನ್ನು ಪ್ರಭಾವಗಳನ್ನು ನನಗೆ ಬಣ್ಣಿಸಿ ಹೇಳಿರಿ' ಎಂದು ಪರೀಕ್ಷಿತನು ಶುಕಮುನಿಯಲ್ಲಿ ಕೇಳಿಕೊಳ್ಳುತ್ತಾನೆ.**

ಹಿಂದಿನ ಪದ್ಯದಲ್ಲಿ ಶ್ರೀಕೃಷ್ಣನು ನಮ್ಮ ಮಾತೆಗೂ ಪೂರ್ವಜರಾದ ಪಾಂಡವರಿಗೂ ಮಾತೆಯ ಗರ್ಭದಲ್ಲಿ ಅಸಹಾಯಕನಾಗಿದ್ದ ನನಗೂ ಪರೋಪಕಾರ ಮಾಡಿದ್ದಾನೆ, ಎಂದು ಹೇಳಿ, ಈ ಪದ್ಯದಲ್ಲಿ, ಶ್ರೀಕೃಷ್ಣನು ಮಾಡುವ ಪರೋಪಕಾರ ನನಗೊಬ್ಬನಿಗೆ ಮಾತ್ರವಲ್ಲ ಎಲ್ಲ ಶರೀರಿಗಳಿಗೂ ಇದು ಅನುಭವವೇದ್ಯವೆಂದು ಹೇಳುತ್ತಾನೆ ಪರೀಕ್ಷಿತ.

'ಪುರುಷೋ ಹೃದಿಸ್ಥಃ ಪರಮಃ ಕಾಲಃ ಸರ್ವಗತೋ ಹರಿಃ' (೩.೨೭.೧೭) ಎಂದು ಭಾಗವತತಾತ್ಪರ್ಯದಲ್ಲಿ ಹೇಳಿದ್ದರಿಂದ ಹೃದಯದಲ್ಲಿ ಬಿಂಬನಾಗಿರುವ ಹರಿ 'ಪುರುಷ'. ಹೊರಗೆ ವ್ಯಾಪಿಸಿರುವ ಹರಿ 'ಕಾಲ' ಎನಿಸುತ್ತಾನೆ. ಪುರುಷನು ಸಾಧನೆ ಮಾಡಬೇಕು. ಅದು ಸಫಲವಾಗಲು ಕಾಲ ಬರಬೇಕು ಎಂದು ಎಲ್ಲರ ಅನುಭವ. ಒಳಗೆ ಪುರುಷನಾಮಕ ಬಿಂಬರೂಪನು ಸಾಧನ ಮಾಡಿಸುತ್ತಾನೆ. ಹೊರಗೆ ಕಾಲನಾಮಕರೂಪದಿಂದ ಅದಕ್ಕೆ ಫಲ ನೀಡುತ್ತಾನೆ.

ಕರ್ಮವು ಯೋಗ್ಯಕಾಲ ಬಂದಾಗಲೆ ಪಕ್ವವಾಗಿ ಫಲಕ್ಕೆ ಕಾರಣವಾಗುತ್ತದೆ, ಹೊರತು ಯಾಗ ಮಾಡಿದೊಡನೆಯೆ ಸ್ವರ್ಗ, ಬ್ರಹ್ಮಹತ್ಯೆ ಮಾಡಿದೊಡನೆಯೆ ನರಕ ಎಂದಿಲ್ಲ ತಾನೆ? ಎರಡು ರೂಪಗಳಿಂದ ಹರಿ ಮಾಡುವ ಉಪಕಾರವು ಎಲ್ಲ ಜೀವರಿಗೂ ಉಂಟು. ಅದರಿಂದ ಅವರಿಗೆ ಭಕ್ತಿ ಬರುತ್ತದೆ, ಭಕ್ತಿ ನೀಡುತ್ತಾನೆ ಶ್ರೀಹರಿ.



—೪೨—

**ಕಲಿಮಲವನ್ನು ಕಳೆಯುವುದು ಶ್ರೀಮದ್‌ಭಾಗವತ**

**ಏವಂ ನಿಶಮ್ಯ ಭೃಗುನಂದನ ಸಾಧುವಾದಂ**
**ವೈಯಾಸಕಿಃ ಸ ಭಗವಾನ್ ಅಥ ವಿಷ್ಣುರಾತಂ ।**

**ಪ್ರತ್ಯರ್ಚ್ಯ ಕೃಷ್ಣಚರಿತಂ ಕಲಿಕಲ್ಮಷಘ್ನಂ**
**ವ್ಯಾಹರ್ತುಮಾರಭತ ಭಾಗವತ ಪ್ರಧಾನಃ ॥**

(ಭಾ.೧೦.೧.೧೪)

**ಏವಂ ಪೃಷ್ಟವತೇ ರಾಜ್ಞೇ ಪ್ರೀತ್ಯಾ ಪ್ರಾಹೇತ್ಯಾಹ ॥ ಏವಮಿತಿ ॥ ಹೇ ಭೃಗುನಂದನ ಶೌನಕ । ಏವಂ ಸಾಧುವಾದಂ ನಿಶಮ್ಯ ವಿಷ್ಣುರಾತಂ ಪರೀಕ್ಷಿತಂ ಪ್ರತ್ಯರ್ಚ್ಯ ಸಂಭಾವ್ಯ । ಪ್ರಧಾನಃ ಗುರುತ್ವಾತ್ ॥ ४೨ ॥**



**ಸೂತರು ನುಡಿದರು—ಭೃಗುವಂಶಜರಾದ ಶೌನಕರೆ, ಹೀಗೆ ಪರೀಕ್ಷಿತನು ಬಿಂಬನ ಸ್ವರೂಪ ಮತ್ತು ಅವನ ವಿಚಿತ್ರ ವ್ಯಾಪಾರಗಳ ಬಗ್ಗೆ ಉಪದೇಶಿಸಿರೆಂದು ಬೇಡಿದಾಗ ಅದನ್ನು ಕೇಳಿ, ಭಗವದ್ ಭಕ್ತಾಗ್ರಣಿ ವ್ಯಾಸಪುತ್ರ ಶ್ರೀಶುಕಮುನಿ ರಾಜನನ್ನು ಅಭಿನಂದಿಸಿ ಕಲಿಮಲವನ್ನು ಕಳೆವ ಪವಿತ್ರವಾದ ಶ್ರೀಕೃಷ್ಣ ಚರಿತ್ರೆಯನ್ನು ಹೇಳಲು ತೊಡಗಿದರು.**



# (೪) ಸಂಕ್ಷಿಪ್ತಶಾಸ್ತ್ರಾರ್ಥ ಪ್ರಕರಣ

## ಪ್ರಕರಣ ಸಾರಾಂಶ

ವೇದವು ಕಲ್ಪವೃಕ್ಷದಂತೆ, ಬೇಡಿದ ಅಮೃತರಸವನ್ನು ಹೊಳೆ ಹೊಳೆಯಾಗಿ ಹರಿಸುತ್ತದೆ. ಹಣ್ಣನ್ನು ಗಿಣಿ ಕಚ್ಚಿದಾಗ ರಸ ಒಸರುತ್ತದೆ. ಭಾಗವತವನ್ನು ಶುಕಮುನಿ ಪ್ರವಚನ ಮಾಡಿದಾಗ ಶಿಷ್ಯನ ಪ್ರಶ್ನೆಗಳಿಗೆ ಗುರುವಿನ ಉತ್ತರ ರೋಚಕವಾಗಿರುತ್ತದೆ. ಶ್ರೋತೃಗಳು ಆನಂದದಿಂದ ಸವಿಯಬಹುದು. ಶ್ರವಣ ಕೀರ್ತನ ಮನನಗಳನ್ನು ಮತ್ತೆ ಮತ್ತೆ ಮಾಡಬೇಕು. ಬೇರೆಯವರಿಂದಲೂ ಮಾಡಿಸಬೇಕು. ಆಗ ಮೋಕ್ಷಾದಿ ಸಕಲ ಪುರುಷಾರ್ಥ ಲಾಭವಿದೆ. ಇದು ಸಕಲ ಶಾಸ್ತ್ರಗಳಿಂದ ಸಿದ್ಧವಾಗಿರುವ ಪ್ರಮೇಯ.

ಸರ್ವೇಶನಾದ ಭಗವಂತನಲ್ಲಿ ಭಕ್ತಿ ಮಾಡುವುದೊಂದೇ ಭಗವಂತನ ಪ್ರಾಪ್ತಿಗೆ ಇರುವ ಮಾರ್ಗ. ಭಕ್ತಿಯೋಗಕ್ಕೆ ಸಾಧನ ವಾಗಿ ಮೂವತ್ತು ಬಗೆಯ ಭಾಗವತಧರ್ಮಗಳಿವೆ. ಅವುಗಳಲ್ಲಿ ಶ್ರವಣಾದಿ ಧರ್ಮ ಶ್ರೇಷ್ಠ. ಶ್ರವಣಾದಿ ಮಾಡುತ್ತಿದ್ದರೆ ಗಂಗಾ ಪ್ರವಾಹದಂತೆ ಭಕ್ತಿಪ್ರವಾಹ ಭಗವಂತನ ಕಡೆಗೇ ಹರಿಯುತ್ತದೆ. ಭಗವಂತನ ಕಡೆಗೇ ಹರಿಯುವುದು, ಮತ್ತು ಅನ್ಯತ್ರ ಹರಿಯದಿರುವುದೇ ಅನ್ಯತ್ರವಿರಕ್ತಿ ಎನಿಸುವುದು.

ಶ್ರವಣಾದಿಗಳನ್ನು ಮಾಡುತ್ತಿದ್ದರೆ ಮನಸು ಹರಿಯಲ್ಲಿ ದುಂಬಿ ಯಂತೆ ಆಸಕ್ತವಾಗುವುದು. ಇದೇ ಮೋಕ್ಷಸಾಧನವಾದ ಜ್ಞಾನ. ಜ್ಞಾನಿಗೆ ತಾನು ಮಾಡುವ ಕರ್ಮಕ್ಕೆ ಮುಖ್ಯಕರ್ತನು ಹರಿಯೇ ಕರ್ಮದಿಂದ ಪೂಜಿತನಾಗುವವನೂ ಹರಿಯೆ ಎಂದು ಹರಿಯನ್ನೇ ವಿಷಯೀಕರಿಸುವ ಜ್ಞಾನವು ಭಾಗವತಧರ್ಮಾನುಷ್ಠಾನ ಮಾತ್ರ ದಿಂದ ಲಭ್ಯ. ಹರಿಯ ಮಂಗಳ ನಾಮಸಂಕೀರ್ತನ ಮಾಡುತ್ತ ಶ್ರವಣಾದಿಗಳನ್ನು ಮಾಡುವಾಗ ಹರಿಯ ಮಂಗಳ ರೂಪಗಳು ತಾವೇ, ಬೇರೆ ಕಡೆಗೆ ಹೋಗುವ ಮನಸ್ಸನ್ನು ಈಚೆಗೆ ಸೆಳೆಯುತ್ತವೆ. ಹೀಗೆ ಶ್ರವಣಾದಿಗಳನ್ನು ಅಭ್ಯಾಸ ಮಾಡಿದರೆ ಅನ್ಯಕರ್ಮ ಮಾಡು

ವಾಗಲೂ ಮನಸು ಹರಿಯ ಕಡೆಗೆ ಅಭ್ಯಾಸ ಬಲದಿಂದ ಓಡುತ್ತದೆ. ಹೀಗೆ ಮನಸ್ಸನ್ನು ಹರಿಯಲ್ಲಿ ಒಂದುಸಲ ನಿಲ್ಲಿಸಿದರೂ ಅವರು ಎಲ್ಲ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡಂತಾಗುವುದರಿಂದ ಎಂದೂ ನರಕ ಶಿಕ್ಷೆಯನ್ನು ಅನುಭವಿಸುವುದಿಲ್ಲ.



—೪೩—

**ಭಾಗವತ ಶ್ರವಣಫಲ ಮನಃಶುದ್ಧಿ**

**ಪಿಬಂತಿ ಯೇ ಭಗವತ ಆತ್ಮನಃ ಸತಾಂ**
**ಕಥಾಮೃತಂ ಶ್ರವಣಪುಟೇಷು ಸಂಭೃತಂ ।**
**ಪುನಂತಿ ತೇ ವಿಷಯವಿದೂಷಿತಾಶಯಂ**
**ವ್ರಜಂತಿ ತಚ್ಚರಣಸರೋರುಹಾಂತಿಕಂ ॥**

(ಭಾ.೨.೨.೪೦)

**ಶ್ರೀಶುಕಃ ಪರೀಕ್ಷಿತೇ ವ್ಯಾಹರ್ತುಮಾರಭತೇತಿ ತೃತೀಯಪ್ರಕರಣಾಂತಿ-ಮಭಾಗೇ ಪ್ರತಿಪಾದಿತಂ। ತತ್ಕಿಂ ಪ್ರತಿಪಾದಿತವಾನಿತ್ಯತಸ್ತದತ್ರ ವದಿಷ್ಯನ್ ತಚ್ಛ್ರವಣಾದೌ ಅಧಿಕಾರಿಣಾಂ ಆದರಜನನಾಯ ಶ್ರೀಹರಿಕಥಾಶ್ರವಣಾದೇಃ ಮಹಾಫಲತ್ವಂ ತಾವದಾಹ॥ ಪಿಬಂತೀತಿ॥ ಸತಾಂ ಸಕಾಶಾತ್ ಸಂಭೃತಂ ಪೂರಿತಂ। ವಿಷಯೈಃ ಗೃಹ್ಯಮಾಣೈಃ ವಿದೂಷಿತಂ ಆಶಯಂ ಅಂತಃಕರಣಂ॥**



ಶುಕಮುನಿ ಪರೀಕ್ಷಿದ್ರಾಜನಿಗೆ ಉಪದೇಶಿಸುತ್ತಾರೆ—

'ಹರಿಕಥಾಮೃತವನ್ನು ಯಾರು ಕಿವಿಯ ಬೊಗಸೆಗಳಿಂದೆತ್ತಿ ಪಾನ ಮಾಡುವರೋ ಅವರು ವಿಷಯ ಭೋಗಕಲುಷಿತವಾದ ಮನಸ್ಸನ್ನು ಶುದ್ಧೀಕರಿಸಿ ಕೊಂಡು ಹರಿಪಾದಕಮಲ ಮೂಲವನ್ನು ಸೇರುತ್ತಾರೆ. ಮುಕ್ತರಾಗುತ್ತಾರೆ' ಎಂದು ಶ್ರೋತೃಗಳಿಗೆ ಆದರ ಹುಟ್ಟುವುದಕ್ಕಾಗಿ ಹರಿಕಥಾಶ್ರವಣದಿಂದ ಮೊದಲಿಗೆ ಮನಃಶುದ್ಧಿರೂಪವಾದ ಮಹಾಫಲವಿದೆ ಎಂದು ಶುಕಮುನಿ ಹೇಳುತ್ತಿದ್ದಾರೆ.

—೪೪—

**ಹರಿಕಥಾಶ್ರವಣದಿಂದ ಜ್ಞಾನಾದಿದ್ವಾರಾ ಮುಕ್ತಿ ಲಭಿಸುತ್ತದೆ**

**ಜ್ಞಾನಂ ಯದಾ ಪ್ರತಿನಿವೃತ್ತಗುಣೋರ್ಮಿ ಚಕ್ರಂ**
**ಆತ್ಮಪ್ರಸಾದ ಉಭಯತ್ರ ಗುಣೇಷ್ವಸಂಗಃ ।**
**ಕೈವಲ್ಯಸಂಭೃತಪಥಸ್ತ್ವಥ ಭಕ್ತಿಯೋಗಃ**
**ಕೋ ನಿರ್ವೃತೋ ಹರಿಕಥಾಸು ರತಿಂ ನ ಕುರ್ಯಾತ್ ॥**

(ಭಾ.೨.೩.೧೨)

ಪೂರ್ವತ್ರ ಶ್ರವಣೇನ ಮನಶ್ಶುದ್ಧಿದ್ವಾರಾ ಮುಕ್ತಿರಿತ್ಯುಕ್ತಂ । ದ್ವಾರಾಂತರಂ ಚ ಅಸ್ತೀತ್ಯಾಶಯೇನಾಹ ॥ ಜ್ಞಾನಮಿತಿ ॥ ಯದಾ ಯಾಭಿಃ ಶ್ರುತಾಭಿಃ ಆದೌ ಆತ್ಮನೋ ಮನಸಃ ಪ್ರಸನ್ನತಾ ।ಅಚಾಂಚಲ್ಯನಿಮಿತ್ತಸ್ಸಂತೋಷಃ ।ತತ ಐಹಿಕಪಾರತ್ರಿಕವಿಷಯೇಷ್ವಸಂಗೋ ವೈರಾಗ್ಯಂ। ತತಃ ಪ್ರತಿನಿವೃತ್ತಂ ಸ್ವಕಾರ್ಯಾಕ್ಷಮತಯಾ ಕೃತಂ ಗುಣನಿಮಿತ್ತಾನಾಂ ಷಣ್ಣಾಮೂರ್ಮೀಣಾಂ ಅಶನಾಯಾಪಿಪಾಸಾ ಶೋಕಮೋಹ ರಾಗದ್ವೇಷ ಲಕ್ಷಣಾನಾಂ ಚಕ್ರಂ ಯೇನ ತಾದೃಶಂ ಜ್ಞಾನಂ। ಅಥ ಕೈವಲ್ಯಸಂಭೃತಪಥಃ ಕೈವಲ್ಯಗಮನಾಯ ಬಹುಜನಾಕುಲೋ ನಿರ್ಭಯೋ ಮಾರ್ಗ ಇವ ವಿದ್ಯಮಾನೋ ಭಕ್ತಿಯೋಗೋ ಭವತಿ। ನನು ಭಕ್ತಿಃ ಪೂರ್ವಮೇವಾಸ್ತಿ। ಸತ್ಯಂ। ಸೈವ ಪುನರಭಿವೃದ್ಧೇತಿ ವದಾಮಃ। ಅತ ಏವ ವಿಶೇಷಾರ್ಥಕಸ್ತುಶಬ್ದಃ। ತಾಸು ಹರೇಃ ಕಥಾಸು ಕಃ ಸ್ವಸ್ಥಾತ್ಮಾ ರತಿಂ ನ ಕುರ್ಯಾತ್ ॥

❖❖❖

'ಹರಿಭಕ್ತರ ಸಂಗದಲ್ಲಿದ್ದು ಹರಿಕಥಾಶ್ರವಣ ಮಾಡುತ್ತಿದ್ದರೆ ಮನಃಶುದ್ಧಿ ಯುಂಟಾಗುತ್ತದೆ ಮಾತ್ರವಲ್ಲ, ಸಂಸಾರಸಾಗರದಲ್ಲಿ ತ್ರಿಗುಣಾತ್ಮಕ ಅಲೆಗಳು ಏಳುವುದನ್ನು ನಿಲ್ಲಿಸುವಂಥ ತತ್ವಜ್ಞಾನವೂ ಲಭಿಸುತ್ತದೆ. ಹೃದಯದಲ್ಲಿ ಆನಂದವೆ ತುಂಬುತ್ತದೆ. ಕ್ಷುದ್ರವಾದ ವಿಷಯಪದಾರ್ಥಗಳ ಆಕರ್ಷಣೆ ಅತೃಪ್ತಿ ತಪ್ಪಿಹೋಗುತ್ತದೆ. ವೈಷ್ಣವರಲ್ಲಿ ಭಕ್ತಿ ಉಂಟಾಗುತ್ತದೆ. ಭಕ್ತಿಯಿಂದ ಅಪರೋಕ್ಷ, ಅಪರೋಕ್ಷದಿಂದ ಮುಕ್ತಿ ಕರಗತವಾಗುತ್ತದೆ. ಇಂಥ ಹರಿಕಥಾಶ್ರವಣದಲ್ಲಿ ಯಾವ ವಿವೇಕಿಗೆ ಆಸಕ್ತಿ ಉಂಟಾಗಲಾರದು?

ತ್ರಿಗುಣಾತ್ಮಕ ಅಲೆಗಳೆಂದರೆ ತ್ರಿಗುಣನಿಮಿತ್ತವಾಗಿ ಬರುವ ಹಸಿವು ನೀರಡಿಕೆ ಶೋಕ ಮೋಹ ರಾಗ ದ್ವೇಷಗಳೆಂಬ ಆರು ಬಗೆಯ ಅಲೆಗಳು ಬಲಗುಂದುತ್ತವೆ ಜೋರಾಗಿ ಏಳುವುದಿಲ್ಲ. ಏಳದಂತೆ ಮಾಡುವುದು ಹರಿಕಥಾ ಶ್ರವಣದಿಂದ ಬರುವ ವೈರಾಗ್ಯಯುಕ್ತವಾದ ತತ್ವಜ್ಞಾನ. ಈ ತತ್ವಜ್ಞಾನದಿಂದಲೆ ಭಕ್ತಿಯೋಗರೂಪವಾದ ನಿರ್ಭಯವಾದ ಮೋಕ್ಷಮಾರ್ಗ. ಮಾರ್ಗದಲ್ಲಿ ಭಕ್ತರಾದ ಬಹುಜನರು ಸಂಗಡಿಗರಾಗಿ ದೊರೆಯುವುದರಿಂದ ಈ ಮಾರ್ಗದಲ್ಲಿ ಏನೂ ಭಯವಿಲ್ಲ. ಕೈವಲ್ಯಕ್ಕೆ ಮೋಕ್ಷಕ್ಕೆ ತಲುಪಿಸುವ ಬಹುಜನರಿಂದ ತುಂಬಿದ ರಾಜಪಥ, ರಾಜಮಾರ್ಗವಿದು, ಭಕ್ತಿಯೋಗ.

ಯದ್ಯಪಿ ಸಾಧಕನಲ್ಲಿ ಸ್ವಭಾವಭೂತವಾಗಿ ಅನಾದಿಯಿಂದಲೂ ಭಕ್ತಿ ಎಂಬುದು ಇದ್ದೇ ಇರುತ್ತದೆ. ಈಗ ಹೊಸದಾಗಿ ಭಕ್ತಿಯೋಗ ಲಭಿಸುತ್ತದೆ ಎಂದರೆ ಆ ಭಕ್ತಿ ಅಭಿವೃದ್ಧಿಯಾಗುತ್ತದೆ ಎಂದರ್ಥ. 'ಪಥಸ್ತು' ಎಂದು ತು ಶಬ್ದವು ಈ ವಿಶೇಷವನ್ನು ಹೇಳುತ್ತದೆ. ಹೀಗೆ ಶ್ರವಣ ವೈರಾಗ್ಯಯುಕ್ತಜ್ಞಾನ ಮತ್ತು ಭಕ್ತಿದಾರ್ಢ್ಯ ಎಂಬ ಮೂರು ಮುಕ್ತಿದ್ವಾರಗಳನ್ನು ಇಲ್ಲಿ ಹೇಳಿದಂತಾಯಿತು.



—೪೫—

**ವಿಷಯಾಸಕ್ತನಿಗೆ ಹೊರತು ಇನ್ನಾರಿಗೆ ಹರಿಕಥೆ ಸಾಕೆನಿಸೀತು?**

**ನಿವೃತ್ತತರ್ಷೈರುಪಗೀಯಮಾನಾತ್**
**ಭವೌಷಧಾತ್ ಶ್ರೋತ್ರಮನೋಭಿರಾಮಾತ್ ।**
**ಕ ಉತ್ತಮಶ್ಲೋಕಗುಣಾನುವಾದಾತ್**
**ಪುಮಾನ್ ವಿರಜ್ಯೇತ ವಿನಾ ಪಶುಘ್ನಾತ್ ॥**

(ಭಾ.೧೦.೧.೪)

**ತಾದೃಶಾ ಅಪಿ ಬಹವಃ ಸಂತೀತಿ ಚೇತ್ಸಂತು ನಾಮ ಸಹಸ್ರಶಃ। ತರ್ಹಿ ಹರಿಕಥಾಸು ರತಿಂ ಕುರ್ವಾಣಾಃ ಕೇ। ವಿರಕ್ತಾ ನರಾ ಇತಿ ವದಾಮಃ। ಕಿಂ ತೇ ಪಶವಃ। ಸತ್ಯಮಿತ್ಯಾಹ। ನಿವೃತ್ತತರ್ಷೈರಿತಿ॥ ನಿವೃತ್ತಾ ತರ್ಷಾ ವಿಷಯಾಕಾಂಕ್ಷಾ ಯೇಭ್ಯಸ್ತೇ। ವಿಷಯಾಸಕ್ತಾದ್ವಿನೇತಿ ವಕ್ತವ್ಯೇ ಯತ್ಪಶುಘ್ನಾದಿತ್ಯುಕ್ತಂ ತೇನಾಯಮರ್ಥಸ್ಸೂಚಿತಃ। ನಿತ್ಯಪುರುಷಾರ್ಥಸಾಧನಂ**

**ಶುದ್ಧಂ ಸುಗಮಂ ನಿವೃತ್ತಿಮಾರ್ಗಂ ಪರಿತ್ಯಜ್ಯಾಸ್ಥಿರಾಲ್ಪತರಸುಖ ಮುದ್ದಿಶ್ಯ ಪ್ರಾಣಿಹಿಂಸಾದಿರೂಪ ಯಜ್ಞಾದ್ಯ ನೇಕಶ್ರಮ ಬಹುವಿತ್ತಾದಿ ಸಾಧ್ಯಕರ್ಮರೂಪ ಪ್ರವೃತ್ತಿಮಾರ್ಗನಿರತೋ ನ ಪ್ರೇಕ್ಷಾವಾನಿತಿ । ಯಥಾಹುಃ—**

**''ಆಸ್ತೀರ್ಯ ದರ್ಭೈಃ ಪ್ರಾಗಗ್ರೈಃ ಕಾರ್ತ್ಸ್ನ್ಯೇನ ಕ್ಷಿತಿಮಂಡಲಂ ।**
**ತತೋ ಬೃಹದ್ವಧಾನ್ಮಾನೀ ಕರ್ಮ ನಾವೈಷಿ ಯತ್ಪರಮಿ''ತಿ ॥**



**'ತರ್ಷ' ವಿಷಯಾಸೆ ಇಲ್ಲದವರು ಜೀವನ್ಮುಕ್ತರು ಕೂಡ ಕೊಂಡಾಡುವಂಥದ್ದು. ಭವರೋಗಕ್ಕೆ ಔಷಧರೂಪವಾದುದು, ಶ್ರವಣ ಮನಗಳಿಗೆ ಆನಂದ ನೀಡುವುದು ಹರಿಯ ಗುಣಗಾನ. ಪಶುಹಿಂಸೆ ಮಾಡುವವನಿಗೆ ಹೊರತು ಇನ್ನಾರಿಗೆ ತಾನೆ ಹರಿಯ ಗುಣಗಾನ ಕೇಳಿಬಂದಾಗ ಸಾಕೆನಿಸೀತು?**

'ವಿಷಯಾಸಕ್ತನಾದ ಮಾನವನಿಗೆ ಹೊರತು ಇನ್ನಾರಿಗೆ ಸಾಕೆನಿಸೀತು?' ಎಂದು ಹೇಳುವ ಅಭಿಪ್ರಾಯ ಇಲ್ಲಿ ಇದೆ. ಆದರೆ ಹಾಗೇ ಹೇಳದೆ 'ಪಶುಹಿಂಸೆ ಮಾಡುವವನಿಗೆ' ಎಂದೇಕೆ ಹೇಳಿದರು ಎಂದರೆ, ಮೋಕ್ಷಮಾರ್ಗ ನಿರ್ಮಲವಾದುದು, ಸುಗಮವಾದುದು ನಿತ್ಯವಾದ ಮೋಕ್ಷಫಲ ನೀಡುವಂಥದ್ದು. ಇಂಥ ಒಳ್ಳೆಯ ಮಾರ್ಗವನ್ನೂ ಬಿಟ್ಟು ಅಸ್ಥಿರ, ಅಲ್ಪ ವಿಷಯಸುಖಕ್ಕಾಗಿ ಪಶುಹಿಂಸಾದಿರೂಪವಾದ ಯಜ್ಞ ಮುಂತಾದ ಶ್ರಮಸಾಧ್ಯವಾದ ಬಹುಧನ ವ್ಯಯಉಳ್ಳ ಕಾಮ್ಯಕರ್ಮ ಮಾರ್ಗವನ್ನು ಹಿಡಿಯುವುದು ಜಾಣತನವಲ್ಲ ಎಂದು. ಇದನ್ನು ಹಿಂದೆಯೇ, ನಾರದರು ಪ್ರಾಚೀನಬರ್ಹಿರಾಜನಿಗೆ —

ಆಸ್ತೀರ್ಯ ದರ್ಭೈಃ ಪ್ರಾಗಗ್ರೈಃ ಕಾರ್ತ್ಸ್ನ್ಯೇನ ಕ್ಷಿತಿಮಂಡಲಂ ।
ತತೋ ಬೃಹದ್‌ವಧಾನ್ಮಾನೀ ಕರ್ಮ ನಾವೈಷಿ ಯತ್ ಪರಂ ॥

'ರಾಜನೆ, ನೀನು ಭೂಮಂಡಲ ಪೂರ್ತಿ ಪೂರ್ವಾಗ್ರವಾಗಿ ದರ್ಭೆಹಾಸಿ ದೊಡ್ಡ ದೊಡ್ಡ ಯಾಗಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಪಶುವಧೆ ಮಾಡಿ ಶ್ರೇಷ್ಠ ಕರ್ಮನಿಷ್ಠನು ತಾನೆಂದು ಹೆಮ್ಮೆ ಪಡುತ್ತಿರುವೆ. ವಸ್ತುತಃ ಹರಿಪ್ರೀತ್ಯರ್ಥವಾಗಿ ಮಾಡುವ ಮೋಕ್ಷಜನಕವಾದ ಕರ್ಮಸ್ವರೂಪ ನಿನಗೆ ಗೊತ್ತಿಲ್ಲ' ಎಂದು, ಭಾಗವತ(೪.೨೯.೪೨)ದಲ್ಲಿ ಹೇಳಿದ್ದಾರೆ.

'ಹರಿಯ ಗುಣಗಾನ ಕೇಳಿಬಂದಾಗ ಯಾರಿಗೆ ತಾನೆ ಸಾಕೆನಿಸೀತು?'

ಎಂದು ನೀವು ಕೇಳುವಿರಿ, ಆದರೆ 'ಹರಿಕತೆ' ಸಾಕು ಎನ್ನುವವರೇ ಬಹುಮಂದಿ ಇದ್ದಾರೆ!' ಎಂದು ಹೇಳುವವರಿಗೆ ನಾವು ಹೇಳಬೇಕು—'ನಿಜ, ಬಹುಮಂದಿ, ಸಾವಿರಾರು ಜನಗಳೇ ಇದ್ದಾರೆ. ಆದರೆ ಅವರು ವೈರಾಗ್ಯಾದಿಗುಣಭರಿತರಾದ ಮಾನವರಲ್ಲ, ಜ್ಞಾನರಲ್ಲ! ಕೋಣರೆ ಹೌದು! ಕೋಣರೆ, ಅವರು ಸರ್ವಥಾ ಬುದ್ಧಿವಂತರಲ್ಲ' ಎನ್ನಬೇಕು ಎಂದು ನಾರದರು ಈ ಶ್ಲೋಕದಲ್ಲಿ ಪ್ರಾಚೀನ ಬರ್ಹಿರಾಜನಿಗೆ ಹೇಳುತ್ತಿದ್ದಾರೆ.



—೪೬—

**ಹರಿಕಥೆ ಸಾಕೆನ್ನುವವನು ಮನುಷ್ಯನೆ ಅಲ್ಲ**

**ಕೋ ನಾಮ ಲೋಕೇ ಪುರುಷಾರ್ಥಸಾರವಿತ್**
**ಪುರಾಕಥಾನಾಂ ಭಗವತ್ಕಥಾಸುಧಾಂ ।**
**ಆಪೀಯ ಕರ್ಣಾಂಜಲಿಭಿರ್ಭವಾಪಹಾಂ**
**ಅಹೋ ವಿರಜ್ಯೇತ ವಿನಾ ನರೇತರಂ ॥**

(ಭಾ.೩.೧೪.೫)

ಭವಂತು ನಾಮ ಭಗವತ್ಕಥಾವಿಮುಖಾಃ ಪಶುಪ್ರಾಯಾಃ। ಯೇ ಪುನರೇಕವಾರಂ ಶ್ರುತ್ವಾ ಪರಿತ್ಯಜಂತಿ । ಭಜಂತಿ ಚ ಭವಭವಂ ವಿಭವಂ ತೇ ಕ ಇತಿ ನ ಜಾನೀಮ ಇತ್ಯತ ಆಹ ॥ **ಕೋ ನಾಮೇತಿ** ॥ ಪುರಾತನಕಥಾನಾಂ ಮಧ್ಯೇ ಸಾರಭೂತಾಂ । ನರೇತರ ಇತಿ ತಾವದವಿವಾದಂ । ವಿಶೇಷಸ್ತು ಜ್ಞಾಪಕವಿಶೇಷಾ-ದವಗಂತವ್ಯ ಇತಿ ಭಾವೇನೋಕ್ತಂ ನರೇತರಂ ವಿನಾಽಽಪೀಯಾಪಿ ಕೋ ನಾಮ ವಿರಜ್ಯೇತೇತಿ ॥



ಮೈತ್ರೇಯರು ವಿದುರನಿಗೆ ವರಾಹಾವತಾರದ ಕಥೆಯ ಕೊನೆಯಲ್ಲಿ ಹೇಳಿದರು—

'ಆಶ್ಚರ್ಯ! ಲೋಕದಲ್ಲಿ ಪುರುಷಾರ್ಥಗಳಲ್ಲೆಲ್ಲ ಮೋಕ್ಷವೇ ಶ್ರೇಷ್ಠವೆಂದು ತಿಳಿದು ಪೂರ್ವಕಥೆಗಳಲ್ಲಿ ಶ್ರೇಷ್ಠವಾದ ಹರಿಕಥಾಮೃತವನ್ನು ಕಿವಿಗಳನ್ನು ಬೊಗಸೆ

**ಮಾಡಿಕೊಂಡು ಪಾನಮಾಡಿ, ಪಶುವಲ್ಲದವನು ಯಾರು ತಾನೆ ಸಾಕೆಂದುಕೊಳ್ಳು ವನು?' ಎಂದು.**

ಇದರ ಅಭಿಪ್ರಾಯ ಇದು— 'ಹರಿಕಥೆ ಬೇಡವೆನ್ನುವವರು ಪಶುತುಲ್ಯರೆಂದಾದರೆ ಆಗಲಿ, ಆದರೆ ಒಮ್ಮೆ ಕೇಳಿಯೂ ಕೂಡ ಸಾಕೆಂದು ನಿಲ್ಲಿಸಿ ಸಂಸಾರಸುಖವೈಭವವನ್ನೇ ಅರಸುವವರೂ ಇದ್ದಾರೆ. ಅವರನ್ನು ಏನೆನ್ನಬೇಕು? ನಮಗೆ ತಿಳಿಯದು' ಎಂದು ಕೇಳಿದರೆ ನಾವು ಹೇಳಬೇಕು—ಅವರು ಮನುಷ್ಯರಂತೂ ಅಲ್ಲ. ಇದರಲ್ಲಿ ವಿವಾದವಿಲ್ಲ. ಇನ್ನು 'ಪಶುವೆಂದರೆ ಯಾವ ಪಶು?' ಎಂದು ಕೇಳಿದರೆ, ಅದನ್ನು ಆಯಾ ಪಶುವಿನ ವಿಶೇಷಲಕ್ಷಣ ಅವರಲ್ಲಿ ಇರುವುದನ್ನು ಕಂಡು ನಿರ್ಧರಿಸಬೇಕು. ಒದೆಯುವ ಸ್ವಭಾವ ಕಂಡುಬಂದರೆ ಕತ್ತೆ! ಚೇಷ್ಟೆ ಮಾಡುವ ಸ್ವಭಾವವಿದ್ದರೆ ಕೋತಿ! ಎಂದು ಹೇಳಬೇಕಾಗುತ್ತದೆ!



—೪೭—

**ಅಮೃತ ರಸ ಭರಿತವಾದ ಹಣ್ಣು ಭಾಗವತ**

**ನಿಗಮಕಲ್ಪತರೋರ್ಗಲಿತಂ ಫಲಂ**
**ಶುಕಮುಖಾದಮೃತದ್ರವ ಸಂಯುತಂ ।**
**ಪಿಬತ ಭಾಗವತಂ ರಸಮಾಲಯಂ**
**ಮುಹುರಹೋ ರಸಿಕಾ ಭುವಿ ಭಾವುಕಾಃ ॥**

(ಭಾ.೧.೧.೩)

ಏವಂ ಶ್ರವಣಾದಿಫಲಾಭಿಧಾನೇನ ತತ್ರೋತ್ಪನ್ನಾದರಾಣಾಂ ನರಾಣಾಂ ಭಾಗವತ ಶ್ರವಣಾದೌ ಕ್ಷಿಪ್ರಪ್ರವೃತ್ತಯೇ ತನ್ಮಾಹಾತ್ಮ್ಯಕಥನಪೂರ್ವಕಂ ಶ್ರವಣಾದಿಕಂ ವಿಧಾತುಂ ತಾನಭಿಮುಖೀಕರೋತೀತ್ಯಾಹ ॥ **ನಿಗಮೇತಿ** ॥ ಭುವಿ ಭಾರತಖಂಡೇ ಭಾವುಕಾಃ ಮುಕುಂದಸೇವಾಸಾಧನಪದಾರ್ಥಸಾರ್ಥೇ-ಷ್ವಕುಂಠೋತ್ಕಂಠಾಸಂಭೃತಮನೋವೃತ್ತಯಃ। ರಸಿಕಾಃ ಸಾರಗ್ರಾಹಿಣೋ ಯೂಯಂ ತಾವಚ್ಛೃಣುತ। ಕಿಮಿತಿ। ನಿಗಮಕಲ್ಪತರೋರೇಕಂ ಭಾಗವತನಾಮಕಂ ಫಲಮಸ್ತಿ। ತಚ್ಚಾದೌ ಭಗವತಾ ಗಲಿತಂ। ತತಶ್ಶುಕಮುಖಾದಮೃತದ್ರವಸಂಯುತಂ ಜಾತಂ। ಅಥ ತಸ್ಯ ರಸಂ ಯಾವದ್ದೇಹಂ ತತ್ರಾಪಿ ಮುಹುಃ ಪ್ರತಿಕ್ಷಣಂ ಪಿಬತೇತ್ಯನ್ವಯಃ। ನನ್ವತ್ರ

ರಸಪಾನಂ ತಾವತ್ ವಿಧೀಯತೇ । ತತ್ಕಥಂ ಸಂಗಚ್ಛತೇ । ಏಕಸ್ಮಿನ್ ಫಲೇ ಏಕ ಏವ ಹಿ ರಸಃ । ಸ ಚ ಮಧುರಾದ್ಯನ್ಯತರಃ ಷಡ್ವಿಧೋ ನೈಕವಿಧೋ ವಾ । ತತ್ಪಾನಾರ್ಥಿನಶ್ಚ ಭೂಮೌ ವಿದ್ಯಮಾನಾಃ ಸರ್ವೇऽಪಿ ಮಿಲಿತ್ವಾ ರಸಿಕಾ ಬಹವೋ ಭವಂತಿ ಭಿನ್ನರುಚಯಶ್ಚ । ಸ್ವಸ್ವೇಷ್ಟರಸಾಭಾವೇ ಚ ಯಾವದ್ದೇಹಂ ಮುಹುಃ ಪಾನಂ ಚ ನ ಸಂಭವತಿ । ಕಥಂಚಿದೇಕವಾರಂ ಕರ್ತುಂ ಶಕ್ಯತ್ವಾದಿತ್ಯತಃ ಸತ್ಯಂ ಸರ್ವಮನ್ಯತ್ರ । ಅತ್ರ ಫಲೇ ತ್ವಪೇಕ್ಷಿತಾ ಅನಂತಾ ರಸಾ ವರ್ತಂತೇ । ಅತಃ ಸರ್ವಮುಕ್ತಂ ಯುಕ್ತಮಿತ್ಯಾಶಯೇನೋಕ್ತಂ ॥ ಕಲ್ಪತರೋರಿತಿ ॥ ಅತ ಏವೇದಂ ಫಲಂ ಆಶ್ಚರ್ಯತಮಮಿತ್ಯಹೋ ಇತ್ಯನೇನ ಸೂಚಯಾಮಾಸ । ಅಮೃತದ್ರವಃ ಸ್ರವಣಂ ಸ್ಯಂದನಂ । ಫಲಂ ಚ ತರುಸಾರ ಇತಿ ಪ್ರಸಿದ್ಧಮೇವ । ತಸ್ಮಿಂಶ್ಚ ರಸಸಂಪೂರ್ಣೇ ಫಲೇ ಶುಕತುಂಡೇನ ಸ್ಪೃಷ್ಟೇ ರಸೋ ದ್ರವತಿ । ಭುವಿ ನಿಕ್ಷಿಪ್ತೇ ಸತಿ ತಸ್ಯ ರಸಃ ಪ್ರವಾಹರೂಪೇಣ ಪ್ರವರ್ತತೇ । ಇಹ ತು ವ್ಯಾಸೇನ ವೇದಶಾಸ್ತ್ರಸಾರಮುದ್ಧೃತ್ಯ ಭಾಗವತಂ ಕೃತಂ । ತಚ್ಚ ಶುಕಾಯ ಪ್ರೋಕ್ತಂ । ತದಧ್ಯಯನಸಮಯೇ ಪ್ರಶ್ನಪ್ರತಿವಚನಚಾತುರ್ಯೇಣ ಸ್ಪಷ್ಟೀಕೃತಂ । ಶುಕೇನ ಪುನಃ ಕುರುಕ್ಷೇತ್ರೇ ಪರೀಕ್ಷಿತಂ ಪ್ರತಿ ವಚನಸಮಯೇ ಪ್ರಶ್ನಪ್ರತಿವಚನ-ಚಾತುರ್ಯವಿಶೇಷೇಣ ವಿಶದಂ । ಅತ ಏವ ಸುಗಮಂ ಶೃಣುತೇತಿ ॥



ಬೇರೆ ಪುರಾಣಾದಿಗಳಲ್ಲಿ ಹೇಳಿದ ಹರಿಕಥಾಶ್ರವಣಾದಿಗಳ ಫಲವನ್ನು ಕೇಳಿ ಸಜ್ಜನರಿಗೆ ಅವುಗಳಲ್ಲಿ ಆದರ ಉಂಟಾದರೂ ಅದು ಸಾಲದು. ಅವರು ಆಲಸ್ಯ ಮಾಡದೆ ಭಾಗವತ ಶ್ರವಣದಲ್ಲಿ ಬೇಗನೆ ಪ್ರವೃತ್ತಿ ಮಾಡಬೇಕು ಎಂದು ಶ್ರೀವ್ಯಾಸರು ಬಯಸುತ್ತಾರೆ. ಅದಕ್ಕೆ, 'ಅನುಪಮವಾದ ಗ್ರಂಥವು ಈ ಭಾಗವತ. ಉತ್ಸುಕತೆಯಿಂದ ಇದನ್ನು ಶ್ರವಣ ಮಾಡಿರಿ' ಎಂದು ಶ್ರೋತೃಗಳನ್ನು ಕೈಬೀಸಿ ಕರೆದು ಹೇಳುತ್ತಿದ್ದಾರೆ—'ಈ ಭಾಗವತವು ವೇದಗಳೆಂಬ ಕಲ್ಪವೃಕ್ಷದಲ್ಲಿ ಬೆಳೆದು ಪಕ್ವವಾಗಿರುವ ಹಣ್ಣು. ಇದನ್ನು ಶ್ರೀಮನ್ನಾರಾಯಣನು ಕೆಳಗೆ ಇಳಿಸಿ ಬ್ರಹ್ಮದೇವರ ಮೂಲಕ ಶ್ರೀವ್ಯಾಸಮುನಿ ಶುಕಮುನಿಗಳ ಮೂಲಕ ಭೂಮಿಯ ಜನರಿಗೆ ಲಭ್ಯವಾಗುವಂತೆ ಮಾಡಿದ್ದಾನೆ. ಅಮೃತರಸ ಇದರಲ್ಲಿ ತುಂಬಿದೆ. ಶುಕಮುನಿಯ ಪ್ರವಚನದಿಂದ ಸುರಿವ ಆ ರಸವನ್ನು ನೀವು ಎಲ್ಲರೂ ಶರೀರಧಾರಿಗಳಾಗಿ ಭೂಮಿಯ ಮೇಲಿರುವಷ್ಟು ಕಾಲವೂ ಮತ್ತೆಮತ್ತೆ ಸವಿಯುತ್ತಿರಿ' ಎಂದು.

ಎಲ್ಲರೂ ಭಾಗವತ ರಸವನ್ನು ಸವಿಯಿರಿ ಎಂದು ನಿರ್ಬಂಧಿಸುವುದು ಹೇಗೆ ಯುಕ್ತವಾಗುವುದು ಎಂಬ ಪ್ರಶ್ನೆ ಉದ್ಭವಿಸುತ್ತದೆ. 'ಒಂದು ಹಣ್ಣಿನಲ್ಲಿ ಒಂದು ರಸವಿರುತ್ತದೆ. ಅದು ಮಧುರ ಮುಂತಾದ ಆರೂ ರಸಗಳ ಅಥವಾ ಎರಡು ಮೂರು ರಸಗಳ ಮೇಲನದಿಂದ ಒಂದು ಪಾನಕ ರಸದಂತೆ ಹಣ್ಣಿನೊಳಗೆ ಇರಬಹುದು. ಒಬ್ಬನು ಒಮ್ಮೆ ತೃಪ್ತಿಯಾಗುವಷ್ಟು ಸೇವಿಸಿದನೆಂದರೆ ಮುಂದೆ ಅವನಿಗೇ ಇನ್ನೊಮ್ಮೆ ಸೇವಿಸಲು ಅಲ್ಲಿ ರಸವಿರಲಾರದು, ಇನ್ನು ಎಲ್ಲ ಜನರೂ ಸೇವಿಸಬೇಕೆಂದರೆ ಅದು ಹೇಗೆ ಸಾಧ್ಯ ? ಅಶಕ್ಯವಾದ ವಿಷಯದಲ್ಲಿ ನಿರ್ಬಂಧ ಮಾಡುವುದು ಯುಕ್ತವಲ್ಲ ಎಂದು. ಒಬ್ಬೊಬ್ಬರಿಗೆ ಒಂದೊಂದು ರಸ ಇಷ್ಟವಾಗುವುದರಿಂದ ಒಂದು ರಸವನ್ನೇ ಅನೇಕರು ಉಣಲು ಬಯಸುವುದೂ ಶಕ್ಯವಿಲ್ಲ', ಎಂದು.

ನಿಜ. ಇದು ಬೇರೆ ಹಣ್ಣುಗಳ ವಿಷಯದಲ್ಲಿ ಸರಿಯೆ. ಪ್ರಕೃತ ವೇದವೃಕ್ಷದಿಂದ ಕೆಳಗೆ ಇಳಿದ ಭಾಗವತವೆಂಬ ಹಣ್ಣಿನಲ್ಲಿ ಒಂದಲ್ಲ, ಎರಡಲ್ಲ, ಅನಂತಾನಂತರಸಗಳಿವೆ. ಭಗವಂತನ ಒಂದೊಂದು ಲೀಲೆಯೂ ಅನಂತಾನಂತ ರಸಯುಕ್ತವಾಗಿದೆ. ದ್ರೌಪದಿಯ ಕೈಯಲ್ಲಿ ಅಕ್ಷಯಪಾತ್ರೆಯಂತೆ, ವೇದವೃಕ್ಷ ದಲ್ಲಿ ಭಾಗವತವೆಂಬ ಹಣ್ಣಿದೆ. ಅದರ ರಸ ಕುಡಿದಷ್ಟೂ ಅಕ್ಷಯವಾಗುತ್ತದೆ. ಶಿಷ್ಯರಿಗೆ ನೀಡಿದಷ್ಟೂ ಗುರುವಿನಲ್ಲಿ ಅಕ್ಷಯವಾಗುವುದು ವಿದ್ಯೆಯ ಸ್ವಭಾವ ತಾನೆ? ಮತ್ತು ಈ ವೇದವೃಕ್ಷವು ಕಲ್ಪವೃಕ್ಷದಂತೆ! ಅದರ ಹಣ್ಣು ಎಲ್ಲ ಜ್ಞಾನಾಮೃತ ಪಿಪಾಸುಗಳು ಬೇಡಿದಷ್ಟೂ ಬೇಡಿದ ಅಮೃತರಸಗಳನ್ನು ಹೊಳೆಹೊಳೆಯಾಗಿ ಹರಿಸುತ್ತದೆ. ಅದನ್ನು ತಪ್ಪದೇ ಸೇವಿಸಿರಿ ಎಂದು ಶ್ರೀವ್ಯಾಸರು ನಿರ್ಬಂಧಿಸುವುದು ಯುಕ್ತವೇ ಆಗಿದೆ—

'ನಿಗಮ ಕಲ್ಪತರೋರ್ಗಲಿತಂ ಫಲಂ ಪಿಬತ ಭಾಗವತಂ ರಸಂ ಆಲಯಂ' ಎಂದು. 'ಅಹೋ' ಅಂದರೆ ಎಷ್ಟು ಆಶ್ಚರ್ಯಕರ ಈ ಭಾಗವತಾಮೃತರಸ!' ಎಂದು ಉದ್ಗಾರ ಮಾಡುವುದೂ ಯುಕ್ತವೆ. ರಸಪೂರ್ಣವಾದ ಹಣ್ಣನ್ನು ಗಿಣಿ ಕಚ್ಚಿದಾಗ ರಸ ಒಸರುತ್ತದೆ. ಇಲ್ಲಿ ಹಾಗೇ ಭಾಗವತವನ್ನು ಶುಕಮುನಿ ಪ್ರವಚನ ಮಾಡಿದಾಗ ಶಿಷ್ಯನ ರೋಚಕ ಪ್ರಶ್ನೆಗಳಿಗೆ ಗುರುವಿನ ಉತ್ತರಗಳೂ ರೋಚಕ ವಾಗಿರುತ್ತವೆ. ಅವು ಅಮೃತರಸವೆ ಒಸರುವಂತೆ ಮಾಡುತ್ತವೆ, ಶ್ರೋತೃಗಳು ಆನಂದದಿಂದ ಅದನ್ನು ಸವಿಯಬಹುದು ಎನ್ನುತ್ತಾರೆ—

'ಶುಕಮುಖಾದ್ ಅಮೃತದ್ರವ ಸಂಯುತಂ' ಎಂದು.

ಆದರೆ ಭಾಗವತಗ್ರಂಥ ಮೇಲುನೋಟಕ್ಕೆ ಸುಲಭವೆಂದು ಕಂಡರೂ 'ವಿದ್ಯಾವತಾಂ ಭಾಗವತೇ ಪರೀಕ್ಷಾ!' ವಿದ್ವಾಂಸರ ವಿದ್ವತ್ತಿನ ಆಳವನ್ನು ಭಾಗವತದಲ್ಲಿ ಪರೀಕ್ಷಿಸಬೇಕು' ಎಂಬ ಮಾತಿದೆ. ಭಾಗವತಸಾರವನ್ನು ಸಂಕ್ಷೇಪವಾಗಿ ತಿಳಿದರೆ ಮಾತ್ರ ಅದನ್ನು ಮುಂದೆ ಎಳೆಎಳೆಯಾಗಿ ಬಿಡಿಸಿ ಸವಿಯುವುದು ಶಕ್ಯ. ಅದರಿಂದ ಸಂಕ್ಷೇಪವಾಗಿ ಭಾಗವತಶಾಸ್ತ್ರಾರ್ಥವನ್ನು ಮೊದಲಿಗೆ ಭಾಗವತ ದಿಂದಲೇ ತಿಳಿಯಬೇಕು.



—೪೮—

**ಹರಿಕಥಾಶ್ರವಣಾದಿಗಳನ್ನು ಮಾಡಿ,**
**ಮಾಡಿಸಿದರೆ ಮೋಕ್ಷಲಾಭವಿದೆ**

**ಶೃಣ್ವನ್ ಗೃಣನ್ ಸಂಸ್ಮರಯಂಶ್ಚ ಚಿಂತಯನ್**
**ನಾಮಾನಿ ರೂಪಾಣಿ ಚ ಮಂಗಲಾನಿ ತೇ ।**
**ಕ್ರಿಯಾಸು ಯಸ್ತ್ವಚ್ಚರಣಾರವಿಂದಯೋ-**
**ರಾವಿಷ್ಟಚಿತ್ತೋ ನ ಭವಾಯ ಕಲ್ಪತೇ ॥**

(ಭಾ.೧೦.೩.೩೮)

**ಏವಮಭಿಮುಖೀಕೃತ್ಯ, ವಿದಿತಸಂಕ್ಷೇಪಾ ಹಿ ವಿಶೇಷಂ ವಿವಿತ್ಸವೋ ಭವಂತಿ। ತೇಷಾಮೇವ ಚ ವಿಶೇಷಾಭಿಧಾನಮುಚಿತಮಿತಿ ತಾವತ್ಸಂಕ್ಷಿಪ್ಯ ಭಾಗವತಾರ್ಥಂ ದರ್ಶಯತಿ ॥ ಶೃಣ್ವನ್ನಿತಿ ॥ ಸಂಸ್ಮರಯನ್ ಸ್ಮಾರಯನ್ । ಅತ್ರ ಶೃಣ್ವನ್ ಸ್ಮಾರಯನ್ನಿತ್ಯುಭಯಥಾ ಪ್ರಯೋಗೇಣೋಭಯಥಾಪಿ ವಿವಕ್ಷಾಂ ಸೂಚಯತಿ। ತಥಾ ಚ ಹೇ ಹರೇ ಯಃ ಪುರುಷಃ ಸ್ವೇನ ಕ್ರಿಯಾಸು ಕ್ರಿಯಮಾಣಾಸು ತ್ವಚ್ಚರಣಾರವಿಂದಯೋರಾವಿಷ್ಟಚಿತ್ತೋ ಭವತಿ, ಸ ಭವಾಯ ಸಂಸಾರಾಯ ನ ಕಲ್ಪತೇ। ಕಿಂಭೂತಃ। ತೇ ಮಂಗಲಾನಿ ನಾಮಾನಿ ಶೃಣ್ವನ್ ಸ್ವಯಂ, ಶ್ರಾವಯಂಶ್ಚಾನ್ಯಾನ್, ಗೃಣನ್ ಉಚ್ಚರನ್ ಸ್ವಯಂ; ಉಚ್ಚಾರಯಂಶ್ಚಾನ್ಯಾನ್, ತಥಾ ತೇ ಮಂಗಲಾನಿ ರೂಪಾಣಿ ಚ ಸಂಸ್ಮರನ್ ಸ್ವಯಂ, ಸ್ಮಾರಯಂಶ್ಚಾನ್ಯಾನ್, ಚಿಂತಯನ್ ಸ್ವಯಂ, ಚಿಂತಾಪಯಂಶ್ಚಾನ್ಯಾನ್, ಇತಿ ಯೋಜನಾ।**

**ಇದಮುದಿತಂ ಭವತಿ**— ಶ್ರವಣಾದಿ ಕುರ್ವನ್ ಅನುದಿನಮಾದರೇಣ ಶ್ರೀಹರಿಚರಣಾರವಿಂದ ನಿರತಚಿತ್ತವೃತ್ತಿಃ ಪುರುಷಃ ಪುರುಷಾರ್ಥಭಾಗಿತಿ ಶಾಸ್ತ್ರಾನ್ನಿರ್ಗಲಿತೋಽರ್ಥಃ। ಪರೀಕ್ಷಿತಃ ಸಂಕ್ಷಿಪ್ತಪ್ರಶ್ನಪರ್ಯಾಲೋಚನಯಾ ಶ್ರೀಶುಕಸ್ಯ ಸಂಕ್ಷಿಪ್ತೋತ್ತರಪರ್ಯಾಲೋಚನಯಾ ಚೇತ್ಥಮೇವಾವಗಮಾತ್। ಯಥಾಹುಃ-

''ಯಚ್ಛ್ರೋತವ್ಯಮಥೋ ಜಾಪ್ಯಂ ಯತ್ಕರ್ತವ್ಯಂ ನೃಭಿಃ ಸದಾ।
ಸ್ಮರ್ತವ್ಯಂ ಭಜನೀಯಂ ವಾ ಬ್ರೂಹಿ ಯದ್ವಾ ವಿಪರ್ಯಯಮಿ''ತಿ॥

''ತಸ್ಮಾದ್ಭಾರತ ಸರ್ವಾತ್ಮಾ ಭಗವಾನ್ ಹರಿರೀಶ್ವರಃ।
ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯಶ್ಚೇಚ್ಛತಾಽಭಯ''ಮಿತೀತಿ।

ಕಿಂಚಾಯಮರ್ಥಃ ಪ್ರೇಕ್ಷಾವತಾಮನುಭವಸಿದ್ಧಃ। ತಥಾಹಿ। ಪುರುಷೈರರ್ಥ್ಯಮಾನಃ ಪುರುಷಾರ್ಥಃ। ಸ ಚ ಪ್ರಥಮೋ ದುಃಖನಿವೃತ್ತಿರೇವ। ಭಾರವಾಹಿಭಿರ್ಭಾರನಿವೃತ್ತೇರೇವ ಪ್ರಥಮಂ ಪ್ರಾರ್ಥನಾತ್। ಸಾ ಚ ಶ್ರವಣಾದಿನಾ ಭಗವತಿ ಮನೋವಧಾನೇ ಭವತ್ಯೇವೇತಿ ತದೇತದಾಹ। **ಶೃಣ್ವನ್ನಿತಿ**॥ ಶ್ರವಣಾದಿನಾ ಭಗವತ್ಯಾವಿಷ್ಟಚಿತ್ತೋ ಭವಾಯ ದುಃಖಾಯ ಕಲ್ಪತೇ ನೈವೇತ್ಯೇತತ್ಪ್ರೇಕ್ಷಾವತಾಮನುಭವಸಿದ್ಧಮಿತಿ ಕ್ರಿಯೋತ್ತರಕಾಕ್ವಾ ಸೂಚಯತೀತಿ॥

**ಅಥವಾಽಸ್ಮಿನ್** ಭಾಗವತೇ ಭಕ್ತಿಯೋಗೋ ಮುಕ್ತಿಸಾಧನತಯಾ ಪ್ರತಿಪಾದ್ಯತೇ। ತಥಾ ಜ್ಞಾನಯೋಗಃ ಕರ್ಮಯೋಗಶ್ಚೇತಿ ದ್ವಯಮಪಿ। **ಯಥಾಹುಃ**—

''ಯೋಗಾಸ್ತ್ರಯೋ ಮಯಾ ಪ್ರೋಕ್ತಾ ನೃಣಾಂ ಶ್ರೇಯೋವಿಧಿತ್ಸಯಾ।
ಜ್ಞಾನಂ ಕರ್ಮ ಚ ಭಕ್ತಿಶ್ಚ ನಾನ್ಯೋಽಪಾಯೋಽಸ್ತಿ ಕುತ್ರಚಿ''ದಿತಿ।

ಏವಂ ತ್ರಿಷ್ವಪಿ ಯೋಗೇಷು ಕೋ ವರಿಷ್ಠ ಇತ್ಯತೋ ಯೈರ್ನೈಷಾವಸ್ಥಾ ಪ್ರಾಪ್ಯತೇ ಸ ವರಿಷ್ಠ ಇತ್ಯಾಶಯೇನ ಶ್ರೋತೄಣಾಂ ತತ್ರಾದರಜನನಾಯಾ-ದಾವೇತದಾಹ॥ **ತ್ವಚ್ಚರಣಾರವಿಂದಯೋರಾವಿಷ್ಟಚಿತ್ತ** ಇತಿ ಯತ್ಸ ಏವ ಯೋಗೋ ವರಿಷ್ಠ ಇತಿ, ಸೈಷಾವಸ್ಥಾ ಚ ಪ್ರಾಯೇಣ ಭಕ್ತಿಯೋಗೇ ಭವತೀತಿ, ತತ್ರಾದರೇಣ ಭಾವ್ಯಮಿತಿ। **ಯಥಾಹುಃ**—

''ಏತಾವಾನ್ ಯೋಗ ಆದಿಷ್ಟೋ ಮದ್ಭಕ್ತೈಃ ಸನಕಾದಿಭಿಃ।
ಸರ್ವತೋ ಮನ ಆಕೃಷ್ಯ ಮಯ್ಯದ್ಧಾಽಽವೇಶ್ಯತೇ ಯಥಾ।

ನ ಯುಜ್ಯಮಾನಯಾ ಭಕ್ತ್ಯಾ ಭಗವತ್ಯಖಿಲಾತ್ಮನಿ ।
ಸದೃಶೋಽನ್ಯಃ ಶಿವಃ ಪಂಥಾ ಯೋಗಿನಾಂ ಬ್ರಹ್ಮಸಿದ್ಧಯ' ಇತಿ ॥

**ಅಥವಾ** ಭಕ್ತಿಯೋಗಸಾಧನತಯಾ ತ್ರಿಂಶದ್ವಿಧೋ ಭಾಗವತೋ ಧರ್ಮೋಽತ್ರ ಪ್ರತಿಪಾದ್ಯತೇ । ತಥಾಚೋಕ್ತಂ ಪ್ರಥಮಪ್ರಕರಣೇ ಅಖಿಲ-ಧರ್ಮಗುಪ್ತಯ ಇತಿ । ತತ್ರ ಕೋ ವರೀಯಾನಿತ್ಯತೋ ಯೇನೈವಂವಿಧಾಽವಸ್ಥಾ ಲಭ್ಯತೇ ಸ ವರೀಯಾನಿತಿ ಭಾವೇನ ಶ್ರೋತೄಣಾಂ ತತ್ರಾದರಜನನಾ-ಯಾದಾವೇವ ಜ್ಞಾಪಯತಿ ಯೇನ ತ್ವಚ್ಚರಣಾರವಿಂದ ಯೋರಾವಿಷ್ಟಚಿತ್ತೋ ಭವತಿ ಸ ವರೀಯಾನಿತಿ । ಅನೇಕೈರಪಿ ತಥಾ ಚೇತ್ ಕಥಂ । ಯೇನ ಪ್ರಾವಣ್ಯಮಧಿಕಂ ಸ ವರೀಯಾನಿತಿ ॥

**ಅಥವಾ** ಭಕ್ತಿಸ್ತಾವದ್ವಿದ್ಯತ ಏವ । ಸರ್ವಸಾಧನಸಾಧನತ್ವಾತ್ತಸ್ಯಾಃ । ಸಾಧ್ಯಾಪಿ ಭವತಿ । ಸರ್ವಸಾಧನಾ ನಾಮಪಿ ವಿಶೇಷವತ್ತಯಾ ಸಾಧ್ಯತ್ವಾಚ್ಚ । ಭಾಗವತಧರ್ಮೈರ್ಭಾವ್ಯಶ್ಚ ಭಕ್ತಿಯೋಗಃ ಕೀದೃಶ ಇತ್ಯತ ಆಹ ತ್ವಚ್ಚರಣಾರವಿಂದಯೋಗಾವಿಷ್ಟಚಿತ್ತ ಇತಿ ಯತ್ಸ ಏವ ಭಕ್ತಿಯೋಗಸ್ತಲ್ಲಭ್ಯ ಇತಿ । **ಯಥಾಹುಃ—**

''ಮದ್ಗುಣಶ್ರುತ ಮಾತ್ರೇಣ ಮಯಿ ಸರ್ವಗುಣಾಶ್ರಯೇ ।
ಮನೋಗತಿರವಿಚ್ಛಿನ್ನಾ ಯಥಾ ಗಂಗಾಂಭಸೋಽಮ್ಬುಧೌ ।
ಲಕ್ಷಣಂ ಭಕ್ತಿಯೋಗಸ್ಯ ನಿರ್ಗುಣಸ್ಯ ಹ್ಯುದಾಹೃತಮಿ''ತಿ ।

ನಿರ್ಗುಣಸ್ಯ ಮೋಕ್ಷಸಾಧನಸ್ಯ । ಏವಂವಿಧಭಕ್ತಿಯೋಗ ಸಾಧನಭೂತೋ ಭಾಗವತೋ ಧರ್ಮಃ ಕೀದೃಶ ಇತಿ ಶ್ರೋತೄಣಾ ಮುತ್ಕಂಠಾಶಮನಾಯ ಕಾಂಶ್ಚಿದೇವ ದರ್ಶಯತಿ ॥ ಶೃಣ್ವನ್ನಿತ್ಯಾದಿನಾ ॥ ಶ್ರವಣಾದಿರೇವ ಭಾಗವತಧರ್ಮ ಇತಿ ॥

**ಅಥವಾ** ಭಕ್ತಿ ತತ್ಸಾಧನಭಾಗವತಧರ್ಮಾಂಶ್ಚ ಪ್ರದರ್ಶ್ಯ ತತ್ಸಾಧ್ಯಂ ವೈರಾಗ್ಯಂ ಚ ಪ್ರದರ್ಶಯತಿ ॥ ಶೃಣ್ವನ್ನಿತಿ ॥ ಗ್ರಾಮ್ಯಕಥಾಃ ಗೃಣನ್ ತತ್ಪ್ರತಿಪಾದಕಶಬ್ದಾನ್ । ಇತ್ಯೇವಂ ಸರ್ವಾಸು ಕ್ರಿಯಾಸು ಕ್ರಿಯಮಾಣಾಸ್ವಪಿ ತ್ವಚ್ಚರಣಾರವಿಂದಯೋರೇವಾವಿಷ್ಟಚಿತ್ತ ಇತಿ ಯತ್ತದೇವ ವೈರಾಗ್ಯಮಿತಿ ಯಾವತ್ । ಅನೇನ ತ್ವಚ್ಚರಣಾರವಿಂದೇತರಾನಾವಿಷ್ಟಚಿತ್ತತ್ವೇ ಸತಿ ತದಾವಿಷ್ಟಚಿತ್ತತ್ವಂ ಲಬ್ಧಂ ॥ ತತ್ರೇತರಾನಾವಿಷ್ಟಚಿತ್ತತ್ವಮೇವ ವೈರಾಗ್ಯಂ । ಆವಿಷ್ಟಚಿತ್ತತ್ವಕಥನಂ ತು ತಜ್ಜನ್ಯಃ ಶ್ರೀಹರ್ಯನುಗ್ರಹಃ ಸರ್ವಸಾಧನೇಷ್ವಪಿ

ಸಾಧನಂ, ಭಗವದ್ಭಕ್ತಿವತ್ತಸ್ಸಾಧ್ಯಂ ಚ ಭವತಿ ವಿಶೇಷವತ್ತಯೇತಿ ಸೂಚನಾಯೇತಿ ಮಂತವ್ಯಂ ॥

**ಅಥವಾ** ಭಾಗವತಧರ್ಮಾನುಷ್ಠಾನೇನ ಜಾಯಮಾನಂ ಜ್ಞಾನಮೀದೃಶಮಿತಿ ದರ್ಶಯತಿ ॥ **ಶೃಣ್ವನ್ನಿತಿ ॥** ಶ್ರವಣಾದಿ ಕುರ್ವನ್ನಪಿ ತ್ವಚ್ಚರಣಾರವಿಂದಯೋರೇವಾವಿಷ್ಟಮಲಿವಲ್ಲಗ್ನಂ ಚಿತ್ತಂ ಯಸ್ಯ ಸ ಇತಿ ಯತ್ತದೇವ ಜ್ಞಾನಮಿತಿ। ಏವಶಬ್ದೇನಾನ್ಯವಿಷಯಕತಾಂ ವ್ಯವಚ್ಛಿನತ್ತಿ। ತೇನಾಯಮರ್ಥಃ ಸೂಚಿತಃ। ಸರ್ವೋ ಹಿ ಕ್ರಿಯಾಂ ಕುರ್ವನ್ನಹಮಿದಂ ಸಾಧಯಾಮೀತ್ಯನುಸಂಧತ್ತೇ। ಜ್ಞಾನೀ ತ್ವಹಮಂಶಂ ಪರಿತ್ಯಜ್ಯ ಮುಖ್ಯತಃ ಕರ್ತೃತ್ವಂ ತತ್ರೈವಾನುಸಂಧತ್ತೇ। ಪ್ರಯೋಜನಂ ಚ ನಾಕಾಂಕ್ಷತೇ। ಕಿಂತು ಶ್ರೀಹರಿಪೂಜಾಮೇವೋದ್ದಿಶತಿ। ಅತ ಏವಾದ್ಯಾಪಿ ಭಾಗವತಾ ಭುಕ್ತ್ವಾ ಶ್ರೀವಿಷ್ಣುಪೂಜಾಸ್ತ್ವಿತಿ ಭಣಂತಿ। ತಥಾಚಾನುಷ್ಠೀಯಮಾನ ಕ್ರಿಯಾಯಾಂ ಕರ್ತೃತ್ವಪೂಜ್ಯತ್ವಾಭ್ಯಾಂ ಧರ್ಮಾಭ್ಯಾಂ ಶ್ರೀಹರಿಂ ವಿಷಯೀಕುರ್ವಜ್ಜ್ಞಾನಂ ಭಾಗವತ ಧರ್ಮಾನುಷ್ಠಾನೇನ ಲಭ್ಯಮಿತಿ ॥

**ಅಥವಾ** ಕ್ರಿಯಾಸು ಯಸ್ತ್ವಚ್ಚರಣಾರವಿಂದಯೋರಾವಿಷ್ಟಚಿತ್ತೋ ನ ಭವಾಯ ಕಲ್ಪತೇ ಇತ್ಯುದಿತೇ ಅಧಿಕಾರಿಣ ಏವಮಾಕಾಂಕ್ಷೋದೇತಿ। ಭವಭಯಹರಂ ಕ್ರಿಯಾಸು ತಚ್ಚರಣಪ್ರಾವಣ್ಯಂ ಕಥಮಸ್ಮಾಕಂ ಮಂದಭಾಗ್ಯಾನಾಂ ಭವೇದಿತಿ ತತ್ರೋತ್ತರಮಾಹ ॥ **ಶೃಣ್ವನ್ನಿತಿ ॥** ತೇ ಮಂಗಲಾನಿ ನಾಮಾನಿ ಶೃಣ್ವನ್ ಗೃಣನ್ ತಾದೃಶಾನಿ ತೇ ರೂಪಾಣಿ ಸಂಸ್ಮರಯಂಶ್ಚ ಚಿಂತಯನ್ ತ್ವಚ್ಚರಣಾರವಿಂದಯೋರಾವಿಷ್ಟಚಿತ್ತೋ ಯಥಾ ಭವತಿ ತಥಾನ್ಯಾಸು ಕ್ರಿಯಾಸು ಕ್ರಿಯಮಾಣಾಸು ತ್ವಚ್ಚರಣಾರವಿಂದ-ಯೋರಾವಿಷ್ಟಚಿತ್ತೋ ಭವೇದೇವೇತಿ। ಇದಮುದಿತಂ **ಭವತಿ—** ಭಗವತೋ ಗುಣಕರ್ಮನಾಮಾನಿ ಶೃಣ್ವತಾಂ ಶ್ರೀಕೃಷ್ಣಾದಿರೂಪಾಣಿ ಸ್ಮರತಾಂ ಚ ಪ್ರೇಕ್ಷಾವತಾಂ ತಾವಚ್ಚಿತ್ತಸ್ಯ ತತ್ಪ್ರಾವಣ್ಯಂ ಅನುಭವಸಿದ್ಧಂ। ಅತ ಏವಾನ್ಯತ್ರ ಗಚ್ಛಂತೀಂ ಮನೋವೃತ್ತಿಮಪಿ ಬಲಾದಾಕೃಷ್ಯ ಸ್ವವಿಷಯಾಂ ಕರೋತೀತಿ ಸೂಚಯಿತುಂ ಉಭಯಂ ಮಂಗಲಾನೀತಿ ವಿಶಿಂಷಂತಿ। ಏವಂ ಸುಬಹುಕಾಲ ಶ್ರವಣಾದಾವಭ್ಯಸ್ತಪದಂ ಚಿತ್ತಂ ಕಟಾದಿವತ್ಸಂಸ್ಕಾರ ವಶಾಚ್ಛ್ರವಣಾದಿತೋಽ-ನ್ಯಾಸ್ವಪಿ ಕ್ರಿಯಾಸು ತತ್ಪ್ರಾವಣ್ಯಂ ಲಭೇದೇವೇತಿ ॥

**ಅಥವಾ** ಯಾವದಭ್ಯಾಸಪಾಟವಾಭಾವೇನ ವಿನಾ ಶ್ರವಣಾದಿಕಮನ್ಯಾಸು ಕ್ರಿಯಾಸು ಕ್ರಿಯಮಾಣಾಸು ಚಿತ್ತಂ ತತ್ಪ್ರಾವಣ್ಯಂ ನ ಲಭೇತ

**ತಾವತ್ಪರ್ಯಂತಮನ್ಯಮುಖೇನ ಶ್ರವಣಾದಿಕಂ ಕುರ್ವನ್ನೇವ ತೇನ ತತ್ಶ್ರವಣಚಿತ್ತೋ ಭೂತ್ವೈವಾಗ್ನಿಹೋತ್ರಾದ್ಯಾಃ ಕ್ರಿಯಾಃ ಕುರ್ವೀತೇತ್ಯಾಹ ॥ ಶೃಣ್ವನ್ನಿತಿ ॥ ಯೋಽಧಿಕಾರೀ ಯಾವದಲಬ್ಧಚಿತ್ತಪಾಟವಸ್ತಾವನ್ಮಂಗಲಾನಿ ನಾಮಾನಿ ಶೃಣ್ವನ್ ಗೃಣನ್ ತಾದೃಶಾನಿ ರೂಪಾಣಿ ಸಂಸ್ಮರಯಂಶ್ಚಿತಯಂಶ್ಚ ತೇನ ತ್ವಚ್ಚರಣಾರವಿಂದಯೋರಾವಿಷ್ಟಚಿತ್ತೋ ಭೂತ್ವಾಽನ್ಯಾಸು ಅಗ್ನಿಹೋತ್ರಾದಿ ಕ್ರಿಯಾಸು ಪ್ರವರ್ತೇತ ತತೋ ಭವಾಯ ನ ಕಲ್ಪತ ಇತಿ ಯೋಜನಾ ॥**



**ಬ್ರಹ್ಮದೇವರು ದೇವಕಿಯ ಗರ್ಭದಲ್ಲಿರುವ ಕೃಷ್ಣನನ್ನು ಸ್ತುತಿಸುತ್ತಾರೆ— 'ತಾವು ಯಾವುದೇ ಕೆಲಸ ಮಾಡುವಾಗಲೂ ನಿನ್ನ ಮಂಗಳಕರವಾದ ನಾಮರೂಪಗಳ ಶ್ರವಣ ಕೀರ್ತನ ಸ್ಮರಣ ಮನನಗಳನ್ನು ತಾವೂ ಮಾಡುತ್ತ ಬೇರೆಯವರಿಂದಲೂ ಮಾಡಿಸುತ್ತ ನಿನ್ನ ಪಾದಕಮಲಗಳಲ್ಲಿ ಮನಸನ್ನಿಡುವವರು ಸಂಸಾರಕ್ಲೇಶಗಳಿಗೆ ಭಾಗಿಗಳಾಗುವುದಿಲ್ಲ'**

—ಇಲ್ಲಿ ಸಂಕ್ಷೇಪವಾಗಿ ಶಾಸ್ತ್ರಾರ್ಥ ಉಕ್ತವಾಗಿದೆ—

'ಶೃಣ್ವನ್ ಗೃಣನ್' 'ಶ್ರವಣ ಕೀರ್ತನ ಮನನಗಳನ್ನು ಮಾಡುತ್ತ' ಎನ್ನುವಂತೆಯೇ 'ಸಂಸ್ಮರನ್' ಸಂಸ್ಮರಣವನ್ನು ಮಾಡುತ್ತ ಎಂದೇ ಹೇಳದೆ 'ಸಂಸ್ಮರಯನ್' 'ಸಂಸ್ಮರಣವನ್ನು ಬೇರೆಯವರಿಂದ ಮಾಡಿಸುತ್ತ' ಎಂದು ಹೇಳುವುದರಿಂದ ಶ್ರವಣ ಕೀರ್ತನ ಮನನಗಳನ್ನು ಕೂಡ ಬೇರೆಯವರಿಂದಲೂ ಮಾಡಿಸಬೇಕೆನ್ನುವ ಅಭಿಪ್ರಾಯ ಕಾಣುತ್ತದೆ. ಶ್ರವಣಾದಿಗಳನ್ನು ಹೀಗೆ ಅನುದಿನ ಮಾಡಿ ಮಾಡಿಸುತ್ತ ಹರಿಚರಣಕಮಲದಲ್ಲಿ ಮನಸ್ಸಿಡುವವನು ಮೋಕ್ಷಾದಿ ಸಕಲ ಪುರುಷಾರ್ಥಗಳಿಗೆ ಭಾಜನನಾಗುವನು ಎಂಬುದು ಸಂಕ್ಷೇಪ ವಾಗಿ ಸಕಲ ಶಾಸ್ತ್ರಗಳಿಂದ ಸಿದ್ಧವಾದ ಪ್ರಮೇಯ. ಸಂಕ್ಷೇಪವಾಗಿ 'ಶಾಸ್ತ್ರಪ್ರಮೇಯವೇನು?' ಎನ್ನುವ ಪರೀಕ್ಷಿತನ ಪ್ರಶ್ನೆಗೆ ಸಂಕ್ಷೇಪವಾಗಿ 'ಇದು ಶಾಸ್ತ್ರಾರ್ಥ' ಎಂದು ಶುಕಮುನಿ ನೀಡುವ ಉತ್ತರದಿಂದ ಇದು ಸಿದ್ಧವಾಗು ತ್ತದೆ—

ಯಚ್ಛ್ರೋತವ್ಯಂ ಅಥೋ ಜಾಪ್ಯಂ ಯತ್ಕರ್ತವ್ಯಂ ನೃಭಿಃ ಸದಾ ।
ಸ್ಮರ್ತವ್ಯಂ ಭಜನೀಯಂ ವಾ ಬ್ರೂಹಿ ಯದ್ವಾ ವಿಪರ್ಯಯಂ ॥

(ಭಾ.೧.೨೦.೧೪)

'ಮುನಿಯೆ, ನಾನು ನಿಮ್ಮಲ್ಲಿ ಕೇಳಿಕೊಳ್ಳುತ್ತೇನೆ, ಸಾವಿನ ಅಂಚಿನಲ್ಲಿ ಇರುವವನು ಏನು ಕೇಳಬೇಕು. ಏನು ಜಪಿಸಬೇಕು. ಏನು ಕರ್ಮ ಮಾಡಬೇಕು ಏನು ಸ್ಮರಿಸಬೇಕು, ಏನು ಭಜಿಸಬೇಕು, ಇದಕ್ಕೆ ವಿಪರೀತವಾಗಿ ಏನೆಲ್ಲ ಮಾಡಬಾರದು, ಕೇಳಬಾರದು ಎಲ್ಲವನ್ನೂ ಹೇಳಿರಿ' ಎಂದು ಪರೀಕ್ಷಿತನು ಸಂಕ್ಷೇಪವಾಗಿ ಶಾಸ್ತ್ರಾರ್ಥ ಏನೆಂದು ಪ್ರಶ್ನೆ ಮಾಡಿದ್ದಾನೆ.

ಇದಕ್ಕೆ ಉತ್ತರವಾಗಿ ಶುಕಮುನಿಗಳೂ ಸಂಕ್ಷೇಪವಾಗಿ ಹೀಗೆ ಶಾಸ್ತ್ರಾರ್ಥ ವನ್ನು ಮೊದಲಿಗೆ ಹೇಳುತ್ತಾರೆ—

ತಸ್ಮಾದ್ ಭಾರತ ಸರ್ವಾತ್ಮಾ ಭಗವಾನ್ ಹರಿರೀಶ್ವರಃ ।
ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯಶ್ಚೇಚ್ಛತಾऽಭಯಂ ॥

(ಭಾ.೨.೧.೫)

'ಆದರಿಂದ ರಾಜನೇ! ಭಗವಾನ್ ಹರಿಯೊಬ್ಬನನ್ನೇ ಮುಮುಕ್ಷುವು ಕೇಳಿ ತಿಳಿಯಬೇಕು ಹೇಳಬೇಕು ಸ್ಮರಿಸಬೇಕು ಅವನೊಬ್ಬನೇ ಸಕಲಾಭೀಷ್ಟದಾಯಕ ಸರ್ವೇಶ್ವರ' ಎಂದು ಶುಕಮುನಿ ಹೇಳುತ್ತಾರೆ.

ಈ ಶಾಸ್ತ್ರಾರ್ಥವು ವಿವೇಕಿಗಳಿಗೆ ಅನುಭವದಿಂದಲೂ ಸಿದ್ಧವಾಗುತ್ತದೆ—

(೧) ಎಲ್ಲರೂ ಬಯಸುವ ಪುರುಷಾರ್ಥವೆಂದರೆ ಮೊದಲಿಗೆ ದುಃಖ ನಿವೃತ್ತಿಯೆ. ಭಾರ ಹೊತ್ತು ಆಯಾಸಪಡುವವನು ಮೊದಲು ಬಯಸುವುದು ಭಾರವನ್ನು ಇಳಿಸಬೇಕೆಂದು ತಾನೆ? ಅಂಥ ದುಃಖನಿವೃತ್ತಿಯು ಶ್ರವಣಾದಿ ಗಳಿಂದ ಮನಸು ಭಗವಂತನಲ್ಲಿ ನೆಲೆಸಿದಾಗ ಅನುಭವಕ್ಕೆ ಬಂದೇ ಬರುತ್ತದೆ. ಇದನ್ನೇ ಶ್ಲೋಕದಲ್ಲಿ

'ಶೃಣ್ವನ್ ಗೃಣನ್...ಆವಿಷ್ಟ ಚಿತ್ತೋ ನ ಭವಾಯ ಕಲ್ಪತೇ'

ಎಂದಿದ್ದಾರೆ.

'ಶ್ರವಣಾದಿಗಳಿಂದ ಮನಸು ಹರಿಯಲ್ಲಿಯೆ ನೆಲೆಸಿದಾಗ ಸಂಸಾರದ ದುಃಖವಿರುವುದೆ? ಇಲ್ಲ. 'ಭವಾಯ ಕಲ್ಪತೇ? ನ' ಇದು ಅನುಭವಸಿದ್ಧ ಎಂದು.

(೨) ಭಾಗವತದಲ್ಲಿ ಭಕ್ತಿಯೋಗವು ಮುಕ್ತಿಸಾಧನವೆಂದು ಹೇಳುತ್ತಾರೆ. ಜ್ಞಾನಯೋಗ ಕರ್ಮಯೋಗಗಳೂ ಕೂಡ ಮುಕ್ತಿಸಾಧನ ಎನ್ನುತ್ತಾರೆ.

ಯೋಗಾಸ್ತ್ರಯೋ ಮಯಾ ಪ್ರೋಕ್ತಾ ನೃಣಾಂ ಶ್ರೇಯೋ ವಿಧಿತ್ಸಯಾ ।
ಜ್ಞಾನಂ ಕರ್ಮ ಚ ಭಕ್ತಿಶ್ಚ ನೋಪಾಯೋಽನ್ಯೋಽಸ್ತಿ ಕುತ್ರಚಿತ್ ।

ಶ್ರೀಕೃಷ್ಣ ಉದ್ಧವನಿಗೆ ನುಡಿದ—'ಯೋಗ್ಯರಿಗೆ ಶ್ರೇಯಸ್ಸನ್ನು ದೊರಕಿಸುವ ಉದ್ದೇಶದಿಂದ ನಾನು ಜ್ಞಾನ ಕರ್ಮ ಭಕ್ತಿ ಎಂದು ಮೂರು ಸಾಧನಗಳನ್ನು ಹೇಳಿದ್ದೇನೆ. ಬೇರೆ ಸಾಧನಗಳು ಎಲ್ಲಿಯೂ ಇಲ್ಲ' ಎಂದು. ಈ ಮೂರು 'ಯೋಗ'ಗಳಲ್ಲಿ ಅಂದರೆ ಮೋಕ್ಷಸಾಧನಗಳಲ್ಲಿ ಯಾವುದು ಶ್ರೇಷ್ಠವೆಂದರೆ, ಈ ಶ್ಲೋಕವು ಹೇಳುತ್ತದೆ—'ಯಾವುದರಿಂದ ಮನಸು ಹರಿಯ ಪಾದಕಮಲದಲ್ಲಿ ನೆಲೆಸುವುದೋ ಅದೇ ಶ್ರೇಷ್ಠ ಸಾಧನ' ಎಂದು.

'ತ್ವಚ್ಚರಣಾರವಿಂದಯೋಃ ಆವಿಷ್ಟ ಚಿತ್ತಃ'

ಎಂಬ ಮಾತಿನಲ್ಲಿ ಇದು ಸ್ಪಷ್ಟವಿದೆ. 'ಹರಿಪಾದಕಮಲದಲ್ಲಿಯೇ ಆಸಕ್ತವಾಗಿರುವ ಅವಸ್ಥೆಯು ಮನಸಿಗೆ ದೊರಕುವುದು ಪ್ರಾಯಃ ಭಕ್ತಿಯೋಗದಿಂದಲೆ. ಆದರಿಂದ ಮುಮುಕ್ಷುವು ಭಕ್ತಿಯೋಗದಲ್ಲಿ ಆದರ ತೋರಬೇಕು' ಎಂದು.

ಇದನ್ನು ಶ್ರೀಕೃಷ್ಣನು ಉದ್ಧವನಿಗೆ ಸ್ಪಷ್ಟವಾಗಿ ಹೇಳಿರುವನು—

ಏತಾವಾನ್ ಯೋಗ ಆದಿಷ್ಟೋ ಮದ್‌ಭಕ್ತೈಃ ಸನಕಾದಿಭಿಃ ।
ಸರ್ವತೋ ಮನ ಆಕೃಷ್ಯ ಮಯ್ಯದ್ಧಾಽಽವೇಶ್ಯತೇ ಯಥಾ ॥
(ಭಾ.೧೧.೧೩.೧೪)

'ಮನಸ್ಸನ್ನು ಎಲ್ಲ ಬೇರೆ ವಿಷಯಪದಾರ್ಥಗಳಿಂದ ಈಚೆಗೆ ಸೆಳೆದುಕೊಂಡು ನನ್ನಲ್ಲಿ ಸ್ಥಿರವಾಗಿ ಹೇಗೆ ನಿಲ್ಲಿಸಲು ಸಾಧ್ಯವೆಂಬುದನ್ನು ನನ್ನ ಶಿಷ್ಯರಾದ ಸನಕಾದಿ ಮುನಿಗಳು ಹೇಳುತ್ತ ಈ ಭಕ್ತಿಯೋಗವನ್ನು ಅದಕ್ಕೆ ಸಾಧನವಾಗಿ ಉಪದೇಶಿಸಿದ್ದಾರೆ' ಎಂದು.

ಮತ್ತು ಕಪಿಲನೂ ತಾಯಿಗೆ ಉಪದೇಶಿಸಿದ—

ನ ಯುಜ್ಯಮಾನಯಾ ಭಕ್ತ್ಯಾ ಭಗವತ್ಯಖಿಲಾತ್ಮನಿ ।
ಸದೃಶೋಽಸ್ತಿ ಶಿವಃ ಪಂಥಾ ಯೋಗಿನಾಂ ಬ್ರಹ್ಮಸಿದ್ಧಯೇ ॥
(ಭಾ.೩.೨೬.೧೯)

'ಸರ್ವೇಶನಾದ ಭಗವಂತನಲ್ಲಿ ಭಕ್ತಿ ಮಾಡುವುದೊಂದೇ ಯೋಗಿಗಳಿಗೆ ಭಗವತ್ ಪ್ರಾಪ್ತಿಗೆ ಇರುವ ಮಾರ್ಗ. ಅದಕ್ಕೆ ಸದೃಶವಾದ ಶ್ರೇಷ್ಠ ಮಾರ್ಗ ಇನ್ನೊಂದಿಲ್ಲ' ಎಂದು.

(೩) ಭಕ್ತಿಯೋಗಕ್ಕೆ ಸಾಧನವಾಗಿ ಮೂವತ್ತು ಬಗೆಯ ಭಾಗವತಧರ್ಮವನ್ನು ಭಾಗವತವು ಪ್ರತಿಪಾದಿಸುತ್ತದೆ. ಮೊದಲನೆಯದಾದ ಭಾಗವತಾಗತಿ ಪ್ರಕರಣದಲ್ಲಿ 'ಅತೋ ಮಹಾಭಾಗ...ಅಖಿಲಧರ್ಮಗುಪ್ತಯೇ' 'ಎಲ್ಲ ಭಾಗವತಧರ್ಮಗಳ ರಕ್ಷಣೆಗಾಗಿಯೇ ಧರ್ಮೋಪದೇಶದ ವ್ರತ ತೊಟ್ಟಿರುವ ನೀವು ಅದಕ್ಕಾಗಿ ಭಾಗವತವನ್ನು ರಚಿಸಿರಿ' ಎಂದು ನಾರದರು ಶ್ರೀವ್ಯಾಸರನ್ನು ಪ್ರಾರ್ಥಿಸುತ್ತಾರೆ. ಈ ಮೂವತ್ತು ಭಾಗವತಧರ್ಮಗಳಲ್ಲಿ ಯಾವುದು ಶ್ರೇಷ್ಠ ಎಂದರೆ, ಯಾವ ಧರ್ಮದ ಆಚರಣೆಯಿಂದ ಮನಸು ಹರಿಪಾದಕಮಲಾಸಕ್ತವಾಗುವುದೋ ಅದೇ ಶ್ರೇಷ್ಠ ಎಂಬ ಅಭಿಪ್ರಾಯದಿಂದ ಅದರಲ್ಲಿ ಆದರ ಹುಟ್ಟಿಸುವುದಕ್ಕಾಗಿ,

'ತ್ವಚ್ಚರಣಾರವಿಂದಯೋರಾವಿಷ್ಟ ಚಿತ್ತಃ'

'ಹರಿಪಾದಕಮಲದಲ್ಲಿ ಆವಿಷ್ಟಚಿತ್ತನಾದರೆ ಸಂಸಾರ ದುಃಖವಿಲ್ಲವಾಗುವುದು' ಎಂದು ಹೇಳುವ ಮೂಲಕ ಹರಿಪಾದಕಮಲದಲ್ಲಿ ಆಸಕ್ತಿ ಉಂಟುಮಾಡುವ ಶ್ರವಣಾದಿ ಧರ್ಮವನ್ನೇ ಶ್ರೇಷ್ಠವೆಂದು ತಿಳಿಸಿದ್ದಾರೆ. 'ಬೇರೆ ಧರ್ಮವೂ ಹರಿಪಾದಕಮಲದಲ್ಲಿ ಆಸಕ್ತಿ ನೀಡುತ್ತಿರುವಾಗ ಶ್ರವಣಾದಿ ಧರ್ಮವೇ ಶ್ರೇಷ್ಠ ಹೇಗೆ' ಎಂದರೆ, ಯಾವುದರಿಂದ ಹೆಚ್ಚು ಆಸಕ್ತಿ ಶ್ರದ್ಧೆ ಭಕ್ತಿಗಳುಂಟಾಗುವುವೋ ಅದು ಶ್ರೇಷ್ಠವೆಂದು ಅಭಿಪ್ರಾಯ.

(೪) ಹರಿಭಕ್ತಿ ಮುಕ್ತಿಯೋಗ್ಯರಲ್ಲಿ ಅನಾದಿಕಾಲದಿಂದಲೂ ಇದೆ. ಅದುವೆ ಎಲ್ಲ ಮೋಕ್ಷಸಾಧನಗಳಿಗೆ ಸಾಧನ. ಆದರೆ ಎಲ್ಲ ಮೋಕ್ಷಸಾಧನಗಳಿಂದ ಅದು ದೃಢವಾಗುತ್ತದೆ. 'ದೃಢಭಕ್ತಿ' ಎಂದರೆ ಹೇಗೆ ಇರುತ್ತದೆ? ಎಂಬುದನ್ನು

'ತ್ವಚ್ಚರಣಾರವಿಂದಯೋರಾವಿಷ್ಟಚಿತ್ತಃ'

ಎಂಬ ಮಾತು ತಿಳಿಸುತ್ತದೆ. ಚಿತ್ತವು ಹರಿಪಾದಕಮಲಗಳಲ್ಲಿ ಆವಿಷ್ಟವಾಗುವಂತೆ ಮಾಡುವುದೇ 'ದೃಢಭಕ್ತಿ' ಎನಿಸುತ್ತದೆ. ಕಪಿಲನು ತಾಯಿಗೆ ಹೇಳುತ್ತಾನೆ—

ಮದ್ಗುಣ ಶ್ರುತಿಮಾತ್ರೇಣ ಮಯಿ ಸರ್ವಗುಣಾಶ್ರಯೇ ।
ಮನೋಗತಿ ರವಿಚ್ಛಿನ್ನಾ ಯಥಾ ಗಂಗಾಂಭಸೋಽಂಬುಧೌ ।
ಲಕ್ಷಣಂ ಭಕ್ತಿಯೋಗಸ್ಯ ನಿರ್ಗುಣಸ್ಯ ಹ್ಯುದಾಹೃತಂ ॥

(ಭಾ.೩.೩೦.೧೧)

ಜೀವಸ್ವಭಾವಭೂತವಾದ ಭಕ್ತಿಯು ದೃಢವಾದಾಗ, ಹರಿಯ ಗುಣಗಳನ್ನು ಕೇಳಿದ ಮಾತ್ರಕ್ಕೇ, ಗಂಗಾಪ್ರವಾಹಸಮುದ್ರದ ಕಡೆಗೇ ಹರಿಯುವಂತೆ ಭಕ್ತಿ ಹರಿಯ ಕಡೆಗೇ ಹರಿಯುತ್ತದೆ. ಇದು ಮೋಕ್ಷಸಾಧನ ಭಕ್ತಿಯೋಗದ ಲಕ್ಷಣ. 'ನಿರ್ಗುಣಭಕ್ತಿ' ಎಂದರೆ ಗುಣತ್ರಯರಹಿತವಾದ ಮೋಕ್ಷಕ್ಕೆ ಸಾಧನವಾದ ಭಕ್ತಿ ಎಂದರ್ಥ. ಇಂಥ ಭಕ್ತಿಗೆ ಸಾಧನವಾದ ಭಾಗವತಧರ್ಮ ಯಾವುದೆಂದರೆ ಶ್ಲೋಕದಲ್ಲಿ 'ಶೃಣ್ವನ್ ಗೃಣನ್' ಎಂದು ಮುಂತಾಗಿ ಹೇಳಿದ ಶ್ರವಣಾದಿ ಧರ್ಮವೇ ಭಾಗವತ ಧರ್ಮ ಎಂದು ಶ್ಲೋಕದ ಅಭಿಪ್ರಾಯ.

(೫) ಹೀಗೆ ಭಕ್ತಿಯನ್ನೂ ಅದಕ್ಕೆ ಸಾಧನವಾದ ಭಾಗವತಧರ್ಮಗಳನ್ನೂ ಹೇಳುತ್ತಿರುವ ಈ ಶ್ಲೋಕವೇ ಭಕ್ತಿಯಿಂದ ಹೊಂದಲು ಸಾಧ್ಯವಾದ ವೈರಾಗ್ಯವೂ ಹೇಗೆ ಇರುತ್ತದೆ ಎಂದೂ ಹೇಳುತ್ತದೆ—

'ಶೃಣ್ವನ್ ಗೃಣನ್...ತ್ವಚ್ಚರಣಾರವಿಂದಯೋರಾವಿಷ್ಟಚಿತ್ತಃ'

ಈಗ ಇಲ್ಲಿ 'ಶೃಣ್ವನ್' ಎಂದರೆ 'ಹರಿಗುಣಗಳನ್ನು ಕೇಳುತ್ತ' ಎಂದು ಮುಂತಾಗಿ ಹಿಂದೆ ಹೇಳಿದಂತೆ ಅರ್ಥವಲ್ಲ. 'ವಿಷಯಭೋಗಪದಾರ್ಥಗಳ ಬಗ್ಗೆ ಶ್ರವಣಕೀರ್ತನ ಸ್ಮರಣಾದಿಗಳನ್ನು ಮಾಡುತ್ತ' ಎಂದರ್ಥ.

ವಿಷಯಪದಾರ್ಥ ಶ್ರವಣಾದಿಗಳನ್ನು ಮಾಡುತ್ತ ಬೇರೆ ಕೆಲಸ ಮಾಡುತ್ತಿರುವಾಗಲೂ ಕೂಡ ಮನಸು ಮಾತ್ರ ಹರಿಪಾದಕಮಲದಲ್ಲಿಯೇ ನೆಲೆಸಿದ್ದರೆ ಆಗ ಸಂಸಾರದುಃಖವು ಬಾಧಿಸುವುದಿಲ್ಲ ಎಂದಂತಾಗುವುದು.

'ಹರಿಪಾದಕಮಲಕ್ಕಿಂತ ಬೇರೆಕಡೆಗೆ ಹರಿಯದೆ ಹರಿಪಾದಕಮಲದ ಕಡೆಗೇ ಮನೋವೃತ್ತಿ ಹರಿಯುತ್ತಿರಬೇಕು' ಎಂದರೆ ಅದು ಅನ್ಯತ್ರ ವಿರಕ್ತಿಯೆ. ಚಿತ್ತವೃತ್ತಿ ಅನ್ಯತ್ರ ಹರಿಯದಿರುವುದೇ ವೈರಾಗ್ಯ ತಾನೆ? ಅದನ್ನು ಶ್ಲೋಕವು ಹೇಳುತ್ತದೆ.

ಹರಿಪಾದಕಮಲದ ಕಡೆಗೇ ಚಿತ್ತವೃತ್ತಿ ಹರಿಯಬೇಕೆನ್ನುವ ಅಂಶವೂ ಆದರಿಂದ ಲಭ್ಯವಾಗುವ ಹರ್ಯನುಗ್ರಹವೂ ಸರ್ವಸಾಧನಗಳಿಗೂ ಸಾಧನವೂ

ಆಗಿದೆ. ಸರ್ವಸಾಧನಗಳಿಂದ ವಿಶೇಷವಾಗಿ ಸಾಧ್ಯವೂ ಆಗಿದೆ. ಭಕ್ತಿಯಂತೆಯೇ ಎಂದು ಸೂಚಿಸುತ್ತಿದೆ.

ಭಕ್ತಿಯಂತೆಯೇ ಅದರಿಂದ ಲಭ್ಯವಾಗುವ ಹರ್ಯನುಗ್ರಹವೂ ಅನಾದಿ ಕಾಲದಿಂದಲೂ ಮುಕ್ತಿಯೋಗ್ಯರಲ್ಲಿ ಇದ್ದೇ ಇದೆ. ಅದರ ಬಲದಿಂದಲೆ ಸಕಲ ಭಾಗವತಧರ್ಮಾನುಷ್ಠಾನವು ಸಾಧ್ಯವಾಗುತ್ತದೆ. ಆ ಧರ್ಮಾನುಷ್ಠಾನ ದಿಂದ ತಿರುಗಿ ಆ ಹರ್ಯನುಗ್ರಹ ಹೆಚ್ಚುತ್ತದೆ. ಹೆಚ್ಚಿದ ಹರ್ಯನುಗ್ರಹದಿಂದಲೇ ಮೋಕ್ಷ ಲಾಭ. ಸಂಸಾರದುಃಖ ನಿವೃತ್ತಿ ಎಂದು ಶ್ಲೋಕಾಭಿಪ್ರಾಯ.

(೬) ಭಾಗವತಧರ್ಮಾನುಷ್ಠಾನದಿಂದ ಲಭ್ಯವಾಗುವ ಜ್ಞಾನ ಯಾವ ರೀತಿಯದೆಂದೂ ಈ ಶ್ಲೋಕವೆ ಹೇಳುತ್ತದೆ—

'ಶ್ರವಣಕೀರ್ತನಾದಿಕರ್ಮಗಳನ್ನು ಮಾಡುತ್ತಿದ್ದರೂ ಮನಸ್ಸು ಹರಿಪಾದ ಕಮಲದಲ್ಲಿಯೇ ದುಂಬಿಯಂತೆ ಆಸಕ್ತವಾಗಿವುದೇ ಮೋಕ್ಷಸಾಧನವಾದ ಜ್ಞಾನ' ಎಂದು ಹೇಳುತ್ತಿದೆ.

ಹರಿಪಾದಕಮಲದಲ್ಲಿಯೇ ಎಂದು ಒತ್ತಿ ಹೇಳುವುದರ ಅಭಿಪ್ರಾಯ. ಹೀಗೆ—

ಎಲ್ಲರೂ ಕರ್ಮಮಾಡುವಾಗ 'ನಾನು ಈ ಕರ್ಮವನ್ನು ಮಾಡುತ್ತಿದ್ದೇನೆ' ಎಂದು ತನ್ನಲ್ಲಿ ಕರ್ತೃತ್ವಾನುಸಂಧಾನ ಮಾಡುತ್ತಾರೆ. ಜ್ಞಾನಿಯು 'ನಾನು' ಎಂಬುದನ್ನು ಬಿಟ್ಟು ಮುಖ್ಯ ಕರ್ತೃತ್ವವನ್ನು ಹರಿಯಲ್ಲಿಯೇ ಅನುಸಂಧಾನ ಮಾಡುತ್ತಾನೆ. ಕರ್ಮದಿಂದ ತನಗೆ ಫಲ ಲಭ್ಯವಾಗಬೇಕೆಂದೂ ಅವನು ಬಯಸುವುದಿಲ್ಲ. 'ಶ್ರೀಹರಿಃ ಪ್ರೀಯತಾಂ' ಹರಿ ಪ್ರೀತನಾಗಲಿ, ಎಂದೂ 'ಇದು ಹರಿಪೂಜೆಯಾಗಲಿ' ಎಂದೂ ಉದ್ದೇಶಿಸುತ್ತಾನೆ. ಅದರಿಂದಲೇ ಇಂದಿಗೂ ಭಗವದ್‌ಭಕ್ತರು ಭೋಜನ ಮಾಡುವಾಗ 'ಇದು ಶ್ರೀವಿಷ್ಣುಪೂಜೆಯಾಗಲಿ ಶ್ರೀಮದ್ರಮಾರಮಣ ಗೋವಿಂದಾಽಽ' ಎನ್ನುತ್ತಾರೆ. ಹೀಗಾಗಿ ತಾನು ಮಾಡುವ ಕರ್ಮಕ್ಕೆ ಮುಖ್ಯ ಕರ್ತನು ಹರಿಯೆ. ಕರ್ಮದಿಂದ ಪೂಜಿತನಾಗು ವವನೂ ಹರಿಯೆ, ಎಂದು ಹರಿಯನ್ನೇ ವಿಷಯೀಕರಿಸುವ ಜ್ಞಾನವು ಭಾಗವತ ಧರ್ಮಾನುಷ್ಠಾನದಿಂದ ಲಭ್ಯವೆಂದು ಹೇಳಿದಂತಾಗುವುದು.

(೭) 'ಕರ್ಮಮಾಡುವಾಗ ನಿನ್ನ ಸಾಧಕಮಲಗಳಲ್ಲಿ ಮನಸ್ಸಿಟ್ಟವರಿಗೆ ಸಂಸಾರ ದುಃಖವಿಲ್ಲ' ಎಂದು ಹೇಳಿದಾಗ ಭಕ್ತನು ತನಗೆ ತಾನೇ ಹೇಳಿಕೊಳ್ಳು

ತ್ತಾನೆ. 'ಭವಭಯಹರನಾದ ಹರಿಯಲ್ಲಿ ಮನಸ್ಸು ನಿಲ್ಲಬೇಕೆಂದರೆ ನಾವು ಎಲ್ಲಿ ಅದಕ್ಕೆ ಪುಣ್ಯ ಮಾಡಿರುತ್ತೇವೆ? ಎಂದು. ಆದರೆ ಹೀಗೆ ಸಾಧಕರು ಚಿಂತಿಸ ಬೇಕಾಗಿಲ್ಲ. ಹರಿಯ ಮಂಗಳನಾಮಗಳನ್ನು ಹಾಡುತ್ತ ಮಂಗಳ ರೂಪಗಳನ್ನು ನೆನೆಯುತ್ತ ಬಹುಕಾಲ ಶ್ರವಣಮನನಾದಿಗಳನ್ನು ನಡೆಸುತ್ತಿದ್ದರೆ ಮನಸು ಹರಿಯ ಕಡೆಗೆ ಸಹಜವಾಗಿ ಹೋಗುವುದು. ಇದು ಮಂಗಳಕರವಾದ ಹರಿನಾಮ ಹರಿರೂಪಗಳ ಪ್ರಭಾವ. ಇದನ್ನು ಸೂಚಿಸಲೆಂದು ಶ್ಲೋಕದಲ್ಲಿ 'ಮಂಗಲಾನಿ ಮಂಗಲಾನಿ' ಎಂದು ನಾಮರೂಪಗಳೆರಡಕ್ಕೂ ವಿಶೇಷಣ ನೀಡಿದ್ದಾರೆ. ಬೇರೆ ಕಡೆ ಹೋಗುವ ಮನಸ್ಸನ್ನು ನಾಮರೂಪಗಳು ತಾವೇ ಈಚೆಗೆ ಸೆಳೆಯುತ್ತವೆ!

ಬಹುಕಾಲ ಶ್ರವಣಾದಿಕರ್ಮಗಳಲ್ಲಿ ಮನಸ್ಸು ಹೀಗೆ ಹರಿಯ ಕಡೆಗೆ ಧಾವಿಸುವುದು ಅಭ್ಯಾಸವಾಯಿತೆಂದರೆ ಮುಂದೆ ಅನ್ಯಕರ್ಮಗಳನ್ನು ಮಾಡುವಲ್ಲಿಯೂ ಮನಸು ಹಾಗೇ ಹರಿಯ ಕಡೆಗೇ ಅಭ್ಯಾಸ ಬಲದಿಂದ ಓಡುತ್ತದೆ, ಮಡಚಿ ಇಟ್ಟಿದ್ದ ಚಾಪೆ ಬಿಡಿಸಿದರೂ ತಾನಾಗಿ ಮಡಚಿಕೊಳ್ಳುವಂತೆ!

(೮) ಅಭ್ಯಾಸ ಪಾಟವವಿಲ್ಲದವರಿಗೆ ಅನ್ಯಕರ್ಮಕಾಲದಲ್ಲಿ ಶ್ರವಣಾದಿ ಗಳಿಲ್ಲದೆ ಮನಸು ಹರಿಯಕಡೆಗೆ ಹೋಗಲಾರದು ನಿಜ. ಆದರೂ ಅನ್ಯಮುಖ ದಿಂದ ಅಂದರೆ ಅನ್ಯ ಗಾಯಕರ ಕೀರ್ತನಕಾರರ ಪ್ರವಚನಕಾರ ಸಜ್ಜನರ ಸಹಾಯದಿಂದ ಶ್ರವಣಾದಿಗಳನ್ನು ಮಾಡುತ್ತಲೇ ಅಗ್ನಿಹೋತ್ರಾದಿ ಭೋಜನಾದಿ ಅನ್ಯಕರ್ಮಗಳನ್ನು ಮಾಡುತ್ತಿರಬೇಕು. ಆಗ ಮನಸು ಹರಿಯ ಬಳಿಗೆ ಹೋಗುವುದು ಸಾಧ್ಯವಿದೆ. ಇದನ್ನು 'ಸಂಸ್ಮರಯನ್' ಎಂದು ಇನ್ನೊಬ್ಬರ ಸಹಾಯದಿಂದ ಹರಿಸ್ಮರಣೆ ಮಾಡಿ ಯಾದರೂ ಹರಿಚರಣಕಮಲದ ಕಡೆಗೆ ಮನಸ್ಸನ್ನು ಓಡಿಸಲು ಶಕ್ಯವಿದೆ ಎನ್ನುತ್ತಿದೆ ಇದೇ ಶ್ಲೋಕ.



—೪೯—

**ಒಮ್ಮೆ ಹರಿಗೆ ನಮಿಸಿದವನು ಕೂಡ ಎಂದೂ ನರಕಭಾಗಿಯಾಗುವುದಿಲ್ಲ**

**ಸಕೃನ್ಮನಃ ಕೃಷ್ಣಪದಾರವಿಂದಯೋಃ**
**ನಿವೇಶಿತಂ ತದ್ಗುಣರಾಗಿ ಯೈರಿಹ ।**

**ನ ತೇ ಯಮಂ ಪಾಶಭೃತಶ್ಚ ತದ್‌ಭಟಾನ್**
**ಸ್ವಪ್ನೇಽಪಿ ಪಶ್ಯಂತಿ ಹಿ ಚೀರ್ಣನಿಷ್ಕೃತಾಃ ॥**

(ಭಾ.೬.೧.೧೯)

**ಅಪಿ ಚಾನುದಿನಮೇವ ಶ್ರೀಹರಿಚರಣನಿವಿಷ್ಟಚೇತಸಃ ಸಾಂಸಾರಿಕದುಃಖ ನಿವೃತ್ತಿ ರ್ಭವತೀತಿ ಕಿಮು ವಕ್ತವ್ಯಂ। ಯತಃ ಸಕೃದಪಿ ತಚ್ಚರಣಕೃತಮತೇಃ ಪ್ರಬಲತರಸ್ಯ ಪಾರತ್ರಿಕಸ್ಯ ಯಮಯಾತನಾವಿಶೇಷಸ್ಯ ನಿವೃತ್ತಿರುದಿತೇತಿ ಭಾವೇನ ತಾವದರ್ಥಕಂ ಪದ್ಯಂ ಪಠತಿ ॥ ಸಕೃದಿತಿ ॥ ಹಿ ಹೇತೌ। ತಸ್ಯ ಹರೇರ್ಗುಣೇಷು ರಾಗಿ ಲುಬ್ಧಂ ಭವತ್ ಮನೋ ಯೈಃ ಸಕೃದೇವ ಕೃಷ್ಣಪದಾರವಿಂದಯೋರ್ನಿವೇಶಿತಂ ತದ್ವಿಷಯತಯಾ ಕೃತಂ ತ ಇಹಲೋಕ ಏವ ಚೀರ್ಣಂ ಕೃತಂ ನಿಷ್ಕೃತಂ ಪಾಪಪ್ರಾಯಶ್ಚಿತ್ತಂ ಯೈಸ್ತೇ ತಾದೃಶಾ ಇತಿ ಜ್ಞೇಯಂ। ಕಿಂ ತತಃ। ಯತಶ್ಚೀರ್ಣನಿಷ್ಕೃತಾಸ್ತತೋ ಹೇತೋರ್ಯಮಂ ತದ್ಭಟಾಂಶ್ಚ ನ ಪಶ್ಯಂತಿ। ಯದಾ ದರ್ಶನಮೇವ ನಾಸ್ತಿ ತದಾ ತೈರ್ಬಂಧನಾದಿಕಂ ಸುತರಾಂ ನಾಸ್ತೀತಿ ಸೂಚಿತಂ। ಅತ ಏವ ಪಾಶಭೃತ ಇತಿ ವಿಶೇಷಿತಂ। ಏತದ್ವಿಷಯೇ ಸಂಶಯೋ ನ ಕರ್ತವ್ಯ ಇತಿ ಸೂಚಯಿತುಂ ಸ್ವಪ್ನೇಽಪೀತ್ಯುಕ್ತಮಿತಿ ॥**



**ಅಜಾಮಿಳ ಚರಿತ್ರೆಯಲ್ಲಿ ಶುಕಮುನಿ ಹೇಳುತ್ತಾರೆ—'ಶ್ರೀಕೃಷ್ಣನ ಪಾದಾರವಿಂದಗಳಲ್ಲಿ ಅವುಗಳ ಗುಣಗಳಲ್ಲಿ ಆಸಕ್ತವಾದ ಮನಸ್ಸನ್ನು ಒಂದೇಸಲ ನಿಲ್ಲಿಸಿದರೂ ಅದರಿಂದಲೇ ಅವರು ಎಲ್ಲ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡಂತೇ ಆಗುವುದರಿಂದ ಅವರು ತಮ್ಮ ಪಾಪಗಳಿಗೆ ಎಂದೂ ನರಕಶಿಕ್ಷೆಯನ್ನು ಅನುಭವಿಸುವುದಿಲ್ಲ. ಅವರು ಯಮನನ್ನಾಗಲಿ ಪಾಶಧಾರಿಗಳಾದ ಯಮಭಟ ರನ್ನಾಗಲಿ ಕನಸಿನಲ್ಲಿಯೂ ಕಾಣುವುದಿಲ್ಲ'**

ನಿತ್ಯವೂ ಹರಿಚರಣದಲ್ಲಿ ಮನಸ್ಸಿಡುವವರು ಸಂಸಾರ ದುಃಖಗಳಿಂದ ಪಾರಾಗುವರೆಂದು ಬೇರೆ ಹೇಳಬೇಕಾಗಿಲ್ಲ. ಏಕೆಂದರೆ ಒಮ್ಮೆ ಹರಿಚರಣಸ್ಮರಣೆ ಮಾಡಿದರೂ ಅತಿಪ್ರಬಲವಾದ ಪಾರತ್ರಿಕ ಯಮಯಾತನೆಗಳಿಗೆ ಅವರು ಎಂದೂ ಈಡಾಗುವುದಿಲ್ಲವೆಂದು ಈ ಶ್ಲೋಕ ಹೇಳುತ್ತದೆ.

ಹೀಗೆ ಭಾಗವತಶ್ರೋತೃಗಳಿಗೆ ಭಾಗವತಶಾಸ್ತ್ರದ ಅರ್ಥವನ್ನು ವಿಸ್ತಾರ

ವಾಗಿ ಅಧ್ಯಯನ ಮಾಡಲು ಅನುಕೂಲವಾಗುವಂತೆ ಮೊದಲಿಗೆ ಸಂಕ್ಷೇಪವಾಗಿ ಅದೇ ಅರ್ಥವನ್ನು 'ಶೃಣ್ವನ್ ಗೃಣನ್ ಸಂಸ್ಮರಯಂಶ್ಚ' ಎಂಬಲ್ಲಿ ಹೇಳಿ ಆ ಶ್ಲೋಕವನ್ನು ತಾನೆ ಚೆನ್ನಾಗಿ ವಿವರಿಸಿ, 'ನಾವು ಈ ಅರ್ಥವನ್ನು ಶ್ಲೋಕದಿಂದ ಬಲಾತ್ಕಾರವಾಗಿ ಹೊರಡಿಸಿಲ್ಲ. ಅದು ಭಾಗವತದಲ್ಲಿ ಸ್ಪಷ್ಟವಾಗಿಯೇ ಬೇರೆ ಶ್ಲೋಕಗಳಲ್ಲಿ ಉಕ್ತವಾಗಿದೆ ನೋಡಿ' ಎಂದೂ ಅವಧೂತರು ಮುಂದಿನ ಶ್ಲೋಕದಲ್ಲಿ ತೋರಿಸುತ್ತಾರೆ—



—೫೦—

**ಭಾಗವತಧರ್ಮಗಳನ್ನು ಹೇಳುವ ಈ ಭಾಗವತದ**
**ಶ್ರವಣದಿಂದ ಭಗವಂತ ಹೃದಯದಲ್ಲಿ ನೆಲೆಸುವನು**

**ಧರ್ಮಃ ಪ್ರೋಜ್ಝಿತಕೈತವೋಽತ್ರ ಪರಮೋ ನಿರ್ಮತ್ಸರಾಣಾಂ ಸತಾಂ**
**ವೇದ್ಯಂ ವಾಸ್ತವ ಮತ್ರ ವಸ್ತು ಶಿವದಂ ತಾಪತ್ರಯೋನ್ಮೂಲನಂ ।**
**ಶ್ರೀಮದ್ಭಗವತೇ ಮಹಾಮುನಿಕೃತೇ ಕಿಂ ವಾ ಪರೈರೀಶ್ವರಃ**
**ಸದ್ಯೋ ಹೃದ್ಯವರುಧ್ಯತೇಽತ್ರ ಕೃತಿಭಿಃ ಶುಶ್ರೂಷುಭಿಸ್ತತ್ಕ್ಷಣಾತ್ ॥**

(ಭಾ.೧.೧.೨)

ತದೇವಂ ಶ್ರೋತೃಮತ್ಯನುಕೂಲನಾಯ ಸಂಕ್ಷಿಪ್ಯ ಶಾಸ್ತ್ರಾರ್ಥಂ ಪ್ರತಿಪಾದ್ಯ ನಾಸ್ಮಾಭಿರಯಂ ಬಲಾತ್ತದರ್ಥತಯಾ ವರ್ಣ್ಯತೇ ಕಿಂತು ತತ್ರತ್ರಿಪಾದ್ಯಪ್ರತಿಪಾದನಪರಪದ್ಯೈರ್ನ್ಯೈವ ಪ್ರತಿಪಾದಿತ ಇತ್ಯಭಿಪ್ರೇತ್ಯ ತತ್ಪದ್ಯಂ ಪಠತಿ ॥ **ಧರ್ಮ ಇತಿ** ॥ ಮಹಾಮುನಿನಾ ವ್ಯಾಸೇನ ಕೃತೇ ಶ್ರೀಮದ್ಭಾಗವತೇ ಧರ್ಮಸ್ತಾವತ್ ಪ್ರತಿಪಾದ್ಯತೇ । ಕೀದೃಶಃ ಪ್ರೋಜ್ಝಿತಂ ಕೈತವಂ ಯಸ್ಮಾತ್ಸಃ ಕಾಪಟ್ಯರಹಿತಃ । ವಾಚಾ ವದತಿ ಮೋಕ್ಷಶಾಸ್ತ್ರಮಿದಮಹಂ ವಕ್ಷ್ಯೇ ಇತಿ । ಮನಸಾ ತು ದ್ರವ್ಯಾದಿಫಲಮುದ್ದಿಶತಿ । ಇದಮೇವ ಹಿ ಕೈತವಂ । ನಿಷ್ಕಾಮತಯಾ ಕೃತೌ ತು ಪ್ರೋಜ್ಝಿತಕೈತವಂ ಭವತಿ । ವಾಙ್ಮನಸಯೋರುಭಯೋರೇಕವಿಷಯತ್ವೇನ ಕಾಪಟ್ಯಾಭಾವಾತ್ । ಅತ್ರ ಭಗವತಿ ಅರ್ಪಿತೋಽತ ಏವ ಪರಮಃ । ವಸ್ತು ಚ ಪ್ರತಿಪಾದ್ಯತೇ । ಕೀದೃಕ್ । ನಿರ್ಮತ್ಸರಾಣಾಂ ಸತಾಂ ವೇದ್ಯಂ, ವಾಸ್ತವಂ ನಿತ್ಯನಿರಸ್ತದೋಷಗುಣಪೂರ್ಣಸ್ವರೂಪಂ, ವಸ್ತು ನಿತ್ಯಾಪ್ರತಿಹತಂ, ಶಿವದಮಿಷ್ಟಪ್ರದಂ, ತಾಪತ್ರಯೋನ್ಮೂಲನಂ ಅನಿಷ್ಟನಿವರ್ತಕಂ ಚ । ಅಪರೈಃ

**ಉಕ್ತೇಭ್ಯೋಽನ್ಯೈರ್ಧರ್ಮಾದಿಭಿಃ ಕಿಂ ವಾ ಪ್ರಯೋಜನಂ। ಕುತಃ। ಅತ್ರ ಭರತಖಂಡೇ, ಅತ್ರ ನೃಜನ್ಮನಿ, ಶುಶ್ರೂಷುಭಿಃ ಪರಮಧರ್ಮಾನುಷ್ಠಾನ ಪೂರ್ವಕಶ್ರೀಹರಿಸೇವಾಕಾರಿಭಿಃ ಕುಶಲೈಃ ಈಶ್ವರಃ ಸದ್ಯಃ ತತ್ಕ್ಷಣಾದೇವ ಹೃದಿ ಅವರುಧ್ಯತೇ। ಭಕ್ತ್ಯಾ ಸನ್ನಿಹಿತೋ ಭವತಿ ಭಕ್ತ ಇತಿ। ತೇನೈವಾಪೇಕ್ಷಿತಾ ಶೇಷಪುರುಷಾರ್ಥಸಿದ್ಧೇರಿತಿ ಭಾವಃ। ಅತ್ರಾಪಿ ಶ್ರೀಹರಿನಿವಿಷ್ಟಚಿತ್ತಸ್ಯ ಭವಮೋಚನಮಿತ್ಯೇವ ಪ್ರತಿಪಾದಿತಮಿತ್ಯುಕ್ತ ಏವ ಶಾಸ್ತ್ರಾರ್ಥ ಇತಿ। ನನು ಪ್ರವೃತ್ತಿಧರ್ಮೋಽಪಿ ಪ್ರತಿಪಾದ್ಯತೇ। ಸತ್ಯಂ। ಏತತ್ತತ್ತ್ವಸ್ಯೋತ್ತರತ್ರ ವಕ್ಷ್ಯಮಾಣತ್ವಾತ್ ॥**



**'ಶ್ರೀವ್ಯಾಸ ಮಹಾಮುನಿಯಿಂದ ವಿರಚಿತವಾದ ಶ್ರೀಮದ್‌ಭಾಗವತದಲ್ಲಿ ಧರ್ಮವು ಪ್ರತಿಪಾದಿತವಾಗಿದೆ. ಎಂಥ ಧರ್ಮವೆಂದರೆ, ಕಪಟವಿಲ್ಲದ ಧರ್ಮ. ನಿಷ್ಕಾಮಕರ್ಮ. 'ಅಯ್ಯೊ! ಹೇಳುವುದು 'ಮೋಕ್ಷಶಾಸ್ತ್ರವನ್ನು ನಾನು ಹೇಳುತ್ತಿದ್ದೇನೆ' ಎಂದು. ಆದರೆ, ಮನಸ್ಸಿನಲ್ಲಿ ಆಲೋಚಿಸುವುದು 'ದಕ್ಷಿಣೆ ಹೇರಳವಾಗಿ ಎಷ್ಟು ಪಡೆಯುವೆನೆಂ'ದು–ಎಂದರೆ, ಇದು ಕಪಟ. ಏನೂ ಕಪಟವಿಲ್ಲದೆ ಫಲಕಾಮನೆ ಇಲ್ಲದೆ ಕರ್ಮಮಾಡುವುದು 'ಕಪಟವಿಲ್ಲದ ಧರ್ಮ' ಎನಿಸುವುದು. ಮತ್ತು ಭಗವಂತನಲ್ಲಿ ಅರ್ಪಿತವಾಗುವ ಧರ್ಮವು 'ಪರಮಧರ್ಮ'ವೆನಿಸುವುದು. ಭಾಗವತವು ಹೇಳುವುದು ಇಂಥ ಪರಮ ಧರ್ಮವನ್ನೆ.**

**ಮತ್ತು ಇಲ್ಲಿ ಸ್ವೋತ್ತಮರಲ್ಲಿ ಮಾತ್ಸರ್ಯವಿಲ್ಲದ ಸಜ್ಜನರಿಗೆ ಮಾತ್ರ ವೇದ್ಯವಾಗುವ 'ವಾಸ್ತವ'ವಾದ, ಅಂದರೆ ನಿತ್ಯನಿರ್ದೋಷ ಗುಣಪೂರ್ಣವಾದ 'ಶಿವದ' ಇಷ್ಟಪ್ರದವಾದ ಎಲ್ಲ ತಾಪತ್ರಯಗಳನ್ನು ನಿರ್ಮೂಲಗೈವ ಶ್ರೀನಾರಾಯಣನೆಂಬ 'ವಸ್ತು'ವನ್ನು ಸ್ವತಂತ್ರ ಸರ್ವಶಕ್ತ ತತ್ವವನ್ನು ಈ ಭಾಗವತವು ಪ್ರತಿಪಾದಿಸುತ್ತದೆ. ಬೇರೆ ಕಾಮ್ಯಕರ್ಮಗಳನ್ನು ಹೇಳಿ ಏನು ಪ್ರಯೋಜನ? ಕುಶಲರಾದ ಶ್ರೋತೃಗಳು ಈ ಭಾಗವತವನ್ನು ಕೇಳಿ ಒಡನೆ ಸರ್ವಶಕ್ತನಾದ ಭಗವಂತನನ್ನು ತಮ್ಮ ಹೃದಯದೊಳಗೆ ಕಟ್ಟಿಹಾಕಿಟ್ಟುಕೊಳ್ಳುತ್ತಾರೆ!**

ಇಲ್ಲಿ ಹೀಗೆ ನಿಷ್ಕಾಮಕರ್ಮ ಮಾಡುತ್ತ ಶ್ರೀಹರಿಯಲ್ಲಿ ಮನಸ್ಸಿಟ್ಟವರಿಗೇ 'ಆವಿಷ್ಟಚಿತ್ತ'ರಿಗೇ ಮೋಕ್ಷವು ಲಭ್ಯವೆಂದು ಶಾಸ್ತ್ರಾರ್ಥವು ಉಕ್ತವಾಗಿದೆ.

ಆದರಿಂದ ಇದೇ ಶಾಸ್ತ್ರಾರ್ಥ. ಇದನ್ನು ಸ್ಪಷ್ಟವಾಗಿ ಮುಂದಿನ ೫೧ರಿಂದ ೫೬ವರೆಗಿನ ಆರು ಶ್ಲೋಕಗಳು ಪ್ರತಿಪಾದಿಸುತ್ತವೆ. ಈ ಐವತ್ತನೇ ಶ್ಲೋಕಕ್ಕೆ ಅವು ವ್ಯಾಖ್ಯಾನರೂಪವಾಗಿವೆ.

ಪೃಥುಚಕ್ರವರ್ತಿಗೆ ಸನತ್ಕುಮಾರರು ಉಪದೇಶಿಸುವ ಈ ಆರು ಶ್ಲೋಕಗಳು (ಆದಿ.೪.೨೨.೨೧-೨೬) ಚತುರ್ಥಸ್ಕಂಧದಲ್ಲಿ ಬರುತ್ತವೆ.



—೫೧—

**ಮೋಕ್ಷಸಾಧನಗಳು ಎರಡೇ–ವಿಷಯವಿರಕ್ತಿ ಮತ್ತು ಭಗವದ್‌ಭಕ್ತಿ**

**ಶಾಸ್ತ್ರೇಷ್ವಿಯಾನೇವ ಸುನಿಶ್ಚಿತೋ ನೃಣಾಂ**
**ಕ್ಷೇಮಸ್ಯ ಸಮ್ಯಗ್ ವಿಮೃಶೇಷು ಹೇತುಃ ।**
**ಅಸಂಗ ಆತ್ಮವ್ಯತಿರಿಕ್ತ ವಸ್ತುನಿ**
**ದೃಢಾ ರತಿರ್ಬ್ರಹ್ಮಣಿ ನಿರ್ಗುಣೇ ಚ ಯಾ ॥**

(ಭಾ.೪.೨೨.೨೧)

ಏವಂ ಸಂಕ್ಷಿಪ್ಯ ಶಾಸ್ತ್ರಾರ್ಥಂ ಪ್ರತಿಪಾದ್ಯಾಧುನಾಽಯಮೇವ ಶಾಸ್ತ್ರಾರ್ಥ ಇತಿ ಕಂಠತ ಏವ ಪ್ರತಿಪಾದಯನ್ ಪದ್ಯಷಟ್ಕಂ ಏತತ್ಪದ್ಯವ್ಯಾಖ್ಯಾರೂಪಂ ಪಠತಿ ॥ **ಶಾಸ್ತ್ರೇಷ್ವಿತ್ಯಾದಿನಾ** ॥ ತತ್ರಾದೌ ಶಾಸ್ತ್ರಾರ್ಥಂ ದೃಢೀಕರೋತಿ ॥ **ಶಾಸ್ತ್ರೇಷ್ವಿಯಾನೇವೇತಿ** ॥ ಆತ್ಮನಃ ಪರಮಾತ್ಮನಃ ಯದ್ವ್ಯತಿರಿಕ್ತಂ ತಸ್ಮಿನ್ ಸರ್ವಸ್ಮಿನ್ ಸರ್ವವಸ್ತುನಿ ಅಸಂಗೋ ವೈರಾಗ್ಯಂ, ನಿರ್ಗುಣೇ ಬ್ರಹ್ಮಣಿ ದೃಢಾ ರತಿಶ್ಚೇತಿ ಯತ್ ಶಾಸ್ತ್ರೇಷು ಸಮ್ಯಗುಪಕ್ರಮಾದಿನಾ ವಿಮೃಶೇಷು ವಿಚಾರಿತೇಷು ಸತ್ಸು ನೃಣಾಂ ಕ್ಷೇಮಸ್ಯ ಹೇತುಃ ಇಯಾನೇವ ನಿರ್ಣೀತ ಇತೋಽಧಿಕೋ ನಾಸ್ತೀತಿ ॥

ಪೃಥುಚಕ್ರವರ್ತಿಗೆ ಸನತ್ಕುಮಾರರ ಉಪದೇಶ—'ಶ್ರವಣಾಸಕ್ತಿಯಿಂದ ಮನಸ್ಸಿನಲ್ಲಿರುವ ವಿಷಯಾಭಿಲಾಷೆ ಮತ್ತು ಪಾಪಗಳೆಂಬ ಮಲ ದೂರವಾದರೆ ವಿಷಯವೈರಾಗ್ಯ ಮತ್ತು ಹರಿಭಕ್ತಿಗಳೆರಡೂ ಲಭ್ಯವಾಗುವುವು. ಶಾಸ್ತ್ರಗಳನ್ನು ಚೆನ್ನಾಗಿ ವಿಚಾರ ಮಾಡಿದಾಗ ಮಾನವರಿಗೆ ಮೋಕ್ಷಸಾಧನವಾಗುವುದು ಇವೆರಡೆ,

'ಪರಮಾತ್ಮನಿಗಿಂತ ಇತರ ವಸ್ತುಗಳಲ್ಲಿ ವಿರಕ್ತಿ ಮತ್ತು ಗುಣತ್ರಯ ರಹಿತನಾದ ಗುಣಪೂರ್ಣನಾದ ಹರಿಯಲ್ಲಿ ದೃಢವಾದ ಭಕ್ತಿ' ಎಂದು.



**ಭಾಗವತೋಕ್ತ ಮೂವತ್ತು ಭಾಗವತ ಧರ್ಮಗಳು—**

ಸಪ್ತಮಸ್ಕಂಧದಲ್ಲಿ ನಾರದರು ಧರ್ಮರಾಜನಿಗೆ ಮೂವತ್ತು ಭಾಗವತ ಧರ್ಮಗಳನ್ನು ನಾಲ್ಕು ಶ್ಲೋಕಗಳಲ್ಲಿ ಸಂಕ್ಷೇಪವಾಗಿ ತಿಳಿಸುತ್ತಾರೆ—

ಸತ್ಯಂ ದಯಾ ತಪಃ ಶೌಚಂ ತಿತಿಕ್ಷೇಜ್ಯಾ ಶಮೋ ದಮಃ ।
ಅಹಿಂಸಾ ಬ್ರಹ್ಮಚರ್ಯಂ ಚ ತ್ಯಾಗಃ ಸಂತೋಷ ಆರ್ಜವಂ ॥ ೧ ॥

ಸ್ವಾಧ್ಯಾಯಃ ಸಮದೃಕ್‌ಸೇವಾ ಗ್ರಾಮ್ಯೇಹೋಪರಮಃ ಶನೈಃ ।
ನೃಣಾಂ ವಿಪರ್ಯಯೇಹೇಕ್ಷಾ ಮೌನಮಾತ್ಮ ವಿಮರ್ಶನಂ ॥ ೨ ॥

ಅನ್ನಾದ್ಯಾದೇಃ ಸಂವಿಭಾಗೋ ಭೂತೇಭ್ಯಶ್ಚ ಯಥಾರ್ಹತಃ ।
ತೇಷ್ವಾತ್ಮ ದೇವತಾಬುದ್ಧಿಃ ಸುತರಾಂ ನೃಷು ಪಾಂಡವ ॥ ೩ ॥

ಶ್ರವಣಂ ಕೀರ್ತನಂ ಚಾಸ್ಯ ಸ್ಮರಣಂ ಮಹತಾಂ ಗತೇಃ ।
ಸೇವೇಜ್ಯಾऽವನತಿ ಸಖ್ಯಂ ದಾಸ್ಯಮಾತ್ಮಸಮರ್ಪಣಂ ॥ ೪ ॥

ನೃಣಾಮಯಂ ಪರೋ ಧರ್ಮಃ ಸರ್ವೇಷಾಂ ಸಮುದಾಹೃತಃ ।
ತ್ರಿಂಶಲ್ಲಕ್ಷಣ ಸಂಯುಕ್ತಃ ಸರ್ವಾತ್ಮಾ ಯೇನ ತುಷ್ಯತಿ ॥ ೫ ॥

(ಭಾ.೭.೧೨.೮-೧೨)

(೧) ಸತ್ಯ–ದಯಾ–ತಪಸ್ಸು–ಶೌಚ–ತಿತಿಕ್ಷಾ–ಇಜ್ಯಾ–ಶಮ–ದಮ–ಅಹಿಂಸಾ–ಬ್ರಹ್ಮಚರ್ಯ–ತ್ಯಾಗ-ಸಂತೋಷ–ಆರ್ಜವ

(೨) ಸ್ವಾಧ್ಯಾಯ – ಸಮದೃಕ್ಸೇವಾ – ಗ್ರಾಮ್ಯೇಹೋಪರಮ – ನೃಣಾಂ ವಿಪರ್ಯಯೇಹೇಕ್ಷಾ – ಮೌನ – ಆತ್ಮವಿಮರ್ಶನ

(೩) ಅನ್ನಾದಿ ಸಂವಿಭಾಗ–ಆತ್ಮದೇವತಾಬುದ್ಧಿ

(೪) ಶ್ರವಣ – ಕೀರ್ತನ – ಸ್ಮರಣ – ಸೇವಾ – ಇಜ್ಯಾ – ಅವನತಿ – ಸಖ್ಯ – ದಾಸ್ಯ – ಆತ್ಮಸಮರ್ಪಣ.

ಈ ಮೂವತ್ತು ಭಾಗವತಧರ್ಮಗಳು ಸರ್ವವರ್ಣ ಸರ್ವಆಶ್ರಮದವರೂ ಆಚರಿಸಬೇಕಾಗಿರುವ ಸಾಮಾನ್ಯಧರ್ಮಗಳು.

'ಧರ್ಮಃ ಪ್ರೋಜ್ಝಿತಕೈತವಃ ಪರಮಃ'

ಎಂದು ಹೇಳಿದ 'ನಿಷ್ಕಪಟ' ಅಂದರೆ ನಿಷ್ಕಾಮವಾದ ಮೂವತ್ತು ಧರ್ಮಗಳೇ ಇಲ್ಲಿ ನಾಲ್ಕು ಶ್ಲೋಕಗಳಲ್ಲಿ ಉಕ್ತವಾಗಿವೆ.

**ಏಕಾದಶಸ್ಕಂಧದಲ್ಲಿಯೂ ಜಾಯಂತೇಯ ಪ್ರಬುದ್ಧ ಮುನಿ ವಿದೇಹ ರಾಜನಿಗೆ ಹತ್ತು ಶ್ಲೋಕಗಳಲ್ಲಿ ಭಾಗವತಧರ್ಮಗಳನ್ನು ಉಪದೇಶಿಸುತ್ತಾರೆ—**

**ತತ್ರ ಭಾಗವತಾನ್ ಧರ್ಮಾನ್ ಶಿಕ್ಷೇದ್ ಗುರ್ವಾತ್ಮ ದೈವತಃ**
**ಅಮಾಯಯಾನುವೃತ್ತ್ಯಾಯೈಸ್ತುಷ್ಯೇದಾತ್ಮಾಽಽತ್ಮದೋ ಹರಿಃ ॥**
**ಸರ್ವತೋ ಮನಸೋಽಸಂಗಂ ಆದೌ ಸಂಗಂ ಚ ಸಾಧುಷು ।**
**ದಯಾಂ ಮೈತ್ರೀಂ ಪ್ರಶ್ರಯಂ ಚ ಭೂತೇಷ್ವದ್ಧಾ ಯಥೋಚಿತಂ ।**
**ಶೌಚಂ ತಪಸ್ತಿತಿಕ್ಷಾಂ ಚ ಮೌನಂ ಸ್ವಾಧ್ಯಾಯ ಆರ್ಜವಂ**
**ಬ್ರಹ್ಮಚರ್ಯಮಹಿಂಸಾ ಚ ಸಮತ್ವಂ ದ್ವಂದ್ವಸಂಜ್ಞಯೋಃ**
**ಸರ್ವತ್ರಾತ್ಮೇಶ್ವರಾನ್ವೀಕ್ಷಾಂ ಕೈವಲ್ಯಂ ಅನಿಕೇತನಂ**
**ವಿವಿಕ್ತಂ ಚೀರವಸನಂ ಸಂತೋಷಂ ಯೇನಕೇನಚಿತ್**
**ಶ್ರದ್ಧಾಂ ಭಾಗವತೇ ಶಾಸ್ತ್ರೇ ನಿಂದಾಮನ್ಯತ್ರ ಚಾಪಿ ಹಿ**
**ಮನೋವಾಕ್ಕಾಯ ದಂಡಂ ಚ ಸತ್ಯಂ ಶಮದಮಾವಪಿ**
**ಶ್ರವಣಂ ಕೀರ್ತನಂ ಧ್ಯಾನಂ ಹರೇರದ್ಭುತಕರ್ಮಣಃ**
**ಜನ್ಮ ಕರ್ಮಗುಣಾನಾಂ ಚ ತದರ್ಥೇಽಖಿಲ ಚೇಷ್ಟಿತಂ**
**ಇಷ್ಟಂ ದತ್ತಂ ತಪೋ ಜಪ್ತಂ ಪೂರ್ತಂ ಯಚ್ಚಾತ್ಮನಃ ಪ್ರಿಯಂ**
**ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್**
**ಏವಂ ಕೃಷ್ಣಾತ್ಮ ನಾಥೇಷು ಮನುಷ್ಯೇಷು ಚ ಸೌ ಹೃದಂ**
**ಪರಿಚರ್ಯಾಂ ಚೋಭಯತ್ರ ಮಹತ್ಸು ನೃಷು ಸಾಧುಷು**
**ಪರಸ್ಮರಾನುಕಥನಂ ಪಾವನಂ ಭಗವದ್ಯಶಃ**
**ಮಿಥೋರತಿರ್ಮಿಥಸ್ತುಷ್ಟಿರ್ನಿವೃತ್ತಿರ್ಮಿಥ ಆತ್ಮನಃ**
**ಸ್ಮರಂತಃ ಸ್ಮಾರಯಂತಶ್ಚ ಮಿಥೋಽಘೌಘ ಹರಂ ಹರಿಂ**

**ಭಕ್ತಾಃ ಸಂಜಾತಯಾ ಭಕ್ತ್ಯಾ ಬಿಭ್ರತ್ಯುತ್ಪುಲಕಾಂ ತನುಮ್**
**ಇತಿ ಭಾಗವತಾನ್ ಧರ್ಮಾನ್ ಶಿಕ್ಷನ್ ಭಕ್ತ್ಯಾತದುತ್ಥಯಾ ।**
**ನಾರಾಯಣಪರೋ ಮಾಯಾಂ ಅಂಜಸ್ತರತಿ ದುಸ್ತರಾಂ ॥**

(ಭಾ.೧೧.೩.೨೪-೩೪)

**'ಸರ್ವತೋಮನಸೋಽಸಂಗ ಸಾಧುಸಂಗ ದಯಾ ಮೈತ್ರಿ ಪ್ರಶ್ರಯ ಶೌಚ ತಪಸ್ ತಿತಿಕ್ಷಾ ಮೌನ ಸ್ವಾಧ್ಯಾಯ ಆರ್ಜವ ಬ್ರಹ್ಮಚರ್ಯ ಅಹಿಂಸಾ ದ್ವಂದ್ವಸಮತ್ವ ಆತ್ಮೇಶ್ವರಾನ್ವೀಕ್ಷಾ ಕೈವಲ್ಯ ಅನಿಕೇತನ ವಿವಿಕ್ತ ಚೀರವಸನ ಸಂತೋಷ ಭಾಗವತಶಾಸ್ತ್ರಶ್ರದ್ಧಾ ಅನ್ಯತ್ರನಿಂದಾ, ಮನೋವಾಕ್ಕಾಯ ದಂಡ, ಸತ್ಯ ಶಮದಮ ಶ್ರವಣ ಕೀರ್ತನ ಧ್ಯಾನ–ಈ ಭಾಗವತಧರ್ಮಗಳನ್ನು ಅಭ್ಯಾಸ ಮಾಡಬೇಕು. ಎಲ್ಲ ಕರ್ಮಗಳನ್ನೂ ಹರಿಪೂಜಾರೂಪವಾಗಿ ಮಾಡಿ, ಯಾಗ ದಾನ ತಪಸ್ಸು ಜಪ ಪೂರ್ತ ಎಲ್ಲವನ್ನೂ ಹರಿಗೇ ಅರ್ಪಿಸಬೇಕು. ಸ್ವೋತ್ತಮರಾದವರಲ್ಲಿ ಭಕ್ತಿಯಿಂದ ನಡೆದುಕೊಳ್ಳಬೇಕು. ಭಕ್ತರೊಂದಿಗೆ ಬೆರೆತು ಪರಸ್ಪರವಾಗಿ ಹರಿಕಥೆ ಹೇಳಬೇಕು ಕೇಳಬೇಕು ಆನಂದದಿಂದ ಮೈಮರೆಯಬೇಕು. ಹೀಗೆ ಮಾಡುತ್ತಿದ್ದರೇ ನಾರಾಯಣನ ಬಂಧಕ ಮಾಯೆಯನ್ನು ಅವನ ಅನುಗ್ರಹದಿಂದ ದಾಟಬಹುದು'.**

ಈ ಧರ್ಮಗಳ ಬಗ್ಗೆ ಹೆಚ್ಚಿನ ವಿವರಗಳು ಮುಂದೆ 'ಧರ್ಮೋಪದೇಶ' ಎಂಬ ಪ್ರಕರಣದಲ್ಲಿ ಬರುತ್ತವೆ.



–೫೨–

**ಭಾಗವತಧರ್ಮಾನುಷ್ಠಾನದಿಂದ ಹರಿಯಲ್ಲಿ ಭಕ್ತಿ ಅನ್ಯತ್ರವಿರಕ್ತಿ**

**ತಚ್ಛ್ರದ್ಧಯಾ ಭಗವದ್‌ಧರ್ಮಚರ್ಯಯಾ**
**ಜಿಜ್ಞಾಸಯಾಽಽಧ್ಯಾತ್ಮಿಕಯೋಗನಿಷ್ಠಯಾ ।**
**ಯೋಗೇಶ್ವರೋಪಾಸನಯಾ ಚ ನಿತ್ಯಂ**
**ಪುಣ್ಯಶ್ರವಃ ಕಥಯಾ ಪುಣ್ಯಯಾ ಚ ॥**

(ಭಾ.೪.೨೨.೨೨)

**ನನು ಕಥಂ ನೃಣಾಂ ಪುರುಷಾರ್ಥಹೇತುರಿಯಾನೇವೇತ್ಯುಚ್ಯತೇ ।ಭಗವತಿ ಶ್ರದ್ಧಾ ಆಧ್ಯಾತ್ಮವಿಚಾರೋ ಮಹತ್ಸೇವಾ ತದನಿಂದಾ ಗ್ರಾಮ್ಯೇಹೋಪರಮಃ ಇಂದ್ರಿಯಜಯಃ ವಿವಿಕ್ತದೇಶಸೇವಾ ಸರ್ವೇಂದ್ರಿಯಾಣಾಂ ಭಗವದ್ವಿಷಯಕತ್ವಂ ಅಹಿಂಸಾ ಯಮೋ ನಿಯಮೋ ಯದೃಚ್ಛಯಾ ಲಬ್ಧೇನ ಸಂತೋಷೋ ದ್ವಂದ್ವತಿತಿಕ್ಷಾ ಶ್ರವಣಮುಪಾಸನಂ ಭಗವನ್ಮಾಹಾತ್ಮ್ಯಸ್ಯ ಗುಣಕರ್ಮನಾಮ್ನಾಂ ಕೀರ್ತನಂ ಚೇತ್ಯೇಷಾಮನ್ಯೇಷಾಂ ಚ ಭಾಗವತಧರ್ಮಾಣಾಂ ಪುರುಷಾರ್ಥ ಹೇತೂನಾಂ ಸದ್ಭಾವಾದಿತ್ಯತೋ ನೈತೇ ಸಾಕ್ಷಾತ್ಪುರುಷಾರ್ಥಹೇತವಃ ಕಿಂ ತ್ವಸ್ಮಾಭಿಃ ಪುರುಷಾರ್ಥಸಾಧನತಯೋಕ್ತಯೋರಸಂಗರತ್ಯೋರೇವ ಹೇತವಃ। ಪುರುಷಾರ್ಥಹೇತುತ್ವವಚನಂ ತು ಪರಂಪರಯೇತಿ ಭಾವೇನ ತೇಷಾಂ ಏತೇ ಪ್ರತ್ಯೇವ ಸಾಧನತಾಂ ದರ್ಶಯತಿ ॥ ತಚ್ಛ್ರದ್ಧಯೇತ್ಯಾದಿನಾ ಶ್ಲೋಕಚತುಷ್ಟಯೇನ ॥ ತಸ್ಮಿನ್ ಬ್ರಹ್ಮಣಿ ಶ್ರದ್ಧಯಾ। ಆಧ್ಯಾತ್ಮಿಕಯೋಗನಿಷ್ಠಯಾ ಆಧ್ಯಾತ್ಮಯೋಗವಿಷಯಿಣ್ಯಾ। ಜಿಜ್ಞಾಸಯಾ ವಿಚಾರರೂಪಯಾ। ಯೋಗೇನೇಶ್ವರಾಃ ಶಾಪಾನುಗ್ರಹಶಕ್ತಿಮಂತೋ ಮಹಾಂತಸ್ತೇಷಾಂ ನಿತ್ಯಂ ಸೇವಯಾ। ಪುಣ್ಯಕೀರ್ತೇರ್ಹರೇಃ ಪುಣ್ಯಪ್ರದಯಾ ಕಥಯಾ ನಿತ್ಯಂ ತಚ್ಛ್ರವಣೇನ ॥**



'ಶಾಸ್ತ್ರೇಷು ಇಯಾನೇವ...ಹೇತುಃ' ಎಂದು ವಿಷಯವಿರಕ್ತಿ ಹರಿಭಕ್ತಿಗಳೆರಡೇ ಮೋಕ್ಷಹೇತುಗಳೆಂದುದು ಹೇಗೆ? ಭಗವಂತನಲ್ಲಿ ಶ್ರದ್ಧೆ ಅಧ್ಯಾತ್ಮ ವಿಚಾರ ಮಹಾತ್ಮರ ಸೇವೆ ಮಹಾತ್ಮರ ನಿಂದೆ ಮಾಡದಿರುವುದು ಇಂದ್ರಿಯ ನಿಗ್ರಹ ಏಕಾಂತವಾಸ ಇಂದ್ರಿಯಗಳನ್ನು ಭಗವನ್ಮುಖವಾಗಿಸುವುದು ಅಹಿಂಸೆ ಯಮ ನಿಯಮಗಳು ದೇವರು ಕೊಟ್ಟಿದ್ದರಲ್ಲಿ ತೃಪ್ತಿ ಪಡುವುದು. ದ್ವಂದ್ವಸಹನೆ ಶ್ರವಣ ಧ್ಯಾನ ಕೀರ್ತನ ಮುಂತಾದವು ಕೂಡ ಮೋಕ್ಷ ಹೇತುಗಳೆ ತಾನೆ? ಎಂದು ಪ್ರಶ್ನೆ ಬರುತ್ತದೆ. ಇದಕ್ಕೆ ಸಮಾಧಾನ ಹೀಗೆ—ಭಗವಂತನಲ್ಲಿ ಭಕ್ತಿಶ್ರದ್ಧೆ ಅಧ್ಯಾತ್ಮವಿಚಾರ ಮುಂತಾದುವು ನೇರವಾಗಿ ಮೋಕ್ಷಹೇತುಗಳಲ್ಲ ವಿಷಯವಿರಕ್ತಿ ಭಗವದ್ಭಕ್ತಿಗಳೇ ನೇರವಾಗಿ ಮೋಕ್ಷಹೇತುಗಳು. ಅವುಗಳಿಗೆ ಪರಮಾತ್ಮನಲ್ಲಿ ಶ್ರದ್ಧೆ ಅಧ್ಯಾತ್ಮವಿಚಾರಾದಿಗಳು ಸಾಧನಗಳೆಂದು ಭಾಗವತ ಹೇಳುತ್ತಿದೆ, ನಾಲ್ಕು ಶ್ಲೋಕಗಳಲ್ಲಿ.

ಆ ನಾಲ್ಕು ಶ್ಲೋಕಗಳಲ್ಲಿ ಇದು ಮೊದಲನೆ ಶ್ಲೋಕ—

ಸನತ್ಕುಮಾರಮುನಿ ಪೃಥುರಾಜನಿಗೆ ಹೇಳುತ್ತಾರೆ— 'ಪರಮಾತ್ಮನಲ್ಲಿ ಶ್ರದ್ಧೆಯಿಂದ ಭಾಗವತಧರ್ಮಾನುಷ್ಠಾನ, ಅಧ್ಯಾತ್ಮಯೋಗದ ವಿಚಾರ, ಯೋಗಬಲದಿಂದ ಶಾಪಾನುಗ್ರಹಶಕ್ತರಾಗಿರುವ ಮಹಾತ್ಮರ ಸೇವೆ, ಪುಣ್ಯಕೀರ್ತಿ ಹರಿಯ ಪುಣ್ಯಕರವಾದ ಕಥಾಶ್ರವಣ—ಇವುಗಳಿಂದ ಅನ್ಯತ್ರ ವಿರಕ್ತಿಯೂ ಹರಿಯಲ್ಲಿ ಭಕ್ತಿಯೂ ಉಂಟಾಗುವುದು'.

ಸನತ್ಕುಮಾರಮುನಿ ಪೃಥುರಾಜನಿಗೆ ಹೇಳುವ ಎರಡನೇ ಶ್ಲೋಕ—



-೫೩-

### ವಿಷಯಾಸಕ್ತಿ ತೊರೆದು ಹರಿಕಥಾಶ್ರವಣ ಮಾಡಿದರೆ ಭಕ್ತಿವೈರಾಗ್ಯಲಾಭ

ಅರ್ಥೇಂದ್ರಿಯಾರಾಮಗುಣೇಷ್ವತೃಷ್ಣಯಾ
ತತ್ಸಮ್ಮತಾನಾಮಪರಿಗ್ರಹೇಣ ಚ
ವಿವಿಕ್ತರುಚ್ಯಾಽಪರಿತೋಷ ಆತ್ಮನ್
ವಿನಾ ಹರೇರ್ಗುಣಪೀಯೂಷಪಾನಾತ್ ॥ (ಭಾ.೪.೨೨.೨೩)

ಅರ್ಥೋ ದ್ರವ್ಯಮೈಹಿಕಂ। ಇಂದ್ರಿಯಾರಾಮಾಃ, ಇಂದ್ರಿಯ ಸುಖದಾಶ್ಚ। ಗುಣಾಃ ವಿಷಯಾಃ ಪಾರತ್ರಿಕಾಃ ತೇಷ್ವತೃಷ್ಣಯಾ। ತದುಭಯಂ ಸಮ್ಮತಂ ಅತ್ಯುಪಾದೇಯಂ ಯೇಷಾಂ ತೇಷಾಮಸಂಗೇನ। ಅಯಂ ಚ ಪೂರ್ವೋಕ್ತಗ್ರಾಮ್ಯೇಹೋಪರಮಹೇತುಃ। ವಿವಿಕ್ತದೇಶಸೇವಯಾ। ಹರೇರ್ಗುಣಪೀಯೂಷಪಾನಾದ್ವಿನಾ ಆತ್ಮನ್ ಆತ್ಮನಿ ಮನಸಿ ಅಸಂತೋಷಃ। ಮುಕುಂದಸ್ಯ ಯಾನ್ಯಾಚರಿತಾಗ್ರ್ಯಾಣಿ ತದ್ರೂಪಸುಧಾಪಾನೇನಾತ್ಮನಿ ಸಂತೋಷ ಇತ್ಯಾಭ್ಯಾಂ ಸರ್ವೇಂದ್ರಿಯಾಣಾಂ ಭಗವದೇಕವಿಷಯತ್ವಂ ಲಕ್ಷ್ಯತೇ। ತತ್ರ ಭಗವದ್ವಿಷಯತ್ವಮಾತ್ರಮತ್ರ ಗ್ರಾಹ್ಯಂ। ಇತರಾವಿಷಯತ್ವಂ ವೈರಾಗ್ಯಸ್ಯ ಸಾರ್ವತ್ರಿಕತ್ವಸೂಚನಾಯೋಕ್ತಮಿತಿಜ್ಞೇಯಂ।

ಅನ್ಯತ್ರ ವಿರಕ್ತಿ, ಹರಿಯಲ್ಲಿ ಭಕ್ತಿಗಳುಂಟಾಗುವುದು ಐಹಿಕ ಪಾರತ್ರಿಕ ವಿಷಯ ಭೋಗಾಸಕ್ತಿಯ ತ್ಯಾಗದಿಂದ ಸಾಧ್ಯ. ಐಹಿಕ ಪಾರತ್ರಿಕ ಸುಖವೇ ಪುರುಷಾರ್ಥ ಎನ್ನುವವರ ಸಂಗವನ್ನೇ ಬಿಡಬೇಕು. ಈ ದುರ್ಜನರ ಸಂಗವರ್ಜನವೇ ವಿಷಯಾಸೆ ದೂರವಾಗಲು ಕಾರಣವಾಗುತ್ತದೆ. ಏಕಾಂತ

**ವಾಸದ ಬಯಕೆ ಮತ್ತು ಹರಿಕಥಾಶ್ರವಣ ತಪ್ಪಿದಾಗ ಮನಸ್ಸಿನಲ್ಲಿ ಅತೃಪ್ತಿಯೂ ಉಂಟಾಗುವುದು ಇವುಗಳಿಂದಲೂ ಅನ್ಯತ್ರವಿರಕ್ತಿ ಹರಿಯಲ್ಲಿ ಭಕ್ತಿಗಳೇ ಉಂಟಾಗುವುವು.**

ದುರ್ಜನ ಸಂಗವನ್ನು ಬಿಡುವುದು ಮತ್ತು ಹರಿಕಥಾಮೃತಪಾನಕ್ಕೆ ಆಶಿಸುವುದು ಈ ಎರಡು ಗುಣಗಳು ಸಾಧಕನ ಸರ್ವೇಂದ್ರಿಯಗಳು ಭಗವಂತನಲ್ಲಿಯೇ ನೆಲೆಸುವಂತೆ ಮಾಡುವುವು.

'ಭಗವಂತನಲ್ಲಿಯೇ ಸರ್ವೇಂದ್ರಿಯಗಳ ಪ್ರವೃತ್ತಿ' ಎಂಬಲ್ಲಿ ಭಗವಂತನಲ್ಲಿ ಪ್ರವೃತ್ತಿ ಇತರತ್ರ ಅಪ್ರವೃತ್ತಿ ಎಂದು ಎರಡು ಅಂಶಗಳಿವೆ. ಅವುಗಳಲ್ಲಿ 'ಭಗವಂತನಲ್ಲಿ ಪ್ರವೃತ್ತಿ' ಎಂಬ ಅಂಶ ಮಾತ್ರ ಹರಿಭಕ್ತಿಗೆ ಉಪಯೋಗಿ. 'ಇತರತ್ರ ಅಪ್ರವೃತ್ತಿ' ಎಂಬ ಅಂಶವು ಅನ್ಯತ್ರ ವಿರಕ್ತಿಗೆ ಕಾರಣ. ಅದನ್ನು ಹೇಳಿದ್ದು ವೈರಾಗ್ಯವು ಎಲ್ಲ ಭಗವದ್ಧರ್ಮಾನುಷ್ಠಾನದಲ್ಲಿಯೂ ಆವಶ್ಯಕವೆಂಬ ಅಭಿಪ್ರಾಯದಿಂದ.

ಸನತ್ಕುಮಾರರ ಉಪದೇಶದಲ್ಲಿ ಇನ್ನೊಂದು ಶ್ಲೋಕ—



—೫೪—

**ಅಹಿಂಸಾ ಯಮ ನಿಯಮಾದಿಪೂರ್ವಕ**
**ಹರಿಧ್ಯಾನವೇ ಭಕ್ತಿವಿರಕ್ತಿಗಳಿಗೆ ಕಾರಣ**

**ಅಹಿಂಸಯಾ ಪಾರಮಹಂಸ್ಯಚರ್ಯಯಾ**
**ಸ್ಮೃತ್ಯಾ ಮುಕುಂದಾಚರಿತಾಗ್ರ್ಯಸೀಧುನಾ ।**
**ಯಮೈರಕಾಮೈರ್ನಿಯಮೈರನಿಂದಯಾ**
**ನಿರೀಹಯಾ ದ್ವಂದ್ವತಿತಿಕ್ಷಯಾ ಚ ॥**

(ಭಾ.೪.೨೨.೨೪)

ತೇನ ಅಹಿಂಸಯಾ ಸರ್ವಭೂತೇಷು ಸರ್ವಥಾಽನಿಷ್ಟಚಿಂತನವರ್ಜನೇನ । ಪಾರಮಹಂಸ್ಯಚರ್ಯಯಾ ಇಂದ್ರಿಯಜಯೇನ ಸ್ಮೃತ್ಯಾ ದ್ವಿವಿಧಯಾ'

ಅಕಾಮ್ಯೈಃ ಇಚ್ಛಾನುಸಾರಕರಣರಹಿತ್ಯೈಃ। ನಿತ್ಯಾನುಷ್ಠೇಯೈರಿತಿ ಯಾವತ್। ಯಮ್ಯೈ ದಶಭಿಃ। ನಿಯಮ್ಯೈಸ್ತಾವದ್ಭಿಃ ಅಭಯೇನ ಸಹ ಕದಾಚಿದನುಷ್ಠೇಯೈಃ। **ಯಥಾಹುಃ—**

''ಯಮಾನಭೀಕ್ಷ್ಣಂ ಸೇವೇತ ನಿಯಮಾನ್ ಮತ್ಪರಃ ಕ್ವಚಿ''ದಿತಿ।
''ಅಹಿಂಸಾ ಸತ್ಯಮಸ್ತೇಯಮಸಂಗೋ ಹ್ರೀರಸಂಚಯಃ।
ಆಸ್ತಿಕ್ಯಂ ಬ್ರಹ್ಮಚರ್ಯಂ ಚ ಮೌನಂ ಸ್ಥೈರ್ಯಂ ಕ್ಷಮಾಽಭಯಮಿ''ತಿ

ದ್ವಾದಶ ಯಮಾಃ।
''ಶೌಚಂ ಜಪಸ್ತಪೋ ಹೋಮಃ ಶ್ರದ್ಧಾತಿಥ್ಯಂ ಮದರ್ಚನಂ।
ತೀರ್ಥಾಟನಂ ಪರಾರ್ಥೇಹಾ ತುಷ್ಟಿರಾಚಾರ್ಯಸೇವನಮಿ''ತಿ ॥

ನಿಯಮಾಃ ಯಮೋಕ್ತಾಭಯೇನ ಸಹ ದ್ವಾದಶ।
''ಏತೇ ಯಮಾಃ ಸನಿಯಮಾ ಉಭಯೋ ರ್ದ್ವಾದಶ ಸ್ಮೃತಾಃ''
ಇತಿ ವಚನಾತ್ ತೇನ ಸಹೈವೇತಿ ಜ್ಞೇಯಂ।

ಅನಿಂದಯಾ ಮಹತಾಂ। ನಿರೀಹಯಾ ಯದೃಚ್ಛಯಾ ಲಬ್ಧೇನೈವ ಸಂತುಷ್ಟ್ಯಾ। ದ್ವಂದ್ವಸಂಜ್ಞಯೋಃ ಶೀತೋಷ್ಣಾದಿರೂಪಯೋಃ ತಿತಿಕ್ಷಯಾ ಸಹನಶಕ್ತ್ಯಾ।



ಪ್ರಾಣಿಗಳಿಗೆ ಸರ್ವಥಾ ಅನಿಷ್ಟವಾಗದಿರಲೆಂದು ಚಿಂತಿಸುವುದರಿಂದ, ಪರಮಹಂಸರು ಆಚರಿಸುವಂಥ ಇಂದ್ರಿಯನಿಗ್ರಹದಿಂದ, ಜನನ ಮರಣಾದಿಗಳು ತಪ್ಪಿದ್ದಲ್ಲವೆಂದು ಮತ್ತು ವಿಷಯ ಸುಖಭೋಗ ಅನಿತ್ಯವೆಂದು ಈ ಎರಡು ಬಗೆ ಚಿಂತನೆಯಿಂದ, ಹರಿಕಥಾಮೃತ ಪಾನಾಸಕ್ತಿಯಿಂದ, ಹನ್ನೆರಡು ಬಗೆಯಾದ ನಿತ್ಯಾನುಷ್ಠೇಯ ಯಮಗಳಿಂದ, ಅಭಯಯುಕ್ತವಾದ ನಿತ್ಯಾನುಷ್ಠೇಯವಲ್ಲದ ಹನ್ನೆರಡು ನಿಯಮಗಳಿಂದ, ಮಹಾತ್ಮರ ನಿಂದೆಯ ವರ್ಜನದಿಂದ, ಹರೀಚ್ಛಾಲಬ್ಧವಾದುದರಲ್ಲಿಯೇ ಸುಖ ಕಾಣುವುದರಿಂದ ಮತ್ತು ಸುಖದುಃಖ ದ್ವಂದ್ವ ಸಹನೆಯಿಂದ ಅನ್ಯತ್ರವಿರಕ್ತಿ ಹರಿಯಲ್ಲಿ ಭಕ್ತಿಗಳು ಲಭಿಸುವುವು.

ಸನತ್ಕುಮಾರರ ಉಪದೇಶದಲ್ಲಿ ನಾಲ್ಕನೆ ಪದ್ಯ—



—೫೫—

## ಭಾಗವತಶ್ರವಣದಿಂದ ಹರಿಭಕ್ತಿ ದೃಢವಾಗುವುದು

ಹರೇರ್ಮುಹುಸ್ತತ್ಪರಕರ್ಣಪೂರಯಾ
ಗುಣಾಭಿಧಾನೇನ ವಿಜೃಂಭಮಾಣಯಾ ।
ಭಕ್ತ್ಯಾ ಹ್ಯಸಂಗಃ ಸದಸತ್ಪರಾತ್ಮನಿ
ಸ್ಯಾನ್ನಿರ್ಗುಣೇ ಬ್ರಹ್ಮಣಿ ಚಾಂಜಸಾ ರತಿಃ ॥

(ಭಾ.೪.೨೨.೨೫)

ಸ ಹರಿರೇವ ಪರಃ ಪರಾಯಣಂ ಯೇಷಾಂ ತೇಷಾಂ ಭಗವದ್ಭಕ್ತಾನಾಂ ಕರ್ಣಭೂಷಣಭೂತಯಾ ಹರೇಃ ಮುಹುಃ ಕಥಾಯಾಃ ಕಥನೇನ ತದ್ಭಕ್ತೇಭ್ಯಸ್ತನ್ಮಹಿಮಪ್ರತಿಪಾದನೇನೇತಿ ಯಾವತ್। ಗುಣಾಭಿಧಾನೇನ ಗುಣಕರ್ಮನಾಮಕೀರ್ತನೇನೇತ್ಯೇವಂರೂಪಾಣಾಂ ಅನ್ಯೇಷಾಂ ಚ ಭಗವತಾ ಪ್ರೋಕ್ತಾನಾಂ ಭಾಗವತಧರ್ಮಾಣಾಂ ಅನುದಿನಂ ಚರ್ಯಯಾ ಆಚರಣೇನ ನಿಮಿತ್ತೇನ ವಿಜೃಂಭಮಾಣಯಾ ಭಕ್ತ್ಯಾ। ಆತ್ಮವ್ಯತಿರಿಕ್ತವಸ್ತುನ್ಯಸಂಗಃ, ಸದಸತೋಃ ಕಾರ್ಯಕಾರಣಪದವಾಚ್ಯಯೋರ್ದೇಹೇಂದ್ರಿಯಯೋಃ ಸ್ಥಿತ್ವಾ ಮುಖ್ಯತ ಆದಾನಾದಿಕರ್ತರಿ ನಿರ್ಗುಣೇ ಬ್ರಹ್ಮಣಿ ರತಿಃ ಅಂಜಸಾ ದೃಢಾ ಸ್ಯಾದಿತಿ। ಅನೇನ ಶ್ರದ್ಧಾದೀನಾಮೇತದ್ ದ್ವಯಂ ಪ್ರತ್ಯೇವ ಹೇತುತ್ವಮಿತಿ ಇಯಾನೇವ ಶಾಸ್ತ್ರೇಷು ನಿಶ್ಚಿತೋಽರ್ಥ ಇತಿ ಸಿದ್ಧಂ ॥



'ಹರಿಭಕ್ತರಿಗೆ ಕರ್ಣಭೂಷಣವಾಗುವಂಥ ಹರಿಕಥೆಯನ್ನು ಹೇಳುವುದರಿಂದ, ಪುನಃಪುನಃ ಹರಿಯ ಗುಣ ಕರ್ಮ ನಾಮಗಳನ್ನು ಹೊಗಳುವುದರಿಂದ ಅನ್ಯತ್ರ ವಿರಕ್ತಿಯೂ ಹರಿಯಲ್ಲಿ ಭಕ್ತಿಯೂ ಉಂಟಾಗುವುದು. ಹೀಗೆ ಭಗವಂತನೇ ಹೇಳಿದ ಭಾಗವತಧರ್ಮವನ್ನು ನಿತ್ಯವೂ ಆಚರಿಸುವುದರಿಂದಲೂ ಭಕ್ತಿ ಹೆಚ್ಚಾಗುತ್ತದೆ. ಆತ್ಮವ್ಯತಿರಿಕ್ತ ವಸ್ತುಗಳಲ್ಲಿ ವಿರಕ್ತಿಯೂ 'ಸದಸತ್ ಪರಾತ್ಮ' ಕಾರ್ಯಕಾರಣ ರೂಪವಾದ ದೇಹೇಂದ್ರಿಯಗಳಲ್ಲಿ ಸ್ವಾಮಿಯಾಗಿರುವ ನಿರ್ಗುಣ ಗುಣತ್ರಯರಹಿತನೂ ಆದ ಪರಬ್ರಹ್ಮ ನಾರಾಯಣನಲ್ಲಿ ಭಕ್ತಿಯೂ ದೃಢವಾಗುವುದು'.

ಈ ಸನತ್ಕುಮಾರೋಪದೇಶದಿಂದ, ಪರಮಾತ್ಮನಲ್ಲಿ ಶ್ರದ್ಧೆ ಮುಂತಾದುವು

ಅನ್ಯತ್ರವಿರಕ್ತಿ ಮತ್ತು ಹರಿಯಲ್ಲಿ ಭಕ್ತಿಗಳಿಗೇ ನೇರವಾಗಿ ಕಾರಣವೆಂದೂ ಇದುವೇ ಶಾಸ್ತ್ರದಲ್ಲಿ ನಿಶ್ಚಿತವಾಗಿ ಪ್ರತಿಪಾದಿತವಾಗುವ ಪ್ರಮೇಯ ಎಂದೂ ಸಿದ್ಧವಾಗುವುದು.

ಈ ವಿರಕ್ತಿ ಭಕ್ತಿಗಳಿಂದಾಗುವ ಪ್ರಯೋಜನವೇನೆಂದರೆ ಅದು ಇಲ್ಲಿಯೇ ಮುಂದಿನ ಪದ್ಯದಲ್ಲಿದೆ—



–೫೬–

**ಅಪರೋಕ್ಷಜ್ಞಾನ ವೈರಾಗ್ಯಗಳಿಂದ ಭಕ್ತಿ ಪಕ್ವವಾದಾಗ ಲಿಂಗಶರೀರವು ಸುಟ್ಟುಹೋಗುತ್ತದೆ**

**ಯದಾ ರತಿ ಬ್ರ್ಹಹ್ಮಣಿ ನೈಷ್ಠಿಕೀ ಪುಮಾನ್**
**ಆಚಾರ್ಯವಾನ್ ಜ್ಞಾನವಿರಾಗರಂಹಸಾ ।**
**ದಹತ್ಯಬೀಜಂ ಹೃದಯಂ ಜೀವಕೋಶಂ**
**ಪಂಚಾತ್ಮಕಂ ಯೋನಿಮಿವೋತ್ಥಿತೋಽಗ್ನಿಃ ॥**

(ಭಾ.೪.೨೨.೨೬)

ಸಂತ್ವೇತಾನ್ಯಸಂಗರತ್ಯೋಃ ಸಾಧನಾನಿ ಸಾಧ್ಯಂ ಚೈತಾಭ್ಯಾಂ ಕೀದೃಶಮಿತ್ಯತಸ್ತದಾಹ ॥ **ಯದೇತಿ ॥** ಗುರ್ವನುಗೃಹೀತಃ ಪುಮಾನ್ ಜ್ಞಾನವೈರಾಗ್ಯಯೋರುದ್ರೇಕೇಣ ಭಕ್ತಿರ್ಯದಾ ನೈಷ್ಠಿಕೀಂ ನಿಷ್ಠಾಂ ಪ್ರಾಪ್ತಾ ಪಕ್ವಾ ಭವತಿ ತದಾ ಜೀವಕೋಶಂ ಪಂಚಾತ್ಮಕಮ ಬೀಜಂ ಬಾಹ್ಯಹೃದಯಮಂತಃ ಕರಣಂ ದಹತಿ । ಯೋನೇಃ ಕಾಷ್ಠಾದುತ್ಥಿತೋಽಗ್ನಿಃ ಕಾಷ್ಠಮಿವ ಭಗವದ್ವಿಷಯಿಣೀ ಯಾ ರತಿಃ ಸೈವಾಂತಃಕರಣಂ ಸ್ತೋತ್ಪಾದಕಂ ನಾಶಯತೀತಿ ರತಿಫಲಮೀ-ದೃಶಮಿತಿ ಭಾವಃ। ತದನೇನ ಪದ್ಯಷಟ್ಕೇನಾವಿಷ್ಟಚಿತ್ತ ಇತ್ಯುಕ್ತಚಿತ್ತವೃತ್ತೌ ದಾರ್ಢ್ಯ ರೂಪಸ್ಯ ವಿಶೇಷಸ್ಯ ತದ್ವಿಷಯೇ ನಿರ್ಗುಣತ್ವಸ್ಯ ತತ್ಸಾಧನೇ ಶೃಣ್ವನ್ನಿತ್ಯಾದ್ಯುಕ್ತಶ್ರವಣಾದಿತೋಽಧಿಕಾನಾಂ ಸಾಧನಾನಾಂ ನ ಭವಾಯ ಕಲ್ಪತ ಇತ್ಯುದಿತೇ ತತ್ಸಾಧ್ಯೇ ಸಂಸಾರನಿವೃತ್ತಿರೂಪೇ ಫಲೇ ಪ್ರತಿಯೋಗಿವಿಶೇಷಸ್ಯ, ''ಆಚಾರ್ಯವಾನ್'' ಇತ್ಯಾಚಾರ್ಯಪ್ರಸಾದಸ್ಯ ಚಾಧಿಕಸ್ಯ ಕಥನೇನ ಸಂಕ್ಷಿಪ್ಯ ಶಾಸ್ತ್ರಾರ್ಥಪ್ರತಿಪಾದಕಂ ಶೃಣ್ವನ್ನಿತಿ ಪದ್ಯಂ ವಿವೃತಂ ಭವತಿ ॥



—೫೫—

**ಭಾಗವತಶ್ರವಣದಿಂದ ಹರಿಭಕ್ತಿ ದೃಢವಾಗುವುದು**

**ಹರೇರ್ಮುಹುಸ್ತತ್ಪರಕರ್ಣಪೂರಯಾ**
**ಗುಣಾಭಿಧಾನೇನ ವಿಜೃಂಭಮಾಣಯಾ ।**
**ಭಕ್ತ್ಯಾ ಹ್ಯಸಂಗಃ ಸದಸತ್‌ಪರಾತ್ಮನಿ**
**ಸ್ಯಾನ್ನಿರ್ಗುಣೇ ಬ್ರಹ್ಮಣಿ ಚಾಂಜಸಾ ರತಿಃ ॥**

(ಭಾ.೪.೨೨.೨೫)

**ಸ ಹರಿರೇವ ಪರಃ ಪರಾಯಣಂ ಯೇಷಾಂ ತೇಷಾಂ ಭಗವದ್ಭಕ್ತಾನಾಂ ಕರ್ಣಭೂಷಣಭೂತಯಾ ಹರೇಃ ಮುಹುಃ ಕಥಾಯಾಃ ಕಥನೇನ ತದ್ಭಕ್ತೇಭ್ಯಸ್ತನ್ಮಹಿಮಪ್ರತಿಪಾದನೇನೇತಿ ಯಾವತ್ । ಗುಣಾಭಿಧಾನೇನ ಗುಣಕರ್ಮನಾಮಕೀರ್ತನೇನೇತ್ಯೇವಂರೂಪಾಣಾಂ ಅನ್ಯೇಷಾಂ ಚ ಭಗವತಾ ಪ್ರೋಕ್ತಾನಾಂ ಭಾಗವತಧರ್ಮಾಣಾಂ ಅನುದಿನಂ ಚರ್ಯಯಾ ಆಚರಣೇನ ನಿಮಿತ್ತೇನ ವಿಜೃಂಭಮಾಣಯಾ ಭಕ್ತ್ಯಾ । ಆತ್ಮವ್ಯತಿರಿಕ್ತವಸ್ತುನ್ಯಸಂಗಃ, ಸದಸತೋಃ ಕಾರ್ಯಕಾರಣಪದವಾಚ್ಯಯೋರ್ದೇಹೇಂದ್ರಿಯಯೋಃ ಸ್ಥಿತ್ವಾ ಮುಖ್ಯತ ಆದಾನಾದಿಕರ್ತರಿ ನಿರ್ಗುಣೇ ಬ್ರಹ್ಮಣಿ ರತಿಃ ಅಂಜಸಾ ದೃಢಾ ಸ್ಯಾದಿತಿ । ಅನೇನ ಶ್ರದ್ಧಾದೀನಾಮೇತದ್ ದ್ವಯಂ ಪ್ರತ್ಯೇವ ಹೇತುತ್ವಮಿತಿ ಇಯಾನೇವ ಶಾಸ್ತ್ರೇಷು ನಿಶ್ಚಿತೋಽರ್ಥ ಇತಿ ಸಿದ್ಧಂ ॥**



'ಹರಿಭಕ್ತರಿಗೆ ಕರ್ಣಭೂಷಣವಾಗುವಂಥ ಹರಿಕಥೆಯನ್ನು ಹೇಳುವುದರಿಂದ, ಪುನಃಪುನಃ ಹರಿಯ ಗುಣ ಕರ್ಮ ನಾಮಗಳನ್ನು ಹೊಗಳುವುದರಿಂದ ಅನ್ಯತ್ರ ವಿರಕ್ತಿಯೂ ಹರಿಯಲ್ಲಿ ಭಕ್ತಿಯೂ ಉಂಟಾಗುವುದು. ಹೀಗೆ ಭಗವಂತನೇ ಹೇಳಿದ ಭಾಗವತಧರ್ಮವನ್ನು ನಿತ್ಯವೂ ಆಚರಿಸುವುದರಿಂದಲೂ ಭಕ್ತಿ ಹೆಚ್ಚಾಗುತ್ತದೆ. ಆತ್ಮವ್ಯತಿರಿಕ್ತ ವಸ್ತುಗಳಲ್ಲಿ ವಿರಕ್ತಿಯೂ 'ಸದಸತ್ ಪರಾತ್ಮ' ಕಾರ್ಯಕಾರಣ ರೂಪವಾದ ದೇಹೇಂದ್ರಿಯಗಳಲ್ಲಿ ಸ್ವಾಮಿಯಾಗಿರುವ ನಿರ್ಗುಣ ಗುಣತ್ರಯರಹಿತನೂ ಆದ ಪರಬ್ರಹ್ಮ ನಾರಾಯಣನಲ್ಲಿ ಭಕ್ತಿಯೂ ದೃಢವಾಗುವುದು'.

ಈ ಸನತ್ಕುಮಾರೋಪದೇಶದಿಂದ, ಪರಮಾತ್ಮನಲ್ಲಿ ಶ್ರದ್ಧೆ ಮುಂತಾದುವು

ಅನ್ಯತ್ರವಿರಕ್ತಿ ಮತ್ತು ಹರಿಯಲ್ಲಿ ಭಕ್ತಿಗಳಿಗೇ ನೇರವಾಗಿ ಕಾರಣವೆಂದೂ ಇದುವೇ ಶಾಸ್ತ್ರದಲ್ಲಿ ನಿಶ್ಚಿತವಾಗಿ ಪ್ರತಿಪಾದಿತವಾಗುವ ಪ್ರಮೇಯ ಎಂದೂ ಸಿದ್ಧವಾಗುವುದು.

ಈ ವಿರಕ್ತಿ ಭಕ್ತಿಗಳಿಂದಾಗುವ ಪ್ರಯೋಜನವೇನೆಂದರೆ ಅದು ಇಲ್ಲಿಯೇ ಮುಂದಿನ ಪದ್ಯದಲ್ಲಿದೆ—



–೫೬–

**ಅಪರೋಕ್ಷಜ್ಞಾನ ವೈರಾಗ್ಯಗಳಿಂದ ಭಕ್ತಿ**
**ಪಕ್ವವಾದಾಗ ಲಿಂಗಶರೀರವು ಸುಟ್ಟುಹೋಗುತ್ತದೆ**

**ಯದಾ ರತಿ ಬ್ರ್ಹಹ್ಮಣಿ ನೈಷ್ಠಿಕೀ ಪುಮಾನ್**
**ಆಚಾರ್ಯವಾನ್ ಜ್ಞಾನವಿರಾಗರಂಹಸಾ ।**
**ದಹತ್ಯಬೀಜಂ ಹೃದಯಂ ಜೀವಕೋಶಂ**
**ಪಂಚಾತ್ಮಕಂ ಯೋನಿಮಿವೋತ್ಥಿತೋಽಗ್ನಿಃ ॥**

(ಭಾ.೪.೨೨.೨೬)

ಸಂತ್ವೇತಾನ್ಯಸಂಗರತ್ಯೋಃ ಸಾಧನಾನಿ ಸಾಧ್ಯಂ ಚೈತಾಭ್ಯಾಂ ಕೀದೃಶಮಿತ್ಯತಸ್ತದಾಹ ॥ ಯದೇತಿ ॥ ಗುರ್ವನುಗೃಹೀತಃ ಪುಮಾನ್ ಜ್ಞಾನವೈರಾಗ್ಯಯೋರುದ್ರೇಕೇಣ ಭಕ್ತಿರ್ಯದಾ ನೈಷ್ಠಿಕೀಂ ನಿಷ್ಠಾಂ ಪ್ರಾಪ್ತಾ ಪಕ್ವಾ ಭವತಿ ತದಾ ಜೀವಕೋಶಂ ಪಂಚಾತ್ಮಕಮ ಬೀಜಂ ಬಾಹ್ಯಹೃದಯಮಂತಃ ಕರಣಂ ದಹತಿ । ಯೋನೇಃ ಕಾಷ್ಠಾದುತ್ಥಿತೋಽಗ್ನಿಃ ಕಾಷ್ಠಮಿವ ಭಗವದ್ವಿಷಯಿಣೀ ಯಾ ರತಿಃ ಸೈವಾಂತಃಕರಣಂ ಸ್ತೋತ್ಪಾದಕಂ ನಾಶಯತೀತಿ ರತಿಫಲಮೀ-ದೃಶಮಿತಿ ಭಾವಃ। ತದನೇನ ಪದ್ಯಷಟ್ಕೇನಾವಿಷ್ಟಚಿತ್ತ ಇತ್ಯುಕ್ತಚಿತ್ತವೃತ್ತೌ ದಾರ್ಢ್ಯ ರೂಪಸ್ಯ ವಿಶೇಷಸ್ಯ ತದ್ವಿಷಯೇ ನಿರ್ಗುಣತ್ವಸ್ಯ ತತ್ಸಾಧನೇ ಶೃಣ್ವನ್ನಿತ್ಯಾದ್ಯುಕ್ತಶ್ರವಣಾದಿತೋಽಧಿಕಾನಾಂ ಸಾಧನಾನಾಂ ನ ಭವಾಯ ಕಲ್ಪತ ಇತ್ಯುದಿತೇ ತತ್ಸಾಧ್ಯೇ ಸಂಸಾರನಿವೃತ್ತಿರೂಪೇ ಫಲೇ ಪ್ರತಿಯೋಗಿವಿಶೇಷಸ್ಯ, ''ಆಚಾರ್ಯವಾನ್' ಇತ್ಯಾಚಾರ್ಯಪ್ರಸಾದಸ್ಯ ಚಾಧಿಕಸ್ಯ ಕಥನೇನ ಸಂಕ್ಷಿಪ್ಯ ಶಾಸ್ತ್ರಾರ್ಥಪ್ರತಿಪಾದಕಂ ಶೃಣ್ವನ್ನಿತಿ ಪದ್ಯಂ ವಿವೃತಂ ಭವತಿ ॥



**ಗುರುಗಳಿಂದ ಪೂರ್ಣ ಅನುಗೃಹೀತನಾದ ಹರಿಭಕ್ತನು ಅಪರೋಕ್ಷಜ್ಞಾನ ವೈರಾಗ್ಯಗಳ ಬಲದಿಂದ ಯಾವಾಗ ಭಕ್ತಿಯು ಪಕ್ವವಾಗುವುದೋ ಆಗಲೇ ಪಂಚಭೂತಾತ್ಮಕವಾದ, ಜೀವನಿಗೆ ಆವಶ್ಯಕವಾಗಿ ಮನೆಯಂತಿರುವ ಲಿಂಗಶರೀರವನ್ನು ಸುಡಿಸಿಕೊಳ್ಳುವನು, ಕಟ್ಟಿಗೆಯಿಂದ ಹುಟ್ಟುವ ಅಗ್ನಿಯು ಕಟ್ಟಿಗೆಯನ್ನು ಸುಡುವಂತೆ. ಜೀವನೂ ಸುಟ್ಟು ಹೋಗುವುದಿಲ್ಲವೆ? ಎಂದರೆ, ಇಲ್ಲ, 'ಅ ಬೀಜಂ ಹೃದಯಂ' ಸ್ವರೂಪೋಪಾಧಿ ಹೊರತಾಗಿಯೇ, ಲಿಂಗಶರೀರ ರೂಪ ಬಾಹ್ಯೋಪಾಧಿಯನ್ನು ಮಾತ್ರವೆ ಜೀವನು ಸುಟ್ಟುಕೊಳ್ಳುತ್ತಾನೆ.**

ಇದು ಇಲ್ಲಿ ಭಾ.ತಾತ್ಪರ್ಯೋಕ್ತವಾದ ಸ್ಕಾಂದಪುರಾಣ ವಚನದಿಂದ ಉಕ್ತವಾಗಿದೆ—

ಜೀವನು ಪರಮಾತ್ಮನ ಪ್ರತಿಬಿಂಬ. ಈ ಪ್ರತಿಬಿಂಬಕ್ಕೆ ಉಪಾಧಿಗಳು ಎರಡು. ಸ್ವರೂಪೋಪಾಧಿ ಬಾಹ್ಯೋಪಾಧಿಗಳೆಂದು. ಅಪರೋಕ್ಷಜ್ಞಾನ ಭಕ್ತಿ ಗಳಿಂದ ಬಾಹ್ಯೋಪಾಧಿಯಾದ ಲಿಂಗಶರೀರ ಮಾತ್ರ ಸುಡುತ್ತದೆ. ಸ್ವರೂಪೋಪಾಧಿಯು ಸುಡುವುದಿಲ್ಲ. ಮೋಕ್ಷದಲ್ಲಿಯೂ ಅದು ಇರುತ್ತದೆ. ಅದು ಸುಟ್ಟು ನಾಶವಾದರೆ ಜೀವನು ನಾಶವಾದನೆಂದರ್ಥ. ಜೀವನಾಶವು ಜೀವನಿಗೆ ಪುರುಷಾರ್ಥವಲ್ಲ. ತಾನು ನಾಶವಾಗಬೇಕೆಂದು ಜೀವನೆಂದೂ ಬಯಸುವುದಿಲ್ಲ.'

ಅ–ಬೀಜಂ–ಹೃದಯಂ ಎಂದು ಮೂರು ಪದಗಳು. 'ಅ' 'ವಿನಾ' ಎಂಬರ್ಥದ ಒಂದು ಬೇರೆಯೇ ಪದ, ಹೊರತು 'ನಬೀಜಂ' ಎಂದು ಸಮಾಸದಲ್ಲಿ ನಲೋಪವಾಗಿ ಉಳಿದ ಅಕಾರವಲ್ಲ.

'ಬೀಜಂ ಹೃದಯಂ ಅ' 'ಸ್ವರೂಪೋಪಾಧಿಯನ್ನು ಹೊರತುಪಡಿಸಿ' ಕೇವಲ ಜೀವಕೋಶವಾದ ಲಿಂಗಶರೀರರೂಪ ಭಾಹ್ಯೋಪಾಧಿಯನ್ನು ಮಾತ್ರ ಅಪರೋಕ್ಷಜ್ಞಾನಭಕ್ತಿಗಳು ಸುಡುತ್ತವೆ.

ಲಿಂಗಶರೀರವೂ ಪೂರ್ತಿ ಸುಡುವುದಿಲ್ಲ. ಅರ್ಧ ಸುಡುತ್ತದೆ. ಮುಂದೆ ವಿರಜಾಸ್ನಾನದಿಂದ ಅದು ತೊಲಗುತ್ತದೆ.

'ಲಿಂಗಶರೀರ ಅರ್ಧ ಸುಡುತ್ತದೆ' ಎಂದರೆ ಷೋಡಶಕಲಾತ್ಮಕವಾದ ಲಿಂಗಶರೀರದಲ್ಲಿ ಹದಿನಾರನೆ ಕಲೆಯಾದ ಜಡಅಂತಃಕರಣವು ಮಾತ್ರ ಸುಡು

ತ್ತದೆ. ಆ ಅಂತಃಕರಣದಲ್ಲಿಯೂ ಮೂರು ಅಂಶಗಳು, ಇವೆ. ಸತ್ವರಜಸ್ತಮೋ ಗುಣಗಳು. ಅವುಗಳಲ್ಲಿ ಸತ್ವಗುಣಾಂಶದಿಂದ ಅಪರೋಕ್ಷ ರೂಪವಾದ ಜ್ಞಾನ ಹುಟ್ಟಿ ರಜೋಗುಣ ತಮೋಗುಣಾಂಶಗಳನ್ನು ಮಾತ್ರ ಸುಡುತ್ತದೆ.

ಅದರಿಂದ ಅಪರೋಕ್ಷಿಗಳಲ್ಲಿ ರಜಸ್ತಮೋಗುಣಕಾರ್ಯವಾದ ಅನ್ಯಥಾ ಜ್ಞಾನವಿರುವುದಿಲ್ಲ. ಸತ್ವಗುಣಕಾರ್ಯವಾದ ಯಥಾರ್ಥಜ್ಞಾನವೇ ಇರುತ್ತದೆ.

ಶಾಸ್ತ್ರೇಷ್ವಿಯಾನೇವ ಎಂಬಲ್ಲಿಂದ ತೊಡಗಿ ಈ ಆರು ಶ್ಲೋಕಗಳಲ್ಲಿ 'ಶೃಣ್ವನ್ ಗೃಣನ್ ಸಂಸ್ಮರಯನ್' ಎಂಬ ಶ್ಲೋಕದಲ್ಲಿ 'ಆವಿಷ್ಟಚಿತ್ತಃ ನ ಭವಾಯ ಕಲ್ಪತೇ' ಎಂದು ಹೇಳಿದ ಚಿತ್ತವೃತ್ತಿ ದಾರ್ಢ್ಯರೂಪವಾದ ವಿಶೇಷ ಉಕ್ತವಾಯಿತು. ಅದಕ್ಕೆ ವಿಷಯನಾದ ಪರಮಾತ್ಮನಲ್ಲಿ ನಿರ್ಗುಣತ್ವ ಉಕ್ತವಾಯಿತು. ಚಿತ್ತವೃತ್ತಿಗೆ ಕಾರಣವಾಗಿ 'ಶೃಣ್ವನ್ ಗೃಣನ್' ಎಂದು ಮುಂತಾಗಿ ಹೇಳಿದ ಶ್ರವಣ ಕೀರ್ತನಾದಿಗಳಿಗಿಂತ ಅಧಿಕವಾಗಿ ಶ್ರದ್ಧೆ ಭಗವದ್ಧರ್ಮಾನುಷ್ಠಾನ ಮುಂತಾದ ಸಾಧನಗಳೂ ಉಕ್ತವಾಗಿವೆ. 'ನ ಭವಾಯ ಕಲ್ಪತೇ' ಎಂಬಲ್ಲಿ ಹೇಳಿದ ಸಂಸಾರ ನಿವೃತ್ತಿರೂಪ ಫಲದಲ್ಲಿ 'ಸಂಸಾರ'ವೆಂದರೆ ಲಿಂಗಶರೀರದಲ್ಲಿರುವ ಜಡ ಅಂತಃಕರಣ ಮಾತ್ರ ಎಂದು ವಿಶೇಷಾಂಶ 'ಅಬೀಜಂ' ಎಂದು ಉಕ್ತವಾಗಿದೆ. 'ಆಚಾರ್ಯವಾನ್' ಎಂದು ಗುರುವಿನ ಪೂರ್ಣಾನುಗ್ರಹ ಲಾಭವೂ ಅಧಿಕ ವಾಗಿ ಉಕ್ತವಾಗಿದೆ.

ಹೀಗೆ ಅಧಿಕಾಂಶಗಳು ಅನೇಕ ಉಕ್ತವಾಗಿರುವುದರಿಂದ 'ಶೃಣ್ವನ್ ಗೃಣನ್' ಎಂಬ ಶ್ಲೋಕಕ್ಕೆ ಆರು ಶ್ಲೋಕಗಳಲ್ಲಿ ಚೆನ್ನಾಗಿ ವಿವರಣೆ ಬಂದಿದೆ.



# (೫) ವೈರಾಗ್ಯ ಪ್ರಕರಣ

## ಪ್ರಕರಣ ಸಾರಾಂಶ

ತನ್ನ ಶರೀರ ಮನೆ ಮಡದಿ ಮಕ್ಕಳು ಎಲ್ಲ ನಶ್ವರ. ಅವು ಬರುವಾಗಲೂ ಕಷ್ಟ ಹೋಗುವಾಗಲೂ ಕಷ್ಟ ಇರುವಾಗಲೂ ಕಷ್ಟ. ಇದನ್ನು ಮನುಷ್ಯನು ತಾನೇ ಅನುಭವದಿಂದ ತಿಳಿದುಕೊಳ್ಳಬೇಕು. ತಿಳಿದುಕೊಳ್ಳುವುದಿಲ್ಲ. ಅವುಗಳಲ್ಲಿಯೆ ಆಸಕ್ತನಾಗಿರುತ್ತಾನೆ. ಆಸಕ್ತಿಯೇ ಸಂಸಾರ, ಆಸಕ್ತಿ ತ್ಯಜಿಸಿದರೆ ದುಃಖವಿಲ್ಲ. ಅನಾಸಕ್ತಿಯು ಜ್ಞಾನ ಭಕ್ತಿಗಳ ದಾರ್ಢ್ಯಕ್ಕೆ ಕಾರಣವಾಗುವುದು. ಪರಮಾತ್ಮನ ವಿಶೇಷಾನುಗ್ರಹಕ್ಕೆ ಕಾರಣವಾಗುವುದು. ಅನುಗ್ರಹ ದಿಂದ ಮೋಕ್ಷ ಲಭಿಸುವುದು.

ತಾವಾಗಿಯೇ ವಿರಕ್ತರಾಗದ ಯೋಗ್ಯಸುಜೀವರನ್ನು ಹರಿ ಬಲವಂತವಾಗಿ ವಿರಕ್ತರನ್ನಾಗಿ ಮಾಡಿ ಅನುಗ್ರಹಿಸುತ್ತಾನೆ. ಇದಕ್ಕೆ ಬಲಿಚಕ್ರವರ್ತಿ ಉದಾಹರಣೆ. 'ಬಲಿಮಪಿ ಬಿಲವಾಸಂ' ಎಂದು ಭ್ರಮರಗೀತೆ (ಭಾ.೧೦.೪೫.೧೭)ಯಲ್ಲಿ ಹೇಳಿದಂತೆ, ವಾಮನನು ಬಲಿಚಕ್ರವರ್ತಿಯಿಂದ ಮೂರೂ ಲೋಕ ಸಾಮ್ರಾಜ್ಯವನ್ನು ಕಸಿದು ಅವನನ್ನು ಬೆಟ್ಟದ ಬಿಲದೊಳಗೆ ಬಂಧಿಸಿಟ್ಟ. ಗಿರಿದರ್ಯಾಂ ಚಾಪವಿದ್ಧಃ(ಭಾ.೫.೨೩.೨೪) ಬಲಿಬಂಧನ ವಾಮನ.

ಬಲಿಯ ಕಥೆ ಬಲಿ ಭಕ್ತಿಯಿಂದ ಮೂಲೋಕ ದಾನ ಮಾಡಿದ ಕಥೆಯಲ್ಲ. ಬಲಿಯಿಂದ ಬಲಾತ್ಕಾರವಾಗಿ ಮೂಲೋಕವನ್ನು ವಾಮನ ಕಸಿದು ಅವನಿಗೆ ವೈರಾಗ್ಯದ ಪಾಠ ಕಲಿಸಿದ ಕಥೆ ಅದು.

ಗೋಪಿಯರು ಶ್ರೀಕೃಷ್ಣನನ್ನು ಭ್ರಮರಗೀತೆಯಲ್ಲಿ 'ಬಲಿಮಪಿ ಬಿಲವಾಸಂ' ಬಲಿಯನ್ನು ಬಿಲದಲ್ಲಿ ವಾಸ ಮಾಡುವಂತೆ ಬಂಧಿ ಸಿಟ್ಟವನೆಂದು ನಿಂದಾಸ್ತುತಿ ಮಾಡುತ್ತಾರೆ.

ಮುಚುಕುಂದನಿಗೆ ನಿದ್ದೆ ಕೊಟ್ಟು ಅವನ ಮನೆ, ಮಡದಿ ರಾಜ್ಯ ಬೊಕ್ಕಸವೆಲ್ಲವನ್ನೂ ಕಾಲ ವೇಗದಿಂದ ನಾಶಪಡಿಸಿ ವೈರಾಗ್ಯ ನೀಡಿದ.

ಪುರೂರವನಿಗೆ ಉರ್ವಶಿಯ ವಿರಹ ನೀಡಿ ಅಯ್ಯೋ ನಾನು ಸ್ತ್ರೀಗೆ ವಶನಾಗಿ ಅವಳ ಕೈಯಾಟದ ಕೋತಿಯಂತೆ ಕುಣಿದೆನೆಂದು, ಪಶ್ಚಾತ್ತಾಪಪಡುವಂತೆ ಮಾಡಿದ. ಚಕ್ರವರ್ತಿಯಾದ ಆತ ವಿರಹ ತಾಳಲಾರದೆ ಹುಚ್ಚನಂತೆ ವಿವಸ್ತ್ರನಾಗಿ ಅವಳ ಹಿಂದೆ ಹಿಂದೆ ಧಾವಿಸಿ ಬರುವಂತೆ ಮಾಡಿದ ಶ್ರೀಹರಿ.

ಪಿಂಗಳೆ ಎಂಬ ವೇಶ್ಯೆ ತನ್ನ ಬಯಕೆಯನ್ನು ಪೂರೈಸಬಲ್ಲ ಪುರುಷನಿಗಾಗಿ ರಾತ್ರಿಯೆಲ್ಲ ನಿದ್ದೆ ಕೆಟ್ಟು ಕಾದು ಸೋತು ಹತಾಶಳಾಗಿ ವೈರಾಗ್ಯ ಹೊಂದಿದಳು.

ಪ್ರಿಯವ್ರತ ಪ್ರಹ್ಲಾದ ಸೌಭರಿಮುನಿಯಂಥವರು ಮಾತ್ರ ಸ್ವತಃ ವೈರಾಗ್ಯ ಸಂಪಾದಿಸಿದವರು.



–೫೭–

## ವೈರಾಗ್ಯವು ಜ್ಞಾನಕಾರಣ

**ನ ತಸ್ಯ ತತ್ವಗ್ರಹಣಾಯ ಸಾಕ್ಷಾತ್**
**ವರೀಯಸೀರಪಿ ವಾಚಃ ಸಮಾಸನ್ ।**
**ಸ್ವಪ್ನೇ ನಿರುಕ್ತ್ಯಾ ಗೃಹಮೇಧಿಸೌಖ್ಯಂ**
**ನ ಯಸ್ಯ ಹೇಯಾನುಮಿತಂ ಸ್ವಯಂ ಸ್ಯಾತ್ ॥**

(ಭಾ.೫.೧೧.೩)

**ವಿರಾಗೋ ರತಿಶ್ಚೇತಿ ದ್ವಯಮೇವ ಮುಖ್ಯಂ ಮುಕ್ತಿಸಾಧನಂ। ತತ್ರ ಸಾಧನಾನಿ ಚೇತರಾಣೀತಿ ಪ್ರತಿಪಾದಿತಂ ಪೂರ್ವಪ್ರಕರಣೇ। ತಚ್ಚ ವೈರಾಗ್ಯಂ ಕಥಂ ಸ್ಯಾದಿತ್ಯತಸ್ತದರ್ಥಂ ಸಂಸಾರಸ್ಯ ಹೇಯತಾ ವ್ಯುತ್ಪಾದ್ಯತೇಽಸ್ಮಿನ್ಪ್ರಕರಣೇ। ದೇಹದಾರಾಗಾರಾದಿಷು ಸಂಗೋ ಹಿ ಸಂಸಾರಃ। ತಸ್ಯ ಚ ಪ್ರಾಗನಂತರಂ ಮಧ್ಯೇ ಚಾವಸ್ಥಾತ್ರಯಮಿತಿ ಸರ್ವತ್ರಾಪಿ ವಿಚಾರ್ಯಮಾಣೇ ದುಃಖಪರಂಪರಾ-ಪರೀತತ್ವಮಿತಿ ತತ್ರ ವಿರಾಗೇಣ ತಾವದ್ದುಃಖನಿವೃತ್ತಿಃ। ತಥಾ ತಸ್ಯ ಜ್ಞಾನಭಕ್ತಿಸ್ಥಿರೀಕರಣಹೇತುತಯಾ ಪ್ರಸಾದವಿಶೇಷಸಾಧನತಯಾ ಚ ಮಹಾಪುರುಷಾರ್ಥಲಾಭಶ್ಚೇತಿ ತತ್ರಾವಹಿತೈರ್ಭಾವ್ಯಮಿತ್ಯಾಶಯೇನಾದೌ**

ಜ್ಞಾನಸ್ಥಿರೀಕರಣಹೇತುತಾಂ ದರ್ಶಯತಿ ॥ **ನ ತಸ್ಯೇತಿ** ॥ ಯಸ್ಯ ಯೇನ ಸ್ವಪ್ನೇ ನಿರುಕ್ತ್ಯಾ ಸ್ವಪ್ನದೃಷ್ಟಾಂತೇನ ಗೃಹಮೇಧಾನಾಂ ಸುಖಂ ವೈಷಯಿಕಂ ಸ್ವಬುದ್ಧ್ಯೈವ ಹೇಯತ್ವೇನಾನುಮಿತಂ ನ ಸ್ಯಾತ್ ತಸ್ಯ ಸಾಕ್ಷಾದಪೌರುಷೇಯತ್ವೇನ ವರೀಯಸ್ಯೋಽಪಿ ವೇದವಾಚೋ ನ ಪರತತ್ತ್ವಬೋಧನಾಯ ಸಮರ್ಥಾ ಭವಂತೀತಿ । ಅಸಂಗೇನ ದುಃಖನಿವೃತ್ತಿಶ್ಚಾನುಭವಸಿದ್ಧಾ । ಉಪದಿಷ್ಟಮಪಿ ತತ್ತ್ವಂ ವೈರಾಗ್ಯವತ ಏವ ಹೃದಯೇಽವತಿಷ್ಠತ ಇತಿ ತಸ್ಯ ಜ್ಞಾನಸ್ಥಿರೀಕರಣಹೇತುತ್ವಂ ಭಕ್ತಿಸ್ಥಿರೀಕರಣಹೇತುತ್ವಂ ಚ ಪೂರ್ವಪ್ರಕರಣಾಂತೇ ಪ್ರತಿಪಾದಿತಂ । ಪ್ರಸಾದಹೇತುತಾ ಚ ಪ್ರಮಾಣಪ್ರಮಿತಾ । **ಯಥಾಹುಃ**—

''ಯೇ ದಾರಾಗಾರಪುತ್ರಾದೀನ್ ಪ್ರಾಣಾನ್ವಿತ್ತಮಿದಂ ಪರಂ ।
ಹಿತ್ವಾ ಮಾಂ ಶರಣಂ ಯಾತಾಃ ಕಥಂ ತಾಂಸ್ತ್ಯಕ್ತುಮುತ್ಸಹೇ ।'' ಇತಿ ।

ಇದಂ ತು ಸ್ವತ ಏವ ವಿರಕ್ತವಿಷಯಂ । ಅತ ಏವ ಸ್ವಯಂ ಸ್ಯಾದಿತ್ಯುಕ್ತಂ । ಯೇ ತು ಸ್ವತೋ ಬುದ್ಧಿಪೂರ್ವಂ ನ ವಿರಜ್ಯಂತೇ ತಾನ್ ಬಲಾತ್ಕೃತ್ಯ ವಿರಕ್ತಾನ್ ಕೃತ್ವಾನುಗೃಹ್ಣಾತಿ । **ಯಥಾಹುಃ**—

''ಬ್ರಹ್ಮನ್ಯಮನುಗೃಹ್ಣಾಮಿ ತದ್ವಿತ್ತಂ ವಿಧುನೋಮ್ಯಹಂ''॥



**ರಹೂಗಣ ರಾಜನಿಗೆ ಜಡಭರತನ ಉಪದೇಶ—'ಗೃಹಸ್ಥಾಶ್ರಮದಲ್ಲಿ ಸಿಗುವ ವೈಷಯಿಕ ಸುಖವು ಸ್ವಪ್ನದೃಷ್ಟಾಂತದಿಂದ ಅಲ್ಪ, ಅಸ್ಥಿರ ಮತ್ತು ಹೇಯ ಎಂದು ಯಾರಿಗೆ ಸ್ವತಃ ಊಹೆಯಿಂದ ತಿಳಿಯುವುದಿಲ್ಲವೋ ಅಂಥ ವಿಷಯ ವೈರಾಗ್ಯ ರಹಿತನಾದ ಮನುಷ್ಯನಿಗೆ ಅಪೌರುಷೇಯವಾಗಿದ್ದು ದೋಷ ಶಂಕೆಗೂ ಅವಕಾಶವಿಲ್ಲದ ಮತ್ತು ಪರಮಾತ್ಮನನ್ನೇ ಮುಖ್ಯವಾಗಿ ಪ್ರತಿಪಾದಿಸುವ ವೇದವಚನಗಳೂ ತತ್ವಜ್ಞಾನವನ್ನು ಉಂಟು ಮಾಡಲಾರವು'.**

ಹಿಂದಿನ ಪ್ರಕರಣದಲ್ಲಿ, ವೈರಾಗ್ಯ ಭಕ್ತಿಗಳು ಎರಡೇ ಮುಕ್ತಿಸಾಧನ, ಅದಕ್ಕೆ ಸಾಧನ ಉಳಿದ ಧರ್ಮಗಳೆಂದು ಹೇಳಿದ್ದಾರೆ. ಈ ವೈರಾಗ್ಯವನ್ನು ಹೇಗೆ ಸಂಪಾದಿಸಬೇಕು ಎಂದರೆ ಅದಕ್ಕೆ ಸಾಂಸಾರಿಕ ವೈಷಯಿಕ ಸುಖವು ಹೇಯವೆಂದು ಮನುಷ್ಯನು ತಾನೇ ಸ್ವಪ್ನದೃಷ್ಟಾಂತದಿಂದ ತಿಳಿದುಕೊಳ್ಳಬೇಕು ಎಂದು ಈ ಶ್ಲೋಕದಲ್ಲಿ ಹೇಳುತ್ತಾರೆ.

ತನ್ನ ಶರೀರ ಮನೆ ಮಡದಿ ಮಕ್ಕಳು ಇವು ಎಲ್ಲವೂ ನಶ್ವರ. ಅವು

ಬರುವಾಗಲೂ ಕಷ್ಟ. ಹೋಗುವಾಗಲೂ ಕಷ್ಟ. ಇರುವಾಗಲೂ ಕಷ್ಟವೆ. ಮೂರು ಅವಸ್ಥೆಗಳಲ್ಲಿಯೂ ಸುಖವಿಲ್ಲ. ಕಷ್ಟಗಳು ಒಂದರ ಮೇಲೊಂದು ಬರುತ್ತಲೇ ಇರುತ್ತವೆ ಎಂಬುದನ್ನು ತಾನೆ ಅನುಭವದಿಂದ ಮನುಷ್ಯನು ತಿಳಿದುಕೊಳ್ಳಬೇಕು. ಅವನು ತಿಳಿದುಕೊಳ್ಳುವುದಿಲ್ಲ. ಅವುಗಳಲ್ಲಿ ಆಸಕ್ತನಾಗಿರುತ್ತಾನೆ. ಈ ಆಸಕ್ತಿಯೇ ಸಂಸಾರ. ಅದರಿಂದಲೇ ದುಃಖ. ಅದನ್ನು ತ್ಯಜಿಸಿದರೆ ದುಃಖವಿಲ್ಲ, ಮಾತ್ರ ವಲ್ಲ, ಅನಾಸಕ್ತಿಯು ಜ್ಞಾನಭಕ್ತಿಗಳಲ್ಲಿ ದಾರ್ಢ್ಯ ಬರಲು ಕಾರಣವಾಗುತ್ತದೆ. ಆಮೂಲಕ ಪರಮಾತ್ಮನ ವಿಶೇಷ ಅನುಗ್ರಹಕ್ಕೂ ಕಾರಣವಾಗುತ್ತದೆ. ಅದರಿಂದ ಮಹಾಪುರುಷಾರ್ಥವಾದ ಮೋಕ್ಷವು ಕರಗತ ವಾಗುತ್ತದೆ ಎಂದು ಹೇಳುತ್ತಾರೆ. ಮೊದಲಿಗೆ ಮೇಲಿನ ಶ್ಲೋಕದಲ್ಲಿ ಅನಾಸಕ್ತಿಯು ಜ್ಞಾನದಾರ್ಢ್ಯಕ್ಕೆ ಹೇತು ವಾಗುವುದೆಂದು ಹೇಳುತ್ತಾರೆ.

ಅನಾಸಕ್ತಿಯಿಂದ ದುಃಖನಿವೃತ್ತಿ ಅನುಭವಸಿದ್ಧವೇ ಆಗಿದೆ ಮತ್ತು ತತ್ವವನ್ನು ಉಪದೇಶಿಸಿದರೂ ಅದು ವೈರಾಗ್ಯ ಉಳ್ಳವನಿಗೇ ಹೃದಯದಲ್ಲಿ ನಿಲ್ಲುತ್ತದೆ. ಅದರಿಂದ ಜ್ಞಾನದಾರ್ಢ್ಯಕ್ಕೂ ವೈರಾಗ್ಯವು ಹೇತು. ವೈರಾಗ್ಯ ದಿಂದಲೇ ಭಕ್ತಿಯೂ ದೃಢವಾಗುವುದು ಎಂದು ಹಿಂದಿನ ಪ್ರಕರಣದಲ್ಲಿ ಹೇಳಿದ್ದಾರೆ. ಪರಮಾತ್ಮನ ವಿಶೇಷಾನುಗ್ರಹಕ್ಕೂ ವೈರಾಗ್ಯವು ಕಾರಣವೆಂದು ಪರಮಾತ್ಮನೇ ದುರ್ವಾಸರಿಗೆ ಹೇಳುತ್ತಾನೆ—

ಯೇ ದಾರಾಗಾರ ಪುತ್ರಾದೀನ್ ಪ್ರಾಣಾನ್ ವಿತ್ತಮಿದಂ ಪರಂ ।
ಹಿತ್ವಾ ಮಾಂ ಶರಣಂ ಯಾತಾಃ ಕಥಂ ತಾಂಸ್ತ್ಯಕ್ತುಮುತ್ಸಹೇ ॥

'ಹೆಂಡತಿ ಮನೆ ಮಕ್ಕಳು ಮುಂತಾದುವನ್ನೂ ಐಹಿಕ ಪಾರತ್ರಿಕ ಸಂಪತ್ತನ್ನೂ ಪ್ರಾಣವನ್ನೂ ಕೂಡ ಕಡೆಗಣಿಸಿ ಯಾರು ನನ್ನನ್ನೇ ಶರಣು ಹೊಂದಿರುವರೋ ಅವರನ್ನು ನಾನು ಹೇಗೆ ತಾನೆ ಕೈಬಿಡಬಲ್ಲೆ! ಎನ್ನುತ್ತಾನೆ.

ಇದು ತಾವಾಗಿ ವಿರಕ್ತರಾಗುವವರ ವಿಷಯ—

'ನ ಯಸ್ಯ ಹೇಯಾನುಮಿತಂ ಸ್ವಯಂ ಸ್ಯಾತ್' 'ಯಾರು ಸ್ವತಃ ವಿಷಯ ಸುಖವನ್ನು ಹೇಯವೆಂದು ತಿಳಿಯನೋ' ಎಂದು ಶ್ಲೋಕದಲ್ಲಿ 'ಸ್ವಯಂ' ಶಬ್ದವಿದೆ.

ತಾವಾಗಿಯೇ ವಿರಕ್ತರಾಗದ ಯೋಗ್ಯ ಜೀವರನ್ನು ಹರಿಯೇ ಬಲವಂತ

ವಾಗಿ ವಿರಕ್ತರನ್ನಾಗಿ ಮಾಡಿ ಅನುಗ್ರಹಿಸುವುದು ಕಂಡಿದೆ. ಅದಕ್ಕೆ ಬಲಿ ಚಕ್ರವರ್ತಿ ಉದಾಹರಣೆ. ವಾಮನಮೂರ್ತಿ ಅವನ ತ್ರೈಲೋಕ್ಯ ಸಾಮ್ರಾಜ್ಯ ವನ್ನು ಉಪಾಯವಾಗಿ ಅಪಹರಿಸಿ ವೈರಾಗ್ಯದ ಪಾಠ ಕಲಿಸಿದ್ದಾನೆ. ಅವನು ಮೂಲೋಕದ ದೊರೆಯಾಗಿದ್ದೂ ಮೂರಡಿ ಭೂದಾನ ಮಾಡುವಲ್ಲಿ ತಾನು ಸೋತು ಅಪಕೀರ್ತಿ ಭಾಜನನಾದೆನೆಂದು ಲೌಕಿಕ ಸಂಪತ್ತು ಇಷ್ಟೇ ಎಂದು ವಿರಕ್ತಿ ಹೊಂದಿದ. ಇದು ವಾಮನನು ಮಾಡಿದ ವೈರಾಗ್ಯಪಾಠ. ಅವನು ಬ್ರಹ್ಮನಿಗೆ ಆಗ ಹೇಳುವ ಮಾತು ಇದು—

ಬ್ರಹ್ಮನ್ ಯಮನುಗೃಹ್ಣಾಮಿ ತದ್‌ವಿತ್ತಂ ವಿಧುನೋಮ್ಯಹಂ ।

(ಭಾ.೮.೨೧.೨೪)

'ಬ್ರಹ್ಮನೆ! ನಾನು ಯಾರನ್ನು ಅನುಗ್ರಹಿಸಲು ಸಂಕಲ್ಪಿಸುವೆನೋ, ಮೊದಲಿಗೆ ಅವನ ಸಂಪತ್ತನ್ನು ನಾಶಗೊಳಿಸಿ ವೈರಾಗ್ಯ ಭಾಗ್ಯವನ್ನು ಕೊಡುವೆನು' ಎಂದು.

ಬಲಿಚಕ್ರವರ್ತಿ ಜ್ಞಾನಿ. ಭಕ್ತನಾದ ಕರ್ಮಜ ದೇವ. ಅವನು ಪ್ರಾರಬ್ಧ ವಶದಿಂದ ಅಸುರಾವೇಶಕ್ಕೊಳಗಾಗಿ ಸಂಪತ್ತಿನ ಮೋಹದಿಂದ ದೇವೇಂದ್ರನ ಸಿಂಹಾಸನವನ್ನು ಅಪಹರಿಸಿದ. ಅದಕ್ಕೆ ಶ್ರೀಹರಿ ಅವನಿಗೆ ಬಲವಂತವಾಗಿ ವೈರಾಗ್ಯಬುದ್ಧಿಯನ್ನಿತ್ತ.

ಇನ್ನು ಸಾಮಾನ್ಯ ಅಜ್ಞ ಭಕ್ತರಿಗೆ ವೈರಾಗ್ಯವನ್ನು ಅನುಗ್ರಹಿಸುವ ಪರಿ ಬೇರೆಯೇ ಇದೆ. ಅದು ದೇವತೆಗಳು ಮಾಡುವ ಪಂಚಮಹಾಯಜ್ಞ. ಅದರಲ್ಲಿ ಆಹುತಿಯಾಗಿ ಜೀವನು ಭೂಮಿಯಲ್ಲಿ ಹುಟ್ಟುವಾಗ ಗರ್ಭವಾಸ ಕ್ಲೇಶವನ್ನು ಅನುಭವಿಸಿ ವಿರಕ್ತಿ ಪಡೆಯುತ್ತಾನೆ.

ಕಾಮ್ಯಕರ್ಮದಿಂದ ಸ್ವರ್ಗಪಡೆದವನು ಅಲ್ಲಿ ಉಂಡು ಪುಣ್ಯವನ್ನೆಲ್ಲ ತೀರಿಸಿ ಪುಣ್ಯಶೇಷದಿಂದ ಆಕಾಶ ಮಳೆಮೋಡಗಳ ಮೂಲಕ ನೆಲದ ಮೇಲೆ ಧಾನ್ಯದ ಕಾಳುಗಳನ್ನು ಸೇರಿ ಪಿತನ ಶರೀರವನ್ನು ಪ್ರವೇಶಿಸಿ ಮೂರು ತಿಂಗಳಕಾಲ ಅಲ್ಲಿ ಇದ್ದು ದುಃಖಪಡುತ್ತಾನೆ. ರೇತಸ್ಸಿನ ಮೂಲಕ ಜನನಿಯ ಗರ್ಭವನ್ನು ಪ್ರವೇಶಿಸಿ ಅಲ್ಲಿ ನವಮಾಸ ಪರ್ಯಂತ ದುಃಖ ಅನುಭವಿಸುತ್ತಾನೆ.

ಮೊದಲಿಗೆ ಮಾಂಸದ ಮುದ್ದೆಯಾಗಿದ್ದು ಮುಂದೆ ಕ್ರಮವಾಗಿ ಬೆಳೆದು

ತಲೆ ಕೈಕಾಲು ಉಗುರು ಚರ್ಮ ರೋಮಗಳುಳ್ಳ ಶಿಶು ಶರೀರಿಯಾಗಿ ಗರ್ಭಚೀಲದೊಳಗೆ ಬಂಧಿತನಾಗಿರುತ್ತಾನೆ. ಆರು ತಿಂಗಳ ಕಾಲ ಕೇವಲ ದುಃಖವನ್ನು ಅನುಭವಿಸುತ್ತಾನೆ.

ಬಹುಜನ್ಮಗಳಲ್ಲಿ ಪುಣ್ಯ ಸಂಪಾದಿಸಿದ್ದರೆ, ಯಾವುದೋ ಒಂದು ಜನ್ಮದಲ್ಲಿ ಏಳನೇ ತಿಂಗಳಲ್ಲಿ ಪೂರ್ವಜನ್ಮಗಳನ್ನು ಸ್ಮರಿಸುತ್ತಾನೆ. ಆಗ ತಾಯಿ ಉಂಡ ಕಹಿ ಒಗರು ಖಾರ ಹುಳಿ ಪದಾರ್ಥಗಳ ರಸಾನುಭವದಿಂದ ಸರ್ವಾಂಗಗಳಲ್ಲಿ ವೇದನೆ ಪಡುತ್ತಾನೆ. ಮಲಮೂತ್ರ ಕೋಶಗಳಲ್ಲಿರುವ ಕೃಮಿಗಳು ಕಚ್ಚುವು ದರಿಂದ ಪ್ರತಿಕ್ಷಣ ಮೂರ್ಛೆ ಹೊಂದುತ್ತಾನೆ. ಪಂಜರದಲ್ಲಿಟ್ಟ ಹಕ್ಕಿಯಂತೆ ಕೈಕಾಲೂ ಕದಲಿಸಲಾರದೆ ಇದ್ದು ಹರಿಸಂಕಲ್ಪದಿಂದ ಹಿಂದಿನ ನೂರು ಜನ್ಮಗಳಲ್ಲಿ ಅನುಭವಿಸಿದ ಗರ್ಭವಾಸ ದುಃಖವನ್ನು ನೆನೆಯುತ್ತಾನೆ. ನಿಟ್ಟುಸಿರಿಡುತ್ತಾನೆ. ಈ ಗರ್ಭವಾಸಕ್ಕೆ ಕಾರಣವಾದ ಕಾಮ್ಯಕರ್ಮವನ್ನು ಇನ್ನು ಎಂದಿಗೂ ಮಾಡಲಾರೆ ನೆಂದು ಪಶ್ಚಾತ್ತಾಪ ಪಡುತ್ತಾನೆ—



–೩೮–

**ಗರ್ಭವಾಸ ಕ್ಲೇಶವು ವೈರಾಗ್ಯಕ್ಕೆ ಕಾರಣ**

**ದೇಹ್ಯನ್ಯದೇಹವಿವರೇ ಜಠರಾಗ್ನಿನಾಽಸೃಗ್**
**ವಿಣ್ಮೂತ್ರಕೂಪಪತಿತೋ ಭೃಶತಪ್ತದೇಹಃ ।**
**ಇಚ್ಛನ್ನಿತೋ ವಿವಸಿತುಂ ಗಣಯನ್ ಸ್ವಮಾಸಾನ್**
**ನಿರ್ವಾಸ್ಯತೇ ಕೃಪಣಧೀರ್ಭವತಾ ಕದಾ ನು?**

(ಭಾ.೩.೩೨.೧೮)

**ಪರಲೋಕಾದಿಮಂ ಲೋಕಮಾಗಚ್ಛನ್ ವ್ರೀಹ್ಯಾದಿದ್ವಾರಾ ಕರ್ಮಶೇಷೇಣ ಪುರುಷದೇಹಂ ಗತಸ್ತ್ರಿಮಾಸಂ ತತ್ರ ದುಃಖಮನುಭೂಯ ರೇತೋದ್ವಾರಾ ಸ್ತ್ರಿಯಃ ಕುಕ್ಷಿಂ ಶ್ರಿತಃ ಕಲಲಬುದ್ಬುದಾದಿಕ್ರಮೇಣ ಶಿರ ಆದ್ಯಂಗೋಪೇತಪಿಂಡಮಾಸ್ಥಿತಃ ಷಣ್ಮಾಸಂ ದುಃಖಮನುಭೂಯ, ಬಹುಜನ್ಮಾರ್ಜಿತಪುಣ್ಯವಶೇನ ಕಸ್ಮಿಂಶ್ಚಿಜ್ಜನ್ಮನಿ ಸಪ್ತಮೇ ಮಾಸಿ ಪೂರ್ವತನಾನಿ ಜನ್ಮಾನಿ ಸ್ಮರನ್ ಮಾತ್ರಾ ಭುಕ್ತೈಃ ಕಟುತೀಕ್ಷ್ಣಕ್ಷಾರಾದಿಭಿಃ ಸರ್ವಾಂಗೇಷೂತ್ಪನ್ನವೇದನೋ ವಿಣ್ಮೂತ್ರಗರ್ತಸ್ಥೈಃ**

ಕೃಮಿಭಿಃ ಕ್ಷತಸರ್ವಾಂಗಃ ಪ್ರತಿಕ್ಷಣಂ ಮೂರ್ಛಾಮಾಪ್ನುವಾನಃ ಪಂಜರೇ ಶಕುಂತ ಇವ ಸ್ವಾಂಗಚೇಷ್ಟಾಯಾಮಪ್ಯಕಲ್ಪೋ ಜನ್ಮಶತೋದ್ಭವಂ ದುಃಖಮನುಸ್ಮರನ್ ದೀರ್ಘಮುಚ್ಛ್ವಸನ್ ಪುನರೇವಂವಿಧಂ ಕರ್ಮ ನ ಕುರ್ಯಾಮಿತಿ ಪಶ್ಚಾತ್ತಪ್ಯಮಾನೋಽಪಿ ತತ್ಪರಿಹಾರಾಶಕ್ತಃ ಏವಂ ಚಿಂತಯನ್ನಾಸ್ತ ಇತ್ಯಾಹ ॥ **ದೇಹೀತಿ** ॥ ಯಥಾ ಲೋಕೇ ದೇವದತ್ತಃ ಸ್ವಯಂ ಗೇಹವಾನ್ ಕೇನಚಿನ್ನಿಮಿತ್ತೇನ ಪರಗೇಹಂ ಗತಃ ತತ್ರ ತೈರಕಲ್ಪೇ ಕುತ್ಸಿತೇ ಸ್ಥಲೇ ದತ್ತೇ ದುಃಖೀ ಭವತಿ। ತಥಾಯಮಪೀತಿ ಸೂಚನಾಯ ಜೀವ ಇತಿ ವಕ್ತವ್ಯೇ ದೇಹೀತಿ, ಅನ್ಯಕುಕ್ಷಾವಿತಿ ವಕ್ತವ್ಯೇ ಅನ್ಯದೇಹವಿವರ ಇತ್ಯುಕ್ತಂ। ತತ್ರಾಪ್ಯಸೃಗ್ವಿಣ್ಮೂತ್ರಾಣಾಂ ಕೂಪೇ ಪತಿತಸ್ತತ್ರಾಪಿ ಜಾಠರಜಾತವೇದಸಾ ಭೃಶಂ ತಪ್ತೋ ದೇಹೋ ಯಸ್ಯ ತಾದೃಶೋಽತ ಏವ ಕೃಪಣಧೀಃ ಇತೋ ಮಾತೃದೇಹಾದ್ವಿವಸಿತುಂ ನಿರ್ಗಂತುಂ ಇಚ್ಛನ್ ಸ್ವಸ್ಯ ಕೃಪ್ತಾ ಯಾವಂತೋ ಮಾಸಾ ದಶ ತಾವತ್ಸು ಕತಿ ಗತಾಃ ಕತಿ ಚಾವಶಿಷ್ಟಾ ಇತಿ ಗಣಯನ್ ಭವತಾ ಕದಾ ನಿರ್ವಾಸ್ಯತೇ ಬಹಿರ್ನಿಷ್ಕಾಸ್ಯತೇ ಇತಿ ನು ವಿತರ್ಕಯನ್ನಾಸ್ತ ಇತಿ। **ಯಥಾಹುಃ**—

''ಕರ್ಮಣಾ ದೈವತಂತ್ರೇಣ ಜಂತುರ್ದೇಹೋಪಪತ್ತಯೇ।
ಸ್ತ್ರಿಯಃ ಪ್ರವಿಷ್ಟ ಉದರಂ ಪುಂಸೋ ರೇತಃಕಣಾಶ್ರಯಃ ॥

ಕಲಲಂ ತ್ವೇಕರಾತ್ರೇಣ ಪಂಚರಾತ್ರೇಣ ಬುದ್ಬುದಂ।
ದಶಾಹೇನ ತು ಕರ್ಕಂಧೂಃ ಪೇಶ್ಯಂಡಂ ವಾ ತತಃ ಪರಂ ॥

ಮಾಸೇನ ತು ಶಿರೋ ದ್ವಾಭ್ಯಾಂ ಬಾಹ್ವಂಘ್ರ್ಯಾದ್ಯಂಗವಿಗ್ರಹಃ।
ನಖರೋಮಾಸ್ಥಿಚರ್ಮಾಣಿ ಲಿಂಗಚ್ಛಿದ್ರೋದ್ಭವಸ್ತ್ರಿಭಿಃ ॥

ಚತುರ್ಭಿರ್ಧಾತವಃ ಸಪ್ತ ಪಂಚಭಿಃ ಕ್ಷುತ್ತೃಡುದ್ಭವಃ।
ಷಡ್ಭಿರ್ಜರಾಯುಣಾ ವೀತಃ ಕುಕ್ಷೌ ಭ್ರಮತಿ ದಕ್ಷಿಣೇ ॥

ಸಪ್ತಮೇ ಜನ್ಮಕರ್ಮಾಣಿ ಗತಾನಿ ಸ್ಮರತೇ ಋಷಿಃ।
ಜಗತ್ಯಾಂ ಯಾನಿ ದೇವಸ್ಯ ಮಾಯಯಾ ಬಂಧಮಾತ್ಮನಃ ॥

ಮಾತುರ್ಜಗ್ಧಾನ್ನಪಾನಾದ್ಯೈರೇಧೇತಾತುರಸಂಮತಃ।
ಶೇತೇ ವಿಣ್ಮೂತ್ರಯೋರ್ಗರ್ತೇ ಸ ಜಂತುರ್ಜಂತುಸಂಭವೇ ॥

ಕೃಮಿಭಿಃ ಕ್ಷತಸರ್ವಾಂಗಃ ಸೌಕುಮಾರ್ಯಾತ್ಪ್ರತಿಕ್ಷಣಂ।
ಮೂರ್ಛಾಮಾಪ್ನೋತ್ಯುರುಕ್ಲೇಶಸ್ತತ್ರತ್ಯೈಃ ಕ್ಷುಧಿತೈರ್ಮುಹುಃ ॥

ಕಟುತೀಕ್ಷ್ಣೋಷ್ಣಲವಣಕ್ಷಾರಾಮ್ಲಾದಿಭಿರುಲ್ಬಣೈಃ।
ಮಾತೃಭುಕ್ತೈರುಪಸ್ಪೃಷ್ಟಃ ಸರ್ವಾಂಗೋತ್ಥಿತವೇದನಃ ॥

ಉಲ್ಬೇನ ಸಂವೃತ ಸ್ತಸ್ಮಿನ್ನಾಂತ್ರೈಶ್ಚ ಬಹಿರಾವೃತಃ।
ಆಸ್ತೇ ಕೃತ್ವಾ ಶಿರಃ ಕುಕ್ಷೌ ಭುಗ್ನಪೃಷ್ಠ ಶಿರೋಧರಃ ॥

'ಅಕಲ್ಪಃ ಸ್ವಾಂಗಚೇಷ್ಟಾಯಾಂ ಶಕುಂತ ಇವ ಪಂಜರೇ ॥'

ತತ್ರ ಲಬ್ಧಸ್ಮೃತಿರ್ದೈವಾತ್ಕರ್ಮ ಜನ್ಮಶತೋದ್ಭವಂ।
ಸ್ಮರಂದೀರ್ಘಮನುಚ್ಛ್ವಾಸಂ ಗರ್ಭೇ ಕಿಂ ನಾಮ ವಿಂದತೇ।'' ಇತಿ ॥



'ನಾನು ದೇಹಿ, ಮತ್ತೊಬ್ಬ ದೇಹಿಯಾದ ತಾಯಿಯ ದೇಹದ ಗರ್ಭದಲ್ಲಿ ಅಗ್ನಿಯ ಬೇಗೆಯಿಂದ ನನ್ನ ಮೈ ಬೇಯುತ್ತಿದೆ. ಅದರಿಂದ ನನ್ನ ಈ ಗರ್ಭವಾಸದ ತಿಂಗಳುಗಳನ್ನು ಎಣಿಸುತ್ತಿದ್ದೇನೆ. ಹತ್ತು ತಿಂಗಳಲ್ಲಿ ಎಷ್ಟು ಕಳೆದಿದ್ದೇನೆ? ಇನ್ನೆಷ್ಟು ಕಳೆಯಬೇಕಾಗಿದೆ? ಎಂದು. ಹೀಗೆ ಕಷ್ಟದಿಂದ ಇಲ್ಲಿ ವಾಸ ಮಾಡುತ್ತಿರುವ ನಾನು ಇನ್ನೆಂದು ಹೊರಗೆ ಬರುವೆನೋ?' —ಹೀಗೆ ಕಪಿಲಮುನಿ ಜೀವರ ಗರ್ಭವಾಸಕ್ಲೇಶವನ್ನು ತಾಯಿಗೆ ಹೇಳುತ್ತಿದ್ದಾರೆ. ಇದನ್ನೇ ವಿಸ್ತಾರವಾಗಿ ಹತ್ತು ಶ್ಲೋಕಗಳಲ್ಲಿ ಹೀಗೆ ಹೇಳುತ್ತಾರೆ—

ಕರ್ಮಣಾ ದೈವತಂತ್ರೇಣ ಜಂತುರ್ದೇಹೋಪಪತ್ತಯೇ
ಸ್ತ್ರಿಯಾಃ ಪ್ರವಿಷ್ಟ ಉದರಂ ಪುಂಸೋ ರೇತಃಕಣಾಶ್ರಯಃ
ಕಲಲಂ ತ್ವೇಕರಾತ್ರೇಣ ಪಂಚರಾತ್ರೇಣ ಬುದ್ಬುದಂ
ದಶಾಹೇನ ತು ಕರ್ಕಂಧೂಃ ಪೇಶ್ಯಂಡಂ ವಾ ತತಃ ಪರಂ।
ಮಾಸೇನ ತು ಶಿರೋ ದ್ವಾಭ್ಯಾಂ ಬಾಹ್ವಂಘ್ರ್ಯಾದ್ಯಂಗ ವಿಗ್ರಹಃ।
ನಖಲೋಮಾಸ್ಥಿ ಚರ್ಮಾಣಿ ಲಿಂಗಚ್ಛಿದ್ರೋದ್ಭವಸ್ತ್ರಿಭಿಃ।
ಚತುರ್ಭಿರ್ಧಾತವಃ ಸಪ್ತ ಪಂಚಭಿಃ ಕ್ಷುತ್‌ತೃಡುದ್ಭವಃ।
ಷಡ್‌ಭಿರ್ಜರಾಯುಣಾಽವೀತಃ ಕುಕ್ಷೌ ಭ್ರಾಮ್ಯತಿ ದಕ್ಷಿಣೇ।
ಸಪ್ತಮೇ ಜನ್ಮಕರ್ಮಾಣಿ ಗತಾನಿ ಸ್ಮರತೇ ಋಷಿಃ।
ಜಗತ್ಯಾಂ ಯಾನಿ ದೇವಸ್ಯ ಮಾಯಯಾ ಬಂಧಮಾತ್ಮನಃ।
ಮಾತುರ್ಜಗ್ಧಾನ್ನ ಪಾನಾಭ್ಯಾಂ ಏಧೇತಾತುರ ಸಮ್ಮತಃ।

ಆಸ್ತೇ ವಿಣ್ಮೂತ್ರಯೋರ್ಗರ್ತೇ ಸ ಜಂತುರ್ಜಂತುಸಂಭವೇ ।
ಕೃಮಿಭಿಃ ಕ್ಷತಕಂಡ್ವಂಗಃ ಸೌಕುಮಾರ್ಯಾತ್ ಪ್ರತಿಕ್ಷಣಂ ।
ಮೂರ್ಛಾ ಮಾಪ್ನೋತ್ಯುರು ಕ್ಲೇಶಸ್ತತ್ರ ತ್ಯೈಃ ಕ್ಷುಧಿತೈರ್ಮುಹುಃ ।
ಕಟುತೀಕ್ಷ್ಣೋಷ್ಣ ಲವಣ ಕ್ಷಾರಾ ಮ್ಲಾದಿಭಿರುದ್ಬಣೈಃ ।
ಮಾತ್ರಾ ಭುಕ್ತೈರುಪಸ್ಪೃಷ್ಟಃ ಸರ್ವಾಂಗೋತ್ಥಿತ ವೇದನಃ ।
ಉಲ್ಬೇನ ಸಂವೃತಸ್ತಸ್ಮಿನ್ನಾಂತ್ರೈಶ್ಚ ಬಹಿರಾವೃತಃ ।
ಆಸ್ತೇ ಕೃತ್ವಾ ಶಿರಃ ಕುಕ್ಷೌ ಭುಗ್ನ ಪೃಷ್ಠ ಶಿರೋಧರಃ
ಅಕಲ್ಪಃ ಸ್ವಾಂಗಚೇಷ್ಟಾಯಾಂ ಶಕುಂತ ಇವ ಪಂಜರೇ
ತತ್ರ ಲಬ್ದಸ್ಮೃತಿ ರ್ದೈವಾತ್ ಕರ್ಮಜನ್ಮಶತೋದ್ಭವಂ
ಸ್ಮರನ್ ದೀರ್ಘಮನುಚ್ಛ್ವಾಸಂ ಗರ್ಭೇ ಕಿಂ ನಾಮ ವಿಂದತೇ ।

(ಭಾ.೩.೩೧.೧-೧೦)

ಭಗವಂತನ ಅಧೀನವಾದ ಪೂರ್ವಕರ್ಮಕ್ಕೆ ಅನುಸಾರವಾಗಿ ಜೀವನು ಹೊಸ ಶರೀರವನ್ನು ಹೊಂದಲು ಮೊದಲಿಗೆ ಪುರುಷನ ವೀರ್ಯಕಣದೊಳಗಿದ್ದು ಆದರ ಮೂಲಕ ಸ್ತ್ರೀಯ ಗರ್ಭಾಶಯವನ್ನು ಪ್ರವೇಶಿಸುತ್ತಾನೆ.

'ವೀರ್ಯವು ಒಂದು ದಿನದಲ್ಲಿ ಶೋಣಿತದಿಂದ ಯುಕ್ತವಾಗಿರುತ್ತದೆ. ಐದು ದಿನಗಳಲ್ಲಿ ಒಂದು ಗೋಲಾಕಾರವಾಗಿದ್ದು ಹತ್ತು ದಿನಗಳಲ್ಲಿ ಬೋರೆಹಣ್ಣಿನಂತೆ ಗಟ್ಟಿಯಾಗುತ್ತದೆ. ಬಳಿಕ ಜರಾಯು ಗರ್ಭಚೀಲದಿಂದ ಆವೃತವಾದ ಮಾಂಸದ ಮುದ್ದೆಯಾಗುತ್ತದೆ. ಪಕ್ಷಿ ಹಾವು ಮುಂತಾದ ಯೋನಿಯಾಗಿದ್ದರೆ ಮೊಟ್ಟೆಯಾಗುತ್ತದೆ.

ಮಾಂಸಪಿಂಡದಲ್ಲಿ ಒಂದು ತಿಂಗಳಲ್ಲಿ ತಲೆ, ಎರಡು ತಿಂಗಳಲ್ಲಿ ಕೈಕಾಲು ಮುಂತಾದ ಅವಯವಗಳಿಂದ ಕೂಡಿದ ಶರೀರ ನಿರ್ಮಾಣವಾಗುತ್ತದೆ. ಮೂರು ತಿಂಗಳಲ್ಲಿ ಉಗುರು ಕೂದಲು ಎಲುಬು ಚರ್ಮಗಳೂ ಸ್ತ್ರೀಯೋನಿ ಅಥವಾ ಪುರುಷಲಿಂಗವೂ ಇಂದ್ರಿಯದ್ವಾರಗಳೂ ಉದ್ಭವಿಸುತ್ತವೆ.

ನಾಲ್ಕು ತಿಂಗಳಲ್ಲಿ ಸಪ್ತಧಾತುಗಳು, ಐದು ತಿಂಗಳಲ್ಲಿ ಹಸಿವು ಬಾಯಾರಿಕೆಗಳು ಉಂಟಾಗುವುವು. ಆರು ತಿಂಗಳಲ್ಲಿ ಶಿಶು ಗರ್ಭಚೀಲದಿಂದ ಆವೃತವಾಗಿ ಗರ್ಭಕೋಶದ ಬಲಭಾಗದಲ್ಲಿ ತಿರುಗುವುದು.

ಏಳನೆ ತಿಂಗಳಲ್ಲಿ ಶಿಶು ಶರೀರಿಯು ಭೂಮಿಯಲ್ಲಿ ತಾನು ಹಿಂದೆ ಪಡೆದಿದ್ದ ಜನ್ಮಗಳನ್ನೂ ಮಾಡಿದ ಕರ್ಮಗಳನ್ನೂ ಸ್ಮರಿಸುತ್ತಾನೆ. ಭಗವಂತನ ಇಚ್ಛೆಯಿಂದ ತಾನು ಸಂಸಾರ ಬಂಧನದಲ್ಲಿರುವುದನ್ನು ತಿಳಿಯುತ್ತಾನೆ.

ತಾಯಿ ಸೇವಿಸುವ ಅನ್ನಪಾನಾದಿಗಳಿಂದ ಬೆಳೆಯುತ್ತಾನೆ. ರೋಗಿಯು ಮತ್ತೊಬ್ಬರು ಕೊಡುವ ಆಹಾರದಿಂದ ಬದುಕುವಂತೆ ಪರಾಧೀನನಾಗಿರುತ್ತಾನೆ. ಕೃಮಿಗಳ ಉತ್ಪತ್ತಿ ಸ್ಥಾನವಾದ ನರಕಸದೃಶವಾದ ಮಲಮೂತ್ರಗಳ ಹಳ್ಳದಲ್ಲಿ ವಾಸ ಮಾಡಿರುತ್ತಾನೆ.

ಅವನ ಶರೀರ ಬಲು ಕೋಮಲವಾಗಿರುವುದರಿಂದ ಪ್ರತಿಕ್ಷಣವೂ ಅಲ್ಲಿರುವ ಹಸಿದ ಕೃಮಿಗಳ ಕಡಿತ ನವೆಗಳನ್ನು ಸರ್ವಾಂಗಗಳಲ್ಲಿ ಮತ್ತೆ ಮತ್ತೆ ಅನುಭವಿಸುತ್ತಾನೆ. ಬಲು ಕ್ಲೇಶಗೊಂಡು ಆಗಾಗ ಮೂರ್ಛೆ ಹೊಂದುತ್ತಾನೆ.

ತಾಯಿ ಉಂಡ ಕಾರ ವಿದಾಹಿ ಉಷ್ಣ ಲವಣ ಕ್ಷಾರ ಆಮ್ಲ ಮುಂತಾದ ಪದಾರ್ಥ ಸ್ಪರ್ಶದಿಂದ ಸರ್ವಾಂಗ ವೇದನೆಯನ್ನು ಅನುಭವಿಸುತ್ತಾನೆ. ಗರ್ಭಚೀಲದಿಂದ ಆವೃತನಾಗಿರುವನು. ಹೊರಗೆ ಕರುಳುಗಳಿಂದಲೂ ಸುತ್ತ ಬಿಗಿಯಲ್ಪಟ್ಟಿರುತ್ತಾನೆ. ಬೆನ್ನು ಕುತ್ತಿಗೆ ಬಗ್ಗಿಸಿಕೊಂಡು ಹೊಟ್ಟೆಯ ಮೇಲೆ ತಲೆಇಟ್ಟುಕೊಂಡಿರುತ್ತಾನೆ.

ಪಂಜರದಲ್ಲಿ ಸಿಕ್ಕಿಕೊಂಡ ಇನ್ನೂ ರೆಕ್ಕೆ ಬಲಿಯದಿದ್ದ ಹಕ್ಕಿಯಂತೆ ಪರಾಧೀನ ನಾಗಿರುತ್ತಾನೆ. ತನ್ನ ಕೈಕಾಲು ಆಡಿಸಲೂ ಅಸಮರ್ಥನಾಗಿರುತ್ತಾನೆ. ಉತ್ತಮ ಜೀವನಾಗಿದ್ದ ಪಕ್ಷದಲ್ಲಿ ದೈವಾನುಗ್ರಹದಿಂದ ಪೂರ್ವಜನ್ಮಸ್ಮರಣೆ ಪಡೆದು ಹಿಂದಿನ ಕರ್ಮಗಳನ್ನು ನೆನೆದುಕೊಳ್ಳುತ್ತಾನೆ. ನಿಟ್ಟುಸಿರಿಡುತ್ತಾನೆ ಹೊರತು ಗರ್ಭದಲ್ಲಿ ಏನು ಸುಖಪಡುತ್ತಾನೆ?

ಇದು ಸಂಸಾರಕ್ಕಿಂತ ಹಿಂದಿನ ಗರ್ಭವಾಸ ದುಃಖ. ಇದನ್ನು ತೋರಿಸಿದ ಬಳಿಕ ಕೊನೆಯ ಮರಣ ದುಃಖವನ್ನು ಹೇಳಬೇಕು. ಆದರೂ ಜನನಾನಂತರ ಕೌಮಾರಾದಿಗಳಲ್ಲಿಯೇ ಕೆಲವೊಮ್ಮೆ ಮರಣ ಬರುತ್ತದೆ. ಅದು ಅಸಹನೀಯ ವಾಗುತ್ತದೆ. ವಿಶೇಷವಾಗಿ ಹೇಯವಾಗುತ್ತದೆ ಎಂದು ತಿಳಿಸುವುದಕ್ಕಾಗಿ ಕುಮಾರ ಮರಣ ದುಃಖವನ್ನು ಮುಂದೆ ವರ್ಣಿಸುತ್ತಾರೆ—



–೫೯–

**ಚಿತ್ರಕೇತುರಾಜನ ಪುತ್ರಶೋಕ**

ಅಹೋ ವಿಧಾತಸ್ತ್ವಮತೀವ ಬಾಲಿಶೋ
ಯಸ್ತ್ವಾತ್ಮಸೃಷ್ಟೇಃ ಪ್ರತಿರೂಪಮೀಹಸೇ ।
ಪರೇ ತು ಜೀವತ್ಯಪರಸ್ಯ ಯಾ ಮೃತಿ-
ರ್ವಿಪರ್ಯಯಶ್ಚೇತ್ ತ್ವಮಸಿ ಧ್ರುವಂ ಪರಃ ॥

(ಭಾ.೬.೧೪.೫೩)

ಏವಂ ಸಂಸಾರಾತ್ತಾಪ್ತಕನಂ ದುಃಖಂ ಪ್ರದರ್ಶ್ಯ ಅಂತಿಮಂ ದುಃಖಂ ಪ್ರದರ್ಶಯತಿ ॥ **ಅಹೋ ಇತಿ** ॥ ಯದ್ಯಪಿ ಗರ್ಭವಾಸದುಃಖಕಥನಾನಂತರಂ ಕೌಮಾರಾದ್ಯವಸ್ಥಾಸಂಬಂಧಿ ದುಃಖಂ ಪ್ರದರ್ಶ್ಯೈವ ಏತತ್ಪ್ರದರ್ಶನೀಯಂ। ತಥಾಪಿ ಉತ್ಪತ್ತ್ಯನಂತರಂ ಕೌಮಾರಾದಾವೇವ ಮರಣಂ ಕದಾಚಿದ್ಭವತೀತಿ ತದ್ದುಃಖಪ್ರದರ್ಶನೇನ ವಿಶೇಷತೋ ಹೇಯತಾವ್ಯುತ್ಪಾದನಾಯಾತ್ರೈವ ಪ್ರದರ್ಶನಂ। ಪ್ರದರ್ಶ್ಯತೇ ಚ ಅವಸ್ಥಾತ್ರಯಾನಂತರಕಾಲೀನಮರಣ-ದುಃಖಮಪೀತಿ। 'ಹೇ ವಿಧಾತಃ ಬ್ರಹ್ಮನ್ ಯಸ್ತ್ವಮೇವ ಆತ್ಮಸೃಷ್ಟೇಃ ಪ್ರತಿರೂಪಂ ವಿರುದ್ಧಂ ಕರ್ಮ ಕರೋಷಿ ಸ ತ್ವಂ ಅತೀವ ಬಾಲಿಶೋ ನಿಂದ್ಯತಮಃ। ಕಿಂ ತದಾತ್ಮಸೃಷ್ಟಿವಿರುದ್ಧಂ ಕರ್ಮ ಯೇನ ಧಾತಾ ನಿಂದಿತೋ ಭವೇದಿತ್ಯತ ಉಕ್ತಂ ॥ **ಪರ ಇತಿ** ॥ ಪರೇ ವಯೋಧಿಕೇ ಜೀವತಿ ಸತಿ ಅಪರಸ್ಯ ನ್ಯೂನವಯಸಃ ಯಾ ಮೃತಿಃ ಸೈವೇತಿ। ಏತಸ್ಯ ವಿಪರ್ಯಯೋಽನ್ಯಥಾಭಾವಃ। ಪರಸ್ಯ ಪೂರ್ವಂ ಮೃತಿಃ ಪಶ್ಚಾದಪರಸ್ಯೇತಿ ಕೃತಶ್ಚೇತ್ ತರ್ಹಿ ತ್ವಂ ಪರಃ ಪ್ರಶಸ್ಯೋ ಧ್ರುವಮಸೀತಿ ॥

❖❖❖

ಅಯ್ಯೋ ಸೃಷ್ಟಿಕರ್ತನೆ, ನೀನು ಅತ್ಯಂತ ಮೂರ್ಖನೆ ಸರಿ. ಏಕೆಂದರೆ ನಿನ್ನ ಸೃಷ್ಟಿಕಾರ್ಯಕ್ಕೆ ಪ್ರತಿಕೂಲವಾಗಿ ನೀನೇ ನಡೆದುಕೊಳ್ಳುವೆ! ವಯಸ್ಸಾದವರು ಬದುಕಿರುವಾಗ ಎಳೆಗೂಸನ್ನು ಸಾಯಿಸುವೆ. 'ಈ ವಿಪರೀತ ನಡತೆಯೆ ನನ್ನ ಸ್ವಭಾವ' ಎನ್ನುವಿಯಾದರೆ, ನಿಶ್ಚಯವಾಗಿ ನೀನು ಸೃಷ್ಟಿ ಮಾಡಿದ ಪ್ರಪಂಚಕ್ಕೆ ನೀನೇ 'ಪರಃ' ಶತ್ರು ಎನಿಸುವೆ. ಅಥವಾ 'ವಿಪರ್ಯಯಃ' ಎಳೆಗೂಸನ್ನು ಮೊದಲು ಸಾಯಿಸುವುದಕ್ಕೆ ವಿಪರೀತವಾಗಿ ವಯಸ್ಸಾದವರನ್ನೇ ಮೊದಲಿಗೆ

**ಸಾಯಿಸುವಿ ಯಾದರೆ ಮಾತ್ರ ನೀನು ನಿಶ್ಚಯವಾಗಿ 'ಪರಃ' ಶ್ರೇಷ್ಠ ಪ್ರಶಂಸಾರ್ಹನೆನಿಸುವೆ.**

ವೃತ್ರಾಸುರನು ಪೂರ್ವಜನ್ಮದಲ್ಲಿ ಚಿತ್ರಕೇತು ಎಂಬ ವಿದ್ಯಾಧರ ಚಕ್ರವರ್ತಿ. ಅವನಿಗೆ ಒಂದು ಕೋಟಿ ರಾಣಿಯರಿದ್ದರು. ಆದರೆ ಯಾರಲ್ಲಿಯೂ ಅವನಿಗೆ ಸಂತಾನವಾಗಲಿಲ್ಲ. ಅಂಗಿರಸಮುನಿಯ ಅನುಗ್ರಹದಿಂದ ಇಷ್ಟಿಮಾಡಿ ಯಜ್ಞಶೇಷವನ್ನು ರಾಣಿ ಕೃತದ್ಯುತಿಗೆ ಇತ್ತು ಅವಳಲ್ಲಿ ಒಬ್ಬ ಮಗನನ್ನು ಪಡೆದ. ಅವನಿಗೆ ಆ ಮಗನಲ್ಲಿಯೂ ರಾಣಿ ಕೃತದ್ಯುತಿಯಲ್ಲಿಯೂ ಎಲ್ಲಿಲ್ಲದ ಅಕ್ಕರೆ ಇದ್ದುದರಿಂದ ಇತರ ರಾಣಿಯರು ಹೊಟ್ಟೆಕಿಚ್ಚಿನಿಂದ ಮಗುವಿಗೆ ವಿಷ ಉಣಿಸಿ ಸಾಯಿಸಿದರು. ರಾಜ ಕಣ್ಣೀರ ಕೋಡಿ ಹರಿಸಿದ. ರಾಣಿ ಒಂದೇ ಸಮನೆ ಹಲುಬುತ್ತ ಶೋಕಪರವಶತೆಯಿಂದ ಸೃಷ್ಟಿಕರ್ತನನ್ನು ಮೂರ್ಖನೆಂದು ಹಳಿದಳು. 'ಹೇ ಸೃಷ್ಟಿಕರ್ತ! ನೀನು ವಯಸ್ಸಾದವರು ನಾವಿರುವಂತೆಯೆ ಎಳೆಗೂಸನ್ನು ಸಾಯಿಸಿದೆ! ಇದು ನಿನ್ನ ಮೂರ್ಖತನ. ಇದು ನಿನ್ನ ಸೃಷ್ಟಿಕಾರ್ಯಕ್ಕೇ ಪ್ರತಿಕೂಲ. ಮಕ್ಕಳು ಎಳವೆಯಲ್ಲಿಯೆ ಸತ್ತರೆ ಅವರಿಂದ ಸೃಷ್ಟಿ ಮುಂದುವರಿಯಲಾರದು ತಾನೆ? ಇದಕ್ಕೆ ವಿಪರೀತವಾಗಿ ಮೊದಲಿಗೆ ನಮ್ಮನ್ನೇ ಸಾಯಿಸು, ಆಗ ನೀನು ಸೃಷ್ಟಿಕರ್ತನೆಂದು ಪ್ರಶಂಸಾರ್ಹನೆನಿಸುವೆ' ಎಂದು.



—೬೦—

**ಬಂಧುಸ್ನೇಹಪಾಶ ದುಃಖಕಾರಣ**

**ನ ಹಿ ಕ್ರಮಶ್ಚೇತ್ ಇಹ ಮೃತ್ಯುಜನ್ಮನೋಃ**
**ಶರೀರಿಣಾಮಸ್ತು ತದಾತ್ಮ ಕರ್ಮಭಿಃ ।**
**ಯಃ ಸ್ನೇಹಪಾಶೋ ನಿಜಸರ್ಗವೃದ್ಧಯೇ**
**ಸ್ವಯಂ ಕೃತಸ್ತೇ ತಮಿಮಂ ವಿವೃಶ್ಚಸಿ ॥** (ಭಾ.೬.೧೪.೫೪)

**ಶರೀರಿಣಾಂ ಇಹ ಮೃತ್ಯುಜನ್ಮನೋಃ ಏಕ ಏವ ಕ್ರಮೋ ಯದಿ ನಹಿ ಸ್ಯಾತ್ ತದಾತ್ಮನಾಂ ಕರ್ಮಭಿಃ ಪಾಪೈರ್ನಿಮಿತ್ತೈಃ ಸೃಷ್ಟಿವಿಪರೀತಃ ಕ್ರಮ ಏವ ಲಯೇಽಸ್ತು । ಸೃಷ್ಟಿಪ್ರತಿರೂಪೋ ಲಯಕ್ರಮಃ ಕಥಮಿದಾನೀಮಂಗೀಕ್ರಿಯತ ಇತ್ಯತೋಽಂಗೀಕಾರವಾದಸ್ಯೇದಂ ಪ್ರಯೋಜನಂ ಯತ್ಪೂರ್ವೋಕ್ತಸ್ಯೈವ ಸಮರ್ಥನಂ । ಪೂರ್ವಂ ಹಿ ನಾಸ್ಮಾಭಿಃ ಸೃಷ್ಟಿಪ್ರತಿರೂಪಃ ಕ್ರಮೋ ನಿರ್ನಿಮಿತ್ತಂ**

**ಪ್ರತಿಷಿದ್ಧಃ, ಕಿಂತು ಪರೇ ಜೀವತ್ಯಪರಸ್ಯ ಮೃತೌ ದುಃಖವಿಶೇಷೋ ಭವತಿ ಸ ಮಾಭೂದಿತ್ಯೇತದರ್ಥಮೇವ। ತದೇವ ಚ ಪ್ರಯೋಜನಂ ಪ್ರಕಾರಾಂತರೇಣ ವ್ಯವಸ್ಥಾಪಯಿತುಂ ಅಯಮಂಗೀಕಾರವಾದ ಇತ್ಯಾಶಯೇನ ವಕ್ತೀತ್ಯಾಹ ॥ ಯ ಇತಿ ॥ ಸ್ವಯಂ ಸ್ವೇನೈವ ಕೃತ ಇತ್ಯನೇನ ತಚ್ಛೇದನಂ ತವ ಶಕ್ಯಮಿತಿ ಸೂಚಯತಿ। ತಸ್ಯೈವಾಕೃತೌ ಶಿಶೂನಾಂ ಸ್ವರಕ್ಷಣಶಕ್ತ್ಯಭಾವೇನ ಜೀವನಮೇವ ನ ಸಿಧ್ಯತೀತಿ ಪ್ರಜಾವೃದ್ಧಿರೇವ ನ ಸ್ಯಾದಿತಿ ನಿಜಸ್ಯ ಸರ್ಗಸ್ಯ ವೃದ್ಧಯೇ ಯಃ ಸ್ನೇಹಾಖ್ಯಃ ಪಾಶಃ ಕೃತ ಇತಿ ॥**



**'ಪೂರ್ವಜನ್ಮದ ಪಾಪದಿಂದ ಮಕ್ಕಳು ಬೇಗನೆ ಸಾಯಬಹುದಾದ್ದರಿಂದ ಹಿರಿಯರ ಅನಂತರವೇ ಕಿರಿಯರು ಮರಣ ಹೊಂದುವ ನಿಯಮವನ್ನು ನಾನು ಒಪ್ಪುವುದಿಲ್ಲ' ಎಂದು ನೀನು ಹೇಳುವಿಯಾದರೆ ಅದನ್ನು ಒಪ್ಪೋಣ. ಆದರೂ ಕಿರಿಯರಲ್ಲಿ ಹಿರಿಯರಿಗೆ ಸ್ನೇಹಪಾಶವನ್ನು ನೀನೆ ನಿರ್ಮಿಸಿರುವೆ. ಅದಿಲ್ಲದಿದ್ದರೆ ಕಿರಿಯರು ತಾವೇ ಸ್ವಶಕ್ತಿಯಿಂದ ಬದುಕಿರಲಾರರು. ಸೃಷ್ಟಿಯನ್ನು ಮುಂದುವರಿಸ ಲಾರರು. ಹೀಗೆ ನೀನು ನಿರ್ಮಿಸಿದ ಸ್ನೇಹಪಾಶವನ್ನು ನೀನು ಕಡಿದು ಹಾಕಬಲ್ಲೆ. ಆದರಿಂದ ಕಡಿದುಹಾಕು. ಆಗ ಹಿರಿಯರಿಗೆ ದುಃಖವಿಲ್ಲ ದಂತಾದೀತು. ಎಂದು ರಾಣಿಕೃತದ್ಯುತಿ ದುಃಖದಿಂದ ಪ್ರಲಾಪ ಮಾಡುವಳು.**

ಸಂಸಾರದಲ್ಲಿ ದುಃಖ ಅಪರಿಹಾರ್ಯ ಅದರಿಂದ ಅದು ಹೇಯವೆಂದು ತಿಳಿದು ವೈರಾಗ್ಯ ಹೊಂದಬೇಕೆನ್ನಲು ಚಿತ್ರಕೇತು ರಾಜನ ಪ್ರಸಂಗವನ್ನು ದೃಷ್ಟಾಂತವಾಗಿ ಹೇಳಿದ ಬಳಿಕ ಸುಯಜ್ಞ ಎಂಬ ರಾಜನ ದೃಷ್ಟಾಂತದಿಂದಲೂ ಸಂಸಾರದಲ್ಲಿ ಮರಣವನ್ನು ಯಾರು ತಪ್ಪಿಸಿಕೊಳ್ಳಲಾರರೆಂದು ಸಮರ್ಥಿಸು ತ್ತಾರೆ—



—೬೧—

**ಬಾಲ ಯಮನ ಹಿತೋಪದೇಶ–**

**ಗರ್ಭದಲ್ಲಿ ರಕ್ಷಿಸಿದವನೇ ಹೊರಗೂ ರಕ್ಷಿಸುವನು**

ಅಹೋ ವಯಂ ಧನ್ಯತಮಾ ಯದತ್ರ
ತ್ಯಕ್ತಾಃ ಪಿತೃಭ್ಯಾಂ ನ ವಿಚಿಂತಯಾಮಃ ।

**ಅಭಕ್ಷ್ಯಮಾಣಾ ಅಬಲಾ ವೃಕಾದಿಭಿಃ**
**ಸ ರಕ್ಷಿತಾ ರಕ್ಷತಿ ಯೋ ಹಿ ಗರ್ಭೇ ॥**

(ಭಾ.೭.೨.೩೮)

**ಏವಂ ಸಂಸಾರಸ್ಯ ವಿಶೇಷತೋ ಹೇಯತಾವ್ಯುತ್ಪಾದನಾಯ ದುಃಖವಿಶೇಷಮೇಕಸ್ಮಿನ್ ನಿದರ್ಶನೇ ಪ್ರದರ್ಶ್ಯ ತತ್ಪ್ರಸಂಗಾತ್ ಸ್ಥಾನಾಂತರೇ ತತೋಽಪ್ಯಧಿಕಂ ದುಃಖವಿಶೇಷಂ ಪ್ರದರ್ಶಯಿತುಂ ಅನ್ಯೈರಪರಿಹಾರ್ಯ ಶೋಕಂ ವಿದಿತ್ವಾ ಶವಸಮೀಪೇ ವಿಲಪಂತೀನಾಂ ರಾಜಸ್ತ್ರೀಣಾಂ ಅತಿಬಹುಲಂ ತಮಸಹಮಾನಃ ಸಾಕ್ಷಾತ್ ಪ್ರೇತರಾಜ ಏವ ತಚ್ಛಾಂತ್ಯೈ ಬಾಲರೂಪಂ ಸಮಾಸ್ಥಾಯ ತತ್ರಾಗತ್ಯ ಸಮಾಧತ್ತ ಇತ್ಯಾಹ ॥ ಅಹೋ ಇತಿ ॥ ಯದ್ಯಸ್ಮಾತ್ ಮಾತ್ರಾ ಪಿತ್ರಾ ಚ ತ್ಯಕ್ತಾ ಅಪಿ ಬಾಲಾ ಅಪಿ ವಯಂ ನ ವಿಚಿಂತಯಾಮಸ್ತಸ್ಮಾದ್ಧನ್ಯತಮಾ ಅಹೋ। ಬಾಲಕತ್ವಾಚ್ಚಿಂತಾಭಾವೇಽಪಿ ಅನ್ಯತೋ ಬಾಧೋ ಭಾವ್ಯೋ ಭವೇದೇವೇತ್ಯತ ಉಕ್ತಂ-ಬಾಲತಯಾ ಬಲರಹಿತಾ ಅಪಿ ವೃಕಾದಿಭಿಃ ಅಭಕ್ಷ್ಯಮಾಣಾ ಇತಿ। ಮಾತ್ರಾದೇ ರಕ್ಷಕಸ್ಯಾಭಾವೇ ಕೋ ರಕ್ಷಿತೇತ್ಯತ ಉಕ್ತಂ ಸ ಇತಿ ॥ ಯೋ ಗರ್ಭೇ ರಕ್ಷಿತಾ ಸ ಏವ ಹಿ ತತೋಽನ್ಯತ್ರಾಪಿ ರಕ್ಷತೀತಿ ॥**



**ಬದುಕು ಸಾವುಗಳು ಭಗವಂತನ ಅಧೀನ ಎಂದು ತಿಳಿದರೆ ಶೋಕಕ್ಕೆ ಅವಕಾಶವಿಲ್ಲ. ಇದಕ್ಕೆ ನಾನೇ ದೃಷ್ಟಾಂತ. ನನ್ನನ್ನು ತಂದೆ ತಾಯಿಗಳು ಕಾಡಿನಲ್ಲಿ ಪರಿತ್ಯಾಗ ಮಾಡಿದರೂ ನಾನು ನನ್ನ ರಕ್ಷಣೆ ಬಗ್ಗೆ ಚಿಂತಿಸುವುದಿಲ್ಲ. ದುರ್ಬಲನೇ ಆಗಿದ್ದರೂ ನಾನು ತೋಳ ಮುಂತಾದ ವನ್ಯ ಮೃಗಗಳ ಬಾಯಿಗೆ ತುತ್ತಾಗದೇ ಇದ್ದೇನೆ. ತಾಯಿಯ ಗರ್ಭದಲ್ಲಿರುವಾಗ ನನಗೆ ಯಾರು ರಕ್ಷಣೆ ನೀಡಿದ್ದನೋ ಅವನೇ ಹೊರಗೂ ನನಗೆ ರಕ್ಷಣೆ ನೀಡುತ್ತಾನೆ ಎಂಬ ವಿಶ್ವಾಸ ನನಗೆ ಇದೆ.**

ಹಿರಣ್ಯಾಕ್ಷನ ವಧದಿಂದ ಶೋಕತಪ್ತಳಾದ ದಿತಿಯನ್ನು ಹಿರಣ್ಯಕ ಸಂತೈಸುತ್ತ ಅವಳಿಗೆ ಸುಯಜ್ಞ ಎಂಬ ರಾಜನ ಮರಣ ಪ್ರಸಂಗವನ್ನು ಹೇಳಿ ಸಂತೈಸುತ್ತಾನೆ— ಸುಯಜ್ಞ ರಾಜನ ಮರಣಕ್ಕೆ ರಾಣಿಯರು ಶೋಕಿಸುವಾಗ ಯಮನು ಬಾಲಕರೂಪದಿಂದ ಮೈದೋರಿ, 'ಸತ್ತವನಿಗಾಗಿ ಅಳುವುದು ವ್ಯರ್ಥ. ಅವನು ನಿನಗೆ ಸುಖಕೊಡಲು ಸ್ವತಂತ್ರನಲ್ಲ. ಸ್ವತಂತ್ರನು ಭಗವಂತನೆ. ಗರ್ಭದಲ್ಲಿ ರಕ್ಷಣೆ

ನೀಡುವವನು ಅವನೆ. ಅವನೇ ಹೊರಗೂ ರಕ್ಷಣೆ ನೀಡುತ್ತಾನೆ, ಸುಖ ನೀಡುತ್ತಾನೆ. ಹೀಗೆ ನನಗೆ ದೃಢ ವಿಶ್ವಾಸವಿದೆ. ಅದರಿಂದಲೇ ಏಕಾಂಗಿಯಾಗಿ ಈ ಕಾಡಿನಲ್ಲಿ ಯಾವುದೇ ಭಯವಿಲ್ಲದೆ ವಾಸ ಮಾಡುತ್ತಿದ್ದೇನೆ' ಎಂದು.



—೬೨—

**ರಕ್ಷಣೆಯ ಭಾರ ದೈವಕ್ಕೇ ಬಿಟ್ಟುಬಿಡು**

**ಪಥಿ ಚ್ಯುತಂ ತಿಷ್ಠತಿ ದೈವರಕ್ಷಿತಂ**
**ಗೃಹೇ ಸ್ಥಿತಂ ತದ್ವಿಹತಂ ವಿನಶ್ಯತಿ ।**
**ಜೀವತ್ಯನಾಥೋಽಪಿ ತದೀಕ್ಷಿತೋ ವನೇ**
**ಗೃಹೇಽಪಿ ಗುಪ್ತೋಽಸ್ಯ ಹತೋ ನ ಜೀವತಿ ॥**

(ಭಾ.೭.೨.೪೦)

ಏವಂ ಬಾಲಕೋಕ್ತಂ ವೃದ್ಧಸಂಮತಂ ವಚನಂ ಶ್ರುತ್ವಾ ವಿಸ್ಮಿತಾಸ್ತಾ ಅಭಿಮುಖೀಕೃತ್ಯ ದಿಷ್ಟನಾಮಕಶ್ರೀಹರ್ಯನುಗ್ರಹಸದ್ಭಾವಾಸದ್ಭಾವಾಭ್ಯಾಂ ಜಾಯಮಾನೇ ಕಾರ್ಯೇ ಶೋಕೇನ ಕಿಂ ಸ್ಯಾದಿತ್ಯಾಶಯೇನ ಸದೃಷ್ಟಾಂತಮುಪಪಾದಯತಿ ॥ **ಪಥೀತಿ** ॥ ದಿಷ್ಟೇನ ದೈವೇನ ರಕ್ಷಿತಂ ಪಥಿ ಚ್ಯುತಮಪಿ ಕಂಕಣಾದಿಕಂ ವಸ್ತು ತಿಷ್ಠತಿ । ತೇನ ದಿಷ್ಟೇನ ವಿಹತಂ ನಾಶಿತಂ ಗೃಹೇ ಸ್ಥಿತಮಪಿ ವಿನಶ್ಯತಿ ಯಥಾ, ತಥಾ ಮಾತ್ರಾದಿರಕ್ಷಕರಹಿತೋಽಪಿ ತೇನ ದಿಷ್ಟೇನ ಈಕ್ಷಿತಃ ಪ್ರಸನ್ನದೃಷ್ಟ್ಯಾ, ವನೇಽಪಿ ಜೀವತಿ । ಅಸ್ಯ ಅನೇನ ದಿಷ್ಟೇನ ಹತೋ ಗೃಹೇ ಗುಪ್ತೋಽಪಿ ನ ಜೀವತೀತಿ । ತದನೇನ ಪ್ರೇತರಾಜೇತರಾಪರಿಹಾರ್ಯ ದುಃಖೋಪೇತನಿದರ್ಶನಾಂತರಪ್ರದರ್ಶನೇನ ವಿಶೇಷತೋ ಹೇಯತಾ ವ್ಯುತ್ಪಾದಿತಾ ಭವತಿ । ವಿಶೇಷಶ್ಚ ಹಾನೇಃ ಶೈಘ್ರ್ಯಮೇವೇತಿ ॥



'ಬೀದಿಯಲ್ಲಿ ಬಿದ್ದುಹೋದ ವಸ್ತುವೂ ದೈವರಕ್ಷಣೆ ಇದ್ದರೆ ಉಳಿಯುತ್ತದೆ. ಮನೆಯೊಳಗೆ ರಕ್ಷಿಸಿಟ್ಟಿದ್ದುದೂ ದೈವರಕ್ಷಣೆ ಇಲ್ಲದಿದ್ದರೆ ಉಳಿಯುವುದಿಲ್ಲ. ದೈವಾನುಗ್ರಹವಿರುವವನು ಅನಾಥನಾಗಿ ಕಾಡುಪಾಲಾದರೂ ಬದುಕುತ್ತಾನೆ. ದೈವಾನುಗ್ರಹವಿಲ್ಲದವನು ಮನೆಯೊಳಗೆ ಸುರಕ್ಷಿತವಾಗಿದ್ದರೂ ಬದುಕುವುದಿಲ್ಲ'

—ಈ ಮಾತನ್ನು ಬಾಲಕರೂಪದಿಂದ ಬಂದು ಯಮನೆ ಸುಯಜ್ಞರಾಜನ ಪರಿವಾರಕ್ಕೆ ಹೇಳುತ್ತಾನೆ ಎಂದು ಹಿರಣ್ಯಕಶಿಪು ತಾಯಿ ದಿತಿದೇವಿಗೆ ಸಮಾಧಾನ ಮಾಡುತ್ತಾನೆ. ಅದರಿಂದ ಮರಣ ದುಃಖ ಅಪರಿಹಾರ್ಯ. ವಿಶೇಷವಾಗಿ ಹೇಯ.

ಬಾಲ್ಯ ಯೌವನ ವಾರ್ಧಕ್ಯ ಈ ಮೂರು ಅವಸ್ಥೆಗಳಲ್ಲಿ ಬಾಲ್ಯದ ದುಃಖ ವಿಶೇಷವಾಗಿ ಹೇಯವಲ್ಲ. ಏಕೆಂದರೆ ಶಿಶುವಿಗೆ ಹಲ್ಲು ಬರುವಾಗಿನ ದುಃಖ ಯೌವನದಲ್ಲಿಯೆ ನೆನಪಿಗೇ ಬರುವುದಿಲ್ಲ. ಯೌವನದಲ್ಲಿ ಬರುವ ದುಃಖ ಹೆಚ್ಚು ಹೇಯ. ಅದರಿಂದ ಬಾಲ್ಯದ ದುಃಖದ ಬಗ್ಗೆ ದೃಷ್ಟಾಂತವನ್ನು ನೀಡುವ ಪ್ರಯಾಸ ಬೇಡವೆಂಬ ಅಭಿಪ್ರಾಯದಿಂದ ಯೌವನದ ದುಃಖವನ್ನೇ ದೃಷ್ಟಾಂತ ಪೂರ್ವಕವಾಗಿ ಮುಂದಿನ ಶ್ಲೋಕದಲ್ಲಿ ವಿವರಿಸುತ್ತಾರೆ–



–೬೩–

**ಪ್ರಹ್ಲಾದನ ಉಪದೇಶ:**

**ಸಂಸಾರಮೋಹಪಾಶದಲ್ಲಿ ತಾನೆ ಸಿಲುಕಿಕೊಳ್ಳಬಾರದು**

**ಕಥಂ ಪ್ರಿಯಾಯಾ ಅನುಕಂಪಿತಾಯಾಃ**
**ಸಂಗಂ ರಹಸ್ಯಂ ರುಚಿರಾಂಶ್ಚ ಮಂತ್ರಾನ್ ।**
**ಸುಹೃತ್ ಸುತ ಸ್ನೇಹ ವಶಃ ಶಿಶೂನಾಂ**
**ಕಲಾಕ್ಷರಾಣಾಮನುರಕ್ತಚಿತ್ತಃ ॥**

(ಭಾ.೬.೧೨.೧೭)

**ಏವಮನಂತರಕಾಲೀನಂ ದುಃಖಂ ವ್ಯುತ್ಪಾದ್ಯ ಅವಸ್ಥಾತ್ರಯೇ ಕೌಮಾರೇ ಜಾತಮಪಿ ದುಃಖಂ ದಂತೋತ್ಪಾದದುಃಖಮಿವ ಜನೋಽಯಂ ಸ್ಫುಟಂ ನಾನುಸಂಧತ್ತ ಇತಿ ಕಿಂ ತದ್ವ್ಯುತ್ಪಾದನೇ ಪ್ರಯಾಸೇನೇತಿ ದ್ವಿತೀಯಾವಸ್ಥಾವಸ್ಥಿತ ಮೇವ ವಿಶದೀಕೃತ್ಯ ಪ್ರದರ್ಶಯತಿ ॥ ಕಥಮಿತ್ಯಾದಿನಾ ಶ್ಲೋಕಸಪ್ತಕೇನ ॥ ರಹಸ್ಯಂ ರಹಸಿ ಭವಂ ಮೈಥುನಾದಿ । ಮಂತ್ರಾನ್ ಸಂಲ್ಲಾಪಾನ್ । ವಿವಾಹಾದಿಚಿಂತಾವಿಶೇಷಾನ್ವಾ । ಶಿಶೂನಾಂ ಯಾನಿ ಕಲಾಕ್ಷರಾಣಿ ತೇಷಾಂ ವಿಷಯೇ । ಕಥಂ ತ್ಯಜೇತೇತ್ಯುತ್ತರೇಣಾನ್ವಯಃ ॥**



ಸ್ವತಂತ್ರವಾಗಿ ಮದ್ದಾನೆಯಂತೆ ಸಂಚರಿಸಬೇಕಾಗಿರುವ ವ್ಯಕ್ತಿ ಸಂಪತ್ತಿನ ಮೋಹಪಾಶಬದ್ಧನಾಗಿ ಅಶಾಪಾಶದಿಂದ ಬಿಡಿಸಿಕೊಂಡು ಸ್ವತಂತ್ರನಾಗಲೂ ಅಶಕ್ತನಾಗುತ್ತಾನೆ ಎಂದು ಪ್ರಹ್ಲಾದನು ದೈತ್ಯಬಾಲಕರಿಗೆ ಉಪದೇಶಿಸುತ್ತಾನೆ— 'ಹೆಣ್ಣಿನ ಮೇಲೆ ಅನುರಾಗ ತುಂಬಿದೆದೆಯಿಂದ ಅನುಕಂಪೆಯಿಂದ ಯೌವನ ದಲ್ಲಿ ಏಕಾಂತದಲ್ಲಿ ಅವಳ ಸಂಗಸುಖವನ್ನೂ ಸವಿನುಡಿಗಳನ್ನೂ ಅನುಭವಿಸಿ ಇಳಿವಯಸ್ಸಿನಲ್ಲಿ ಅವೆಲ್ಲವನ್ನೂ ಹೇಗೆ ಪರಿತ್ಯಜಿಸಬಲ್ಲ? ಬಂಧು ವ್ಯಾಮೋಹ ಕ್ಕೊಳಗಾದವನು ಅವರನ್ನು ಹೇಗೆ ತಿರಸ್ಕರಿಸಬಲ್ಲ? ಪ್ರೀತಿ ವಾತ್ಸಲ್ಯ ತುಂಬಿದೆದೆಯಿಂದ ಮಕ್ಕಳ ಮುದ್ದಾದ ತೊದಲು ನುಡಿಗಳನ್ನಾಲಿಸಿದವನು ಆ ಸುಖವನ್ನು ಮುಂದೆ ಹೇಗೆ ಮರೆಯಬಲ್ಲ?'

❖❖❖

—೬೪—

### ಮೋಹಪಾಶ ಬಿಡಿಸಿಕೊಳ್ಳಲಾಗದುದು

ಪ್ರತ್ತಾಃ ಸ್ಮರಂಸ್ತಾ ದುಹಿತೄರ್ಹೃದಯ್ಯಾ
ಭ್ರಾತೄಂಸ್ಸ್ವಸೄರ್ವಾ ಪಿತರೌ ಚ ದೀನೌ ।
ಗೃಹಾನ್ ಮನೋಜ್ಞಾನ್ ರುಚಿರಚ್ಛದಾಂಶ್ಚ
ವೃತ್ತೀಶ್ಚ ಕುಲ್ಯಾಃ ಪಶುಭೃತ್ಯ ವರ್ಗಾನ್ ॥

(ಭಾ.೭.೬.೧೮)

ಪ್ರತ್ತಾಃ ಸ್ವಸಮಾನವಿತ್ತೇಭ್ಯಃ ಪರೇಭ್ಯೋ ದತ್ತಾಃ ಹೃದಯ್ಯಾಃ ಹೃದಯಪ್ರಿಯಾಃ ದುಹಿತೄಃ ಪುತ್ರೀಃ ಸ್ವಸೄಶ್ಚಾಪರಗೃಹೇ ದತ್ತಾಃ ಖಲ್ವೇತಾಸ್ತತ್ರ ಸುಖೇನ ವರ್ತಂತೇ ವಾ ನ ವಾ ಅಸ್ಮದ್ಗೃಹಾನ್ ಪ್ರತ್ಯಾನೇತವ್ಯಾಃ ಕಿಮಿತ್ಯಾದಿರೂಪೇಣ ಸ್ಮರನ್ । ದೀನೌ ದುಃಖಿತೌ ಬಂಧುಮರಣಾದಿನಾ । ಮನೋಜ್ಞಾನ್ ಮನೋಹರಾನ್ ರುಚಿರಾನ್ ಪರಿಕರಾಂಶ್ಚ ಕುಲ್ಯಾಃ ಕುಲಪರಂಪರಾಯಾತಾಃ ವೃತ್ತೀಃ ಜೀವನಕರೀಃ ಕ್ಷೇತ್ರಾದಿರೂಪಾಃ ॥

❖❖❖

'ಮದುವೆ ಮಾಡಿಕೊಟ್ಟ ಪ್ರೀತಿಯ ಹೆಣ್ಣುಮಕ್ಕಳನ್ನು ಅಣ್ಣತಮ್ಮಂದಿರನ್ನು ಅಕ್ಕತಂಗಿಯರನ್ನು ಬಂಧು ಮರಣಾದಿಗಳಿಂದ ದೀನರಾದ ತಂದೆತಾಯಿಗಳನ್ನು

ಸುಂದರವಾದ ಮನೆ ಪೀಠೋಪಕರಣಗಳನ್ನು ಕುಲಕ್ರಮವಾಗಿ ಬಂದಿರುವ ಜೀವನ ವೃತ್ತಿಗಳನ್ನು ಪಶುಭೃತ್ಯ ವರ್ಗವನ್ನು ಅಭಿಮಾನದಿಂದ ನೆನೆಯುತ್ತಾನೆ ಹೊರತು ಅವನ್ನು ಅವನು ಹೇಗೆ ಬಿಟ್ಟಿರಬಲ್ಲ?—ಪ್ರಹ್ಲಾದನ ಉಪದೇಶ.



—೬೫—

**ಸಂಸಾರಮೋಹ ದೊಡ್ಡ ದುರಂತ**

ತ್ಯಜೇತ ಕೋಶಸ್ಥ ಇವೇಹಮಾನಃ
ಕರ್ಮಾಣಿ ಲೋಭಾದವಿತೃಪ್ತ ಕಾಮಃ ।
ಔಪಸ್ಥ್ಯ ಜೈಹ್ವ್ಯಂ ಬಹುಮನ್ಯಮಾನಃ
ಕಥಂ ವಿರಜ್ಯೇತ ದುರಂತಮೋಹಃ ॥

(ಭಾ.೭.೬.೧೯)

ಕೋಶಸ್ಥಃ ಕೋಶಕಾರೀ ಕೀಟ ಇವ ಲೋಭಾದೇವಾವಿತೃಪ್ತಕಾಮಃ ತದನುಕೂಲಾನ್ಯೇವ ಕರ್ಮಾಣಿ ಈಹಮಾನಃ ಕುರ್ವಾಣಃ ಅತ ಏವ ದುರಂತಮೋಹಃ ಕಥಂ ವಿರಜ್ಯೇತೇತಿ। ಅವಿರಾಗೇ ಮೂಲಕಾರಣಮಾಹ। ಔಪಸ್ಥ್ಯೇತಿ। ಔಪಸ್ಥ್ಯಂ ಉಪಸ್ಥೇಂದ್ರಿಯಕಾರ್ಯಂ। ಜೈಹ್ವ್ಯಂ ಜಿಹ್ವೇಂದ್ರಿಯವ್ಯಾಪಾರಂ ಚ। ಬಹು ಮಹಾಪುರುಷಾರ್ಥತಯಾ। ಮನ್ಯಮಾನ ಇತಿ। ಯಥಾಹುಃ—

''ಕೋ ಗೃಹೇಷು ಪುಮಾನ್ ಸಕ್ತಮಾತ್ಮಾನಮ ಜಿತೇಂದ್ರಿಯಃ।
ಸ್ನೇಹಪಾಶೈರ್ದೃಢೈರ್ಬದ್ಧಮುತ್ಸಹೇತ ವಿಮೋಚಿತುಮಿ''ತಿ ॥



'ರೇಶಿಮೆ ಹುಳು ಗೂಡನ್ನು ಕಟ್ಟಿಕೊಂಡು ಅದರೊಳಗೆ ತಾನೆ ಬಂಧಿಯಾಗಿ ಹೊರಗೆ ಬರಲು ಅಶಕ್ತವಾಗುವಂತೆ ಬಂಗಾರದ ಸಂಕೋಲೆಯಂಥ ವಿಷಯ ಭೋಗ ಸಂಪತ್ತಿನ ಮೋಹದ ಬಂಧನದೊಳಗೇ ಇದ್ದು ಸುಖಲೋಭದಿಂದ ಕಾಮ್ಯಕರ್ಮವನ್ನೇ ಮಾಡುತ್ತ ಅತೃಪ್ತ ಬಯಕೆಗಳಿಂದ ಜನನೇಂದ್ರಿಯ ನಾಲಿಗೆಗಳ ಸುಖವನ್ನೆ ಪುರುಷಾರ್ಥವೆಂದು ಬಗೆದು ವ್ಯಕ್ತಿ ತಾನೇ ಕೊನೆಯಿಲ್ಲದ

**ವಿಷಯ ಮೋಹದ ಬಂಧನದಲ್ಲಿ ತನ್ನನ್ನು ಸಿಲುಕಿಸಿಕೊಂಡರೆ ಹೇಗೆ ವೈರಾಗ್ಯವನ್ನು ಹೊಂದಿಯಾನು?'**

ಕೋ ಗೃಹೇಷು ಪುಮಾನ್ ಸಕ್ತಂ ಆತ್ಮಾನಮಜತೇಂದ್ರಿಯಃ ।
ಸ್ನೇಹಪಾಶೈರ್ದೃಢೈರ್ಬದ್ಧಂ ಉತ್ಸಹೇತ ವಿಮೋಚಿತುಂ ॥

(ಭಾ.೭.೬.೧೫)

ಗೃಹಸ್ಥ ಜೀವನದಲ್ಲಿ ಆಸಕ್ತನಾಗಿ ಬಂಧುಗಳ ಸ್ನೇಹಪಾಶಗಳಿಂದ ದೃಢವಾಗಿ ಬಂಧಿತನಾದ ತನ್ನನ್ನು ಅವುಗಳಿಂದ ಬಿಡಿಸಿಕೊಳ್ಳಲು ಇಂದ್ರಿಯ ನಿಗ್ರಹವಿಲ್ಲದವನು ಯಾರು ತಾನೆ ಆಲೋಚನೆ ಮಾಡಿಯಾನು? ಎಂದು ಪ್ರಹ್ಲಾದನು ದೈತ್ಯ ಬಾಲಕರಿಗೆ ಉಪದೇಶಿಸುತ್ತಾನೆ.



—೬೬—

**ಆಯುಷ್ಯ ವ್ಯರ್ಥ ಕಳೆಯುವುದು**

**ಕುಟುಂಬಪೋಷಾಯ ಚ ಯನ್ನಿಜಾಯು-**
**ರ್ನ ಬುಧ್ಯತೇऽರ್ಥಂ ವಿಹತಂ ಪ್ರಮತ್ತಃ ।**
**ಸರ್ವತ್ರ ತಾಪತ್ರಯ ದುಃಖಿತಾತ್ಮಾ**
**ನಿರ್ವಿದ್ಯತೇ ನ ಸ್ವಕುಟುಂಬರಾಮಃ ॥**

(ಭಾ.೭.೬.೨೦)

**ಅಸ್ತ್ವಿದಾನೀ ಇಂದ್ರಿಯತರ್ಪಣಲೋಭಾದವಿರಾಗಃ, ವಾರ್ಧಕೇ ತು ಇಂದ್ರಿಯಾಣಾಂ ಪಾಟವಾಭಾವೇನ ದ್ರವ್ಯಾರ್ಜನಸಾಮರ್ಥ್ಯಾಭಾವೇನ ವಿಶೇಷತೋ ಭೋಗಸಾಧನದ್ರವ್ಯಾಭಾವೇನೈತಾವತಾ ಕಾಲೇನ ಮಯಾ ಪಾರತ್ರಿಕಸಾಧನಂ ಕಿಮಪಿ ನ ಕೃತಮಿತಿ ಪಶ್ಚಾತ್ತಾಪೇನ ಬಂಧುಸನ್ನಿಧೌ ವಾ ಸ್ವಾಮಿಸನ್ನಿಧೌ ವಾ ಮಿತ್ರಸನ್ನಿಧೌ ವಾ, ಸರ್ವತ್ರ ಗಮನೇ ಸತಿ ತಾಪತ್ರಯೇಣೈವಾಗತೇನ ದುಃಖಿತಮನಸ್ತ್ವೇನ ಅಂತೇ ವಿರಾಗೋ ಭವೇದೇವೇತ್ಯತಃ ಸತ್ಯಂ। ಜನ್ಮಾಂತರಾರ್ಜಿತಪುಣ್ಯಾನಾಂ ಕೇಷಾಂಚಿ ದೇವಮಂತೇ ವಯಸಿ ಭವೇದಿತಿ। ಯೇ ತು ಪಶುಪ್ರಾಯಾಃ ದಂಭಾಚಾರಾಃ ತೇಷಾಂ ಸರ್ವಥಾ ನ ಭವತ್ಯೇವ ಮರಣಪರ್ಯಂತಂ ಕುಟುಂಬೇಷ್ವೇವ**

**ಸಂಲಗ್ನಮನಸ್ತ್ವಾದಿತ್ಯಭಿಪ್ರೇತ್ಯಾಹ ॥ ಕುಟುಂಬೇತಿ ॥ ಕುಟುಂಬ-ಪೋಷಾಯೈವ ಯತ್ ಗಚ್ಛತ್ ನಿಜಂ ಕೃಪ್ತಂ ಆಯುರ್ಯಸ್ಯ। ಸಃ। ಯಥಾಹುಃ—**

**''ಪುಂಸೋ ವರ್ಷಶತಂ ಹ್ಯಾಯುಸ್ತದರ್ಧಂ ಚಾಜಿತಾತ್ಮನಃ।**
**ನಿಷ್ಫಲಂ ಯದಸೌ ರಾತ್ರ್ಯಾಂ ಶೇತೇಽನ್ಧಂ ಪ್ರಾಪಿತಸ್ತಮಃ ॥**

**ಮುಗ್ಧಸ್ಯ ಬಾಲ್ಯಕೌಮಾರೈಃಕ್ರೀಡತೋ ಯಾತಿ ವಿಂಶತಿಃ।**
**ಜರಯಾ ಗ್ರಸ್ತದೇಹಸ್ಯ ಯಾತ್ಯಕಲ್ಪಸ್ಯ ವಿಂಶತಿಃ ॥**

**ದುರಾಪೂರೇಣ ಕಾಮೇನ ಮೋಹೇನ ಚ ಬಲೀಯಸಾ।**
**ಶೇಷಂ ಗೃಹೇಷು ಸಕ್ತಸ್ಯ ಪ್ರಮತ್ತಸ್ಯಾಪಯಾತಿ ಹಿ ॥ '' ಇತಿ ॥**



**'ತನ್ನ ಆಯುಷ್ಯವೆಲ್ಲ ಕುಟುಂಬ ಪೋಷಣೆಗೇ ವ್ಯರ್ಥವ್ಯಯವಾಗುವುದನ್ನು ಶಾಸ್ತ್ರವಿಹಿತವಾದ ಕರ್ತವ್ಯಕರ್ಮ ಲೋಪವಾಗುವುದನ್ನು ತಿಳಿಯುವುದಿಲ್ಲ. ಎಲ್ಲವನ್ನೂ ಮರೆಯುತ್ತಾನೆ. ಎಲ್ಲ ಕಡೆ ತಾಪತ್ರಯಗಳಿಂದ ನೋಯು ತ್ತಿದ್ದರೂ ಕುಟುಂಬದೊಡನೆ ಕ್ರೀಡಿಸುತ್ತಾನೆ ಹೊರತು ವೈರಾಗ್ಯ ಹೊಂದಿರುವು ದಿಲ್ಲ.' ಎಂದೂ ಪ್ರಹ್ಲಾದನು ದೈತ್ಯ ಬಾಲಕರಿಗೆ ಹೇಳುತ್ತಾನೆ.**

ಆಯುಷ್ಯವೆಲ್ಲವೂ ವ್ಯರ್ಥವಾಗಿ ಹೇಗೆ ಕಳೆದುಹೋಗುತ್ತದೆ ಎಂಬುದನ್ನು ಪ್ರಹ್ಲಾದನೇ ಹೀಗೆ ಹೇಳುತ್ತಾನೆ—

ಪುಂಸೋ ವರ್ಷಶತಂ ಹ್ಯಾಯುಸ್ತದರ್ಧಮಜಿತಾತ್ಮನಃ ।
ನಿಷ್ಫಲಂ ಯದಸೌ ರಾತ್ರ್ಯಾಂ ಶೇತೇಂಧಂ ಪ್ರಾಪಿತಸ್ತಮಃ ॥
ಮುಗ್ಧಸ್ಯ ಬಾಲ್ಯಕೌಮಾರೈಃ ಕ್ರೀಡತೋ ಯಾತಿ ವಿಂಶತಿಃ ।
ಜರಯಾ ಗ್ರಸ್ತದೇಹಸ್ಯ ಯಾತ್ಯಕಲ್ಪಸ್ಯ ವಿಂಶತಿಃ ।
ದುರಾಪೂರೇಣ ಕಾಮೇನ ಮೋಹೇನ ಚ ಬಲೀಯಸಾ
ಶೇಷಂ ಗೃಹೇಷು ಸಕ್ತಸ್ಯ ಪ್ರಮತ್ತಸ್ಯಾಪಯಾತಿ ಹಿ ॥

(ಭಾ.೭.೬.೧೧,೧೨,೧೩)

'ಮಾನವನಿಗೆ ಪರಮಾವಧಿ ನೂರು ವರ್ಷ ಆಯುಷ್ಯವಿರುತ್ತದೆ. ಅದರಲ್ಲಿ ಅರ್ಧಭಾಗ ನಿದ್ದೆ ಮುಂತಾದುವನ್ನು ನಿಗ್ರಹ ಮಾಡದಿರುವವನಿಗೆ ವ್ಯರ್ಥವಾಗಿ

ಕಳೆಯುತ್ತದೆ. ಏಕೆಂದರೆ ರಾತ್ರಿಯಲ್ಲಿ ಆತ ಎಲ್ಲವನ್ನೂ ಮರೆಸುವಂಥ ಅಜ್ಞಾನದಿಂದ ಆವೃತನಾಗಿ ಮಲಗಿರುತ್ತಾನೆ.

'ಬಾಲ್ಯಕೌಮಾರ ವಯಸುಗಳಲ್ಲಿ ಆತ ಮುಗ್ಧನಾಗಿ ಆಟವಾಡುತ್ತಿರುವಂತೆಯೇ ಇಪ್ಪತ್ತು ವರ್ಷಕಾಲ ವ್ಯರ್ಥವಾಗಿ ಕಳೆಯುತ್ತದೆ. ಮುಪ್ಪಿನಲ್ಲಿ ಶರೀರ ಹಣ್ಣಾಗಿ ಅಶಕ್ತವಾಗುವುದರಿಂದ ಪುನಃ ಇಪ್ಪತ್ತುವರ್ಷಕಾಲ ವ್ಯರ್ಥ ಕಳೆಯುತ್ತದೆ.

'ಇನ್ನು ಉಳಿದ ಆಯುಷ್ಯವೆಲ್ಲವೂ ಪೂರೈಸಲಾಗದ ಭೋಗಲಾಲಸೆಯಿಂದಲೂ ಪ್ರಬಲವಾದ ಮೋಹದಿಂದಲೂ ಗೃಹಸ್ಥ ಜೀವನದಲ್ಲಿ ಮೋಕ್ಷಸಾಧನೆಯನ್ನು ಮರೆತಿರುವುದರಿಂದ ವ್ಯರ್ಥವಾಗಿ ಕಳೆದುಹೋಗುತ್ತದೆ'

ಯದ್ಯಪಿ, ಬಾಲ್ಯವು ಆಟದಲ್ಲಿ, ಯೌವನವು ವಿಷಯ ಭೋಗದಲ್ಲಿ ಕಳೆದು ಹೋದರೂ, ವಾರ್ಧಕ್ಯವು ಅಧ್ಯಾತ್ಮ ಸಾಧನೆಗೆ ವಿನಿಯೋಗವಾಗಬಹುದು. ಏಕೆಂದರೆ ಆಗ ಶರೀರ ಇಂದ್ರಿಯಗಳಲ್ಲಿ ಶಕ್ತಿ ಉಡುಗಿ ಹೋಗುವುದರಿಂದ ಧನಾರ್ಜನೆ ವಿಷಯಭೋಗಗಳಲ್ಲಿ ಕಾಲಹರಣ ಮಾಡುವುದು ಶಕ್ಯವಾಗುವುದಿಲ್ಲ. ಅಧ್ಯಾತ್ಮಚಿಂತನೆಯಲ್ಲಿಯೇ ಕಾಲಕ್ಷೇಪ ಮಾಡಬೇಕಾಗುತ್ತದೆ. ಆದರೂ ಆಗ ಅಧ್ಯಾತ್ಮಚಿಂತನೆಯನ್ನು ನಡೆಸುವ ಪ್ರವೃತ್ತಿ ಉಂಟಾಗುವುದಕ್ಕೂ ಪುಣ್ಯಬೇಕು. ಜನ್ಮಾಂತರದಲ್ಲಿ ಪುಣ್ಯ ಮಾಡಿದ್ದರೇ ಈಗ ಇಳಿವಯಸ್ಸಿನಲ್ಲಿ ಅಧ್ಯಾತ್ಮ ಸಾಧನೆಗೆ ಸಾಮರ್ಥ್ಯ ಅವಕಾಶಗಳು ಲಭ್ಯವಾಗುತ್ತವೆ. 'ಅಯ್ಯೋ ಇಷ್ಟುಕಾಲ ಯಾವ ಪರಲೋಕ ಸಾಧನವನ್ನು ಮಾಡಿಕೊಳ್ಳಲಿಲ್ಲ!' ಎನ್ನುವ ಪಶ್ಚಾತ್ತಾಪ ಬರುತ್ತದೆ. ಪುಣ್ಯ ಮಾಡಿರದಿದ್ದರೆ ಪಶ್ಚಾತ್ತಾಪವೇ ಬರುವುದಿಲ್ಲ. ಬಂದರೂ ಕೂಡ ಎಲ್ಲಿಗೆ ಹೋದರೂ ಬಂಧುಮಿತ್ರರ ತಾಪತ್ರಯ ಬೆನ್ನುಬಿಡದು. ಶರೀರ ಇಂದ್ರಿಯಗಳ ಶಕ್ತಿ ಉಡುಗಿದ್ದರೂ ಅಂದಿನವರೆಗೆ ಅನುಭವಿಸಿದ ಭೋಗಗಳ ಸವಿನೆನಪುಗಳು ಸದಾ ಕಾಡುತ್ತಲೇ ಇರುತ್ತವೆ. ಪರಮಾತ್ಮ ವಿಚಾರ ದಲ್ಲಿ ಮನಸು ಹೋಗುವುದಿಲ್ಲ. ಸಾಯುವವರೆಗೂ ಮನೆ ತಾಪತ್ರಯಗಳದ್ದೇ ಚಿಂತೆಯಾಗುತ್ತದೆ.



—೬೭—

**ಹೊನ್ನಿನ ಮೋಹ ಪ್ರಾಣಾಂತಕ**

ವಿತ್ತೇಷು ನಿತ್ಯಾಭಿನಿವಿಷ್ಟ ಚೇತಾ
ವಿದ್ವಾಂಶ್ಚ ದೋಷಂ ಪರವಿತ್ತಹರ್ತುಃ ।
ಪ್ರೇತ್ಯೇಹ ಚಾಥಾಪ್ಯಜಿತೇಂದ್ರಿಯಸ್ತ-
ದಶಾಂತಕಾಮೋ ಹರತೇ ಕುಟುಂಬೀ ॥

(ಭಾ.೭.೬.೨೧)

ಏವಂ ಪ್ರತಿಪಾದಿತೇಷು ಅನೇಕೇಷು ವಿಷಯೇಷು ದ್ವಯಮೇವ ಮಹಾಬಂಧಕಂ ವಿತ್ತಮೇಕಂ ದ್ವಿತೀಯಂ ಚ ವನಿತೇತಿ । ತತ್ರ ಆದ್ಯಂ ,ತಾವತ್ ಕೇನಾಪಿ ಪರಿತ್ಯಕ್ತುಂ ನ ಶಕ್ಯತ ಇತ್ಯಾಹ ॥ **ವಿತ್ತೇಷ್ವಿತಿ** ॥ ಏವಂ ದ್ರವ್ಯಾಭಾವೇಽಪಿ ನ ವಿರಜ್ಯತೇ । ಕಿಂತು ಪರವಿತ್ತಸ್ಯ ಹರ್ತುಃ ಪುರುಷಸ್ಯ ಇಹ ತಾಡನಾದಿರೂಪಂ ಪ್ರೇತ್ಯ ಚ ಯಾತನಾರೂಪಂ ದೋಷಂ ವಿದ್ವಾನ್ ಯದ್ಯಪಿ ಜಾನಾತಿ । ಅಥಾಪಿ ಅಜಿತೇಂದ್ರಿಯತ್ವಾದಶಾಂತಕಾಮಃ । ತತ ಏವ ವಿತ್ತೇಷು ನಿತ್ಯಂ ಅಭಿನಿವಿಷ್ಟಂ ಆಸಕ್ತಂ ಚೇತೋ ಯಸ್ಯ ಸ ತಾದೃಶಃ ಸನ್ । ಕುಟುಂಬಪೋಷಣಮನಸ್ತ್ವಾತ್ ತತ್ಪೋಷಣಾರ್ಥಂ ಉಭಯತ್ರ ದೋಷಮಗಣಯ್ಯ ಪರವಿತ್ತಂ ಹರತೇ ಹರತೀತಿ । **ಯಥಾಹುಃ**—

''ಕೋ ನ್ವರ್ಥತೃಷ್ಣಾಂ ವಿಸೃಜೇತ್ಪ್ರಾಣೇಭ್ಯೋಽಪಿ ಗರೀಯಸೀಂ ।
ಯಂ ಕ್ರೀಣಾತ್ಯಸುಭಿಃ ಪ್ರೇಷ್ಠೈಸ್ತಸ್ಕರಃ ಸೇವಕೋ ವಣಿಕ್ ॥'' ಇತಿ ।
ತತ್ರ ನಾರಕದುಃಖಪ್ರಕಾರಶ್ಚ ನಾಮಪ್ರಶಂಸಾಪ್ರಕರಣೇ ವಿಸ್ತರೇಣ ವಕ್ಷ್ಯತ ಇತಿ ॥



'ಪರಸ್ವವನ್ನು ಅಪಹರಿಸುವವನಿಗೆ ಇಹದಲ್ಲಿಯೂ ಪರದಲ್ಲಿಯೂ ಅನರ್ಥ ತಪ್ಪಿದ್ದಲ್ಲವೆಂಬುದನ್ನು ತಿಳಿದೂ ಕೂಡ, ಇಂದ್ರಿಯನಿಗ್ರಹವಿಲ್ಲದೆ, ಇಂದ್ರಿಯ ಬಯಕೆಗಳನ್ನು ಪೂರೈಸಲೂ ಆಗದೆ ತೀವ್ರವಾದ ಧನದಾಹದಿಂದ ಪೀಡಿತನಾಗಿ ಕುಟುಂಬಿ ಮಾನವನು ಪರಸ್ವವನ್ನು ಅಪಹರಿಸುತ್ತಾನೆ' ಎಂದು ಪ್ರಹ್ಲಾದನು ದೈತ್ಯ ಬಾಲಕರಿಗೆ ಹೇಳುತ್ತಾನೆ.

ಪರದಲ್ಲಿ ಲಭಿಸುವ ನರಕಶಿಕ್ಷೆಯನ್ನು ಮುಂದೆ ನಾಮಪ್ರಶಂಸಾ ಪ್ರಕರಣ ದಲ್ಲಿ ವಿಸ್ತಾರವಾಗಿ ಹೇಳುವೆವು.

ಕೋ ನ್ವರ್ಥತೃಷ್ಣಾಂ ವಿಸೃಜೇತ್ ಪ್ರಾಣೇಭ್ಯೋಽಪಿ ಗರೀಯಸೀಂ ।
ಯಂ ಕ್ರೀಣಾತ್ಯಸುಭಿಃ ಪ್ರೇಷ್ಠೈಸ್ತಸ್ಕರಃ ಸೇವಕೋ ವಣಿಕ್ ॥

(ಭಾ.೭.೬.೧೬)

ಇದೂ ಪ್ರಹ್ಲಾದನ ಉಪದೇಶ—'ಧನವೆಂಬುದು ಪ್ರಾಣಕ್ಕಿಂತಲೂ ಹೆಚ್ಚು ಇಷ್ಟವಾಗಿರುತ್ತದೆ. ಕಳ್ಳನಾಗಲಿ ಸೇವಕನಾಗಲಿ ವ್ಯಾಪಾರಿಯಾಗಲಿ ಪ್ರಾಣಗಳನ್ನು ಕೊಟ್ಟಾದರೂ ಹಣವನ್ನು ಕೊಂಡುಕೊಳ್ಳುತ್ತಾನೆ. ಯಾರು ತಾನೆ ಧನದಾಹವನ್ನು ಬಿಡಬಲ್ಲ?' ಎಂದು.

ವಿಷಯಾಸಕ್ತರು ಬಯಸುವ ವಿಷಯಗಳಲ್ಲಿ ಎರಡೇ ಅತ್ಯಂತ ಪ್ರಬಲವಾಗಿರುವ ಬಂಧಕಗಳು. ಒಂದು ಹೊನ್ನು, ಇನ್ನೊಂದು ಹೆಣ್ಣು. ಅವುಗಳಲ್ಲಿ ಹೊನ್ನು ಹೇಗೆ ಯಾರಿಂದಲೂ ಪರಿತ್ಯಾಗ ಮಾಡಲು ಅಶಕ್ಯವಾಗಿರುತ್ತದೆ ಎಂಬುದನ್ನು ಮೇಲೆ ಹೇಳಿದ ಶ್ಲೋಕದಲ್ಲಿ ಪ್ರಹ್ಲಾದನು ಹೇಳಿದ್ದಾನೆ. ಇನ್ನು ಹೆಣ್ಣು ಹೇಗೆ ಮಾಯೆಯಾಗಿ ಪೀಡಿಸುತ್ತಾಳೆ ಎಂಬುದನ್ನು ಪ್ರಹ್ಲಾದನೆ ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ.



—೬೮—

**ಹೆಣ್ಣಿನ ಮೋಹ ಪ್ರಳಯಾಂತಕ**

**ಯತೋ ನ ಕಶ್ಚಿತ್ ಕ್ವ ಚ ಕುತ್ರ ವಿದ್ವಾನ್**
**ದೀನಂ ಸ್ವಮಾತ್ಮಾನಮಲಂ ಸಮರ್ಥಃ ।**
**ವಿಮೋಚಿತುಂ ವಾಮದೃಶಾಂ ವಿಹಾರ**
**ಕ್ರೀಡಾಮೃಗೋಽಯಂ ನಿಗಡೋಽಕ್ಷಿಸರ್ಗಃ ॥**

(ಭಾ.೭.೬.೨೩)

**ದ್ವಿತೀಯಮಪಿ ಬಂಧಕಂ ಕೇನಾಪ್ಯಪರಿತ್ಯಾಜ್ಯಮೇವೇತ್ಯಾಹ ॥ ಯತ ಇತಿ ॥ ಯತೋಽಯಂ ಪುಮಾನ್ ವಾಮದೃಶಾಂ ವಿಹಾರಾರ್ಥಂ ಗೃಹೀತಃ**

**ಕ್ರೀಡಾಮೃಗೋ ಮೃಗವಿಶೇಷಃ। ವಾಮದೃಶಾಂ ಅಕ್ಷಿಸರ್ಗಃ ಕಟಾಕ್ಷಮೋಕ್ಷಶ್ಚ ಯಸ್ಯ ಮೃಗಸ್ಯ ನಿಗಡಸ್ಥಾನೀಯಃ। ತತಸ್ತಾದೃಶೋ ವಿದ್ವಾನ್ ವೇದಶಾಸ್ತ್ರಪಾರಂ ಗತೋಪಿ ಕಶ್ಚಿತ್ ಕೋಪಿ ಕುತ್ರಚಿತ್ ದೇಶೇಪಿ ಕ್ವಚ ಕಸ್ಮಿಂಶ್ಚಿತ್ ಕಾಲೇಪಿ ದೀನಂ ದುಃಖಿತಂ ಸ್ವಾತ್ಮಾನಂ ಅಲಂ ಮೋಚಯಿತುಂ ಸಮರ್ಥೋ ನ ಭವತೀತಿ । ಯಥಾಹುಃ—**

**''ಬಲಂ ಮೇ ಪಶ್ಯ ಮಾಯಾಯಾಃ ಸ್ತ್ರೀಮಯ್ಯಾ ಜಯಿನೋ ದಿಶಾಂ।**
**ಯಾ ಕರೋತಿ ನಿಜಾಯತ್ತಾನ್ ಭ್ರೂವಿಜೃಂಭೇಣ ಕೇವಲಮಿ''ತಿ ॥**



**'ಸ್ತ್ರೀಯರ ಕಡೆಗಣ್ಣನೋಟ ಅತಿಪ್ರಬಲವಾದ ಬಂಧಕವಾಗಿರುವುದರಿಂದ ಜ್ಞಾನಿಯೂ ಕೂಡ ಸ್ತ್ರೀಯರ ಆಟದ ಮೃಗವಾಗುತ್ತಾನೆ. ಯಾರೂ ಎಂದೂ ಎಲ್ಲಿಯೂ ತನ್ನನ್ನು ಆ ಬಂಧನದಿಂದ ಬಿಡಿಸಿಕೊಳ್ಳಲು ಶಕ್ತನಾಗುವುದಿಲ್ಲ'.**

ಇದೂ ಪ್ರಹ್ಲಾದನು ದೈತಬಾಲಕರಿಗೆ ನೀಡಿದ ಉಪದೇಶ.

ಕಪಿಲನೂ ತಾಯಿಗೆ ಹೀಗೇ ಉಪದೇಶಿಸಿದ್ದಾನೆ—

'ಬಲಂ ಮೇ ಪಶ್ಯಮಾಯಾಯಾಃ ಸ್ತ್ರೀಮಯ್ಯಾ ಜಯಿನೋ ದಿಶಾಂ
ಯಾ ಕರೋತಿ ನಿಜಾಯತ್ತಾನ್ ಭ್ರೂವಿಜೃಂಭೇಣ ಕೇವಲಂ ॥'

(ಭಾ.೩.೩೧.೩೭)

'ಅಮ್ಮ, ನನ್ನ ಸ್ತ್ರೀರೂಪದ ಬಂಧಕಶಕ್ತಿಗೆ ಎಂಥ ಬಲವೆಂದು ಆಲೋಚಿಸು, ಏಕೆಂದರೆ ಎಲ್ಲ ದಿಕ್ಕುಗಳನ್ನೂ ಗೆದ್ದ ಶೂರವೀರರನ್ನೂ ಅವಳು ಕೇವಲ ಹುಬ್ಬಿನ ಕುಣಿತದಿಂದಲೇ ದಾಸರನ್ನಾಗಿ ಮಾಡಿಕೊಳ್ಳಬಲ್ಲಳು'.



**–೬೯–**

**ಮುಚುಕುಂದನ ವೈರಾಗ್ಯಪ್ರಜ್ಞೆ- ರಾಜಮಹಾರಾಜರೂ ಹೆಣ್ಣಿನ ನೋಟಕ್ಕೆ ಬಲಿಯಾಗುವರು**

**ನಿರ್ಜಿತ್ಯ ದಿಕ್‌ಚಕ್ರಮಭೂತ ವಿಗ್ರಹೋ**
**ವರಾಸನಸ್ಥಃ ಸಮರಾಜ ವಂದಿತಃ ।**

**ಗೃಹೇಷು ಮೈಥುನ್ಯಪರೇಷು ಯೋಷಿತಾಂ**
**ಕ್ರೀಡಾಮೃಗಃ ಪೂರುಷ ಈಶ ಗೀಯತೇ ॥**

(ಭಾ.೧೦.೫೪.೫೩)

**ನನು ಬ್ರಾಹ್ಮಣೋಽಯಂ ಸ್ವಭಾವತೋ ದರಿದ್ರಃ ಕಥಂಚಿತ್ ಸುಂದರೀಃ ಲಬ್ಧ್ವಾ ಲುಬ್ಧಃ ತಾಸಾಂ ಕ್ರೀಡಾಮೃಗೋ ಭವೇದೇವ। ಕಿಂಚ ಸ್ವಭಾವತೋಽಕ್ಷಮಃ ತತಃ ಕಟಾಕ್ಷಮೋಕ್ಷನಿಗಡಬಂಧಾದಾತ್ಮಾನಂ ಮೋಚಯಿತುಂ ನ ಸಮರ್ಥಶ್ಚ। ರಾಜಾನಸ್ತು ಪುನಃ ದಶದಿಗ್ಜಯಿನೋ ಬಹುತರ ಪರಿಭುಕ್ತವಾರಾಂಗನಾದಿವಿಹಾರಾಃ ಸ್ವಬಾಹುಬಲತಿರಸ್ಕೃತಾಖಿಲವೈರಿಜನ ಶಾರೀರಾಃ ಕಥಂ ವನಿತಾವಿನೋದಮೃಗಾ ಭವೇಯುಃ। ಕಥಂ ಚ ತತ್ಕಟಾಕ್ಷವಿಕ್ಷೇಪನಿಗಡಾತ್ ಆತ್ಮಾನಂ ಮೋಚಯಿತುಂ ಅಸಮರ್ಥಾಶ್ಚೇತ್ಯತ ಆಹ ॥ ನಿರ್ಜಿತ್ಯೇತಿ ॥ ಅಭೂತವಿಗ್ರಹಃ ಅಜಾತಯುದ್ಧಃ। ಸಮೈರ್ವಿತ್ತಾದಿನಾ, ವರಾಸನಂ ಸಿಂಹಾಸನಂ, ಈದೃಶೋಽಪಿ ಮೈಥುನ್ಯಪರೇಷು ವಿಹಾರಸಾಧನೇಷು ಸೌಧಾದಿಷು, ಪ್ರವೇಶಮಾತ್ರೇಣ, ಪುರುಷೋ ರಾಜಾದಿಃ ಯೋಷಿತಾಂ ಕ್ರೀಡಾಮೃಗೋ ಭವತೀತಿ ಗೀಯತ ಇತ್ಯನೇನ ತಥಾ ಲೋಕೇ ಬಂದಿಭಿಃ ಪರೋಕ್ಷೇ ಸ್ತೂಯತ ಇತಿ ಸೂಚಯತಿ। ಮೃಗಸ್ಯ ತು ಸ್ವಯಂ ನಿಗಡಮೋಚನಸಾಮರ್ಥ್ಯಂ ನಾಸ್ತೀತಿ ಹೃದಯಂ। ಯಥಾಹುಃ—**

**''ಅಹೋ ಮೇ ಆತ್ಮಸಂಮೋಹೋ ಯೇನಾತ್ಮಾ ಯೋಷಿತಾ ಹೃತಃ।**
**ಕ್ರೀಡಾಮೃಗಶ್ಚಕ್ರವರ್ತೀ ನರದೇವಶಿಖಾಮಣಿ'' ರಿತಿ ॥**



**ಮುಚುಕುಂದ ರಾಜನು ಶ್ರೀಕೃಷ್ಣನನ್ನು ಸ್ತುತಿಸುತ್ತಾನೆ—'ಪ್ರಭು, ಯುದ್ಧವಿಲ್ಲದೇ ದಿಗ್‌ವಿಜಯಿಯಾಗಿ ಸಿಂಹಾಸನದಲ್ಲಿ ಕುಳಿತು ಸಮಬಲರಾದ ರಾಜರಿಂದ ವಂದಿತನಾಗುವ ಮನುಷ್ಯನೇ ವಿಷಯಭೋಗಕ್ಕಾಗಿ ಇರುವ ಅರಮನೆಗಳಲ್ಲಿ ಹೊಕ್ಕರೆ ಸ್ತ್ರೀಯರಿಗೆ ಕೈಯಾಟದ ಕೋತಿಯಂತಾಗುತ್ತಾನೆ'.**

'ಕ್ರೀಡಾಮೃಗೋಽಯಂ' ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಹೆಣ್ಣಿನ ಮಾಯಾಶಕ್ತಿಯ ವೈಭವ ಕಾಣುವುದು, ದರಿದ್ರಬ್ರಾಹ್ಮಣರಿಗೆ ಅದೃಷ್ಟ ವಶದಿಂದ ಸುಂದರಸ್ತ್ರೀಲಾಭವಾದಾಗ ಮಾತ್ರ ಸಾಧ್ಯ. ಹೊರತು ರಾಜರ ವಿಷಯ ದಲ್ಲಿ ಹಾಗೆ ಹೇಳಲಾಗದು. ರಾಜರು 'ರಾಜಾನೋ ಬಹುವಲ್ಲಭಾಃ'

ಎಂಬಂತೆ ಅಸಂಖ್ಯ ಸ್ತ್ರೀಯರನ್ನು ವಿವಾಹವಾಗಿ ಅವರೊಡನೆ ವಿಹಾರ ಮಾಡುವವರು, ಅದೂ ಸಾಲದೆಂಬಂತೆ ವಾರಾಂಗನೆಯರನ್ನೂ ಅನುಭವಿಸುವವರು. ಅವರು ಸ್ತ್ರೀಯರ ಕಡೆಗಣ್ಣನೋಟಕ್ಕೆ ಕೈಯಾಟದ ಕೋತಿಯಂತಾಗುವುದು ಅಸಂಭವ'– ಎಂದು ನಮಗೆ ಅನಿಸಿದರೆ, ಅತ್ತ ಮುಚುಕುಂದ ಮಹಾರಾಜನೇ ಹೇಳುತ್ತಿದ್ದಾನೆ. 'ರಾಜಾಧಿರಾಜರೂ ಕೂಡ ಸ್ತ್ರೀಯರ ಕಣ್ಣನೋಟಕ್ಕೆ ಕೈಯಾಟದ ಕೋತಿಯಾಗುವರು' ಎಂದು.

ಪುರೂರವ ರಾಜನೂ ಹಾಗೇ ಹೇಳಿದ್ದುಂಟು—

ಅಹೋ ಮೇ ಆತ್ಮಸಂಮೋಹೋ ಯೇನಾತ್ಮಾ ಯೋಷಿತಾ ಹೃತಃ ।
ಕ್ರೀಡಾಮೃಗಶ್ಚಕ್ರವರ್ತೀ ನರದೇವಶಿಖಾಮಣಿಃ ॥

(ಭಾ.೧೧.೨೬.೯)

ಪುರೂರವ ಹೇಳುತ್ತಾನೆ— ಅಯ್ಯೋ ಏನು ನನ್ನ ಮೈಮರೆವು! ನನ್ನ ಮನವನ್ನು ಓರ್ವ ಹೆಣ್ಣು ಅಪಹರಿಸಿದಳು! ನಾನು ಚಕ್ರವರ್ತಿ. ರಾಜರುಗಳಿಗೆ ಶಿಖಾಮಣಿ. ಅಂಥ ನನ್ನನ್ನು ಆಕೆ ಕೈಯಾಟದ ಕೋತಿಯಂತೆ ಕುಣಿಸಿದಳು!

ಸಪರಿಚ್ಛದಮಾತ್ಮಾನಂ ಹಿತ್ವಾ ತೃಣಮಿವೇಶ್ವರಂ
ಯಾಂತೀಂ ಸ್ತ್ರಿಯಂ ಚಾನ್ವಗಮಂ ನಗ್ನ ಉನ್ಮತ್ತವದ್ ರುದನ್ ॥

(ಭಾ.೧೧.೨೬.೧೦)

ಎಲ್ಲ ರಾಜವೈಭಯುಕ್ತನಾದ ರಾಜನಾದ ನನ್ನನ್ನು ತೃಣಕ್ಕೆ ಸಮಾನವಾಗಿ ಕಂಡು ಉರ್ವಶಿ ಹೊರಟು ಹೋಗುತ್ತಿದ್ದರೆ ನಾನು ಅಳುತ್ತ ಹುಚ್ಚನಂತೆ ವಿವಸ್ತ್ರನಾಗಿ ಅವಳನ್ನು ಹಿಂಬಾಲಿಸಿದೆ!



## –೭೦–

## ಪ್ರಹ್ಲಾದೋಪದೇಶ–ಶಾಸ್ತ್ರಜ್ಞರಿಗೂ ಸಂಸಾರಮೋಹ ಆವರಿಸುವುದು

ವಿದ್ವಾನಪೀತ್ಥಂ ದನುಜಾಃ ಕುಟುಂಬಂ
ಪುಷ್ಣನ್ ಸ್ವಲೋಕಾಯ ನ ಕಲ್ಪತೇ ವೈ ।

**ಯತ್ ಸ್ವೀಯ ಪಾರಕ್ಯವಿಭಿನ್ನ ಭಾವ**
**ಸ್ತಮಃ ಪ್ರಪದ್ಯೇತ ಯಥಾ ವಿಮೂಢಃ ॥**

(ಭಾ.೭.೬.೨೨)

ಏವಂ ಯೌವನಾವಸ್ಥಾದುಃಖಂ ವ್ಯುತ್ಪಾದ್ಯ ವಾರ್ಧಕಾವಸ್ಥಾವಸ್ಥಿತಂ ಅನಂತರಕಾಲಸ್ಥಿತಂ ಚ ತತ್ಪ್ರದರ್ಶಯತಿ ॥ **ವಿದ್ವಾನಪೀತಿ** ॥ ವಿದ್ವಾನ್ ವೇದಶಾಸ್ತ್ರ ಪಾರಂಗತೋಽಪಿ ಯಾವಚ್ಛರೀರಾದಿದಾರ್ಢ್ಯಂ ತಾವದಾತ್ಮಜಾಯಾಸುತಾಗಾರ ಪಶುದ್ರವಿಣಬಂಧುಪರಿಜನಾದಿಷು ನಿರೂಢಸ್ನೇಹಃ ತೇಷಾಂ ಉದ್ವಹನಾದ್ಯರ್ಥಂ ದ್ರವ್ಯಾದ್ಯಾಶಯಾ ತತ್ರತತ್ರ ಪರಿಭ್ರಮನ್ ಸ್ವಮನೋನುಸಾರತಃ ಕದಾಚಿಲ್ಲಾಭೇ ಹೃಷ್ಯನ್ ಅಲಾಭೇ ಶುಷ್ಯನ್ ಇತ್ಥಂ ಕುಟುಂಬಂ ಪುಷ್ಣನ್ ಯದಾ ಜರಯಾ ದಾರ್ಢ್ಯಂ ಗತಂ ತದಾಪಿ ಕಥಂಚಿತ್ ಪರಿಭ್ರಮನ್ನಪಿ ವಿತ್ತಮಲಭಮಾನಃ ಕೃಪಣೋ ಯಾಚಕಮುದ್ರಾಮುದ್ರಿತೋ ಜರಯಾ ಗ್ರಸ್ತೋ ಗೃಹೇ ಏವ ವಸನ್ ಗೃಹಪಾಲ ಇವ ಅಪಮಾನೇನ ದತ್ತಮನ್ನಂ ಭುಂಜನ್ ।

ರೋಗವಶೇನ ಅಪ್ರದೀಪ್ತಾಗ್ನಿಃ ಅಲ್ಪಾಹಾರಃ ಅಲ್ಪವಿಹಾರಃ ಕುಟುಂಬಚಿಂತಯೈವ ದುಃಖಿತಃ ''ಮೇ ಪಿತರೌ ಮಮ ಭಾರ್ಯಾ ಮಮ ಸುತಾ ಮಮ ಬಾಂಧವಾಶ್ಚ ಮಾಮೃತೇ ಕಥಂ ವರ್ತೇರನ್, ತತಸ್ತೇಷಾಂ ಇಯಂ ವೃತ್ತಿಃ ಇದಂ ವಿತ್ತಂ ಇದಂ ಗೃಹಂ ಇಮೇ ಪಶವಃ ।

ಏತೇ ಚ ನ ಮಮ ಭಾರ್ಯಾದಯಃ ಕಿಂತು ಮಮ ಭ್ರಾತುಃ, ಏತೇಷಾಂ ಕಿಮಪಿ ನ ದೇಯಂ ದಾನೇಽಪಿ ಇಯದೇವೇ''ತ್ಯೇವಂ ಸ್ವೀಯತ್ವ-ಪರಕೀಯತ್ವಾಭ್ಯಾಂ ಕಲ್ಪಿತಾಭ್ಯಾಂ ನಿಮಿತ್ತಾಭ್ಯಾಂ ವಿಭಿನ್ನೋ ವಿರುದ್ಧೋ ಭಾವಃ ಪ್ರವೃತ್ತಿರ್ಯಸ್ಯ ತಾದೃಶಃ ಸನ್ ।

ವಾಯುನಾ ಬದ್ಧಶ್ವಾಸೋ ನಿಶ್ಚೇಷ್ಟಃ ರುದತಾಂ ಸ್ವಾನಾಂ ಶಬ್ದೇನ ಆಕೃಷ್ಟಚೇತೋವೃತ್ತಿಃ ತತ್ರೈವ ಮಗ್ನಃ ಆಸನ್ನಮರಣಃ । ಸ್ವಸ್ಯ ಯತ್ ಪರಲೋಕಸಾಧನಂ ತತ್ ಯದ್ಯಸ್ಮಾನ್ನ ಕೃತವಾನ್ ತಸ್ಮಾತ್ ಕಾರಣಾತ್ ತಸ್ಮೈ ನ ಕಲ್ಪತೇ । ಪರಲೋಕಂ ನ ಪ್ರಾಪ್ನೋತೀತಿ ಭಾವಃ ।

ಕಿಂಚ ಯಥಾ ವಿಮೂಢಃ ಅಜ್ಞಃ ತಮಃ ನರಕಂ ಮೂಢಯೋನಿಂ ವಾ ಪ್ರಪದ್ಯತೇ ತಥಾ ತತ್ ಪ್ರಪದ್ಯೇತೇತಿ । **ಯಥಾಹುಃ—**

''ಆತ್ಮ ಜಾಯಾಸುತಾಗಾರಪಶುದ್ರವಿಣಬಂಧುಷು ।
ನಿರೂಢಮೂಲಹೃದಯಮಾತ್ಮಾನಂ ಬಹು ಮನ್ಯತೇ ॥

ಸ ದಹ್ಯಮಾನಸರ್ವಾಂಗ ಏಷಾಮುದ್ವಹನಾದಿನಾ ।
ಕರೋತ್ಯವಿರತಂ ಮೂಢೋ ದುರಿತಾನಿ ದುರಾಶಯಃ ॥

ಆಕ್ಷಿಪ್ತಾತ್ಮೇಂದ್ರಿಯಃ ಸ್ತ್ರೀಣಾಮಸತೀನಾಂ ಸ್ವಮಾಯಯಾ ।
ರಹೋರಚಿತಸಂಲ್ಲಾಪೈಃ ಶಿಶೂನಾಂ ಕಲಭಾಷಣೈಃ ॥

ಗೃಹೇಷು ಕೂಟಧರ್ಮೇಷು ದುಃಖತಂತ್ರೇಷ್ವತಂದ್ರಿತಃ ।
ಕುರ್ವನ್ ದುಃಖಪ್ರತೀಕಾರಂ ಸುಖವನ್ಮನ್ಯತೇ ಗೃಹೀ ॥

ಕುಟುಂಬಭರಣಾಕಲ್ಪೋ ಮಂದಭಾಗ್ಯೋ ವೃಥೋದ್ಯಮಃ ।
ಶ್ರಿಯಾ ವಿಹೀನಃ ಕೃಪಣೋ ಧ್ಯಾಯನ್ ಶ್ವಸಿತಿ ಮೂಢಧೀಃ ॥

ತತ್ರಾಪ್ಯಜಾತನಿರ್ವೇದೋ ಭ್ರಿಯಮಾಣಃ ಸ್ವಯಂಭೃತೈಃ ।
ಜರಯೋಪಾತ್ತವೈರೂಪ್ಯೋ ಮರಣಾಭಿಮುಖೋ ಗೃಹೇ ॥

ಆಸ್ತೇಽವಮತ್ಯಾಽಪತ್ಯಾದ್ಯೈರ್ಗೃಹಪಾಲ ಇವಾಹರನ್ ।
ಅಹೋ ಮೇ ಪಿತರೌ ವೃದ್ಧೌ ಭಾರ್ಯಾ ಬಾಲಾತ್ಮಜಾ ಸತೀ ॥

ಅನಾಥಾ ಮಾಮೃತೇ ದೀನಾಃ ಕಥಂ ಜೀವಂತಿ ದುಃಖಿತಾಃ ।
ಏವಂ ಕುಟುಂಬಭರಣೇ ವ್ಯಾಪೃತಾತ್ಮಾಽಜಿತೇಂದ್ರಿಯಃ ॥

ಆಮಯೇನಾಪ್ರದೀಪ್ತಾಗ್ನಿರಲ್ಪಾಹಾರೋಽಲ್ಪಚೇಷ್ಟಿತಃ ।
ವಾಯುನೋತ್ಕ್ರಮತೋತ್ತಾರಃ ಕಫಸಂರುದ್ಧನಾಸಿಕಃ ॥

ಕಾಸಶ್ವಾಸಕೃತಾಯಾಸಃ ಕಂಠೋ ಘುರಘುರಾಯತೇ ।
ಮ್ರಿಯತೇ ಕ್ರಂದತಾಂ ಸ್ವಾನಾಮುರುವೇದನಯಾಽಸ್ತಧೀಃ ॥

ಅಧಸ್ತಾನ್ನರಲೋಕಸ್ಯ ಯಾವತೀರ್ಯಾತನಾಸ್ತು ತಾಃ ।
ಕ್ರಮಶಃ ಸಮನುಕ್ರಮ್ಯ ಪುನರತ್ರಾವ್ರಜೇಚ್ಛುಚಿಃ ॥'' ಇತಿ ॥



ಹೇ ದಾನವರೆ, ಶಾಸ್ತ್ರಜ್ಞನಾಗಿದ್ದು ವಿಷಯಾಸಕ್ತಿಯಿಂದಾಗುವ ಅನರ್ಥವನ್ನು ತಿಳಿದೂ ಕೂಡ ಕುಟುಂಬ ಪೋಷಣೆಯನ್ನೇ ಮಾಡುವವನು ಮೋಕ್ಷವನ್ನು ಗಳಿಸಲಾರ. ಮಿಥ್ಯಾಜ್ಞಾನಿ ತಮಸ್ಸನ್ನು ಹೊಂದುವಂತೆ, ಈತನೂ ಕೂಡ ತನ್ನ ಆಸ್ತಿ ತನ್ನ ಮಕ್ಕಳಿಗೆ ಹೊರತು ತಮ್ಮನ ಮಕ್ಕಳಿಗೂ ಹೋಗುವುದು ನ್ಯಾಯವಲ್ಲ ಎಂಬ

**ಭ್ರಮೆಯಿಂದ, ಸಂಸಾರ ಬಂಧವನ್ನೇ ಹೊಂದುತ್ತಾನೆ' ಎಂದು ಪ್ರಹ್ಲಾದನು ಅಸುರ ಬಾಲಕರಿಗೆ ಹೇಳುತ್ತಾನೆ.**

ಶಾಸ್ತ್ರಜ್ಞನಾಗಿದ್ದರೂ ಕೂಡ ಯೌವನದಲ್ಲಿ ಶರೀರ ಇಂದ್ರಿಯಗಳು ದೃಢ ವಾಗಿರುವಾಗ ತಾನು ತನ್ನ ಹೆಂಡತಿ ಮಕ್ಕಳು ಬಂಧು ಜನರು ಮೊದಲಾದವರಲ್ಲಿ ಮಮತೆಯಿಂದ ಅವರನ್ನು ಪೋಷಿಸಬೇಕೆಂದು 'ದ್ರವ್ಯಾರ್ಜನೆಯಲ್ಲಿಯೆ ಆಸಕ್ತನಾಗುತ್ತಾನೆ. ಪರಲೋಕ ಸಾಧನೆ ಮಾಡುವು ದಿಲ್ಲ. ಹಣಕ್ಕಾಗಿ ಊರೂರು ಅಲೆಯುತ್ತ ತಾನು ಬಯಸಿದ್ದು ದೊರೆತರೆ ಹರ್ಷಪಡುತ್ತಾನೆ. ದೊರೆಯದಿದ್ದರೆ ನೊಂದು ಸೊರಗುತ್ತಾನೆ.

ಶರೀರ ಕಣ್ಣು ಕೈಕಾಲು ಸಶಕ್ತವಾಗಿರುವಷ್ಟು ಕಾಲ ಹೀಗೆ ಕುಟುಂಬ ಪೋಷಣೆ ಮಾಡುತ್ತಾನೆ. ಮುಂದೆ ವಾರ್ಧಕ್ಯ ಬಂದಾಗ ಮೈಯಲ್ಲಿ ಶಕ್ತಿಕುಂದಿದಾಗ, ಹಿಂದಿನಂತೆ ಊರೂರು ತಿರುಗಲಾರದೆ ಹಣ ಗಳಿಸಲಾಗದೆ ದೀನನಾಗುತ್ತಾನೆ, ಭಿಕ್ಷುಕನಂತೆ ಕಾಣುತ್ತಾನೆ. ಮುಖದ ಮೇಲೆ 'ಯಾಚಕ' ಎಂಬ ಮುದ್ರೆ ಒತ್ತಿದಂತೆ ಕಾಣುವುದು. ಮನೆಯಲ್ಲಿ ತನ್ನವರೇ ಅವನನ್ನು ಮೂಲೆಯಲ್ಲಿ ಕೂಡಿಸಿ, ಭಿಕ್ಷುಕನಿಗೆ ಮನೆಕಾಯುವ ನಾಯಿಗೆ ಹಾಕುವಂತೆ ಅವನಿಗೆ ಅನ್ನ ಹಾಕುತ್ತಾರೆ. ಅದನ್ನೂ ಕೂಡ ಅಗ್ನಿಮಾಂದ್ಯದಿಂದ ಅವನು ಉಂಡು ಅರಗಿಸಿಕೊಳ್ಳಲಾರದೆ, ಸಾವಿನ ಸನಿಹಕ್ಕೆ ಹೋಗುತ್ತಾನೆ.

ಆಗಲೂ ಕೂಡ ನನ್ನ ಹೆಂಡತಿ ಮಕ್ಕಳು, ನಾನು ಸತ್ತಮೇಲೆ, ಹೇಗೆ ಬದುಕುತ್ತಾರೆ' ಎಂದೇ ಚಿಂತಿಸುತ್ತಾನೆ. ನಾನು ಸಂಪಾದಿಸಿದ್ದೆಲ್ಲ ನನ್ನ ಮಕ್ಕಳಿಗೆ ನ್ಯಾಯವಾಗಿ ಹೋಗಬೇಕು, ತಮ್ಮನ ಮಕ್ಕಳಿಗೆ ಹೋಗಬಾರದು ಎಂದು 'ಮಾಮಕಾಃ ಪಾಂಡವಾಶ್ಚೈವ' ಎನ್ನುವ ಧೃತರಾಷ್ಟ್ರನಂತೇ ಆಲೋಚಿಸುತ್ತಾನೆ. ಬಂಧುಗಳಿಗೆ ದ್ರೋಹ ಮಾಡುತ್ತಾನೆ.

ಕೊನೆ ಕಾಲದಲ್ಲಿ ಶ್ವಾಸಕೋಶಗಳಿಂದ ಉಸಿರಾಡಲಾರದೆ ನಿಶ್ಚೇಷ್ಟನಾಗಿ ಒರಗಿ ತನ್ನವರು ಅಳುವ ಶಬ್ದವನ್ನೇ ಕೇಳುತ್ತ ಒಂದು ಕ್ಷಣವೂ ಹರಿಸ್ಮರಣೆ ಇಲ್ಲದೆ ಪರಲೋಕ ಸಾಧನೆ ಮಾಡದೇ ಕೊನೆಯುಸಿರೆಳೆಯುತ್ತಾನೆ.

ಅವನಿಗೆ ಈ ಲೋಕದಲ್ಲಿಯೂ ಸುಖನೆಮ್ಮದಿಗಳು ಇಲ್ಲ. ಮುಂದೆಯೂ ಪರಲೋಕ ಸಾಧನೆ ಮಾಡದಿದ್ದುದರಿಂದ ನರಕವನ್ನಾಗಲಿ, ನರಕಸದೃಶವಾದ

ಪಶ್ವಾದಿ ತಾಮಸ ಯೋನಿಯನ್ನಾಗಲಿ ಹೊಂದುತ್ತಾನೆ' ಎಂದು. ಪ್ರಹ್ಲಾದನು ವಿಷಯಾಸಕ್ತರ ಪಾಡನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾನೆ.

ಕಪಿಲನೂ ತಾಯಿ ದೇವಹೂತಿಗೆ ಹೀಗೇ ಹೇಳುತ್ತಾನೆ—

ಆತ್ಮಜಾಯಾ ಸುತಾಗಾರ ಪಶು ದ್ರವಿಣಬಂಧುಷು
ನಿರೂಢಮೂಲಹೃದಯ ಆತ್ಮಾನಂ ಬಹುಮನ್ಯತೇ
ಸ ದಹ್ಯಮಾನ ಸರ್ವಾಂಗ ಏಷಾಮುದ್ವಹನಾದಿನಾ
ಕರೋತ್ಯವಿರತಂ ಮೂಢೋ ದುರಿತಾನಿ ದುರಾಶಯಃ ।
ಆಕ್ಷಿಪ್ತಾತ್ಮೇಂದ್ರಿಯಃ ಸ್ತ್ರೀಣಾಮಸತೀನಾಂ ಚ ಮಾಯಯಾ
ರಹೋ ರಚಿತ ಸಂಲಾಪೈಃ ಶಿಶೂನಾಂ ಕಲಭಾಷಣೈಃ
ಗೃಹೇಷು ಕೂಟಧರ್ಮೇಷು ದುಃಖತಂತ್ರೇಷ್ವತಂದ್ರಿತಃ ।
ಕುರ್ವನ್ ದುಃಖಪ್ರತೀಕಾರಂ ಸುಖವನ್ಮನ್ಯತೇ ಗೃಹೀ ॥
ಕುಟುಂಬ ಭರಣಾಕಲ್ಪೋ ಮಂದಭಾಗ್ಯೋ ವೃಥೋದ್ಯಮಃ ।
ಶ್ರಿಯಾ ವಿಹೀನಃ ಕೃಪಣೋ ಧ್ಯಾಯನ್ ಶ್ವಸಿತಿ ಮೂಢಧೀಃ ॥
ತತ್ರಾಪ್ಯಜಾತ ನಿರ್ವೇದೋ ಭ್ರಿಯಮಾಣಃ ಸ್ವಯಂಭೃತೈಃ ।
ಜರಯೋಪಾತ್ತ ವೈರೂಪ್ಯೋ ಮರಣಾಭಿ ಮುಖೋ ಗೃಹೇ ।
ಆಸ್ತೇಽವಮತ್ಯಾಪತ್ಯಾದ್ಯೈರ್ಗೃಹಪಾಲ ಇವಾಹರನ್ ॥

(ಭಾ.೩.೩೧.೬-೧೫)

ತಾನು, ತನ್ನ ಮಡದಿ ಮಕ್ಕಳು ಮನೆಮಠ ಪಶು ಧನ ಬಂಧುಮಿತ್ರರು ಇವರಲ್ಲಿ ಬೇರುಬಿಟ್ಟಿರುವ ಗಾಢವಾದ ಮೋಹದಿಂದ ಇವರೆಲ್ಲರೂ ನನ್ನವರು, ಇವರಿಗೆ ನಾನೇ ಪೋಷಕನು ಎಂದು ಹೆಮ್ಮೆಪಟ್ಟುಕೊಳ್ಳುತ್ತಾನೆ. ಈ ಅಭಿಮಾನವು ಸಂಸಾರಕ್ಕೆ ಕಾರಣ.

ಈ ದುರಭಿಮಾನದ ಫಲವಾಗಿ ಇವರನ್ನು ಸಾಕಿ ಸಲಹುವ ಚಿಂತೆಯಿಂದ ಅವನ ಶರೀರ ಸರ್ವಾಂಗ ಬೇಯುತ್ತದೆ. ಆದರಿಂದ ಪರಲೋಕದ ಕರ್ತವ್ಯ ಮೂಢನಾಗಿ ಇವರನ್ನು ಸಾಕಲು ಅವಿರತವಾಗಿ ಪಾಪ ಮಾಡುತ್ತಾನೆ.

ಕುಲಟೆಯರ ಮೋಹಕಶಕ್ತಿಯಿಂದಲೂ ಅವರ ಏಕಾಂತ ಸಂಭಾಷಣೆ

ಗಳಿಂದಲೂ ಮಕ್ಕಳ ಮುದ್ದು ಮಾತಿನಿಂದಲೂ ಈತನ ಮನ ಇಂದ್ರಿಯಗಳು ಪರವಶವಾಗುವುವು.

ಮನೆಯಲ್ಲಿ ಸ್ವಾಭಾವಿಕವಾಗಿ ಕಪಟದ ಮಾತುಗಳೆ ನಡೆಯುವುದರಿಂದ ಅವು ಸದಾ ದುಃಖ ಉಂಟು ಮಾಡುತ್ತಿದ್ದರೂ ಆ ದುಃಖವನ್ನು ಪರಿಹರಿಸಿ ಕೊಳ್ಳಲು ಅವಿರತವಾಗಿ ಯತ್ನಿಸುತ್ತಾನೆ. ಅದನ್ನೇ ಸುಖವೆಂಬಂತೆ 'ಪಾಲಿಗೆ ಬಂದದ್ದು ಪಂಚಾಮೃತ' ಎಂದು ಬಗೆಯುತ್ತಾನೆ.

ಮಂದಭಾಗ್ಯನಾದ ಆ ಮೂರ್ಖನು ಎಲ್ಲ ಉದ್ಯಮಗಳಲ್ಲಿಯೂ ಅಯಶಸ್ವಿಯಾಗಿ ಕುಟುಂಬ ಪೋಷಣೆಯಲ್ಲಿ ಅಸಮರ್ಥನಾಗುತ್ತಾನೆ. ಮುಪ್ಪಿನಿಂದ ಶರೀರದಲ್ಲಿ ಕಾಂತಿಹೀನನಾಗಿ ಚಿಂತಾಪರನಾಗಿ ದೈನ್ಯದಿಂದ ನಿಟ್ಟುಸಿರಿಡುತ್ತಾನೆ.

ಆ ಅವಸ್ಥೆಯಲ್ಲಿಯೂ ಅವನಿಗೆ ವೈರಾಗ್ಯ ಬರುವುದಿಲ್ಲ. ಹಿಂದೆ ಯಾರನ್ನು ತಾನು ಸಾಕಿದ್ದನೋ ಅವರು ಈಗ ಈತನನ್ನು ಸಾಕಬೇಕಾಗುತ್ತದೆ. ಮುಪ್ಪಿನಿಂದ ಅವನ ಶರೀರ ವಿಕಾರಗೊಂಡಿರುತ್ತದೆ. ಮರಣೋನ್ಮುಖನಾಗಿ ಹಾಸಿಗೆಯಲ್ಲಿ ಒರಗಿರುತ್ತಾನೆ ಆತ. ಮನೆಮಂದಿ ತಿರಸ್ಕಾರದಿಂದ ನೀಡುವ ಮುಷ್ಟಿ ಅನ್ನವನ್ನು ನಾಯಿಯಂತೆ ತಿನ್ನುತ್ತಾನೆ. ಎಂದು ಕಪಿಲನು ಮಾತೆಗೆ ಹೇಳುತ್ತಾನೆ.

ಅಹೋ ಮೇ ಪಿತರೌ ವೃದ್ಧೌ ಭಾರ್ಯಾ ಬಾಲಾತ್ಮಜಾ ಸತೀ ।
ಅನಾಥಾ ಮಾಮೃತೇ ದೀನಾಃ ಕಥಂ ಜೀವಂತಿ ದುಃಖಿತಾಃ ॥

ಅಯ್ಯೋ, ನನ್ನ ತಂದೆತಾಯಿಗಳು ವೃದ್ಧರಾಗಿದ್ದಾರೆ. ಹೆಂಡತಿಯೂ ಎಳೆಗೂಸಿನ ತಾಯಿಯಾಗಿದ್ದಾಳೆ. ನಾನಿಲ್ಲದಿದ್ದರೆ ಇವರು ಅನಾಥರಾಗಿ ದುಃಖಿಗಳಾಗಿ ಹೇಗೆ ಬದುಕುತ್ತಾರೆ!' ಎಂದು ಮರಣಶಯ್ಯೆಯಲ್ಲಿ ಒರಗಿದವನು ಪರಿತಪಿಸುತ್ತಾನೆ! ಎಂದು ಶ್ರೀಕೃಷ್ಣನು ಉದ್ಧವನಿಗೆ ಹೇಳಿದ ಮಾತಿದೆ. (ಭಾ.೧೧.೧೭.೫೭)

ಏವಂ ಕುಟುಂಬಭರಣೇ ವ್ಯಾಪೃತಾತ್ಮಾऽಜಿತೇಂದ್ರಿಯಃ ।

(ಭಾ.೩.೩೦.೧೮)

ಆಮಯೇನಾಪ್ರದೀಪ್ತಾಗ್ನಿರಲ್ಪಾಹಾರೋಽಲ್ಪ ಚೇಷ್ಟಿತಃ ।
ವಾಯುನೋತ್ಕ್ರಮತೋತ್ತಾರಃ ಕಫಸಂರುದ್ಧನಾಸಿಕಃ ।
ಕಾಸಶ್ವಾಸ ಕೃತಾಯಾಸಃ ಕಂಠೋ ಘುರುಘುರಾಯತೇ ॥

(ಭಾ.೩.೩೦.೧೫-೧೬)

ಮ್ರಿಯತೇ ಕ್ರಂದತಾಂ ಸ್ವಾನಾಮುರುವೇದನಯಾಽಸ್ತಧೀಃ ॥

(ಭಾ.೩.೩೦.೧೮)

ಅಧಸ್ತಾನ್ನರಲೋಕಸ್ಯ ಯಾವತೀರ್ಯಾತನಾಸ್ತು ತಾಃ ।
ಕ್ರಮಶಃ ಸಮನುಕ್ರಮ್ಯ ಪುನರತ್ರಾವ್ರಜೇಚ್ಛುಚಿಃ ॥

(ಭಾ.೩.೩೦-೩೪)

ಕಪಿಲನು ತಾಯಿಗೆ ಹೇಳುತ್ತಾನೆ—

ಇಂದ್ರಿಯನಿಗ್ರಹವಿಲ್ಲದವನು ಹೀಗೇ ಕುಟುಂಬ ಪೋಷಣೆಯಲ್ಲಿಯೇ ನಿರತನಾಗಿರುತ್ತಾನೆ. ಮುಪ್ಪಿನಲ್ಲಿ ರೋಗದಿಂದ ಅಗ್ನಿಮಾಂದ್ಯ ಹೊಂದಿ ಓಡಾಡಲೂ ಅಶಕ್ತನಾಗಿದ್ದು ಸ್ವಲ್ಪವೇ ಅನ್ನ ಉಣ್ಣುತ್ತಾನೆ. ಮರಣಕಾಲದಲ್ಲಿ ಮೇಲುಸಿರಿಂದ ಮೇಲೆ ಬರುವ ಕಫದಿಂದ ಅವನ ಮೂಗು ಕಟ್ಟುತ್ತದೆ. ಕೆಮ್ಮದಮ್ಮುಗಳಿಂದ ಆಯಾಸವಾಗುತ್ತದೆ. ಗಂಟಲು ಗೊರಗುಟ್ಟುತ್ತದೆ.

ಬಂಧುಗಳು ಅಳುತ್ತಿದ್ದಂತೆಯೆ ಬಲು ವೇದನೆಯಿಂದ ಪ್ರಜ್ಞೆತಪ್ಪಿ ಮರಣ ಹೊಂದುತ್ತಾನೆ.

ಪಾಪಿಯು ಭೂಲೋಕದ ಕೆಳಗೆ ಎಷ್ಟು ನರಕಗಳಿವೆಯೋ ಅವೆಲ್ಲವನ್ನೂ ಕ್ರಮವಾಗಿ ಅನುಭವಿಸಿದ ಮೇಲೆ ಪಾಪರಹಿತನಾಗಿ ಭೂಲೋಕಕ್ಕೆ ಪುನಃ ಬಂದು ಯಾವುದಾದರೂ ಜನ್ಮ ಪಡೆಯುತ್ತಾನೆ.

ಹೀಗೆ ಭಗವಾನ್ ಕಪಿಲನ ಉಪದೇಶವಿದೆ. ಹೀಗೆ ಗರ್ಭವಾಸದಿಂದ ತೊಡಗಿ ಮರಣಪರ್ಯಂತ ವಿಷಯಾಸಕ್ತನ ದುರವಸ್ಥೆಯನ್ನು ಬಣ್ಣಿಸಿ ವೈರಾಗ್ಯಭಾಗ್ಯವೆ ಮೇಲೆಂದು ತೋರಿಸಿ, ಉದಾಹರಣೆಯಾಗಿ ಪ್ರಾಚೀನರ ಪುಣ್ಯಚರಿತ್ರೆಯನ್ನು ಇಪ್ಪತ್ತೊಂದು ಪದ್ಯಗಳಲ್ಲಿ ಬಣ್ಣಿಸುತ್ತಾರೆ.



–೭೧–

**ಮುಚುಕುಂದನ ವಿವೇಕ–ಸುಖಕ್ಕಾಗಿ ಸಂಸಾರದುಃಖದ ಬಯಕೆ !**

**ವಿಮೋಹಿತೋಽಯಂ ಜನ ಈಶ ಮಾಯಯಾ**
**ತ್ವದೀಯಯಾ ತ್ವಾಂ ನ ಭಜತ್ಯನರ್ಥದೃಕ್ ।**
**ಸುಖಾಯ ದುಃಖಪ್ರಭವೇಷು ಸಜ್ಜತೇ**
**ಗೃಹೇಷು ಯೋಷಿತ್ ಪುರುಷಶ್ಚ ವಂಚಿತಃ ॥** (ಭಾ.೧೦.೫೪.೪೭)

ತದೇವಂ ಗರ್ಭವಾಸಮಾರಭ್ಯ ಆಮರಣಂ ವಿರಾಗೋತ್ಪತ್ತಯೇ ದುಃಖವಿಶೇಷಂ ಪ್ರದರ್ಶ್ಯ ಅತ್ರಾದರಜನನಾಯ ಪೂರ್ವಾಚಾರಮಪಿ ಪ್ರದರ್ಶಯತಿ ॥ **ವಿಮೋಹಿತ ಇತ್ಯಾದಿಭಿರೇಕ ವಿಂಶತಿಪದ್ಯೈಃ ॥** ತತ್ರಾದೌ ಮುಚುಕುಂದಮಹಾರಾಜಸ್ಯ ವಿರಕ್ತಿಪ್ರಕಾರಂ ದರ್ಶಯತಿ ॥ **ವಿಮೋಹಿತ ಇತ್ಯಾದಿಪಂಚಭಿಃ ಪದ್ಯೈಃ ।** ಹೇ ಈಶ ಅನರ್ಥಂ ದುಃಖಂ ಪಶ್ಯನ್ನಪಿ ತ್ವದೀಯಯಾ ಮಾಯಯಾ ವಿಮೋಹಿತೋಽಯಂ ಜನಃ ತ್ವಾಂ ದುಃಖಹರಂ ಸುಖಪ್ರಾಪ್ತಯೇ ನ ಭಜತಿ । ಕಿಂಚ ತ್ವದೀಯಯಾ ಮಾಯಯೈವ ಯೋಷಿತ್ಪುರುಷಶ್ಚೇತ್ಯಯಂ ಜನೋ ವಂಚಿತೋ ಮೋಹಿತಃ ದುಃಖಸಾಧನೇಷು ಗೃಹೇಷು ತದಾದಿಷು ವಿಷಯೇಷು ಸುಖಾಯ ಸಜ್ಜತೇ ಚ । ಇದಂ ಚ ದ್ವಯಂ ತ್ವನ್ಮಾಯಯೈವೇತಿ ॥

❖❖❖

'ಪ್ರಭು! ನಿನ್ನಿಚ್ಛೆಯಿಂದ ನಿನ್ನ ಅಧೀನವಾದ ಬಂಧಕ ಪ್ರಕೃತಿಯಿಂದ ಮೋಹಿತನಾಗಿ ನಾನು ಅನರ್ಥಕರವಾದ ಸಂಸಾರವನ್ನೆ ಪುರುಷಾರ್ಥವೆಂದು ಭಾವಿಸಿದ್ದೇನೆ. ಸುಖಕ್ಕಾಗಿ ದುಃಖಕರವಾದ ಮನೆ ಮಡದಿ ಮುಂತಾದವುಗಳಲ್ಲಿ ಆಸಕ್ತನಾಗಿದ್ದೇನೆ. ನಿನ್ನನ್ನು ಭಜಿಸುತ್ತಿಲ್ಲ. ಎಲ್ಲ ಸ್ತ್ರೀ ಪುರುಷರು ಹೀಗೆ ವಂಚಿತ ರಾಗುತ್ತಿದ್ದಾರೆ—ಎಂದು ಮುಚುಕುಂದ ಮಹಾರಾಜ ಶ್ರೀಕೃಷ್ಣನನ್ನು ಸ್ತುತಿಸು ತ್ತಾನೆ.

❖❖❖

–೭೨–

**ಮುಚುಕುಂದನ ಚಿಂತೆ–'ಸಂಸಾರಿಗಳ ಚಿಂತೆಗೆ ಕೊನೆಯಿಲ್ಲ' ಎಂದು.**

ಮಮೈಷ ಕಾಲೋಽಜಿತ ನಿಷ್ಫಲೋ ಗತೋ
ರಾಜ್ಯಶ್ರಿಯೋನ್ನದ್ಧಮದಸ್ಯ ಭೂಪತೇಃ ।
ಮರ್ತ್ಯಾತ್ಮಬುದ್ಧೇಃ ಸುತ ದಾರಕೋಶೇ-
ಷ್ವಾಸಜ್ಜಮಾನಸ್ಯ ದುರಂತ ಚಿಂತಯಾ ॥

(ಭಾ.೧೦.೫೧.೪೬)

ಹೇಽಜಿತ ಮರ್ತ್ಯೇ ದೇಹೇ ಆತ್ಮೇತ್ಯಹಮತಿರ್ಬುದ್ಧಿರ್ಯಸ್ಯ ತಸ್ಯ ॥

❖❖❖

ಮುಚುಕುಂದರಾಜ ಹೇಳುತ್ತಾನೆ. ಯಾರಿಂದಲೂ ಪರಾಜಯವಿಲ್ಲದವನೆ, ಅಜಿತನೆ, ನಾನು ನಶ್ವರವಾದ ದೇಹದಲ್ಲಿ ನಾನು ನನ್ನದೆಂಬ ಅಭಿಮಾನದಿಂದ ರಾಜ್ಯೈಶ್ವರ್ಯ ಮದದಿಂದ ಕುರುಡಾಗಿದ್ದೆ. ಮಕ್ಕಳು ಮಡದಿ ಧನಸಂಪತ್ತುಗಳಲ್ಲಿ ಆಸಕ್ತನಾಗಿದ್ದೆ. ಅವುಗಳ ರಕ್ಷಣೆಯ ಕೊನೆಯಿಲ್ಲದ ಚಿಂತೆಯಿಂದ ಇಂದಿನವರೆಗೂ ಆಯುಷ್ಯವನ್ನು ವ್ಯರ್ಥವಾಗಿ ಕಳೆದುಬಿಟ್ಟೆ.

❖❖❖

–೭೩–

**ಮುಚುಕುಂದನ ಪರಿತಾಪ–ನಶ್ವರಶರೀರದ ಮೇಲೇಕೆ ಮೋಹ? ಎಂದು.**

ಕಲೇವರೇಽಸ್ಮಿನ್ ಘಟಕುಡ್ಯ ಸನ್ನಿಭೇ
ನಿರೂಢಮಾನೋ ನರದೇವ ಇತ್ಯಹಂ ।
ವೃತೋ ರಥೇಭಾಶ್ವ ಪದಾತ್ಯನೀಕ ಪೈ-
ರ್ಗಾಂ ಪರ್ಯಟಂಸ್ತ್ವಾಮಗಣಯ್ಯ ದುರ್ಮದಃ ॥

(ಭಾ.೧೦.೫೧.೫೦)

ಉಕ್ತಮೇವ ವಿಶದಯತಿ ॥ ಕಲೇವರ ಇತಿ ॥ ಘಟೇನ ಕುಡ್ಯೇನ ವಾ ಸದೃಶೇ ಕಲೇವರೇ ನಿರೂಢಮಾನೋಽಭವಂ । ತ್ವಾಂ ಅಗಣಯ್ಯ ತ್ವತ್ಪೂಜಾಮಕೃತ್ವಾ ಅನೀಕಪೈಃ ಸೇನಾಪತಿಭಿಃ ॥

❖❖❖

ಮುಚುಕುಂದ ಹೇಳುತ್ತಾನೆ, ಪ್ರಭು, ನನ್ನ ಈ ಶರೀರ ಮಣ್ಣಿಂದಾದುದು. ಮಣ್ಣಿನ ಮಡಿಕೆ ಗೋಡೆಗಳಿಗೆ ಸಮವಾಗಿ ನಶ್ವರವಾಗಿದೆ. ಆದರೂ ಅದರಲ್ಲಿ ರಾಜನೆಂದು ಗಾಢವಾದ ಅಭಿಮಾನದಿಂದ ಇದ್ದು ರಥ ಆನೆ ಕುದುರೆ ಕಾಲಾಳು ಸೈನ್ಯಗಳನ್ನು ಕಟ್ಟಿಕೊಂಡು ಕೆಟ್ಟ ಮದದಿಂದ ಭೂಮಿಯಲ್ಲಿ ಸಂಚರಿಸಿದೆ. ನಿನ್ನನ್ನು ಲೆಕ್ಕಿಸಲಿಲ್ಲ.



–೭೪–

**ಮುಚುಕುಂದನ ಉಪದೇಶ ಮತ್ತು ನಾರದೋಪದೇಶ**

ಪುರಾ ರಥೈರ್ಹೇಮ ಪರಿಷ್ಕೃತೈಶ್ಚರನ್
ಮತಂಗಜೈರ್ವಾ ನರದೇವ ಸಂಜ್ಞಿತಃ ।
ಸ ಏವ ಕಾಲೇನ ದುರತ್ಯಯೇನ ವೈ
ಕಲೇವರೋ ವಿಟ್‌ಕೃಮಿಭಸ್ಮ ಸಂಜ್ಞಿತಃ ।

(ಭಾ.೧೦.೫೪.೫೨)

ಹೇಮ್ನಾ ಅಲಂಕೃತೈಃ ಯಃ ಕಲೇವರಃ ನರದೇವಸಂಜ್ಞಾಂ ಪ್ರಾಪ್ತಃ ಸ ಏವ ವಿಡಿತಿ ವಾ ಕೃಮಿರಿತಿ ವಾ ಭಸ್ಮೇತಿ ವಾ ಸಂಜ್ಞಾಂ ಪ್ರಾಪ್ತೋ ಭವತಿ। **ಯಥಾಹುಃ—**

''ದೇವಸಂಜ್ಞಿತಮಪ್ಯಂತೇ ಕೃಮಿವಿಡ್ಭಸ್ಮಸಂಜ್ಞಿತಂ ।
ಭೂತಧ್ರುಕ್‌ಕುರುತೇ ಸ್ವಾರ್ಥಂ ಕಿಂ ವೇದ ನಿರಯೋ ಯತಃ'' ಇತಿ ॥



ಮುಚುಕುಂದ ಮಹಾರಾಜ ಹೇಳುತ್ತಾನೆ—ಯಾವ ಈ ಪಾರ್ಥಿವ ದೇಹ ರಾಜನೆನಿಸಿಕೊಂಡು ಸ್ವರ್ಣಾಲಂಕೃತವಾದ ರಥ ಆನೆಗಳನ್ನೇರಿ ಸಂಚರಿಸುವುದೋ ಅದೇ ದೇಹ ಕಡೆಯಲ್ಲಿ ಅಪರಿಹಾರ್ಯವಾದ ಮೃತ್ಯುವಿಗೆ ವಶವಾಗಿ ನಾಯಿ ನರಿಗಳ ಹೊಟ್ಟೆ ಸೇರಿದರೆ ಮಲವಾಗುವುದು. ಕೊಳೆತರೆ ಕೃಮಿಯಾಗುವುದು, ಸುಟ್ಟರೆ ಬೂದಿಯಾಗುವುದು.

ನಾರದರು ನಳಕೂಬರ ಮಣಿಗ್ರೀವರಿಗೆ ಹೇಳುವ ಮಾತು ಇದು—

ದೇವಸಂಜ್ಞಿತಮಪ್ಯಂತೇ ಕೃಮಿವಿಡ್ ಭಸ್ಮ ಸಂಜ್ಞಿತಂ ।
ಭೂತಧ್ರುಕ್ ಕುರುತೇ ಸ್ವಾರ್ಥಂ ಕಿಂ ವೇದ ನಿರಯೋಯತಃ ॥
(ಭಾ.೧೦.೧೧.೧೦)

'ನಿಮ್ಮ ದೇವದೇಹವೂ ಕೊನೆಯಲ್ಲಿ ಕೃಮಿ ಮಲ ಮತ್ತು ಬೂದಿಯೇ ಆಗುವುದು. ನರಕಸಾಧನವಾಗುವುದು, ನಿಮಗೆ ಗೊತ್ತೆ? ಆದರೆ ಮದದಿಂದ ನಗ್ನರಾಗಿ ತಿರುಗುವಿರಿ!' ಎಂದು.



–೭೫–

**ಮುಚುಕುಂದನ ಸಂತಸ–'ಆಪತ್ತು ಬರುವುದೇ ಮಹಾಭಾಗ್ಯ'**

**ಮನ್ಯೇ ಮಮಾನುಗ್ರಹ ಈಶ ತೇ ಕೃತೋ**
**ರಾಜ್ಯಾನುಬಂಧಾಪಗಮೋ ಯದೃಚ್ಛಯಾ ।**
**ಯಃ ಪ್ರಾರ್ಥ್ಯತೇ ಸಾಧುಭಿರೇಕ ಚರ್ಯಯಾ**
**ವನಂ ವಿವಿಕ್ಷುದ್ಭಿರಖಂಡ ಭೂಮಿ ಪೈಃ ॥** (ಭಾ.೧೦.೫೪.೫೬)

**ಹೇ ಈಶ ಯದೃಚ್ಛಯಾ ರಾಜ್ಯಾನುಬಂಧಾಪಗಮಃ ರಾಜ್ಯಾಧಿಪತ್ಯಾಪಗಮಃ ಸ ತೇ ತ್ವಯಾ ಕೃತಃ ಮಮ ಮಯಿ ಅನುಗ್ರಹ ಇತಿ ಮನ್ಯೇ। ಕುತಃ । ಏಕಾಕಿತಯಾ ತ್ವತ್ಪೂಜಾಂ ಕರ್ತುಂ ವನೇ ಪ್ರವೇಷ್ಟುಂ ಇಚ್ಛುಭಿಃ ಸಾಧುಭಿಃ ಅಖಂಡಮಂಡಲಾಧಿಪತಿಭಿರಪಿ ರಾಜ್ಯಾನುಬಂಧಾಪಗಮಃ ಸ್ವಯಂ ಪ್ರಾರ್ಥ್ಯತೇ ಯತೋಽತ ಇತಿ ॥**



**'ಪ್ರಭು, ಅಖಂಡ ಭೂಮಿಯನ್ನಾಳುವ ಸಜ್ಜನರಾದ ರಾಜರು ಕೂಡ ಕೊನೆಯಲ್ಲಿ ಏಕಾಂಗಿಯಾಗಿ ಮೋಕ್ಷಸಾಧನೆ ಮಾಡುವ ಉದ್ದೇಶದಿಂದ ಕಾಡಿಗೆ ಹೋಗಲು ಬಯಸಿ ಅದಕ್ಕೆ ಅಡ್ಡಿಯಾಗುವ ರಾಜ್ಯದ ಸಂಬಂಧವನ್ನು ಕಡಿದುಕೊಳ್ಳಲು ಬಯಸುತ್ತಾರೆ. ನನಗೆ ಭಗವಂತನ ಇಚ್ಛೆಯಿಂದ ಅದು ಹೀಗೆ ಅನಾಯಾಸವಾಗಿ ಕಡಿದು ಹೋದುದು, ಭಗವಂತ! ನೀನು ನನ್ನ ಮೇಲೆ ಮಾಡಿದ ಅನುಗ್ರಹವೆಂದು ತಿಳಿಯುತ್ತೇನೆ'.**

ತ್ರೇತಾಯುಗದ ಆದಿಯಲ್ಲಿ ಗುಹೆಯೊಳಗೆ ಮಲಗಿದ್ದ ಮುಚುಕುಂದ

ಮಹಾರಾಜ ದ್ವಾಪರಯುಗದ ಕೊನೆಯಲ್ಲಿ ಎದ್ದಿದ್ದಾನೆ. ಅವನ ರಾಜ್ಯ ಸಂಬಂಧ ಎಂದೋ ಕಾಲಗರ್ಭದಲ್ಲಿ ಅಡಗಿ ಹೋಗಿತ್ತು. ರಾಜ್ಯಸಂಬಂಧ ಕಡಿದು ಹೋಗುವುದನ್ನೇ ಆತ ಬಯಸಿದ್ದ. ಅದನ್ನೇ ಭಗವಂತ ಕೊಟ್ಟಿದ್ದಾನೆ.

ಮುಚುಕುಂದ ಮಹಾರಾಜನು ಇಕ್ಷ್ವಾಕುವಂಶದಲ್ಲಿ ಹುಟ್ಟಿದವನು ಮಾಂಧಾತೃ ಚಕ್ರವರ್ತಿಯ ಮಗ, ಮಹಾಬಲಶಾಲಿ. ಇಂದ್ರಾದಿ ದೇವತೆಗಳೆ ಅವನನ್ನು 'ಅಸುರರಿಂದ ನಮ್ಮನ್ನು ರಕ್ಷಿಸುತ್ತಿರಬೇಕೆಂ'ದು ಕೇಳಿಕೊಂಡರು. ಅದರಂತೆ ರಾಜ ಅವರನ್ನು ಬಹುಕಾಲ ರಕ್ಷಿಸಿದ. ಆ ಕಾಲದಲ್ಲಿ ಅವನ ಮಕ್ಕಳು, ಪತ್ನಿಯರು ಮಂತ್ರಿ ಪರಿವಾರದವರು ಎಲ್ಲರೂ ಆಗಲೇ ಕಾಲಾಧೀನರಾಗಿದ್ದು ದನ್ನು ತಿಳಿದು, ದೇವತೆಗಳು, 'ರಾಜನೆ ನಾವು ನಿನಗೆ ಮೋಕ್ಷ ಒಂದನ್ನು ಬಿಟ್ಟು ಬೇರೆ ಏನು ಕೇಳಿದರೂ ಕೊಡುವೆವು. ಮೋಕ್ಷವನ್ನು ಹರಿಯೊಬ್ಬನೇ ಕೊಡಬಲ್ಲ' ಎಂದರು. ಮುಚುಕುಂದ ಪುಣ್ಯವಂತ. ರಾಜ್ಯಕೋಶ ಪತ್ನೀಪುತ್ರಾದಿ ಕಳೆದು ಹೋದ ಎಲ್ಲ ಭೋಗಭಾಗ್ಯವನ್ನು ತಿರುಗಿ ಬೇಡಿ ಪಡೆಯಬಹುದಿತ್ತು. ಆ ಭೋಗ ಗಳ ಸವಿಯನ್ನುಂಡು ಅರಿತುಕೊಂಡವನೇ ಆತ. ಆದರೂ ಆ ಭೋಗಗಳಿಗೆ ಆಸೆಪಡಲಿಲ್ಲ. ಕಳೆದು ಹೋದುದಕ್ಕೆ ಅಳಲಿಲ್ಲ. ಆದದ್ದೆಲ್ಲ ಒಳಿತೇ ಆಯಿತು. ನಮ್ಮ ಶ್ರೀಧರ ಸೇವೆಗೆ ಸಾಧನ ಸಂಪತ್ತಾಯಿತು ಎಂದೇ ಹೇಳಿಕೊಂಡ.

ನಾರದರು ದಾಸೀಪುತ್ರನಾಗಿದ್ದಾಗ, ತನ್ನ ತಾಯಿ ಹಾವುಕಚ್ಚಿ ಗತಿಸಿ ಹೋದಾಗ, ತಾನು ತಬ್ಬಲಿಯಾದಾಗ, ಹೇಳಿಕೊಂಡರಂತೆ, 'ನನಗೆ ತಪ್ಪಿಸಿಕೊಳ್ಳ ಲಾಗದಿದ್ದ ಇಹಲೋಕದ ಒಂದೇ ಒಂದು ಬಂಧನ ಇಂದು ಹರಿದುಹೋಯಿತು! ಭಕ್ತರ ಅಪೇಕ್ಷೆಯನ್ನು ಭಗವಂತ ಹೀಗೇ ನಡೆಸಿಕೊಡುತ್ತಾನೆ' ಎಂದು.

ಹಾಗೇ ಮುಚುಕುಂದನು ಕಳೆದುಹೋದ ಐಹಿಕದ ಬಂಧನವನ್ನು ತಿರುಗಿ ಬೇಡುವ ತಪ್ಪನ್ನು ಮಾಡದೆ ಶ್ರೀಧರಸೇವೆ ಮಾಡುವ ಭಾಗ್ಯವನ್ನೇ ಬಯಸಿ, ಕೇವಲ ದೀರ್ಘಕಾಲದ ನಿದ್ದೆಯನ್ನು ಮಾಡಿದ. 'ನ ದೇವತೋಷಣಂ ವೃಥಾ' ದೇವತೆಗಳ ಸೇವೆ ಎಂದೂ ವ್ಯರ್ಥವಾಗಬಾರದೆಂದುಕೊಂಡು ಶ್ರೀಕೃಷ್ಣ ತಾನೆ ಕಾಲಯವನನ ನಾಶದ ದೊಡ್ಡ ಸೇವೆಯನ್ನು ಅನಾಯಾಸವಾಗಿ ಅವನಿಂದ ಮಾಡಿಸಿಕೊಂಡ. ರಾಜ ತನ್ನನ್ನು ನಿದ್ರೆಯಿಂದ ಎಬ್ಬಿಸಿದ್ದ ಕಾಲಯವನನನ್ನು ಕಣ್ಣನೋಟದಿಂದ ಸುಟ್ಟುಬೂದಿ ಮಾಡಿ, ತನ್ನಿಂದ ಆ ಮಹಾಸೇವೆ

ಮಾಡಿಸಿಕೊಂಡು ಅಲ್ಲೇ ನಗುತ್ತ ನಿಂತಿದ್ದ ಶ್ರೀಕೃಷ್ಣನನ್ನು ಸ್ತುತಿಸಿ 'ನನಗೆ ವೈರಾಗ್ಯಭಾಗ್ಯವನ್ನು ನೀಡಿರುವೆ' ಎಂದು ಹೇಳುತ್ತಾನೆ.



–೭೬–

**ಪ್ರಿಯವ್ರತನ ವೈರಾಗ್ಯ ಒಂದು ಅಚ್ಚರಿ**

**ಯದ್ವಾಚಿ ತಂತ್ಯಾಂ ಗುಣಕರ್ಮನಾಮಭಿಃ**
**ಸ್ವದಾಮಭಿರ್ವತ್ಸ ವಯಂ ಸುಯೋಜಿತಾಃ ।**
**ಸರ್ವೇ ವಹಾಮೋ ಬಲಿಮೀಶ್ವರಾಯ**
**ಪ್ರೋತಾ ನಸೀವ ದ್ವಿಪದೇ ಚತುಷ್ಪದಃ ॥**

(ಭಾ.೫.೧.೧೪)

ಏವಂ ಮುಚುಕುಂದಮಹಾರಾಜೇನ ವಿರಾಗ ಏವಾಶಾಸಿತ ಇತಿ ತತ್ರ ಅವಹಿತ್ಯೈರ್ಭಾವ್ಯಮಿತ್ಯಭಿಧಾಯ ಅಧುನಾ ಪ್ರಿಯವ್ರತಮಹಾರಾಜಸ್ಯ ಆಚಾರಮಪಿ ನಿದರ್ಶಯತಿ ॥ ಯದ್ವಾಚೀತಿ ॥

ಅಥವಾ ಮುಚುಕುಂದೋ ನಾಮ ಇಕ್ಷ್ವಾಕುವಂಶಜಾತೋ ಮಾಂಧಾತೃತನಯೋ ಮಹಾಬಲಃ ಇಂದ್ರಾದಿಭಿಃ ಅಮರವರ್ಯೈಃ ಅಸುರಪರಿತ್ರಸ್ತೈಃ ಸ್ವರಕ್ಷಣಾಯ ಪ್ರಾರ್ಥಿತಃ ತದ್ರಕ್ಷಾಮಕರೋತ್। ಏವಂ ಸುಚಿರಕಾಲಂ ಸ್ವಪರಿಪಾಲನಾಯ ಅವಸ್ಥಿತಂ ಕಾಲತಃ ಕಾಲಿತ ಸುತದಾರ ಮಂತ್ರಿ ರಾಜ್ಯ ಪುರೋಗಮಂ ರಾಜಾನಂ ಅವೇತ್ಯ ''ವಿನಾ ಮೋಕ್ಷಂ ಅಶೇಷಪುರುಷಾರ್ಥಂ ವೃಣೀಷ್ವ'' ಇತಿ ದೇವೈಃ ಉದಿತೇ ಸುಚಿರಶ್ರಮಕರ್ಶಿತೋ ಬಹುಕಾಲಿಕೀಂ ನಿದ್ರಾಂ ಏಕಾಮೇವ ವವ್ರೇ। ತಥಾಸ್ತ್ವಿತಿ ದೇವೈರುದಿತೋ ಗುಹಾಯಾಂ ಸುಚಿರಂ ನಿದ್ರಿತಃ ಯವನಂ ದೃಶೈವ ಭಸ್ಮಸಾತ್ಕೃತ್ಯ ಶ್ರೀಹರಿಂ ಉಪಲಭ್ಯ ಅಸ್ತೌಷೀದಿತಿ ರಹಸ್ಯಂ। ತತ್ರ ಯದ್ಯಪಿ ಹರಿಣಾ ದೇವೈರಿವ ''ವರಾನ್ ವೃಣೀಷ್ವೇ''ತಿ ಉದಿತೋಽಪಿ ನ ವವ್ರೇ ಮಹಾಭಾಗವತತ್ವಾತ್। ತಥಾಪಿ ಭುಕ್ತಭೋಗತ್ವಾತ್ ಶ್ರೀಹರಿಸೇವಾಮೇವ ವರಂ ಮನ್ಯಮಾನೋ ನರನಾರಾಯಣಾಶ್ರಮಮೇವ ಅನುಸೃತವಾನ್। ಕಿಂಚ ಯೇನಕೇನಾಪಿ ವ್ಯಾಜೇನ ರಾಜ್ಯಂ ಕಾಲತೋ ಗತಮೇವಾಸೀತ್ ತಚ್ಚ ಪುನರ್ನಾಪೇಕ್ಷಿತವಾನ್ ಇತ್ಯೇವ। ನ ತು ವಿದ್ಯಮಾನಮೇವ ರಾಜ್ಯಂ ತತ್ಯಾಜ।

ನೇದಂ ಆಶ್ಚರ್ಯಂ । ಅಭುಕ್ತಭೋಗೇನ ವಿದ್ಯಮಾನಮೇವ ರಾಜ್ಯಂ ಪರಿತ್ಯಕ್ತಂ ಇತ್ಯೇತದೇವಾಶ್ಚರ್ಯಂ ಇತ್ಯತಃ ತಾದೃಶಮೇವ ದೃಷ್ಟಮಿತ್ಯಾಶಯೇನಾಹ । **ಯದ್ವಾಚೇತಿ ॥**

ಅಥವಾ ಅಖಂಡಭೂಮಿಪೈಃ ಪ್ರಾರ್ಥ್ಯತೇ ಇತ್ಯನಂತರಮೇವ ಅಭಿಹಿತೇ ಕೇ ತೇ ಅಖಂಡಭೂಮಿಪಾಃ ಕಥಂ ವಾ ತಾಂ ತತ್ಯಜುಃ ಇತ್ಯತಃ ಇತ್ಥಮಿತ್ಯಾಹ ॥ **ಯದ್ವಾಚೇತಿ ॥**

ಸ್ವಾಯಂಭುವಮನುಪುತ್ರಃ ಪ್ರಿಯವ್ರತೋ ನಾರದಸೇವಯಾ ಅವಗತಪರತತ್ವಃ ತಸ್ಮಿನ್ನೇವ ಸಮಾವೇಶಿತಸಕಲಶಾರೀರ ವ್ಯಾಪಾರಃ ಪರಮಹಂಸಪದವೀಂ ಅನುರುಂಧಾನಃ ಅವನಿತಲಪರಿಪಾಲನಾಯ ಸ್ವಪಿತ್ರಾ ಪ್ರೀತಿಪೂರ್ವಕಂ ಉಪಾಮಂತ್ರಿತೋಽಪಿ ನೈವಾಭ್ಯನಂದತ್ । ತದೈವ ಹಿ ಸಕಲಜಗದಭಿಪ್ರೇತವಿದಾಂ ಶಿರೋಮಣಿಃ ಕಮಲಾಸನಃ ಸಮಾಗತಃ ಮುನಿಮನುತತ್ಸುತನತಃ ಸದಯಾವಲೋಕಂ ಪ್ರಿಯವ್ರತಂ ಪ್ರತಿ ವಕ್ತಿ ।

ಯಥಾ ಲೋಕೇ ಕಸ್ಮೈಚಿತ್ ಪುರುಷಾಯ ಸ್ವಸ್ವಾಮಿನೇ ವೃಷಭಾದಯಃ ದೀರ್ಘರಜ್ವಾ ತತ್ರಾಪಿ ಸ್ವಸ್ವದಾಮಭಿಃ ರಾತ್ರೌ ನಿಯೋಜಿತಾಃ ಪ್ರಾತಃ ನಾಸಿಕಾಯಾಂ ಪ್ರೋತಾಃ ಸಂತಃ ಗೋಣ್ಯಾದಿಕಂ ವಹಂತಿ ಇವ ತದ್ವತ್ ಹೇ ವತ್ಸ ವಯಂ ಸರ್ವೇಽಪಿ ಯಸ್ಯ ಹರೇಃ ವಾಚಿ ವೇದರೂಪವಾಣ್ಯಾಂ ದ್ವಿಜಾದಿನಾಮಭಿಃ ಸಮ್ಯಕ್ ಸ್ವಸ್ವವ್ಯಾಪಾರೇಷು ಯೋಜಿತಾಃ ಸಂತಃ ಈಶ್ವರಾಯ ಸ್ವಾಮಿನೇ ಸ್ವಕೃತಕರ್ಮರೂಪಂ ಬಲಿಂ ಪೂಜಾಸಾಧನಂ ವಹಾಮಃ ಕೃತ್ವಾ ಸಮರ್ಪಯಾಮಃ । **ಯಥಾಹುಃ—**

''ಯಥಾ ಗಾವೋ ನಸಿ ಪ್ರೋತಾಸ್ತಂತ್ಯಾಂ ಬದ್ಧಾಃ ಸ್ವದಾಮಭಿಃ ।
ವಾಕ್ತಂತ್ಯಾಂ ನಾಮಭಿರ್ಬದ್ಧಾ ವಹಂತಿ ಬಲಿಮೀಶಿತು'' ರಿತಿ ॥



**'ಮಗು, ನಮಗೆ ಕರ್ಮ ಮಾಡುವಲ್ಲಿಯೂ ಸ್ವಾತಂತ್ರ್ಯವಿಲ್ಲ. ಮೂಗುದಾರ ಹಾಕಿದ ಪಶುಗಳು ಮನುಷ್ಯರಿಗೆ ಭಾರ ಹೊರುವಂತೆ ನಾವೆಲ್ಲರೂ ಶ್ರೀಹರಿಯ ವೇದವಾಣಿ ಎಂಬ ಹಗ್ಗದಲ್ಲಿರುವ ಆಯಾ ವರ್ಣಾಶ್ರಮ ಯೋಗ್ಯ ಗುಣ ಕರ್ಮನಾಮಗಳೆಂಬ ಮುಪ್ಪುರಿಯಿಂದ ಬಂಧಿತರಾಗಿ ಆ ಹರಿಗೆ ಅವನು ವಿಧಿಸಿರುವ ಕರ್ಮಗಳಿಂದ ಪೂಜೆ ಸಲ್ಲಿಸುತ್ತೇವೆ' –ಪ್ರಿಯವ್ರತನಿಗೆ ಬ್ರಹ್ಮದೇವರ ಉಪದೇಶ.**

ಯಥಾ ಗಾವೋ ನಸಿ ಪ್ರೋತಾಸ್ತಂತ್ಯಾಂ ಬದ್ಧಾಃ ಸ್ವದಾಮಭಿಃ ।
ವಾಕ್‌ತಂತ್ಯಾಂ ನಾಮಭಿರ್ಬದ್ಧಾ ವಹಂತಿ ಬಲಿಮೀಶಿತುಃ ॥
(ಭಾ.೧.೧೨.೪೨)

'ಎತ್ತುಗಳಿಗೆ ಮೂಗುದಾರ ಹಾಕಿ ಕಟ್ಟಿದರೆ ಅವು ಮೂಟೆಗಳನ್ನು ಹೊರುತ್ತವೆ. ಹಾಗೇ ವರ್ಣಾಶ್ರಮವಿಧಿ ನಿಯಮ ಪಾಶಗಳಿಂದ ಬದ್ಧರಾದ ನಾವೆಲ್ಲರೂ ಭಗವಂತನಿಗೆ ಸೇವೆ ಮಾಡುತ್ತೇವೆ' ಎಂದು ನಾರದರು ಧರ್ಮರಾಜನಿಗೆ ಹೇಳುತ್ತಾರೆ.

ಧೃತರಾಷ್ಟ್ರನು ವಿದುರ ಸಂಜಯ ಕುಂತಿ ಗಾಂಧಾರಿಯರೊಂದಿಗೆ ಬದರಿಕಾಶ್ರಮದಲ್ಲಿ ಮೂರುವರ್ಷಕಾಲ ತಪಸ್ಸು ಮಾಡಿ ಕೊನೆಯಲ್ಲಿ ಯೋಗಬಲದಿಂದ ಶರೀರತ್ಯಾಗ ಮಾಡಿದ್ದಾನೆ. ಇತ್ತ ಧರ್ಮರಾಜ ಎಂದಿನಂತೆ ಬೆಳಿಗ್ಗೆ ಎದ್ದು ಅರಮನೆಯಲ್ಲಿ ಧೃತರಾಷ್ಟ್ರ ಗಾಂಧಾರಿಯರಿರುತ್ತಿದ್ದ ಸ್ಥಳಕ್ಕೆ ನಮಿಸಲು ಬಂದಾಗ ಅವನ ಜ್ಞಾನದೃಷ್ಟಿಗೆ ಅವರು ಆಶ್ರಮದಲ್ಲಿ ಜೀವಂತರಾಗಿರುವಂತೆ ಕಾಣಲಿಲ್ಲ. ಅವನು ಕಳವಳಗೊಂಡ. ಆಗ ನಾರದರು ಬಂದು ಧೃತರಾಷ್ಟ್ರ ಯೋಗಬಲದಿಂದ ಶರೀರತ್ಯಾಗ ಮಾಡಿದ್ದಾನೆ. ಯಾರೂ ಯಾರನ್ನೂ ಕಾಪಾಡುವುದಿಲ್ಲ ಭಗವಂತನ ಇಚ್ಛಾನುಸಾರವೇ ನಮ್ಮ ಸೇರುವಿಕೆ ಅಗಲುವಿಕೆಗಳಿರುವುದರಿಂದ ಅಗಲಿಕೆಗೆ ನಾವು ಶೋಕಿಸಬಾರದು. ಎಲ್ಲರೂ ಅವನಿಚ್ಛಾನುಸಾರ ಮೂಗುದಾರ ಹಾಕಿದ ಎತ್ತುಗಳಂತೆ ಅವನ ಸೇವೆ ಮಾಡುತ್ತಿರಬೇಕು' ಎಂದು ಸಮಾಧಾನ ಹೇಳುತ್ತಾರೆ.

ಸ್ವಾಯಂಭುವಮನುವಿನ ಪುತ್ರ ಪ್ರಿಯವ್ರತನು ನಾರದರ ಸೇವೆಯಿಂದ ತತ್ವಜ್ಞಾನವನ್ನು ಪಡೆದು ವೈರಾಗ್ಯದಿಂದ ಸನ್ಯಾಸಿಯಾಗಲು ಹೊರಟ. ತಂದೆ ಮನು ಮಹಾರಾಜ ಮಗನಿಗೆ ಪ್ರೀತಿಯಿಂದ ರಾಜ್ಯವನ್ನು ಕೊಟ್ಟರೆ ಸ್ವೀಕರಿಸಲಿಲ್ಲ. ಇದನ್ನು ತಿಳಿದು ಬ್ರಹ್ಮದೇವರೇ ಬಂದು 'ಮೂಗುದಾರ ಹಾಕಿದ ಎತ್ತಿನಂತೆ ಭಗವಂತನ ಅಧೀನರಾಗಿ ನಾವೆಲ್ಲರೂ ವಿಹಿತಕರ್ಮಗಳಿಂದ ಅವನನ್ನು ಸೇವಿಸಲೇಬೇಕು. ನಿನಗೆ ಈಗ ವಿಹಿತವಾದುದು ಗೃಹಸ್ಥಧರ್ಮ. ಸನ್ಯಾಸ ಈಗ ಬೇಡ' ಎಂದು ಸಮಾಧಾನ ಮಾಡಿದರು. ಧೃತರಾಷ್ಟ್ರ ಪ್ರಿಯವ್ರತರಿಬ್ಬರೂ ರಾಜರಿಗೆ, ವಿಹಿತವಾದ ಕರ್ಮಗಳಿಂದ ಭಗವಂತನನ್ನು ಆರಾಧಿಸಿದವರು. ಇಷ್ಟು

ವ್ಯತ್ಯಾಸ ಧೃತರಾಷ್ಟ್ರ ಎಲ್ಲ ಭೋಗಗಳನ್ನು ಚೆನ್ನಾಗಿ ಉಂಡು ಕೊನೆಗಾಲದಲ್ಲಿ ವಿರಕ್ತನಾದ. ಮುಚುಕುಂದನೂ ಕೂಡ ಕಾಲಬಲದಿಂದ ತನಗೆ ಅರಿವಿಲ್ಲದಂತೇ ಹೊರಟು ಹೋದ ರಾಜ್ಯಭೋಗವನ್ನು ತಿರುಗಿ ಬಯಸಲಿಲ್ಲ. 'ಕೈಮೀರಿ ಹೋದದ್ದೆ ಕೃಷ್ಣಾರ್ಪಣ ಎಂದ. ಪ್ರಿಯವ್ರತ ಮಾತ್ರ ಮೊದಲಿಗೇ, ಇನ್ನೂ ವಿಷಯಭೋಗದ ರುಚಿ ನೋಡದಿದ್ದಾಗಲೇ ಯೌವನ ಕಾಲದಲ್ಲಿ ಕೈಗೆಬಂದ ತುತ್ತನ್ನು ಒಡನೆ ಉಣಲಿಲ್ಲ. ವಿರಕ್ತಿ ಹೊಂದಿದನೆಂದರೆ ಇದು ಬಹಳ ಆಶ್ಚರ್ಯಕರ.



–೭೭–

**ಗೃಹಸ್ಥ ಜೀವನ ಕೆಟ್ಟದಲ್ಲ**

**ಭಯಂ ಪ್ರಮತ್ತಸ್ಯ ವನೇಷ್ವಪಿ ಸ್ಯಾತ್**
**ಯತೋ ವಸಂತೇ ಸಹ ಷಟ್ ಸಪತ್ನಾಃ ।**
**ಜಿತೇಂದ್ರಿಯಸ್ಯಾತ್ಮರತೇರ್ಬುಧಸ್ಯ**
**ಗೃಹಾಶ್ರಮಃ ಕಿಂನು ಕರೋತ್ಯವದ್ಯಂ ॥**

(ಭಾ.೫.೧.೧೭)

**ಯಥಾ ಅಹಂ ಮಮ ಪಿತುಃ ಆದೇಶಕರಃ ಮಮ ಪುತ್ರಃ ಸ್ವಾಯಂಭುವಃ ಮಮಾದೇಶಕರಃ ತಥಾ ತ್ವಮಪಿ ತ್ವತ್ಪಿತುರಾದೇಶಂ ಕುರ್ವಿತಿ ಸ್ವಾಭಿಪ್ರಾಯಂ ಪ್ರಕಾಶ್ಯ ''ರಾಜ್ಯಪರಿಪಾಲನಾಯ ಪ್ರವೃತ್ತೇ ಮಯಿ ಮಮ ವಿಹಿತಂ ವಿಹತಂ ಭವತೀತಿ ವನಂ ಪ್ರವೇಕ್ಷ್ಯೇ' ಇತಿ ತನ್ಮನೋವಿಲಾಸಂ ತತ್ರಾಪಿ ಭಯಪ್ರದರ್ಶನೇನ ತಾವದ್ವಿಘಟಯತಿ ॥ ಭಯಮಿತಿ ॥ ಪ್ರಮತ್ತಸ್ಯ ವಿಸ್ಮೃತಸ್ವಕಾರ್ಯಸ್ಯ ವನೇಷ್ವಪಿ ಭಯಂ ಸ್ಯಾದೇವ । ಕುತಃ । ಯತಃ ಷಡಪಿ ವೈರಿಣಃ ಸಹೈವ ವಸಂತಿ । ಯತೋ ವನೇಷ್ವಪಿ ಭಯಂ ಅತೋ ವಿಜಿತೇಂದ್ರಿಯಸ್ಯ ಆತ್ಮನ್ಯೇವ ರತಿಮತೋ ಜ್ಞಾನಿನಃ ಗೃಹಾಶ್ರಮಃ ಕುಟುಂಬಿತಯಾ ಅವಸ್ಥಾನರೂಪಃ ಕಿಮವದ್ಯಂ ಕುರ್ಯಾದಿತಿ ॥**



'ಮಗು! ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಅದರಲ್ಲಿದ್ದೇ ಭಗವಂತನ ಸೇವೆ

**ಮಾಡು. ಗೃಹಸ್ಥಾಶ್ರಮದಲ್ಲಿ ವಿಷಯಾಸಕ್ತಿ ಉಂಟಾಗುವ ಭಯವಿದೆ ಎನ್ನಬೇಡ. ಇಂದ್ರಿಯ ನಿಗ್ರಹವಿಲ್ಲದವನು ವಾನಪ್ರಸ್ಥ ಸನ್ಯಾಸಗಳನ್ನು ಸ್ವೀಕರಿಸಿ ಕಾಡಿಗೆ ಹೋದರೂ ಈ ಭಯವಿದ್ದೇ ಇದೆ. ಏಕೆಂದರೆ ಅವನೆದೆಯೊಳಗೇ ಕಾಮಾದಿ ಅರಿಷಡ್ವರ್ಗವು ವಾಸ ಮಾಡುತ್ತಿರುತ್ತದೆ. ಅದಕ್ಕೆ ಇಂದ್ರಿಯ ನಿಗ್ರಹವನ್ನೇ ಮಾಡಿಕೊಳ್ಳಬೇಕು. ಇಂದ್ರಿಯನಿಗ್ರಹ ಉಳ್ಳವನಿಗೆ ಗೃಹಸ್ಥಾಶ್ರಮ ದಲ್ಲಿ ವಿಷಯಾಸಕ್ತಿ ಉಂಟಾಗುವ ಭಯವಿರುವುದಿಲ್ಲ. ಇಂದ್ರಿಯನಿಗ್ರಹ ಮಾಡಿಕೊಂಡು ಭಗವಂತನ ಧ್ಯಾನದಲ್ಲಿ ಸುಖಕಾಣುವ ಜ್ಞಾನಿಗೆ ಗೃಹಸ್ಥಾಶ್ರಮ ವಾದರೂ ಏನು ಅಪಾಯ ಉಂಟು ಮಾಡೀತು?' ಎಂದು ಪ್ರಿಯವ್ರತನಿಗೆ ಬ್ರಹ್ಮದೇವರು ಉಪದೇಶ ಮಾಡುತ್ತಾರೆ.**

ನಾನು ಮದುವೆಯಾಗುವುದಿಲ್ಲ. ರಾಜನಾಗುವುದಿಲ್ಲ. ಸನ್ಯಾಸಿಯಾಗಿ ಕಾಡಿಗೆ ಹೋಗುವೆನೆಂದು ವಿರಕ್ತಿಯಿಂದ ಹೊರಟ ಪ್ರಿಯವ್ರತನಿಗೆ ಮದುವೆಯಾಗು ರಾಜನಾಗು ಕಾಡಿಗೆ ಹೋಗಬೇಡ ಎಂದು ಬ್ರಹ್ಮದೇವರು ಹೇಳುವುದು ಎಷ್ಟು ಸರಿ? ಎಂದು ನಮಗೆ ಅನಿಸಬಹುದು.

ಪ್ರಿಯವ್ರತನೆ ಹೇಳಬಹುದು ನಾನು ರಾಜಸಿಂಹಾಸನವೇರಿ ಅರಮನೆ ಯಲ್ಲಿ ವಾಸಮಾಡಿದೆನೆಂದರೆ ಭೋಗವಿಲಾಸ ಸಾಮಗ್ರಿಗಳಲ್ಲಿ ಆಸಕ್ತಿ ಉಂಟಾ ದೀತು. ವೈರಾಗ್ಯವು ಭಯದಿಂದ ಓಡಿಹೋದೀತು ಎಂದು ಹೇಳಬಹುದೆನಿಸು ತ್ತದೆ.

ಬ್ರಹ್ಮದೇವನು ಹೇಳುತ್ತಾನೆ, ನಿನ್ನೊಳಗೆ ಕಾಮಕ್ರೋಧಾದಿ ಅರಿಷಡ್ವರ್ಗ ಗಳಿದ್ದರೆ ನೀನು ಕಾಡಿಗೆ ಹೋದರೂ ಅವು ನಿನ್ನೊಳಗೇ ಇರುವುದರಿಂದ ನಿನ್ನ ವೈರಾಗ್ಯಕ್ಕೆ ಅವುಗಳ ಭಯ ತಪ್ಪಿದ್ದಲ್ಲ. ಅದಕ್ಕೆ ಇಂದ್ರಿಯನಿಗ್ರಹ ಮಾಡಿಕೊಳ್ಳಬೇಕು. ಇಂದ್ರಿಯನಿಗ್ರಹ ಮಾಡಿದರೆ ಕಾಡಿನಲ್ಲಿ ಹೇಗೋ ಹಾಗೇ ಅರಮನೆಯಲ್ಲಿಯೂ ಕಾಮಾದಿ ಉಪದ್ರವಿರುವುದಿಲ್ಲ. ವಿಷಯಾಸಕ್ತಿ ಉಂಟಾಗುವುದಿಲ್ಲ, ವೈರಾಗ್ಯಕ್ಕೆ ಯಾವುದರ ಭಯವೂ ಇಲ್ಲ' ಎಂದು.

ಮುಂದೆ ಧರ್ಮೋಪದೇಶ ಪ್ರಕರಣದಲ್ಲಿ 'ಶಮದಮಾವಪಿ ಶಿಕ್ಷೇತ್' ಎಂಬಲ್ಲಿ ಈ ಶ್ಲೋಕಕ್ಕೆ ವಿಶೇಷಾರ್ಥವನ್ನು ಹೇಳುತ್ತಾರೆ.



## –೭೮–

### ಕಾಮಾದಿ ನಿಗ್ರಹಕ್ಕೆ ಸಂಸಾರವೇ ಭದ್ರಕೋಟೆ

ಯಃ ಷಟ್‌ಸಪತ್ನಾನ್ ವಿಜಿಗೀಷಮಾಣೋ
ಗೃಹೇಷು ನಿರ್ವಿದ್ಯ ಯತೇತ ಪೂರ್ವಂ ।
ಯುಧ್ಯೇತ ದುರ್ಗಾಶ್ರಿತ ಊರ್ಜಿತಾರೀನ್
ಕ್ಷೀಣೇಷು ಕಾಮಂ ವಿಚರೇದ್ ವಿಪಶ್ಚಿತ್ ॥ (ಭಾ.೫.೧.೧೮)

ಸ್ವಕೃತಸೃಷ್ಟಿಪರಿಬೃಂಹಣಲುಬ್ಧೇನ ಪಿತಾಮಹೇನ ಏವಮುಚ್ಯತೇ। ಕಥಮನ್ಯಥಾ ಕರ್ಮಭೂಮಾವಸ್ಯ ಮಹಾಪುರುಷಾರ್ಥಸಾಧನಸ್ಯ ದೇಹಸ್ಯ ಅನ್ಯತ್ರ ವಿನಿಯೋಗಃ ಮಹತಾಂ ಮನೋಜ್ಞಃ ಸ್ಯಾತ್ ಇತಿ ಶಂಕಾ ಪೌತ್ರಸ್ಯ ಮನಸಿ ಮಾ ಭೂದಿತಿ ಸ್ವಾಭಿಪ್ರಾಯಂ ವ್ಯನಕ್ತಿ ॥ **ಯ ಇತಿ** ॥ ಯಃ ವಿಪಶ್ಚಿತ್ ಸಪತ್ನಾನ್ ಜೇತುಕಾಮಃ ಸಃ ಪೂರ್ವಂ ಗೃಹೇಷು ಸ್ಥಿತ್ವೈವ ಭೋಗೇನ ನಿರ್ವಿದ್ಯ ತತ್ರ ಸ್ಥಿತ್ವಾ ಯತೇತ। **ಕಥಂ**। ಶ್ರೀಹರಿಗುರುಚರಣಲಕ್ಷಣಂ ದುರ್ಗಂ ಆಶ್ರಿತ ಏವ ಸನ್ ಪ್ರಬಲಾನ್ ಅರೀನ್ ಪ್ರತಿ ಯುಧ್ಯೇತ। ಯುದ್ಧೇನ ವೈರಿಷು ಗತಬಲೇಷು ಸತ್ಸು ಯಥೇಚ್ಛಂ ವಿಚರೇದಿತಿ ॥



ಯಾರು ಈ ಕಾಮಾದಿ ಶತ್ರುಗಳನ್ನು ಗೆಲ್ಲಲು ಬಯಸುವನೋ ಅವನು ಗೃಹಸ್ಥಾಶ್ರಮದಲ್ಲಿ ಬಂದೊದಗುವ ವಿಷಯಭೋಗಗಳಲ್ಲಿ ಸಿಕ್ಕಷ್ಟೇ ಸಾಕೆಂದು ತೃಪ್ತಿ ಹೊಂದಿ ಅವುಗಳಲ್ಲಿ ಸಾರವಿಲ್ಲವೆಂದೂ, ಅವು ಅನಿತ್ಯವೆಂದೂ ಸ್ವತಃ ಅನುಭವದಿಂದ ಮನಗಂಡು ಮನಸು ಬುದ್ಧಿ ಮುಂತಾದ ಇಂದ್ರಿಯಗಳ ಮೇಲೆ ಹತೋಟಿ ಇಟ್ಟುಕೊಂಡು ಅರಿಷಡ್ವರ್ಗ ಜಯಕ್ಕೆ ಯತ್ನಿಸಬೇಕು! ಇಂದ್ರಿಯ ಜಯದಿಂದ ಹರಿಪೂಜಾರೂಪವಾಗಿ ಗೃಹಸ್ಥಾಶ್ರಮದಲ್ಲಿ ಭೋಗಗಳನ್ನುಂಡು ಹರಿಗುರುಭಕ್ತಿ ಸಂಪಾದಿಸಿ ಆ ಭಕ್ತಿ ತುಂಬಿದ ಗೃಹಸ್ಥಾಶ್ರಮವೆಂಬ ಕೋಟೆ ಯೊಳಗೆ ಇದ್ದು ಕಾಮಾದಿ ಶತ್ರುಗಳೊಡನೆ ಹೋರಾಡಬೇಕು. ಅದರಿಂದ ಅವರು ಬಲಹೀನರಾಗುವರು. ಆಗ ನೀನು ಯಾವುದೇ ಆಶ್ರಮದಲ್ಲಿ ನಿರ್ಭಯವಾಗಿ ಇರಬಹುದು. ಸನ್ಯಾಸಾಶ್ರಮವನ್ನು ಸ್ವೀಕರಿಸಬಹುದು' ಎಂದು ಬ್ರಹ್ಮದೇವರು ಪ್ರಿಯವ್ರತನಿಗೆ ಉಪದೇಶಿಸುತ್ತಾರೆ.

'ವೈರಾಗ್ಯವನ್ನು ತೊರೆದು ಗೃಹಸ್ಥ ಜೀವನ ಮಾಡೆಂ'ದೇನೂ ಬ್ರಹ್ಮದೇವರು ಹೇಳಲಿಲ್ಲ. ಹಾಗೆ ಹೇಳಿದ್ದರೆ 'ಸೃಷ್ಟಿಕರ್ತರಾಗಿರುವ ಅವರು ತಾವು ಮಾಡುತ್ತಿರುವ ಸೃಷ್ಟಿಯನ್ನು ಪ್ರಿಯವ್ರತನೂ ಬೆಂಬಲಿಸಲೆಂದು ಹೀಗೆ ಹೇಳುತ್ತಿದ್ದಾರೆ' ಎನ್ನಬಹುದಿತ್ತು. ಇಲ್ಲದಿದ್ದರೆ, 'ಕರ್ಮಭೂಮಿಯಲ್ಲಿ ಮೋಕ್ಷ ರೂಪ ಮಹಾಪುರುಷಾರ್ಥಕ್ಕೆ ಸಾಧನವಾಗಿ ದೊರೆತಿರುವ ಶರೀರವನ್ನು ಪ್ರಿಯವ್ರತನು ಧರ್ಮ ಅರ್ಥಕಾಮ ಸಂಪಾದನೆಯಲ್ಲಿ ತೊಡಗಿಸಲಿ. ಗೃಹಸ್ಥಧರ್ಮವನ್ನು ನಡೆಸಲಿ ಎಂದು ಅವರು ಪ್ರೇರಿಸುವುದು ಸರಿಯಲ್ಲ. ಮಹಾತ್ಮರಾದ ಬ್ರಹ್ಮದೇವರಿಗೆ ಅದು ಶೋಭಿಸುವುದಿಲ್ಲ' ಎಂದು ಪ್ರಿಯವ್ರತನು ಆಲೋಚಿಸಬಹುದಿತ್ತು. ಆದರೆ ಮುಂದಿನ ಭಾಗವತ ಶ್ಲೋಕದಲ್ಲಿ ಸ್ಪಷ್ಟವಾಗಿ 'ವಿಮುಕ್ತ ಸಂಗಃ ಪ್ರಕೃತಿಂ ಭಜಸ್ವ' ಕೊನೆಯಲ್ಲಿ ವಿರಕ್ತಿಯಿಂದ ಸನ್ಯಾಸಿಯಾಗಿ ಮೋಕ್ಷವನ್ನು ಸಂಪಾದಿಸು' ಎಂದೇ ಹೇಳುತ್ತಾರೆ. ಹಿಂದೆ ಹೇಳಿದಂತೆ ಮೂಗುದಾರ ಹಾಕಿದ ಎತ್ತಿನಂತೆ ಪ್ರಭುವಿನ ಸೇವೆಮಾಡಿ ಭಕ್ತಿಯನ್ನು ದೃಢಪಡಿಸಿಕೊಂಡು ಈ ಭಕ್ತಿಭರಿತವಾದ ಗೃಹಸ್ಥಾಶ್ರಮದ ಕೋಟೆಯೊಳಗಿದ್ದು ವೈರಾಗ್ಯದಿಂದ ಕಾಮಾದಿಗಳೊಡನೆ ಹೋರಾಡು ಎಂದು ಬ್ರಹ್ಮದೇವರು ಉಪದೇಶಿಸುವುದು ಸರಿಯಾಗಿದೆ. ಪ್ರಾಯೋಗಿಕವಾಗಿದೆ. ಪರಸ್ತ್ರೀ ಕಾಮ ಪೀಡಿತನಾಗುವಾಗ ಪತಿಯನ್ನು ಪತ್ನಿಯೇ ಕೋಟೆಯಂತೆ ರಕ್ಷಿಸುತ್ತಾಳೆ ತಾನೆ?



–೭೯–

**ಭಕ್ತಿಭರಿತಭೋಗ ಭೋಗವಲ್ಲ**

ಸ್ವಪುತ್ರೇಭ್ಯ ಇಮಾಂ ಗಾಂ ಯಥಾದಾಯಂ ವಿಭಜ್ಯ
ಭುಕ್ತ ಭೋಗಾಂ ಚ ಮಹಿಷೀಂ ಮೃತಕಮಿವ
ಸ ಹ ಮಹಾವಿಭೂತಿ ಮಪಹಾಯ ಸ್ವಯಂ ನಿಹಿತನಿರ್ವೇದೋ
ಹೃದಿ ಗೃಹೀತರುಚಿರ ಹರಿ ವಿಹಾರಾನುಭವೋ
ಭಗವತೋ ನಾರದಸ್ಯ ಪದವೀಮನುಸಸಾರ ॥

(ಭಾ.೫.೧.೩೮)

ತದೇವಂ ಪಿತಾಮಹೋಪದೇಶಂ ಶಿರಸಾ ಅವಧಾರ್ಯ

**ಯಥಾಸ್ವಪಿತ್ರಾದೇಶಂ ಪೃಥಿವೀಂ ಅನುಶಾಸ್ಯ ಪುತ್ರಾನ್ ಉತ್ಪಾದ್ಯ ಸ್ಥಿತಸ್ಯ ಪ್ರಿಯವ್ರತಸ್ಯ ಪ್ರವೃತ್ತಿಮಾಹ॥ ಸ್ವಪುತ್ರೇಭ್ಯ ಇತಿ॥ ಅನೇನ ಪೂರ್ವವಯಸ್ಯೇವ ಸ್ವಹಸ್ತಗತಸ್ಯ ಮಹಾಸಾಮ್ರಾಜ್ಯಸ್ಯ ಪರಿತ್ಯಾಗೋ ಮಹಾಶ್ಚರ್ಯತರಮಿತಿ ಪೂರ್ವಶಂಕಾ ಅಪಹಸ್ತಿತಾ ವೇದಿತವ್ಯಾ। ಏವಂ ಪರಿತ್ಯಕ್ತರಾಜ್ಯಸ್ಯಾಪಿ ಯತ್ ಕಿಯದ್ದಿನಪರಿಪಾಲನಂ ತತ್ ಕೇವಲಂ ಪಿತಾಮಹವಚನಗೌರವೇಣೇತಿ ಸೂಚನಾಯ ಮೃತಕಂ ಕುಣಪಮಿವ ಅಪಹಾಯೇತ್ಯುಕ್ತಂ। ದೂರಂ ಗಚ್ಛನ್ ಕಿಮಪಿ ಪಾಥೇಯಂ ಗೃಹೀತ್ವಾ ಗಚ್ಛತಿ। ಅಯಂ ತು ಮಹಾರಾಜಃ ಕಿಯದ್‌ದ್ರವ್ಯಂ ಗೃಹೀತ್ವಾ ಗತವಾನ್ ಇತ್ಯತಃ ಇದಮೇಕಮೇವೇತ್ಯಾಹ ಹೃದಿ ಗೃಹೀತರುಚಿರಹರಿವಿಹಾರಾನುಭವ ಇತಿ। ಯಥಾಹುಃ—**

**''ಭೌಮಂ ದಿವ್ಯಂ ಮಾನುಷಂ ಚ ಮಹಿತ್ವಂ ಯೋಗಕರ್ಮಜಂ।**
**ಯಶ್ಚಕ್ರೇ ನಿರಯೌಪಮ್ಯಂ ಪೌರುಷಂ ತು ಜನಪ್ರಿಯಮಿ''ತಿ॥**



**ಪ್ರಿಯವ್ರತನು ತನ್ನ ಮಕ್ಕಳಿಗೆ ಈ ಭೂಮಿಯನ್ನು ಯಾರಾರಿಗೆ ಎಷ್ಟೆಷ್ಟು ಪಾಲು ಸಿಗಬೇಕೋ ಅಷ್ಟು ಹಂಚಿಕೊಟ್ಟು, ಶವವನ್ನು ಸುಲಭವಾಗಿ ಪರಿತ್ಯಜಿಸುವಂತೆ, ಮಹಾಸಾಮ್ರಾಜ್ಯಲಕ್ಷ್ಮಿಯನ್ನೂ ರಾಣಿಯನ್ನೂ ಬಿಟ್ಟು, ವೈರಾಗ್ಯವನ್ನು ಹೊಂದಿ, ಹರಿಯ ಮನೋಹರ ಲೀಲೆಗಳ ರಸಾನುಭವಗಳನ್ನು ಹೃದಯದಲ್ಲಿ ತುಂಬಿಕೊಂಡು ಭಗವಾನ್ ನಾರದಮುನಿಯ ನಿವೃತ್ತಿಮಾರ್ಗವಾದ ಸನ್ಯಾಸವನ್ನು ಸ್ವೀಕರಿಸಿದ.**

ವಿಷಯಪದಾರ್ಥಗಳನ್ನು ಉಂಡು ಸುಲಭವಾಗಿ ಪರಿತ್ಯಜಿಸುವುದೆ ನಿಜವಾದ ವೈರಾಗ್ಯ. ನಾವು ಎಲ್ಲರೂ ಶವವನ್ನು ಹೇಗೆ ಸುಲಭವಾಗಿ ಪರಿತ್ಯಜಿಸುವೆವೋ ಹಾಗೇ ರಾಜ್ಯದ ಅರಮನೆಯ ಭೋಗಭಾಗ್ಯಗಳನ್ನೂ ಸುಲಭವಾಗಿ ಪ್ರಿಯವ್ರತನು ಪರಿತ್ಯಜಿಸಿದ. ಅವನು ಮದುವೆಯಾಗಿ ಮಕ್ಕಳನ್ನು ಪಡೆದುದು ರಾಜ್ಯವಾಳಿದುದು ಎಲ್ಲವೂ ತಾತನಾದ ಬ್ರಹ್ಮದೇವರ ಉಪದೇಶ ಮತ್ತು ತಂದೆಯಾದ ಸ್ವಾಯಂಭುವಮನುವಿನ ಆದೇಶಗಳ ಪಾಲನೆಗಾಗಿ ಹೊರತು ತನ್ನ ಸುಖಕ್ಕಾಗಿ ಅಲ್ಲ. ಭಗವಂತನಲ್ಲಿ ಹೊರತು ಬೇರೆ ಎಲ್ಲದರಲ್ಲಿಯೂ ಅನಾಸಕ್ತಿಯು ಅವನಿಗೆ ನಾರದರ ಉಪದೇಶದಿಂದ ಮೊದಲಿಗೇ ಇತ್ತು. ಈ

ಅನಾಸಕ್ತಿ ಈಗ ಎಲ್ಲವನ್ನೂ ಅನುಭವಿಸಿ ಅದರಲ್ಲಿ ಏನೂ ಸಾರವಿಲ್ಲವೆಂದು ಅನುಭವದಿಂದಲೇ ಕಂಡು ದೃಢವಾದ ವೈರಾಗ್ಯವನ್ನು ಬ್ರಹ್ಮದೇವರ ಅನುಗ್ರಹ ದಿಂದ ಪ್ರಿಯವ್ರತ ಪಡೆದಿದ್ದಾನೆ. ಬ್ರಹ್ಮದೇವರು ಹೇಳಿದಂತೆ ಭಗವನ್ಮಯವಾದ ಗೃಹಸ್ಥಾಶ್ರಮದ ಕೋಟೆಯಲ್ಲಿ ಒಂದು ನೂರ ಹತ್ತು ಕೋಟಿ ವರ್ಷಕಾಲವಿದ್ದು ವೈರಾಗ್ಯದಿಂದ ಕಾಮಾದಿ ಶತ್ರುನಿಗ್ರಹ ಮಾಡಿಕೊಂಡಿದ್ದಾನೆ.

ಭಕ್ತಿ ರಹಿತ ವೈರಾಗ್ಯ ವೈರಾಗ್ಯವೆ ಅಲ್ಲ. ಭಕ್ತಿಭರಿತ ಭೋಗ ಭೋಗವಲ್ಲ. ಗೋಪಾಲ ದಾಸರು ಹೇಳುವಂತೆ ಬರಿ ವೈರಾಗ್ಯ ದಾರಿದ್ರ್ಯವೆನಿಸುತ್ತದೆ—

ವೈರಾಗ್ಯ ಮಾರ್ಗಕೇಳು ದಾರಿದ್ರ್ಯಮಾರ್ಗ ಕೀಳು
ಶ್ರೀರಮಣನ್ನ ಪಾದವಾರಾಧಿಸುವುದಕ್ಕೆ
ನಾರಿಯ ಧಾರುಣಿಯ ಧನವ ಬಿಟ್ಟರಾಯಿತೆ?
ವೈರಾಗ್ಯವಲ್ಲ ಕಂಡ್ಯ ಧೀರರಿಗೆ
ಶಾರೀರಕಾಪಾದ ಭಸುಮ ಧರಿಸಿಕೊಂಡು
ಚೀರವಸ್ತ್ರವನುಟ್ಟು ತಿರುಗಿದರೂ
ಆರಾದರು ಅವನ ಅವಧೂತನೆಂತೆಂದು
ಸಾರಿ ಸಾರಿಗೆ ಇನ್ನು ಕರೆವರೇನೈ
ವೈರಾಗ್ಯವೆಂಬಂಥ ವಾರುತಿಯೊಂದಲ್ಲದೆ
ನಾರಾಯಣಗೆ ಇದು ಪ್ರಿಯವಲ್ಲ...
ರಾಗಭೋಗಗಳು ಆಗಲೀ ದೇಹಕ್ಕೆ
ಯಾಗಂಗಳು ಮಾಡಿ ಹರಿಗರ್ಪಿಸೆ ಪರಿ
ತ್ಯಾಗವ ಮಾಡದೆ ಹರಿಯಿಂದಾದುದು ಎಂದು
ಭೋಗಿಸುತಿಪ್ಪುದೆ ವೈರಾಗ್ಯ ವೈರಾಗ್ಯ
ಕಾಗೆಯಂತೆ ಮೈಯ ಕರ್ರಗೆ ಮಾಡಿನ್ನು
ರೋಗ ಬಂದೆಮ್ಮೆಂತೆ ನಾಮ ಬಡಕೊಂಡು
ಭೋಗದ ವಸ್ತು ಪರಿತ್ಯಾಗವ ಮಾಡಿನ್ನು
ಆಗುವ ಕಾರ್ಯಗಳಾಗುತ್ತಲಿರೆ ಅಂತೆ
ಹ್ಯಾಗೆ ಜನರು ಕಾಂಬರೊ ಹಾಗೆ ವೈ
ರಾಗ್ಯವನ್ನು ಮಾಡೆ ವೈರಾಗ್ಯವಲ್ಲವೊ

ನಾಗಶಯನ ಗೋಪಾಲವಿಠಲ ಸಮ್ಮ
ತಾಗಿ ಉಂಡುಣಿಸೋದೆ ಉಣುವುದು ವೈರಾಗ್ಯ



ಭೌಮಂ ದಿವ್ಯಂ ಮಾನುಷಂ ಚ ಮಹಿತ್ವಂ ಯೋಗಕರ್ಮಜಂ ।
ಯಶ್ಚಕ್ರೇ ನಿರಯೌಪಮ್ಯಂ ಪುರುಷಾನುಜನಪ್ರಿಯಃ ॥ (ಭಾ.೫.೧.೪೧)

ಪ್ರಿಯವ್ರತನ ಗುಣಗಾನ ಮಾಡುವ ಒಂದು ಪ್ರಸಿದ್ಧ ಶ್ಲೋಕವು ಹೀಗೆ ಹೇಳುತ್ತಿದೆ—'ಪಾತಾಳ ಸ್ವರ್ಗ ಭೂಲೋಕಗಳ ಐಶ್ವರ್ಯಗಳನ್ನೂ ಯೋಗ ಸಾಮರ್ಥ್ಯದಿಂದ ಲಭಿಸುವ ಭೋಗಗಳನ್ನೂ ಪ್ರಿಯವ್ರತನು ನರಕಸಮಾನ ಎಂದು ಬಗೆದು ಪರಿತ್ಯಜಿಸಿದನು. ಪರಮಪುರುಷನಾದ ಹರಿಯ ಭಕ್ತರ ಸಂಗವನ್ನು ಮಾತ್ರ ಬಯಸಿದನು' ಎಂದು.

ಇಲ್ಲಿ ಪ್ರಿಯವ್ರತನ ವೈರಾಗ್ಯವು ಭಕ್ತಿಯುಕ್ತವಾಗಿತ್ತೆಂದು ಪರ್ಯಾಯ ವಾಗಿ ಉಕ್ತವಾಗಿದೆ. ವಿರಕ್ತನಾದ ಆವನು ದೂರದ ಹರಿಮಂದಿರಕ್ಕೆ ಹೊರಟು ದಾರಿಯಲ್ಲಿ ಉಣಲೆಂದು ಹರಿಲೀಲಾರಸಾನುಭವ ಸಂಗಸುಖದ ಬುತ್ತಿಯನ್ನು ಹೊತ್ತಿದ್ದನೆಂದೂ ಹೇಳಿದಂತಾಗಿದೆ.



## –೮೦–

### ಪ್ರಹ್ಲಾದನ ವಚನ – 'ತಿಳಿದವರೂ ಕಾಮಾಗ್ನಿಗೆ ಧುಮುಕುವರು!'

**ಕುತ್ರಾಶಿಷಃ ಶ್ರುತಿಸುಖಾ ಮೃಗತೃಷ್ಣರೂಪಾಃ**
**ಕ್ವೇದಂ ಕಲೇವರಮಶೇಷರುಜಾಂ ವಿರೋಹಂ ।**
**ನಿರ್ವಿದ್ಯತೇ ನ ತು ಜನೋ ಯದಪೀತಿ ವಿದ್ವಾನ್**
**ಕಾಮಾನಲಂ ಸುಖಲವೈಃ ಶಮಯನ್ ದುರಾಪೈಃ ॥** (ಭಾ.೭.೯.೨೫)

**ಯಸ್ಯ ಶ್ರೀಪತಿಃ ನರಹರಿಃ ಸ್ವಯಮೇವ ಪ್ರಸನ್ನಃ ತಸ್ಯ ಅಲಭ್ಯಪುರುಷಾರ್ಥರಹಿತಸ್ಯಾಪಿ ಪರಮಭಾಗವತಸ್ಯ ಪ್ರಹ್ಲಾದಸ್ಯ ವೈರಾಗ್ಯಂ ಸರ್ವೈರಪಿ ಶಿರಸಾ ಶ್ಲಾಘ್ಯತಮಂ ಗರ್ಭ ಏವ ಭಾಗವತೋತ್ತಮನಾರದಾನು ಗ್ರಹಾಸಾದಿತಂ ದರ್ಶಯನ್ ತದ್ವಚನಂ ಪಠತಿ। ಕುತ್ರಾಶಿಷ ಇತಿ॥ ಶ್ರುತೀ ಕರ್ಣಾವೇವ ಸುಖಯಂತೀತಿ ಶ್ರುತಿಸುಖಾಃ ಊಷರೋದಕಸದೃಶಾಃ ರುಜಾಂ**

**ರೋಗಾಣಾಂ ಉತ್ಪತ್ತಿಸ್ಥಾನಂ ಆಶಿಷಃ ಕುತ್ರ ಕಲೇವರಂ ಕ್ವೇತಿ ವಿದ್ವಾನಪಿ ಜನೋ ನೈವ ನಿರ್ವಿದ್ಯತೇ । ಕುತಃ ಯತ್ ಯತಃ ಕಾಮಲಕ್ಷಣವಹ್ನಿಂ ಸುಖಲವೈಃ ಶಮಯನ್ ಆಸ್ತೇ ತತ ಇತಿ ॥**



**ಪ್ರಹ್ಲಾದನು ನೃಸಿಂಹನ ಮುಂದೆ ಹೇಳುತ್ತಾನೆ— ಶರೀರ ಮನೆ ಮಡದಿ ಮುಂತಾದ ಭೋಗಗಳ ವರ್ಣನೆ ಕೇಳಲು ಆಕರ್ಷಕ. ಆದರೆ ಮರು ಮರೀಚಿಕೆಯಂತಿರುವ ಆ ಭೋಗಗಳೆಲ್ಲಿ? ಎಲ್ಲ ರೋಗಗಳ ಉತ್ಪತ್ತಿ ಸ್ಥಾನವಾದ ಶರೀರವೆಲ್ಲಿ? ಆದರೂ ಅವರಿಗೆ ವೈರಾಗ್ಯ ಬರುವುದಿಲ್ಲ. ಎಲ್ಲವನ್ನೂ ಬಲ್ಲವನೂ ಕೂಡ ವಿಷಯಲಾಲಸೆಯ ದೊಡ್ಡ ಬೆಂಕಿಯನ್ನು ಅಲ್ಪಭೋಗಸುಖದಿಂದ ತೃಪ್ತಿಪಡಿಸಲು ಯತ್ನಿಸುತ್ತಾನೆ. ಆ ಅಲ್ಪಭೋಗಸುಖವೂ ದುರ್ಲಭ. ಬಯಸದೆ ಲಭ್ಯವಾಗುವ ದೇಹವೂ ನಾನಾ ರೋಗಗಳ ಗೂಡು! ಎಂದು ಉರಿವ ಬೆಂಕಿಗೆ, ನೀರಿನಂತೆ ತುಪ್ಪಸುರಿದರೆ ಆರಿಸಲಾಗದು ತಾನೆ. ಇದನ್ನು ತಿಳಿದೂ ಕೂಡ ವಿಷಯಾಸಕ್ತರು ಕಾಮತೃಷೆಯನ್ನು ಭೋಗಗಳಿಂದ ಆರಿಸಲು ಯತ್ನಿಸುತ್ತಾರೆ. ಭೋಗಗಳು ದುರ್ಲಭ. ಅವು ಲಭಿಸಿದರೂ ಅವುಗಳಿಂದ ಕಾಮತೃಷೆ ಆರುವುದಿಲ್ಲ. ಇನ್ನಷ್ಟು ಹೆಚ್ಚಾಗಿ ಧಗಧಗಿಸುತ್ತದೆ. ಹೀಗಿದ್ದರೂ ಜನರು ಆಸಕ್ತಿಯನ್ನು ಬಿಡುವುದಿಲ್ಲ, ವೈರಾಗ್ಯ ತಾಳುವುದಿಲ್ಲ. ತಿಳಿದವರೂ ಕೂಡ ಹೀಗೇ ಮಾಡುವುದು ದೊಡ್ಡ ವಿಪರ್ಯಾಸ.**

ಪ್ರಹ್ಲಾದನು ಇದಕ್ಕೆ ಜ್ವಲಂತ ಅಪವಾದ. ತಾಯಿಯ ಗರ್ಭದಲ್ಲಿದ್ದಾಗಲೇ ನಾರದರ ಉಪದೇಶ ಪಡೆದ ಪುಣ್ಯವಂತನಾದ್ದರಿಂದ ಅವನಿಗೆ ಸ್ವತಃ ಶ್ರೀನರಸಿಂಹ ಪ್ರಸನ್ನನಾಗಿ 'ಅಲಭ್ಯವಾದ ಮೋಕ್ಷರೂಪ ಪರಮ ಪುರುಷಾರ್ಥವನ್ನು ಕೇಳು, ಕೊಡುತ್ತೇನೆ' ಎಂದರೆ, ಆತ 'ಬೇಡ, ನಾನು ಕೇಳಲಾರೆ' ಎಂದು ಎಲ್ಲರೂ ತಲೆದೂಗುವಂತೆ ಪರಮ ವೈರಾಗ್ಯವನ್ನೇ ತೋರಿ ಭಗವಂತನಿಗೆ ಅರ್ಪಣೆ ಮಾಡಿದ. ಅವನು ಹೇಳುವ ಮಾತು ಇದು—'ತಿಳಿದವರೂ ಕೂಡ ಕಾಮತೃಷೆಯನ್ನು ತಣಿಸಲು ವ್ಯರ್ಥ ಶ್ರಮವನ್ನೇ ಮಾಡುತ್ತಾರೆ, ವಿರಕ್ತಿ ತಾಳುವುದಿಲ್ಲ! ಇದೆಂಥ ವಿಪರ್ಯಾಸ!' ಎಂದು. ಆದರಿಂದ ವೈರಾಗ್ಯ ಭಾಗ್ಯ ಯಾರಿಗೂ ಸುಮ್ಮನೆ ಬರುವುದಿಲ್ಲ. ಜನ್ಮಾಂತರಗಳಲ್ಲಿ ಬಲು ಪುಣ್ಯ ಮಾಡಿರಬೇಕು.



—೮೧—

**ಒಂದು ಕೊಳ್ಳಿ ಹತ್ತುಮೃಗಗಳ ದಾಳಿ**

**ಜಿಹ್ವೈಕತೋಽಚ್ಯುತ ವಿಕರ್ಷತಿ ಮಾಽವಿತೃಪ್ತಾ**
**ಶಿಶ್ನೋಽನ್ಯತಸ್ತ್ವಗುದರಂ ಶ್ರವಣಂ ಕುತಶ್ಚಿತ್ ।**
**ಘ್ರಾಣೋಽನ್ಯತಶ್ಚಪಲದೃಕ್ ಕ್ವಚ ಕರ್ಮಶಕ್ತಿ-**
**ರ್ಬಹ್ವ್ಯಃ ಸಪತ್ನ್ಯ ಇವ ಗೇಹಪತಿಂ ಲುನಂತಿ ॥** (ಭಾ.೭.೯.೪೦)

**ವಿಷಯೇಷು ಶರೀರೇಷು ಚ ಹೇಯತಾಹೇತುಂ ಅಲ್ಪತ್ವ-ಅತ್ಯಾಯಾಸಸಾಧ್ಯತ್ವರೋಗವತ್ತ್ವಾದಿಕಂ ವ್ಯುತ್ಪಾದ್ಯ ಇಂದ್ರಿಯೇಷ್ವಪಿ ತಮಾಹ ॥ ಜಿಹ್ವೇತಿ ॥ ಹೇ ಅಚ್ಯುತ ಅವಿತೃಪ್ತಾ ಜಿಹ್ವಾ ಏಕತಃ ಏಕಸ್ಮಿನ್ ವಿಷಯೇ ಮಾ ಮಾಂ ದೇಹಪತಿಂ ವಿಕರ್ಷತಿ। ಅನ್ಯತಃ ಅನ್ಯತ್ರ ತ್ವಕ್। ಅಪರತ್ರ ಉದರಂ ಅಶನಾಯಾಯಾಂ। ಶ್ರವಣಂ ಶ್ರೋತ್ರಂ ಕುತಶ್ಚಿತ್ ಕುತ್ರಚಿತ್। ಚಪಲಾ ಚಂಚಲಾ ದೃಕ್ ಚಕ್ಷುಃ ಕ್ವಚ ಕಸ್ಮಿಂಶ್ಚಿತ್। ಕರ್ಮಶಕ್ತಿಃ ಕರ್ಮೇಂದ್ರಿಯಾಣಿ ಕೇಷುಚಿತ್। ಕಥಮಿವ। ಬಹ್ವ್ಯಃ ಸಪತ್ನ್ಯಃ ಗೇಹಪತಿಂ ಸ್ವಪತಿಂ ಲುನಂತಿ ವಿಕರ್ಷಂತಿ ಇವ ತದ್ವತ್ ಇತಿ। ಅನೇನ ಸಪತ್ನೀವತ್ ಇತಸ್ತತೋ ವಿಕರ್ಷಕತ್ವಮೇವ ಹೇತುರಿತ್ಯುಕ್ತಂ ಭವತಿ ॥**

❖❖❖

ಪ್ರಹ್ಲಾದನು ಹೇಳುತ್ತಾನೆ—

ಹೇ ಅಚ್ಯುತ, ವಿಷಯಸುಖ ಉಂಡು ತಣಿಯದಿರುವ ನಾಲಿಗೆ ನನ್ನನ್ನು ಒಂದು ಕಡೆಗೆ ಸೆಳೆಯುವಾಗ ಜನನಾಂಗ ಇನ್ನೊಂದೆಡೆಗೆ ಸೆಳೆಯುತ್ತಿದೆ. ಮೈ ಪ್ರಿಯೆಯ ಆಲಿಂಗನಕ್ಕೆ. ಉದರ ಅನ್ನ ಉಣ್ಣುವುದಕ್ಕೆ. ಕಿವಿ ಮಧುರ ಗಾನಕ್ಕೆ ಮೂಗು ಸುಗಂಧ ಆಘ್ರಾಣಿಸುವುದಕ್ಕೆ ಎಂದು ಎಲ್ಲ ಇಂದ್ರಿಯಗಳೂ ನನ್ನೊಬ್ಬನನ್ನು ಬೇರೆಬೇರೆ ಕಡೆಗೆ ಸೆಳೆಯುತ್ತಿವೆ. ಚಂಚಲವಾದ ಕಣ್ಣುಗಳೂ ಕೈಕಾಲು ಮುಂತಾದ ಕರ್ಮೇಂದ್ರಿಯಗಳೂ ನಿನ್ನೊಬ್ಬನನ್ನು ಬಿಟ್ಟು ಬೇರೆಲ್ಲವನ್ನೂ ತೋರಿಸುತ್ತಿವೆ. ಬಹುಮಂದಿ ಸವತಿಯರು ಒಬ್ಬ ಪತಿಯನ್ನು ಹೇಗೋ ಹಾಗೆ ಎಲ್ಲ ಇಂದ್ರಿಯಗಳೂ ನನ್ನನ್ನು ಕ್ಲೇಶಪಡಿಸುತ್ತಿವೆ.

ಹಿಂದೆ ಹೇಳಿದಂತೆ ವಿಷಯಗಳು ಕಾಮತೃಷೆಯನ್ನು ತಣಿಸಲಾರದೆ

ಕ್ಲೇಶಪಡಿಸುತ್ತವೆ. ಶರೀರ ರೋಗಗಳ ಗೂಡಾಗಿ ವೇದನೆ ನೀಡುತ್ತದೆ. ಅದೇರೀತಿ ಇಂದ್ರಿಯಗಳೂ ಹರಿಯನ್ನು ಮರೆಸಿ ಲೌಕಿಕ ವಿಷಯಗಳ ಬಳಿಗೇ ಸೆಳೆದೊಯ್ದು ಕಾಮಾದಿಗಳಿಗೆ ಬಲಿಪಶುವನ್ನಾಗಿ ಮಾಡಿ ಕ್ಲೇಶಪಡಿಸುವುದರಿಂದ 'ಶರೀರ ಇಂದ್ರಿಯ ವಿಷಯಗಳಲ್ಲಿ ಆಸಕ್ತಿಯನ್ನು ತೊರೆಯಬೇಕು ವೈರಾಗ್ಯ ಸಂಪಾದಿಸ ಬೇಕು. ಆಗಲೆ ಹರಿಯಾರಾಧನೆ ಶಕ್ಯವಾಗುವುದು.



—೮೨—

**ಬಲಿಯ ವಚನ –'ಆರು ಕಾಯುವರಿಲ್ಲ ಸೇರಿದೆ ನಿನಗಯ್ಯ !'**

**ಕಿಮಾತ್ಮನಾ ತೇನ ಜಹಾತಿ ಯೋ ಮುದಂ**
**ಕಿಂ ರಿಕ್ಥಹಾರ್ಯೈಃ ಸ್ವಜನಾಖ್ಯದಸ್ಯುಭಿಃ ।**
**ಕಿಂ ಜಾಯಯಾ ಸಂಸೃತಿಹೇತು ಭೂತಯಾ**
**ಮರ್ತ್ಯಸ್ಯ ಗೇಹೈರ್ಯದಿಹಾಯುಷೋ ವ್ಯಯಃ ॥** (ಭಾ.೮.೨೧.೯)

ಇದಾನೀಂ ವಾಮನಾಖ್ಯಸ್ಯ ಹರೇಃ ಅನುಗ್ರಹಸ್ಯ ಮುಖ್ಯಂ ಪಾತ್ರಂ ಅತ ಏವ ಅದ್ಯಾಪಿ ಯಸ್ಯ ದ್ವಾರಿ ಗದಾಪಾಣಿಃ ಸ್ವಯಮೇವ ಅವತಿಷ್ಠತೇ ತಾದೃಶೋಽಪಿ ಬಲಿಃ ಮಹಾಭಾಗವತೋಽಪಿ ವೈರಾಗ್ಯಮೇವ ಅವಲಂಬತ ಇತ್ಯಾಶಯೇನ ತದ್ವಾಕ್ಯಮೇವೋದಾಹರತಿ ॥ ಕಿಮಿತಿ ॥ ಯಃ ದೇಹಸ್ವಾಮೀ ಮುದಂ ಸುಖಮುದ್ದಿಶ್ಯ ಪ್ರಯತಮಾನಃ ಯೇನ ಪತತಾ ದೇಹೇನ ಮುದಂ ಉದ್ದೇಶ್ಯಾಂ ಜಹಾತಿ ನ ಪ್ರಾಪ್ನೋತಿ । ತೇನ ಕೇವಲಂ ನಶ್ವರೇಣ ತಸ್ಯ ಪುಂಸಃ ಕಿಂ ಪ್ರಯೋಜನಂ। ತತ್ಸಂಬಂಧಿಷ್ವಪಿ ಅಧಿಕಯಾ ಸಂಸೃತಿಹೇತುಭೂತಯಾ ಜಾಯಯಾಪಿ ಕಿಂ ಪ್ರಯೋಜನಂ। ರಿಕ್ಥಂ ಪಿತ್ರಾರ್ಜಿತಂ ಧನಂ ಹರಂತಿ ಏತ್ಯೈಃ ಪುತ್ರಾದಿಸ್ವಜನಾಖ್ಯಚೋರೈರಪಿ ಕಿಂ ಪ್ರಯೋಜನಂ। ತಥಾ ಮರ್ತ್ಯಸ್ಯ ಅಲ್ಪಾಯುಷಃ ಪುಂಸಃ ಇಹ ಅಸ್ಮಿನ್ನೇವಾಯುಷಿ ಯೈಃ ಆಯುಷೋ ವ್ಯಯಃ ತೈಃ ಗೇಹೈಃ ಕಿಂ ಪ್ರಯೋಜನಂ । ಅತೋಽಯಮತಿಹೇಯ ಇತಿ ॥



ಹಿರಣ್ಯಕಶಿಪು ತನಗೆ ನಾನಾಬಗೆಯಲ್ಲಿ ಹಿಂಸೆ ಮಾಡುತ್ತಿದ್ದಾಗ ಪ್ರಹ್ಲಾದ ಆಲೋಚಿಸಿದನಂತೆ 'ಕೊನೆಗೆ ಮರಣಕಾಲದಲ್ಲಿ ನನ್ನನ್ನು ಬಿಟ್ಟು ಹೋಗುವ ಈ

**ದೇಹದಿಂದ ನನಗೇನು? ಪಿತ್ರಾರ್ಜಿತವೆಂದು ನನ್ನ ಆಸ್ತಿಯನ್ನು ದೋಚುವ ನನ್ನ ಪುತ್ರರಿಂದೇನು? ಸಂಪತ್ತನ್ನು ಅಪಹರಿಸಲು ಬಂಧುರೂಪದಿಂದ ಬರುವ ಕಳ್ಳರಿಂದೇನು ಬಂಧಕಳಾಗಿ ಸಂಸಾರಕ್ಕೆ ಕಾರಣಳಾಗುವ ಹೆಂಡತಿಯಿಂದೇನು? ಮನೆ ಮಠಗಳಿಂದೇನು? ಇವೆಲ್ಲ ನನ್ನವೆಂದು ಆಸಕ್ತನಾಗುವ ಮಾನವನು ವ್ಯರ್ಥವಾಗಿ ಆಯುಷ್ಯವನ್ನು ಕಳೆದುಕೊಳ್ಳುತ್ತಾನಷ್ಟೆ'.**

ಯದ್ಯಪಿ ಇದು ವಾಮನನ ಮುಂದೆ ಬಲಿರಾಜನಾಡಿದ ಮಾತು. ಹಾಗೇ ಅವಧೂತರು ಹೇಳಿದ್ದಾರೆ. ಆದರೆ ಇದರ ಮುಂದಿನ ಶ್ಲೋಕದಲ್ಲಿ 'ಅಥಾ ಹಮಪ್ಯಾತ್ಮರಿಪೋಸ್ತವಾಂತಿಕಂ' 'ನಾನೂ ಕೂಡ ಬಲಾತ್ಕಾರವಾಗಿ ಶತ್ರುವಾದ ನಿನ್ನ ಬಳಿಗೇ ಬಂದು ಸೇರುವಂತೆ ದೈವ ನನ್ನನ್ನು ಪ್ರೇರಿಸಿತು' ಎಂದು ಬಲಿರಾಜ ಹೇಳುತ್ತಿದ್ದಾನೆ— 'ಪ್ರಹ್ಲಾದ ಮಾತ್ರವಲ್ಲ ನಾನೂ ಕೂಡ ನಿನ್ನ ಬಳಿ ಭಕ್ತನಾಗೇ ಇದ್ದೇನೆ' ಮತ್ತು 'ಇತ್ಥಂ ವಿನಿಶ್ಚಿತ್ಯ ಪಿತಾಮಹೋ ಮಹಾನ್' 'ಹೀಗೆ ಆಲೋಚಿಸಿ ನಮ್ಮ ತಾತ ಪ್ರಹ್ಲಾದನು ನಿನ್ನನ್ನು ಆಶ್ರಯಿಸಿದನು' ಎಂದೂ ಬಲಿರಾಜ ಹೇಳುತ್ತಾನೆ.

'ಆರೂ ಕಾಯುವರಿಲ್ಲ ಸೇರಿದೆ ನಿನಗಯ್ಯಾ' ಎಂದು ಇದನ್ನೇ ರಾಯರು ಹೇಳಿದರು.

ಪ್ರಕೃತ ಶ್ಲೋಕ 'ಕಿಮಾತ್ಮನಾ ತೇನ?' ಎಂಬುದು, ಪ್ರಹ್ಲಾದನ ಆಲೋಚನೆ ಹೀಗಿತ್ತೆಂದು ಹೇಳುತ್ತದೆ. ಪ್ರಹ್ಲಾದನ ಆಲೋಚನೆಯನ್ನು ಬಲಿರಾಜ ಹೇಳು ತ್ತಿದ್ದಾನೆ ಎಂದು ತಿಳಿಯಬೇಕು. 'ಅಹಮಪಿ' 'ನಾನೂ ಕೂಡ' ಎಂದು ಅವನು ಹೇಳುತ್ತಿರುವುದರಿಂದ ಅದು ಬಲಿರಾಜನ ಆಲೋಚನೆಯೂ ಹೌದು. ಸಂಸಾರಸುಖ ಅತಿ ಹೇಯ, ಅದರಲ್ಲಿ ಆಸಕ್ತಿ ತೋರಬಾರದು, ವೈರಾಗ್ಯವನ್ನೇ ಅವಲಂಬಿಸಬೇಕು ಎಂದು.

ದ್ವಾರದಲ್ಲಿ ಗದಾಪಾಣಿಯಾಗಿ ನಿಂತ ವಾಮನಮೂರ್ತಿಯನ್ನು ಸದಾ ದರ್ಶನ ಮಾಡುವ ಭಾಗ್ಯಶಾಲಿ, ಹರಿಯ ಪರಮಾನುಗ್ರಹಕ್ಕೆ ಪಾತ್ರನಾದವನು, ಬಲಿರಾಜ ಕೂಡ ಪ್ರಹ್ಲಾದನಂತೆಯೇ ವೈರಾಗ್ಯವನ್ನಾಶ್ರಯಿಸಿರುವನೆಂದು ತಿಳಿಯಬೇಕು.



—೮೩—

**ದೈವವೇ ಬಲಿಯನ್ನು ಹರಿಪಾದದ ಬಳಿ ತಂದು ಸೇರಿಸಿತು**

**ಅಥಾಹಮಪ್ಯಾತ್ಮರಿಪೋಸ್ತವಾಂತಿಕಂ**
**ದೈವೇನ ನೀತಃ ಪ್ರಸಭಂ ತ್ಯಾಜಿತ ಶ್ರೀಃ ।**
**ಇದಂ ಕೃತಾಂತಾಂತಿಕವರ್ತಿ ಜೀವಿತಂ**
**ಯಯಾಽಧ್ರುವಂ ಸ್ತಬ್ಧಮತಿರ್ನ ಬುಧ್ಯತೇ ॥**

(ಭಾ.೮.೨೧.೧೧)

**ಯಸ್ಮಾದೇವಂ ಸಂಸಾರೋಽತಿಹೇಯಃ ತಸ್ಮಾತ್ ಮಯ್ಯೈವ ತ್ಯಾಜ್ಯಃ ತತ್ರ ಭವಾನೇವ ಐಶ್ವರ್ಯಂ ಗೃಹೀತವಾನ್ ತತ್ಕೇವಲಂ ಮಯ್ಯನುಗ್ರಹ ಏವೇತ್ಯಾಶಯೇನಾಹ ॥ ಅಥೇತಿ ॥ ಇದಾನೀಂ ಅಹಂ ಆತ್ಮನಃ ರಿಪೋಃ ತವ ಅಂತಿಕಂ ದೈವೇನ ತ್ಯಾಜಿತಾ ಶ್ರೀರ್ಯಸ್ಯ ತಾದೃಶೋ ಭೂತ್ವಾ ಪ್ರಸಭಂ ಬಲಾತ್ಕೃತ್ಯ ನೀತಃ ಪ್ರಾಪಿತಃ ಏತದ್ಯುಕ್ತಮೇವೇತಿ ಹೃದಯಂ । ಕುತಃ । ಯಯಾ ಶ್ರಿಯಾ ಮೋಹಿತಮತಿಃ ಇದಂ ಜೀವಿತಂ ಯಮಸ್ಯ ಸಮೀಪ ಏವ ವಿದ್ಯಮಾನಂ ಅಧ್ರುವಂ ನ ಜಾನಾತಿ ತತ ಇತಿ ॥**

❖❖❖

**'ಹೇ ಹರಿ, ಬಳಿಕ ನಾನೂ ಕೂಡ ದೈವಾತ್ ನನ್ನ ಶತ್ರುವಾದ ನಿನ್ನನ್ನೇ ಆಶ್ರಯಿಸುವಂತಾಯಿತು. ನಾನು ಸ್ವತಃ ಐಶ್ವರ್ಯವನ್ನು ತ್ಯಜಿಸಬೇಕಿತ್ತು. ನೀನೆ ಕಸಿದು ನನ್ನಮೇಲೆ ಅನುಗ್ರಹಗೈದಿರುವೆ. ದೈವವೇ ನನ್ನ ಸಂಪತ್ತನ್ನು ಬಲಾತ್ಕಾರ ವಾಗಿ ಕಸಿದುಕೊಂಡಿತು. ಅದು ಯುಕ್ತವೆ. ಸಂಪತ್ತು ಜನರ ಬುದ್ಧಿ ವಿವೇಕವನ್ನು ಹಾಳು ಮಾಡುತ್ತದೆ. ಅದರಿಂದ, ಜನರು 'ತಮ್ಮ ಬದುಕು ಯಾವಾಗಲೂ ಮೃತ್ಯುವಿನ ವಶದಲ್ಲಿಯೇ ಇರುವಂಥದ್ದು, ಅಶಾಶ್ವತ ಎಂದು ತಿಳಿಯುವುದೇ ಇಲ್ಲ. ನಿನ್ನನ್ನು ಶರಣು ಹೊಂದುವುದೇ ಇಲ್ಲ'.**

ಪ್ರಹ್ಲಾದನೂ ಕೂಡ ಇದೇ ಮಾತನ್ನು ಹೇಳುತ್ತಾನೆ, 'ಶ್ರೀಹರಿ, ಬಲಿಯ ಸಂಪತ್ತನ್ನು ನೀನು ಕಸಿದುಕೊಂಡಿದ್ದು ಅವನಿಗೆ ನೀನು ಮಾಡಿದ ಪರಮಾನುಗ್ರಹ. ಅದರಿಂದ ಅವನಿಗೆ ಈಗ ಪಶ್ಚಾತ್ತಾಪವಾಗಿದೆ' ಎನ್ನುತ್ತಾನೆ. ಸಾಧ್ವಿ ವಿಂಧ್ಯಾವಳಿಯೂ 'ಪ್ರಭು, ನೀನು ಬಲಿಯ ಅಹಂಕಾರವನ್ನು

ಇಳಿಸಿರುವೆ. ಅದೂ ಪೂರ್ತಿ ಇಳಿದಿದೆ. ಇದು ನಿನ್ನ ಅನುಗ್ರಹ. ಇನ್ನೂ ಅವನಿಗೆ ಅನುಗ್ರಹ ಮಾಡು' ಎನ್ನುತ್ತಾಳೆ. ಬ್ರಹ್ಮದೇವರೂ 'ನೀನು ಬಲಿಯ ಸರ್ವಸ್ವ ಅಪಹಾರ ಮಾಡಿದ್ದಾಯಿತು. ಇನ್ನು ಅವನಿಗೆ ಅನುಗ್ರಹ ಮಾಡು' ಎಂದರು.

ವಸ್ತುತಃ ಬಲಿಯಲ್ಲಿ ಬಲಿ ಎಂಬ ಒಬ್ಬ ಅಸುರನ ಆವೇಶವಾಗಿತ್ತು. ಅದರಿಂದ ಆತ ಸ್ವರ್ಗವನ್ನು ಆಕ್ರಮಿಸಿದ್ದ. ಅದನ್ನು ಹರಿ ಈಗ ಕಳೆದು ಪರಮಾನುಗ್ರಹ ಮಾಡಿದ್ದಾನೆ.

ಅಸುರಾವೇಶವು ಭೂತಾವೇಶದಂತೆ. ಒಂದು ರೋಗ, ಜನರು ಅದನ್ನು ತಾವೇ ಕಳೆದುಕೊಳ್ಳಲಾರರು. ಸರಿಯಾದ ಚಿಕಿತ್ಸೆ ಮಾಡುವವರು ಬೇಕು. ಆಯುರ್ವೇದದಲ್ಲಿ ಹೇಳಿದ್ದಾರೆ—

ಕಶಾಭಿಸ್ತಾಡಯಿತ್ವಾ ವಾ ಸುಬದ್ಧಂ ವಿಜನೇ ಗೃಹೇ ।
ರುಂಧ್ಯಾಚ್ಚೇತೋ ಹಿ ವಿಭ್ರಾಂತಂ ವ್ರಜತ್ಯಸ್ಯ ತಥಾ ಶಮಂ ॥
(ಚರಕಚಿಕಿತ್ಸಾ ೯.೮೧)

'ಚಾಟಿಯೇಟು ಕೊಡಬೇಕು ಅಥವಾ ನಿರ್ಜನಗೃಹದಲ್ಲಿ ಬಂಧಿಸಿಡಬೇಕು. ಆಗ ಬುದ್ಧಿಭ್ರಮ ನಿರಾಸವಾಗುವುದು' ಎಂದು. ವಾಮನನೂ ಬಲಿಯನ್ನು ಇದೇ ಚಿಕಿತ್ಸೆಗೆ ಒಳಪಡಿಸಿದ್ದಾನೆ. ಅವನ ಶರೀರ ಒಂದನ್ನು ಮಾತ್ರ ಅವನಿಗೆ ಉಳಿಸಿ ಮೂಲೋಕ ಸಾಮ್ರಾಜ್ಯವನ್ನೇ ಅಪಹರಿಸಿದ್ದಾನೆ. ಅವನ ಶರೀರವನ್ನು ಕೂಡ ವರುಣಪಾಶದಿಂದ ಬಂಧಿಸಿ ನಿರ್ಜನವಾದ ಪರ್ವತ ಗುಹೆಯೊಳಗಿನ ಕಾರಾಗೃಹದಲ್ಲಿ ಬಂಧನದಲ್ಲಿರಿಸಿದ್ದಾನೆ— 'ಬಲಿಮಪಿ ಬಿಲವಾಸಂ ಅಕೃತ' (ಭ್ರಮರಗೀತೆ) ಬಲಿಯನ್ನು ಬಿಲವಾಸಿಯಾಗಿ ಮಾಡಿದ—

'ಅಪಹೃತ ಶರೀರಾವಶೇಷಿತ ಲೋಕತ್ರಯೋ ವರುಣ
ಪಾಶೈಶ್ಚ ಬದ್ಧೋ ಗಿರಿದರ್ಯಾಂ ಚಾಪವಿದ್ಧಃ ।' (ಭಾ.೫.೨೩.೨೪)

'ಬಿಟ್ಟುಹೋದ ಅಸುರಾವೇಶ ತಿರುಗಿಬಾರದಂತೆ ಮುಂದೆ ಸುತಲ ಲೋಕದಲ್ಲಿ ಅರಮನೆಯೊಳಗೇ ಇರಿಸಿ ಬಾಗಿಲು ಕಾಯುತ್ತೇನೆ. ದಾನವದೈತ್ಯರ ಸಂಗದಿಂದ ಪುನಃ ನಿನಗೆ ಅಸುರಾವೇಶ ಬಾರದಂತೆ ನೋಡಿಕೊಳ್ಳುತ್ತೇನೆ. ಒಂದುವೇಳೆ ಬಂದರೂ ನಿನಗೆ ನನ್ನ ದರ್ಶನ ನೀಡುವ ಮೂಲಕ ಅದನ್ನು ಕಳೆಯುತ್ತೇನೆ ಎನ್ನುತ್ತಾನೆ ವಾಮನ.

ತತ್ರದಾನವ ದೈತ್ಯಾನಾಂ ಸಂಗಾತ್ ತೇ ಭಾವ ಆಸುರಃ ।
ದೃಷ್ಟ್ವಾಮದನುಭಾವಂ ವೈ ಸದ್ಯಃ ಕುಂಠೋ ವಿನಂಕ್ಷ್ಯತಿ ॥
(ಭಾ.೮.೨೧.೩೬)

ಬಲಿಗೆ ಅಸುರಾವೇಶದಿಂದಾಗುವ ಅವಾಂತರವೇನೆಂಬುದನ್ನು ಶ್ರೀಮದಾಚಾರ್ಯರು ಭಾಗವತತಾತ್ಪರ್ಯದಲ್ಲಿ ಹೇಳಿದ್ದಾರೆ—

ಬಲಿರಪ್ಯಸುರಾವೇಶಾತ್ ಸ್ತುವನ್ನಪಿ ಜನಾರ್ದನಂ ।
ಆಕ್ಷಿಪತ್ಯಂತರಾ ಕ್ವಾಪಿ'

ಹರಿಗೆ ಮೂಲೋಕವನ್ನು ನೀಡುವ ಬಲುದೊಡ್ಡ 'ಬಲಿದಾನ' ಮಾಡುವಾಗಲೂ ಬಲಿಯು ಹರಿಯನ್ನು ಆಕ್ಷೇಪಿಸುತ್ತಾನೆ! 'ಮೂಲೋಕದ ಅಧಿಪತಿ ನಾನು! ನನ್ನಲ್ಲಿ ಕೇವಲ ಮೂರು ಹೆಜ್ಜೆಯಷ್ಟು ನೆಲವನ್ನು ನೀಡೆನ್ನುವಿ! ನಿನಗೆ ಬುದ್ಧಿ ಇಲ್ಲ!' ಎಂದು. 'ಇದು ನನಗೆ ಮಾಡುವ ಅವಮಾನ' ಎಂದು.

ಬುದ್ಧಿ ಇಲ್ಲದವನು ಬಲಿಯೇ. ಮೂರು ಹೆಜ್ಜೆ ಭೂಮಿಯನ್ನೂ ಕೂಡ ಕೊಡಲಾರದವನು ತಾನೆಂದು ತಾನೇ ತಿಳಿದಿರಲಿಲ್ಲ. ಶುಕ್ರಾಚಾರ್ಯರು ಅದನ್ನು ಸ್ಪಷ್ಟವಾಗಿ ಹೇಳಿ ಎಚ್ಚರಿಸಿದ್ದರೂ ಆತ ಎಚ್ಚೆತ್ತುಕೊಳ್ಳಲಿಲ್ಲ. ಅನಿಮಿತ್ತ ಬಂಧುವಾದ ಹರಿಯನ್ನು 'ಶತ್ರು' ಎನ್ನುತ್ತಾನೆ.

'ಹತ್ವಾ ಮೈನಾಂ ಹರೇದ್ ಯುದ್ಧೇ ಶಯೀತ ನಿಹತೋ ಮಯಾ'

'ಅವನು ನನ್ನನ್ನು ಕೊಂದೇ ಭೂಮಿಯನ್ನು ಅಪಹರಿಸಲಿ ಅಥವಾ ತಾನೆ ಸಾಯಲಿ!'

'ಗುರುಗಳೇ ನೀವು ಹೇಳುವಂತೆ ಹರಿ ನನ್ನನ್ನು ಮೋಸದಿಂದ ಒಂದುವೇಳೆ ಬಂಧಿಸಿದರೂ ಸರಿಯೆ, ನನಗೆ ಹೆದರಿ ಬ್ರಾಹ್ಮಣ ವೇಷದಿಂದ ಬಂದಿರುವ ನನ್ನ ಈ ಶತ್ರುವನ್ನು ನಾನು ಹಿಂಸಿಸಲಾರೆ!' ಎನ್ನುತ್ತಾನೆ—

'ತಥಾಪ್ಯೇನಂ ನ ಹಿಂಸಿಷ್ಯೇ ಭೀತಂ ಬ್ರಹ್ಮತನುಂ ರಿಪುಂ'

ಶ್ರೀಹರಿಯಾದರೂ ಏಕೆ ಬಲಿಯನ್ನು ಕೊಲ್ಲದೆ ಬಿಟ್ಟು, ವಂಚಿಸಿದ? ಎಂದರೆ, ಅದು ಪ್ರೀತಿಯಿಂದ. ಭಕ್ತಪ್ರಹ್ಲಾದನ ಪ್ರೀತಿಯ ಮೊಮ್ಮಗನೆಂದು ಅವನಲ್ಲಿ ಪ್ರೀತಿ.

'ನಾಯಾಂಚಯಾಹಂ ಪ್ರತಿಹನ್ಮಿ ತಂ ಬಲಿಂ'

'ಬಲಿ ಮೂಲೋಕ ಸಾಮ್ರಾಜ್ಯವನ್ನು ದೇವೇಂದ್ರನಿಂದ ಕಸಿದು ಮಹಾ ಅಪರಾಧ ಗೈದಾಗ ಅವನನ್ನು ಕೊಲ್ಲದೆ, ಯಾಚನೆ ಮಾಡಿಯೇ ಉಪಾಯದಿಂದ ನಿಗ್ರಹಿಸುತ್ತೇನೆ' ಎಂದು ನರಸಿಂಹ ಪ್ರಹ್ಲಾದನಿಗೆ ವರ ನೀಡಿದ್ದ.

ಕೊನೆಯಲ್ಲಿ ಇದೆಲ್ಲವನ್ನೂ ಆಲೋಚಿಸಿ ಬಲಿ ಹರಿಯ ಅನುಗ್ರಹವನ್ನು ಮುಕ್ತಕಂಠದಿಂದ ಹೊಗಳುತ್ತಾನೆ, 'ವಿಷಯಾಸೆಯನ್ನು ಸ್ವತಃ ಬಿಡಿಸಿಕೊಳ್ಳಲಾಗದ ನಮ್ಮಂಥವರು ಯಾರು ತಾನೆ ಭಗವಂತನ ಈ ರೀತಿಯ ಅನುಗ್ರಹವನ್ನು ಉಪೇಕ್ಷೆ ಮಾಡಬಲ್ಲರು?' ಎನ್ನುತ್ತಾನೆ—

'ಅಮೃದಿತ ಕಷಾಯಃ ಕೋವಾಽಸ್ಮದ್‌ವಿಧಃ
ಪರಿಹೀನ ಭಗವದನುಗ್ರಹಃ?

(ಭಾ.೫.೨೩.೨೬)

'ಸಂಪತ್ತನ್ನು ಹರಿ ಕಸಿದುಕೊಂಡಿದ್ದು ಪರಮಾನುಗ್ರಹ' ಎನ್ನುತ್ತ, ಸಂಪತ್ತನ್ನು ಎಷ್ಟು ದ್ವೇಷಿಸುತ್ತಾನೆ, ಎಷ್ಟು ವಿರಕ್ತನಾಗಿದ್ದಾನೆ, ಬಲಿ! ಎಂದು ನಾವು ಊಹಿಸಿಕೊಳ್ಳಬೇಕು.



—೮೪—

**ಅಂಬರೀಷನ ವೈರಾಗ್ಯ-'ಸಂಪತ್ತು ಎಲ್ಲವೂ ಹರಿಪೂಜೆಗಾಗಿ, ನನಗಾಗಿ ಅಲ್ಲ'**

**ಗೃಹೇಷು ದಾರೇಷು ಸುತೇಷು ಬಂಧುಷು**
**ದ್ವಿಪೋತ್ತಮಸ್ಯಂದನವಾಜಿಪತ್ತಿಷು ।**
**ಅಕ್ಷಯ್ಯರತ್ನಾಭರಣಾಂಬರಾದಿ**
**ಷ್ವನಂತಕೋಶೇಷ್ವಕರೋದಸನ್ಮತಿಂ ॥** (ಭಾ.೯.೬.೧೫)

**ಯಸ್ಯ ಭಕ್ತ್ಯಾ ಪ್ರೀತೋ ಭಗವಾನ್ ಹರಿಃ ಸುದರ್ಶನಂ ಸ್ವೀಯಂ ಆಯುಧಮೇವ ತದ್ರಕ್ಷಣಾಯ ಅಸ್ಮೈ ದದೌ ॥ ಯಥಾಹುಃ—**

''ತಸ್ಮಾ ಅದಾದ್ಧರಿಶ್ಚಕ್ರಂ ಪ್ರತ್ಯನೀಕಭಯಾಪಹಂ ।
ಏಕಾಂತಭಕ್ತಿಯೋಗೇನ ಪ್ರೀತೋ ಭೂತ್ವಾಽಭಿರಕ್ಷಣಮಿ''ತಿ ॥

**ತಾದೃಶೋಽಪಿ ಮಹಾಭಾಗವತಃ ಅಂಬರೀಷೋ ನಾಮ ರಾಜಾಪಿ ವಿರಾಗವೃಕ್ಷಚ್ಛಾಯಾಮೇವ ಸಮಾಶ್ರಿತ ಇತಿ ತತ್ತದ್ವೃತ್ತಿಪ್ರಕಾರಂ ಕಥಯತಿ । ಗೃಹೇಷ್ವಿತಿ ॥ ಸ್ಯಂದನಾ ರಥಾಃ । ಪತ್ತಯಃ ಪದಾತಯಃ । ಅಕ್ಷಯ್ಯಾಣಿ ರತ್ನಾದೀನಿ ಯೇಷು ತೇಷು । ಅತ ಏವ ಅನಂತೇಷು ಬಹುವ್ಯಯೇಽಪಿ ಅಕ್ಷೀಯಮಾಣೇಷು ಅಸತ್ ನಶ್ವರತ್ವಾತ್ ಹೇಯಮಿತಿ ಮತಿಂ ಅಕರೋದಿತಿ ॥**



**ಅಂಬರೀಷ ರಾಜನ ವೈರಾಗ್ಯ—ಮನೆ ಹೆಂಡತಿ ಮಕ್ಕಳು ಬಂಧುಗಳು, ಉತ್ತಮವಾದ ಆನೆ ರಥ ಕುದುರೆ ಪದಾತಿಗಳು ಅಳಿಯದ ರತ್ನಾಭರಣ ಆಯುಧಗಳು ಮುಂತಾದವು, ಅಪರಿಮಿತವಾದ ಬೊಕ್ಕಸಗಳು ಇವೆಲ್ಲವು ಗಳಲ್ಲಿಯೂ ಅಂಬರೀಷರಾಜ 'ತನ್ನ ಸುಖಕ್ಕಾಗಿ ಎಂದರೆ ಅನರ್ಥಕರ'ವೆಂಬ ಭಾವನೆಯನ್ನೇ ಇರಿಸಿ ಕೊಂಡಿದ್ದ.**

ಅವನ ಏಕಾಂತ ಭಕ್ತಿಗೆ ಒಲಿದು ಶ್ರೀಹರಿ ಅವನ ರಕ್ಷಣೆಗಾಗಿ ಶತ್ರುಭಯಂಕರವಾದ ಸುದರ್ಶನ ಚಕ್ರವನ್ನು ನೀಡಿದ—

ತಸ್ಮಾ ಅದಾದ್ಧರಿಶ್ಚಕ್ರಂ ಪ್ರತ್ಯನೀಕ ಭಯಾವಹಂ ।
ಏಕಾಂತಭಕ್ತಿಯೋಗೇನ ಪ್ರೀತೋ ಭೂತ್ವಾಽಭಿರಕ್ಷಣಂ ॥ (ಭಾ.೯.೬.೧೬)

ಶ್ರೀಹರಿಯ ಲಕ್ಷಣವಾದ ಚಕ್ರವು ಹರಿಯ ಸ್ವರೂಪಭೂತವಾಗಿದ್ದು ಅವನ ಸುದರ್ಶನಚಕ್ರದಲ್ಲಿ ಚಕ್ರರೂಪದಿಂದ ಇದೆ, ಬ್ರಹ್ಮನಲ್ಲಿ ಬ್ರಹ್ಮರೂಪದಿಂದ ಶಿವನಲ್ಲಿ ಶಿವರೂಪದಿಂದ ಹರಿ ಇರುವಂತೆ. ಏಕಾಂತಭಕ್ತನು ಹರಿಯನ್ನು ಹೊರತು ಬೇರೇನನ್ನೂ ಬಯಸುವುದಿಲ್ಲ. ತನ್ನ ಸ್ವರೂಪಭೂತ ಮೋಕ್ಷಸುಖ ವನ್ನೂ ಬಯಸುವುದಿಲ್ಲ. ಅದರಿಂದ ಶ್ರೀಹರಿ ಏಕಾಂತಭಕ್ತನಾದ ಅಂಬರೀಷನಿಗೆ ತನ್ನ ಸ್ವರೂಪಭೂತವಾದ ಚಕ್ರವನ್ನೇ ರಕ್ಷಣೆಗಾಗಿ ಕೊಟ್ಟಿದ್ದ.

ಒಮ್ಮೆ ಒಂದು ದ್ವಾದಶೀವ್ರತಪಾರಣಕ್ಕೆ ಅವನು ತೊಡಗಿದ್ದಾಗ ದುರ್ವಾಸರು ಆಗಮಿಸಿದರು. ರಾಜ ಅವರನ್ನು ಭೋಜನಕ್ಕೆ ಯಾಚಿಸಿದ. ಅವರು ಒಪ್ಪಿ ಯಮುನಾಸ್ನಾನಕ್ಕೆ ಹೋದರು. ದ್ವಾದಶೀತಿಥಿ ಅರ್ಧಮುಹೂರ್ತ ಮಾತ್ರವಿತ್ತು. ಅದು ಮುಗಿಯುವುದರೊಳಗೆ ಪಾರಣ ಮಾಡದಿದ್ದರೆ ದೋಷವೆಂದುಕೊಂಡು ಆತ ಜಲಪಾರಣ ಮಾಡಿದ. ಮುನಿ ಸ್ನಾನಾಹ್ನಿಕಗಳನ್ನು

ಮುಗಿಸಿಬಂದು, ರಾಜನು ಅಷ್ಟರಲ್ಲಿ ಜಲಪಾರಣ ಮಾಡಿದ್ದನೆಂದು ಸಿಟ್ಟಾಗಿ ಕೃತ್ರಿಮ ದೇವತೆಯೊಂದನ್ನು ಅವನ ವಧೆಗೆ ಕಳಿಸಿದ. ಆದರೆ ವಿಷ್ಣುಚಕ್ರ ಆ ಕೃತ್ರಿಮದೇವತೆಯನ್ನು ಸುಟ್ಟಿತು. ಮುನಿಯನ್ನೂ ಸುಡಲು ತೊಡಗಿತು. ಮುನಿ ಭಯದಿಂದ ಹದಿನಾಲ್ಕು ಲೋಕಗಳಲ್ಲಿ ಎಲ್ಲೆಡೆ ಧಾವಿಸಿದರೂ ಬ್ರಹ್ಮರುದ್ರ ರನ್ನೂ, ಕೊನೆಗೆ ವಿಷ್ಣುವನ್ನು ಬೇಡಿದರೂ ರಕ್ಷಣೆ ಸಿಗದಿದ್ದಾಗ ತಿರುಗಿ ರಾಜನಿಗೇ ಶರಣಾಗಿ ಚಕ್ರಜ್ವಾಲೆಯ ತಾಪದಿಂದ ಮುಕ್ತರಾದರು.

ಅಂಬರೀಷ ರಾಜ ಮಹಾವಿಷ್ಣು ಭಕ್ತನಾಗಿದ್ದರೂ ಬ್ರಹ್ಮಾದಿ ದೇವತೆಗಳಿಗೆ ಹೋಲಿಸಿದರೆ ಅವರ ಕೋಟಿ ಕೋಟಿ ಅಂಶದ ಲೇಶಕ್ಕೂ ಆತ ಸಮನಲ್ಲ. ಆದರೂ ಪ್ರಹ್ಲಾದನನ್ನು ನರಸಿಂಹ ರಮಾಬ್ರಹ್ಮಾದಿಗಳಿಗಿಂತಲೂ ಹೆಚ್ಚು ಪ್ರಿಯನೆಂದು ತೋರಿದಂತೆ ಅಂಬರೀಷನ ವಿಷಯದಲ್ಲಿ ಹಾಗೆ ತೋರಿಕೊಂಡ. ಇದು 'ಹರಿಯಲ್ಲಿ ಏಕಾಂತಭಕ್ತಿ' ಎಂದರೆ ಹೀಗಿರಬೇಕೆಂದು ಲೋಕಕ್ಕೆ ತಿಳಿಸುವುದಕ್ಕಾಗಿ.

ಸರ್ವೇ ವೇದಾಸ್ತು ದೇವಾರ್ಥಾಃ ದೇವಾ ನಾರಾಯಣಾರ್ಥಕಾಃ
ನಾರಾಯಣಸ್ತು ಮೋಕ್ಷಾರ್ಥೇ ಮೋಕ್ಷೋ ನಾನ್ಯಾರ್ಥ ಇಷ್ಯತೇ
ಏವಂ ಮಧ್ಯಮಭಕ್ತಾನಾಂ ಏಕಾಂತಾನಾಂ ನ ಕಸ್ಯಚಿತ್
ಅರ್ಥೇ ನಾರಾಯಣೋ ದೇವಃ ಸರ್ವಮನ್ಯತ್ ತದರ್ಥಕಂ

ವೇದಗಳೆಲ್ಲವೂ ವೇದವೇದ್ಯರಾದ ತತ್ವಾಭಿಮಾನಿ ದೇವತೆಗಳನ್ನು ತಿಳಿಯುವುದಕ್ಕಾಗಿ. ತತ್ವಾಭಿಮಾನಿ ದೇವತೆಗಳನ್ನು ತಿಳಿಯುವುದು ಅವರು ಆಂತರ ಬಾಹ್ಯ ಎಂದು ಎರಡು ರೀತಿಯಿಂದ ಗುರುಗಳಾಗಿರುವುದರಿಂದ ಅವರನ್ನು ಆರಾಧಿಸಿ ಅವರಿಂದ ನಾರಾಯಣನ ಬಗ್ಗೆ ಜ್ಞಾನ ಭಕ್ತಿ ವೈರಾಗ್ಯಗಳನ್ನು ಸಂಪಾದಿಸುವುದಕ್ಕಾಗಿ. ನಾರಾಯಣನಲ್ಲಿ ಜ್ಞಾನಾದಿ ಸಂಪಾದಿಸುವುದು ಅವನಿಂದ ಮೋಕ್ಷಪಡೆಯುವುದಕ್ಕಾಗಿ. ಇದು ಮಧ್ಯಮ ಭಕ್ತರ ಸಾಧನೆ. ಉತ್ತಮ ಭಕ್ತರು ನಾರಾಯಣನನ್ನು ಮೋಕ್ಷಕ್ಕಾಗಿಯೂ ಭಜಿಸುವುದಿಲ್ಲ. ಮೋಕ್ಷವೂ ಅವರಿಗೆ ಮುಕ್ತನಿಯಾಮಕನ ಬಳಿಯಲ್ಲಿಯೇ ಇದ್ದು ಅವನ ಆರಾಧನೆ ನಿರಂತರ ನಡೆಸಲು ಅವಕಾಶಕ್ಕಾಗಿ ಇಷ್ಟವಾಗುವುದು. ಬ್ರಹ್ಮದೇವರು ಅಮುಕ್ತರಾಗಿದ್ದೂ ಹಾಗೇ ಹರಿಯ ಆರಾಧನೆ ಮಾಡುತ್ತಿರುವುದರಿಂದ ಮೋಕ್ಷವನ್ನು ಪಡೆಯುವಲ್ಲಿ ಉತ್ಸಾಹ ತೋರುವುದಿಲ್ಲ. ಬ್ರಹ್ಮದೇವರು

ಮುಖ್ಯವಾಗಿ ಈ ಬಗೆಯ ಏಕಾಂತಭಕ್ತರು. ರುದ್ರಾದಿಗಳು ಸಕಲ ದೇವತೆಗಳೂ ಏಕಾಂತಭಕ್ತರೆ. ಹರಿಗಿಂತ ಇತರವಾದ ಎಲ್ಲ ಭೋಗಭಾಗ್ಯಗಳನ್ನೂ ಹರಿಯ ಆರಾಧನೆಗಾಗಿಯೆ ಬಯಸುವುದು ಏಕಾಂತಭಕ್ತರ ಲಕ್ಷಣ.

ಬ್ರಹ್ಮವಾಯುಗಳ ವಿಶೇಷ ಆವೇಶಪ್ರಯುಕ್ತವಾಗಿ ಎಲ್ಲ ದೇವತೆಗಳಲ್ಲಿ ಈ ಲಕ್ಷಣ ಆವೇಶ ತಾರತಮ್ಯಾನುಗುಣವಾಗಿ ಯೋಗ್ಯತಾನುಸಾರವಾಗಿ ತಾರತಮ್ಯ ದಿಂದ ಕಂಡುಬರುತ್ತದೆ. ಪ್ರಹ್ಲಾದ ಅಂಬರೀಷಾದಿ ಭಕ್ತರಲ್ಲಿ ಆವೇಶಪ್ರಯುಕ್ತ ಅಧಿಕ ಲಕ್ಷಣಗಳು ಕಂಡುಬರುತ್ತವೆ.

ಅಂಬರೀಷನು ಆದರಿಂದ ಭಾಗವತ ಹೇಳುವಂತೆ ಮನೆ ಮಡದಿ ಮಕ್ಕಳು ರಾಜವೈಭವವೆಲ್ಲವನ್ನೂ ತನ್ನ ಸುಖಭೋಗಕ್ಕೆ ಬಳಸಿಕೊಂಡರೆ ಸರ್ವಥಾ ಹೇಯ, ಅನರ್ಥಕರ ಎಂದೇ ತಿಳಿದು ಹರಿಯಾರಾಧನೆಗೇ ಬಳಸಿಕೊಂಡಿದ್ದಾನೆ. ಇದೇ ನಿಜವಾದ ವೈರಾಗ್ಯ. ಇದಕ್ಕೆ ಒಲಿದೇ ಶ್ರೀಹರಿ ಅವನಿಗೆ ಸುದರ್ಶನ ಚಕ್ರರೂಪದಿಂದ ತನ್ನನ್ನೆ ತಾನು ಕೊಟ್ಟಿದ್ದನೆಂದು ಭಾಗವತ ಹೇಳಿದೆ— 'ಏಕಾಂತಭಕ್ತಿ ಯೋಗೇನ ಪ್ರೀತೋ ಭೂತ್ವಾಭಿರಕ್ಷಣಂ' ಎಂದು.



—೮೫—

**ಧ್ರುವರಾಜನ ವೈರಾಗ್ಯ–ಶರೀರ ಮಡದಿ ಮಕ್ಕಳು ರಾಜ್ಯವೆಲ್ಲವೂ ಹರಿಪೂಜೆಗಾಗಿ**

**ಆತ್ಮಸ್ತ್ರ್ಯಪತ್ಯಸುಹೃದೋ ಬಲಮೃದ್ಧಕೋಶಂ**
**ಅಂತಃಪುರಂ ಪರಿವಿಹಾರಭುವಶ್ಚ ರಮ್ಯಾಃ ।**
**ಭೂಮಂಡಲಂ ಜಲಧಿಮೇಖಲ ಮಾಕಲಯ್ಯ**
**ಕಾಲೋಪಸೃಷ್ಟಮಿತಿ ಸ ಪ್ರಯಯೌ ವಿಶಾಲಾಂ ॥**

(ಭಾ.೪.೧೨.೧೬)

**ಯೇನ ಪಂಚವರ್ಷೇಣ ಬಾಲಕೇನ ಶ್ರೀಹರಿಃ ಪ್ರಸಾದಿತಃ ಸಂಪಾದಿತಂ ಚ ಧ್ರುವಪದಂ ಸೋऽಪಿ ಪರಮಭಾಗವತೋ ಧ್ರುವೋ ಮಹಾರಾಜೋ ವೈರಾಗ್ಯಭಾಗ್ಯಮೇವ ಭೇಜೇ ಇತಿ ತತ್ಪ್ರವೃತ್ತಿಂ ದರ್ಶಯತಿ ॥ ಆತ್ಮೇತಿ ॥ ಆತ್ಮಾ**

**ದೇಹಃ ಬಲಂ ಸೈನ್ಯಂ ಸಮುದ್ರಪರಿಖಂ ಭೂಮಂಡಲಂ ಕಾಲೇನ ನಾಶ್ಯಮಿತಿ ಜ್ಞಾತ್ವಾ। ವಿಶಾಲಾಂ ನದೀಂ ॥**



**ಈ ಶರೀರ ಮಡದಿ ಮಕ್ಕಳು ಬಂಧುಮಿತ್ರರು ಸೈನ್ಯಗಳು ತುಂಬಿದ ಬೊಕ್ಕಸ ಅಂತಃಪುರ ರಮ್ಯ ಉದ್ಯಾನ ಸಮುದ್ರ ಪರ್ಯಂತ ಭೂಮಂಡಲದಾಧಿಪತ್ಯ ಎಲ್ಲವೂ ಒಂದುದಿನ ಕಾಲನಾಮಕ ಪರಮಾತ್ಮನ ಗರ್ಭದಲ್ಲಿ ಅಡಗಿ ಹೋಗುವುವೆಂದು ಮನಗಂಡು ಧ್ರುವರಾಜನು 'ವಿಶಾಲಾ' ನಾಮಕ ನದೀತೀರದ ಬದರಿಕಾಶ್ರಮಕ್ಕೆ ತಪಸ್ಸಿಗಾಗಿ ಹೊರಟುಹೋದನು.**

ಇದು ಭಾಗವತ ಶ್ಲೋಕ. ಮುಂದಿನ ಶ್ಲೋಕದಲ್ಲಿ ಭಾಗವತ ಧ್ರುವರಾಜನ ಬಿಂಬದರ್ಶನದ ಬಗ್ಗೆ ಹೀಗೆ ಹೇಳುತ್ತದೆ—

ತಸ್ಯಾವಿಶುದ್ಧಕರಣಃ ಶಿವವಾರ್ವಿಗಾಹ್ಯ
ಬದ್ಧಾಸನೋ ಜಿತಮರುನ್ಮನಸಾಽಽಹೃತಾಕ್ಷಃ ।
ಸ್ಥೂಲೇ ದಧಾರ ಭಗವತ್ ಪ್ರತಿರೂಪ ಏತತ್
ಧ್ಯಾಯಂಸ್ತದವ್ಯವಹಿತೋ ವ್ಯಸೃಜತ್ ಸಮಾಧೌ ॥

ಅಲ್ಲಿ ಗಂಗಾನದಿಯ ಮಂಗಳಜಲದಲ್ಲಿ ಸ್ನಾನಾದಿಗಳನ್ನು ಮಾಡಿ (ಅಂದರೆ ಅಷ್ಟಾಂಗಯೋಗಗಳಲ್ಲಿ ಒಂದಾದ ನಿಯಮವನ್ನು ಅನುಷ್ಠಾನ ಮಾಡಿ,) ಇಂದ್ರಿಯ ಮನಃಶುದ್ಧಿ ಸಂಪಾದಿಸಿ (ಇದು ಶಮ ದಮಾದಿ ರೂಪವಾದ ಯಮ ಎಂಬ ಇನ್ನೊಂದು ಯೋಗಾಂಗ) ಆಸನ ಬಂಧ ಮಾಡಿಕೊಂಡು (ಇದು ಆಸನ ಎಂಬ ಒಂದು ಅಂಗ) ಪ್ರಾಣಾಯಾಮ ಮಾಡಿ (ಇದು ಪ್ರಾಣಾಯಾಮ ಎಂಬ ಅಂಗ) ವಿಷಯಗಳಿಂದ ಮನಸ್ಸು ಇಂದ್ರಿಯಗಳನ್ನು ಈಚೆಗೆ ಸೆಳೆದುಕೊಂಡು (ಇದು ಪ್ರತ್ಯಾಹಾರವೆಂಬ ಅಂಗ) ಸ್ಥೂಲ ಬ್ರಹ್ಮಾಂಡವೆಂಬ ಭಗವತ್ ಪ್ರತಿಮೆಯಲ್ಲಿ ಮನಸ್ಸನ್ನು ನಿಲ್ಲಿಸಿದ (ಇದು ಧಾರಣ) ಬಳಿಕ ಬಿಂಬರೂಪ ಧ್ಯಾನಮಾಡುತ್ತ (ಇದು ಧ್ಯಾನ) ಸ್ಥೂಲರೂಪದ ಧಾರಣೆಯನ್ನು ಪರಿತ್ಯಜಿಸಿದ. ಪರಮಾಚ್ಛಾದಿಕ ಪ್ರಕೃತಿಯೂ ಸರಿದುದರಿಂದ ಬಾಹ್ಯಮನಸ್ಸು ಉಪರತವಾಗಿರುವುದರಿಂದ ಸಮಾಧಿಯಲ್ಲಿ ಆವರಣ ರಹಿತವಾಗಿ ಹೊಳೆಯುವ

ನಿರ್ಮಲವಾದ ಬಿಂಬರೂಪವನ್ನು ಸ್ವರೂಪಮನಸಿನಿಂದಲೇ ಕಾಣುತ್ತ ಶರೀರಾದ್ಯಭಿಮಾನವನ್ನು ಪರಿತ್ಯಜಿಸಿದ. (ಇದು ಅಸಂಪ್ರಜ್ಞಾತ ಸಮಾಧಿ)

ಹೀಗೆ ಧ್ರುವನು ಶರೀರ ಇಂದ್ರಿಯ ಮನಸ್ಸು ಮಡದಿ ಮಕ್ಕಳು ರಾಜ್ಯ ಬೊಕ್ಕಸ ಅಂತಃಪುರ ಉದ್ಯಾನ ಸಮುದ್ರಪರ್ಯಂತ ಭೂಮಂಡಲಗಳನ್ನು ತನ್ನ ಸುಖಸಾಧನವೆಂದು ಬಗೆಯದೆ ಅಷ್ಟಾಂಗಯೋಗ ಸಮಾಧಿ ಅನುಷ್ಠಾನದಿಂದ ಬಿಂಬದರ್ಶನ ಮಾಡಲು ಅವೆಲ್ಲವನ್ನು ಸಾಧನವಾಗಿ ಬಳಸಿಕೊಂಡಿರುವುದು ಸ್ಪಷ್ಟವಿದೆ. ಇದೇ ನಿಜವಾದ ವೈರಾಗ್ಯ. ಜೈನರಂತೆ ಬೌದ್ಧರಂತೆ. ಎಲ್ಲವನ್ನು ತ್ಯಜಿಸಿದ ಮಾತ್ರಕ್ಕೆ ಅದು ವೈರಾಗ್ಯವಾಗುವುದಿಲ್ಲ. ದಾರಿದ್ರ್ಯವಾಗುತ್ತದೆ. ಗೋಪಾಲದಾಸರು ಹೇಳುತ್ತಾರೆ—

ತನುಮನದಭಿಮಾನವನು ಬಿಟ್ಟು ಕುನ್ನಿ ತಾ
ಮನೆಮನೆ ತಿರುಗದೆ ಅನುಗಾಲವೂ?
ಘನಮಹಿಮ ಚೆಲ್ವಗೋಪಾಲವಿಠಲನ್ನ ನೆನೆ
ನೆನೆದು ಏಕಾಂತದಲಿ ನಿರುಮಲ ಮನನಾಗೊ !

ಏಕಾಂತದಲ್ಲಿ ಕುಳಿದು ಧ್ಯಾನಮಗ್ನನಾಗಿ ಎಲ್ಲೆಡೆ ಗೋಪಾಲವಿಠಲನ ಕಂಡು ಮನಶುದ್ಧಿ ಮಾಡಿಕೊಳ್ಳುವುದೇ ನಿಜವಾದ ವೈರಾಗ್ಯ. ಎಲ್ಲವನ್ನು ತ್ಯಜಿಸಿ ಬೈರಾಗಿಯಾಗಿ ನಾಯಿಯಂತೆ ತಿರುಗುವುದು ವೈರಾಗ್ಯವಲ್ಲ.



—೮೬—

**ಬಂಧಿತರಾದ ರಾಜರ ಅನುತಾಪ-ವಿಷಯಾಸಕ್ತಿಯ ದುಷ್ಪರಿಣಾಮವನ್ನು ಸ್ವಾನುಭವದಿಂದ ಕಾಣಬೇಕಿತ್ತು**

**ವಯಂ ಪುರಾ ಶ್ರೀಮದನಷ್ಟಬುದ್ಧಯೋ**
**ಜಿಹೀರ್ಷಯಾಸ್ಯಾ ಇತರೇತರ ಸ್ಪೃಧಃ ।**
**ಘ್ನಂತಃ ಪ್ರಜಾಃ ಸ್ವಾ ಅಪಿ ನಿರ್ಘೃಣಾಃ ಪ್ರಭೋ**
**ಮೃತ್ಯುಂ ಪರಂ ತ್ವಾಂ ಅಗಣಯ್ಯ ದುರ್ಮದಾಃ ॥**

(ಭಾ.೧೦.೮೩.೧೨)

**ಕಿಂ ಬಹುನಾ ಸರ್ವೇಽಪಿ ರಾಜಾನೋ ಮಹಾಭಾಗವತಾ ವೈರಾಗ್ಯಪದವೀಂ ಅನುಸೃತಾ ಇತ್ಯಾಶಯೇನ ತದ್ವಚನಂ ಉದಾಹರತಿ ॥ ವಯಮಿತಿ ॥ ಅಸ್ಯಾಃ ಭೂಮೇಃ ॥**



**ಜರಾಸಂಧನಿಂದ ಬಂಧಿತರಾದ ರಾಜರು ಶ್ರೀಕೃಷ್ಣನಿಂದ ಬಂಧಮುಕ್ತರಾಗಿ ಅವನ ಮುಂದೆ ಹೇಳುತ್ತಾರೆ— ಹಿಂದೆ ನಾವೂ ಕೂಡ ಮದೋನ್ಮತ್ತನಾದ ಜರಾಸಂಧನಂಥ ರಾಜರಂತೆಯೇ ರಾಜ್ಯಸಂಪತ್ತಿನ ಮದದಿಂದ ಬುದ್ಧಿವಿವೇಕ ವನ್ನು ಕಳೆದುಕೊಂಡು ಇನ್ನೂ ಹೆಚ್ಚಿನ ಸಂಪತ್ತನ್ನು ಅಪಹರಿಸಲು ಪರಸ್ಪರ ಸ್ಪರ್ಧೆ ಯಿಂದ ಕಾದಾಡುತ್ತಿದ್ದೆವು. ಪ್ರಭು, ಈ ಜಗತ್ತು ಸೃಷ್ಟಿಯಾಗುವುದಕ್ಕೆ ಮೊದಲೇ ಇದ್ದ 'ಪರಂ ಮೃತ್ಯುಂ' ಮಹಾಪ್ರಳಯಕಾರಿಯಾದ ನಿನ್ನನ್ನೇ ಲೆಕ್ಕಿಸದೆ ದುಷ್ಟ ದರ್ಪದಿಂದ ಬಡಪಾಯಿಗಳಾದ ನಮ್ಮ ಪ್ರಜೆಗಳನ್ನೇ ನಾವು ನಿರ್ದಯತೆಯಿಂದ ಹಿಂಸಿಸಿದೆವು.**

ರಾಜರುಗಳು ವಿಷಯಾಸಕ್ತರಾದರೆ ಅದೆಷ್ಟು ಅನರ್ಥಕರವಾಗುವು ದೆಂಬುದನ್ನು ರಾಜರುಗಳೇ ಸ್ವಾನುಭವದಿಂದ ತಿಳಿದುಕೊಂಡು ಪಶ್ಚಾತ್ತಾಪದಿಂದ ನೊಂದು ವೈರಾಗ್ಯ ತಾಳುತ್ತಾರೆ.

ಜರಾಸಂಧ ಹಿಂದೆ ಹದಿನೆಂಟುಬಾರಿ ಸೈನ್ಯ ಸಮೇತನಾಗಿ ಬಂದು ದ್ವಾರಕೆಯ ಮೇಲೆ ಆಕ್ರಮಣ ಮಾಡುವಾಗಲೂ ಶ್ರೀಕೃಷ್ಣ ಅವನ ಸೈನ್ಯವನ್ನು ಮಾತ್ರ ನಾಶಪಡಿಸಿ ಅವನನ್ನು ಪರಾಭವಗೊಳಿಸಿದರೂ ತಾನೇ ಪರಾಭವ ಗೊಂಡಂತೆ ನಟನೆ ಮಾಡಿ ಓಡಿಹೋದ. ಜರಾಸಂಧನನ್ನು ಕೊಲ್ಲಲಿಲ್ಲ. ಇದು ಅಶಕ್ತಿಯಿಂದಲ್ಲ. ಭೀಮನಿಂದಲೇ ಅವನನ್ನು ಕೊಲ್ಲಿಸಬೇಕು, ಭೀಮನಿಗೇ ಯಶಸ್ಸು ಭಕ್ತಿಜ್ಞಾನಾದಿಗಳನ್ನು ಹೆಚ್ಚಾಗಿ ನೀಡಬೇಕು ಎಂಬ ಅಭಿಪ್ರಾಯದಿಂದ.

ಈ ಅಭಿಪ್ರಾಯದಿಂದಲೇ ಬಲರಾಮನೂ ಜರಾಸಂಧನನ್ನು ಪರಾಭವ ಗೊಳಿಸಿ ಪಾಶಗಳಿಂದ ಬಂಧಿಸುತ್ತಿದ್ದಾಗ ಶ್ರೀಕೃಷ್ಣ ತಡೆದ. 'ಈ ಜರಾಸಂಧನು ಪುನಃ ಇನ್ನಷ್ಟು ಸೈನ್ಯ ತಂದು ಆಕ್ರಮಣ ಮಾಡಲಿ ನಮ್ಮ ಭೂಭಾರಹರಣ ಕಾರ್ಯವಿನ್ನೂ ನಡೆಯಲಿ' ಎಂದ. ಇದರ ಫಲವಾಗಿ ಜರಾಸಂಧ ತಾನೆ ಗೆದ್ದೆನೆಂದು ಅಹಂಕಾರದಿಂದ ಬೀಗಿ ದೇಶದ ಎಲ್ಲ ರಾಜರನ್ನೂ ಒಂದು

ಪುರುಷಮೇಧಯಾಗದಲ್ಲಿ ಬಲಿಕೊಡಲು ಸಂಕಲ್ಪಿಸಿ ಇಪ್ಪತ್ತೆರಡು ಸಾವಿರದ ಎಂಟುನೂರು ರಾಜರುಗಳನ್ನು ಬಂಧಿಸಿಟ್ಟ.

ಅಶ್ವ ಮೇಧದಂತೆ ಪುರುಷ ಮೇಧವೂ ಒಂದು ವೇದವಿಹಿತವಾದ ಯಾಗವೆ. ಆದರೆ ಅಶ್ವದ ಬಲಿ ಇದೆ, ಪುರುಷರ ಬಲಿ ಇಲ್ಲ. ಜರಾಸಂಧನು ಪುರುಷಬಲಿಯಿಂದ ಶಿವನಿಗೆ ಪ್ರೀತಿಯಾಗುವುದು, ತನಗೆ ಶಕ್ತಿ ಲಭಿಸುವುದೆಂದು ನಂಬಿದ್ದ.

ಶ್ರೀಕೃಷ್ಣ ತನ್ನ ಸಂಕಲ್ಪಾನುಸಾರ ಭೀಮನಿಂದ ಜರಾಸಂಧನನ್ನು ಕೊಲ್ಲಿಸಿ, ಎಲ್ಲ ರಾಜರುಗಳನ್ನೂ ಬಂಧನದಿಂದ ಬಿಡುಗಡೆಗೊಳಿಸಿದಾಗ, ಈ ರಾಜರುಗಳು—

ಕೃಷ್ಣಾಯ ವಾಸುದೇವಾಯ ಹರಯೇ ಪರಮಾತ್ಮನೇ ।
ಪ್ರಣತ ಕ್ಲೇಶನಾಶಾಯ ಗೋವಿಂದಾಯ ನಮೋನಮಃ ॥

ಎಂದು ನಮಿಸಿ ಅವನಲ್ಲಿ ನಿಶ್ಚಲವಾದ ಭಕ್ತಿ ಜ್ಞಾನ ವೈರಾಗ್ಯಗಳನ್ನು ಬೇಡಿ ಪಡೆದರು.

ಹೀಗೆ ವಿಷಯಾಸಕ್ತಿಯ ದುಷ್ಪರಿಣಾಮಗಳನ್ನು ರಾಜರುಗಳು ಜರಾಸಂಧನ ದುರ್ನಡತೆ ನೋಡಿ ಸ್ವಾನುಭವದಿಂದ ತಿಳಿದುಕೊಂಡು ಶ್ರೀಕೃಷ್ಣನೇ ಈ ದುಷ್ಟವಿಷಯಾಸಕ್ತಿಯನ್ನು ದೂರಮಾಡಲೆಂದು ಬೇಡಿ ಕೊಂಡರು.



—೮೭—

**ರಾಜರ ದರ್ಪವೆಲ್ಲ ಕಾಲವಶದಿಂದ ಅಡಗಿಹೋಯಿತು**

**ತ ಏವ ಕೃಷ್ಣಾದ್ಯ ಗಭೀರರಂಹಸಾ**
**ದುರಂತವಿರ್ಯೇಣ ವಿಚಾಲಿತಾಃ ಶ್ರಿಯಾ।**
**ಕಾಲೇನ ತದ್ವೈ ಭವತೋಽನುಕಂಪಯಾ**
**ವಿನಷ್ಟದರ್ಪಾಶ್ಚರಣೌ ಸ್ಮರಾಮಹೇ ॥** (ಭಾ.೧೦.೭೩.೧೩)

**ಯೇ ವಯಂ ಪುರಾ ತ್ವಾಂ ಅಗಣಯ್ಯ ಸ್ಥಿತಾಃ ತ ಏವ ವಯಂ ಅದ್ಯ ಯತಃ ಶ್ರಿಯಾ ವಿಚಾಲಿತಾಃ ತತಃ ತಸ್ಮಾತ್ತವ ಚರಣೌ ಸ್ಮರಾಮಹೇ ಇತಿ । ಯಥಾಹಃ—**

**''ನೈವ ನಾಥಾಽಭ್ಯಸೂಯಾಮೋ ಮಾಗಧಂ ಮಧುಸೂದನ ।**
**ಅನುಗ್ರಹೋ ಯದ್ಭವತೋ ರಾಜ್ಞಾಂ ರಾಜ್ಯಚ್ಯುತಿರ್ವಿಭೋ ॥**

**ರಾಜ್ಯೈಶ್ವರ್ಯಮದೋನ್ನದ್ಧಾ ನ ಶ್ರೇಯೋ ವಿಂದತೇ ನೃಪಾಃ ।**
**ತ್ವನ್ಮಾಯಾಮೋಹಿತಾ ನಿತ್ಯಾ ಮನ್ಯಂತೇ ಸಂಪದಶ್ಚಲಾಃ'' ಇತಿ ॥**



**ಶ್ರೀಕೃಷ್ಣ! ಸಂಪತ್ತಿನ ಮದದಿಂದ ಕುರುಡಾಗಿದ್ದ ರಾಜರು ನಾವೇ ಈಗ ಅದಮ್ಯವೇಗ ಮತ್ತು ಅನಂತಶಕ್ತಿಗಳುಳ್ಳ ಕಾಲನಾಮಕಪರಮಾತ್ಮನಾದ ನಿನ್ನಿಂದ ರಾಜ್ಯಭ್ರಷ್ಟ ರಾದೆವು. ನಿನ್ನ ಅನುಕಂಪೆಯಿಂದ ಕಾಲ ಪ್ರಭಾವದಿಂದ ನಮ್ಮ ಎಲ್ಲ ದರ್ಪಗಳು ಮುರಿದಿವೆ. ಅದರಿಂದ ನಿನ್ನ ಪಾದಗಳನ್ನೇ ಸ್ಮರಿಸುತ್ತಿದ್ದೇವೆ.**

ನಮಗಿನ್ನು ರಾಜ್ಯಬೇಡ, ಸತ್ತಮೇಲೆ ಸ್ವರ್ಗವೂ ಬೇಡ. ರಾಜ್ಯ ಕೈತಪ್ಪಿ ಹೋದರೇ ಅದು ನಮಗೆ ನಿನ್ನ ಅನುಗ್ರಹ ಸಂಪಾದನೆಗೆ ದಾರಿಯಾಗುವುದು ಎನ್ನುತ್ತಾರೆ. ರಾಜರು—

ನೈವ ನಾಥಾಭ್ಯಸೂಯಾಮೋ ಮಾಗಧಂ ಮಧುಸೂದನ ।
ಅನುಗ್ರಹೋ ಯದ್ ಭವತೋ ರಾಜ್ಞಾಂ ರಾಜ್ಯಚ್ಯುತಿರ್ವಿಭೋ ।
ರಾಜ್ಯೈಶ್ವರ್ಯ ಮದೋನ್ನದ್ಧಾ ನ ಶ್ರೇಯೋ ವಿಂದತೇ ನೃಪಾಃ ।
ತ್ವನ್ಮಾಯಾಮೋಹಿತಾ ನಿತ್ಯಾ ಮನ್ಯಂತೇ ಸಂಪದಶ್ಚಲಾಃ ॥
(ಭಾ.೧೦.೭೩.೯,೧೦)

'ನಮ್ಮ ರಾಜ್ಯವನ್ನು ಕಸಿದನೆಂದು ನಾವು ರಾಜರು ಜರಾಸಂಧನಲ್ಲಿ ಕೋಪಿಸಿಕೊಳ್ಳುವುದಿಲ್ಲ. ಏಕೆಂದರೆ ರಾಜ್ಯ ನಮ್ಮ ಕೈತಪ್ಪಿ ಹೋದುದೇ ನಮಗೆ ನಿನ್ನ ಅನುಗ್ರಹ ಸಂಪಾದನೆಗೆ ದಾರಿಯಾಯಿತು. ಆ ರಾಜ್ಯಸಂಪತ್ತಿನಿಂದ ಕುರುಡಾದರೆ ರಾಜರು ಜರಾಸಂಧನಂತೇ ಶ್ರೇಯಸ್ಸನ್ನು ಗಳಿಸಲಾರದೆ ಹೋಗುವರು. ನಿನ್ನ ಮಾಯೆ ಎಂಬ ಬಂಧಕಶಕ್ತಿಯಿಂದ ಮೋಹಿತರಾದವರು ಅನಿತ್ಯವಾದ ಸಂಪತ್ತನ್ನು ಶಾಶ್ವತವೆಂದು ತಿಳಿಯುವ ತಪ್ಪನ್ನು ಮಾಡುತ್ತಾರೆ'.

'ವೈರಾಗ್ಯತೋ ಭಕ್ತಿದಾರ್ಢ್ಯಂ' ವೈರಾಗ್ಯದಿಂದ ಭಕ್ತಿ ದೃಢವಾಗುತ್ತದೆ. ಅದರಿಂದ ವೈರಾಗ್ಯವೇ ಭಾಗ್ಯ.



—೮೮—

**ಸೌಭರಿಮುನಿಯ ಅನುತಾಪ**

**ಅಹೋ ಇಮಂ ಪಶ್ಯತ ಮೇ ವಿನಾಶಂ**
**ತಪಸ್ವಿನಃ ಸಚ್ಚರಿತವ್ರತಸ್ಯ ।**
**ಅಂತರ್ಜಲೇ ವಾರಿಚರಪ್ರಸಂಗಾತ್**
**ಪ್ರಸ್ರಾವಿತಂ ಬ್ರಹ್ಮ ಚಿರಂ ಧೃತಂ ಯತ್ ॥**

(ಭಾ.೯.೭.೫೧)

ನ ಕೇವಲಂ ರಾಜಾನ ಏವ ವೈರಾಗ್ಯಮಾಶ್ರಿತಾಃ ಕಿಂತು ರಾಜಭೋಗಾಧಿಕಭೋಗಾ ಋಷಯೋಽಪೀತ್ಯಾಶಯೇನ ಋಷಿಪ್ರವರಸ್ಯ ಸೌಭರೇಃ ವಿರಾಗಪ್ರಕಾರಂ ದರ್ಶಯತಿ ॥ **ಅಹೋ ಇತಿ ॥ ಯಥಾಹುಃ—**

''ಯದ್ಗಾರ್ಹಸ್ಥ್ಯಂ ತು ಸಂವೀಕ್ಷ್ಯ ಸಪ್ತದ್ವೀಪವತೀಪತಿಃ ।
ವಿಸ್ಮಿತಃ ಸ್ತಂಭಮಜಹಾತ್ ಸಾರ್ವಭೌಮಶ್ರಿಯಾನ್ವಿತ''ಮಿತಿ ।

ವಾರಿಚರಃ ಮೀನಃ । ಯಚ್ಚಿರ ಧೃತಂ ಬ್ರಹ್ಮ ತತ್ಪ್ರಸ್ರಾವಿತಂ ತ್ಯಾಜಿತಂ ಇತಿ ಯತ್ ಇಮಂ ಮೇ ವಿನಾಶಂ ಪುರುಷಾರ್ಥನಾಶಕರಂ ಪಶ್ಯತ। ಅಹೋ ಆಶ್ಚರ್ಯ ಮೇತತ್ ॥



**'ಅಯ್ಯೋ ನನ್ನ ತಪಸ್ಸೆಲ್ಲ ಕೆಟ್ಟು ಹೋಯಿತು! ನೋಡಿರಿ, ತಪಸ್ವಿಯಾಗಿದ್ದು ನೀರೊಳಗೆ ಕುಳಿತು ವ್ರತಾಚರಣೆ ಮಾಡುತ್ತಿದ್ದ ನಾನು ನೀರಿನೊಳಗೆ ಒಂದು ದೊಡ್ಡ ಮೀನು ಹೆಣ್ಣು ಮೀನುಗಳೊಂದಿಗೆ ಕ್ರೀಡಿಸುತ್ತಿದುದನ್ನು ಕಂಡು, ನಾನು ಚಿರಕಾಲದಿಂದ ಸಂಗ್ರಹಿಸಿಟ್ಟುಕೊಂಡಿದ್ದ ನನ್ನ ತಪಃಶಕ್ತಿ ಎಲ್ಲವೂ ಸೋರಿ ಹೋಗುವಂತೆ ಮಾಡಿಕೊಂಡೆ'.**

ಇದು ಸೌಭರಿಮುನಿ ಪಶ್ಚಾತ್ತಾಪದಿಂದ ತನಗೆ ತಾನೇ ಹೇಳಿಕೊಂಡ ಮಾತು. ಸೌಭರಿ ಮಹಾಯೋಗಿ ಮಂತ್ರದ್ರಷ್ಟಾರ. ಜೀವನ್ಮುಕ್ತ. ತನಗಿನ್ನು ಮೋಕ್ಷಕ್ಕೆ ಹೋಗಲು ಮೊದಲಿಗೆ ಆ ಐವತ್ತು ಜನ್ಮಗಳನ್ನೆತ್ತಬೇಕೆಂದು ದಿವ್ಯದೃಷ್ಟಿಯಿಂದ

ತಿಳಿದು, ಒಂದೇ ಜನ್ಮದಲ್ಲಿ ಐವತ್ತೂ ಜನ್ಮಗಳ ಪ್ರಾರಬ್ಧವನ್ನು ಉಂಡು ತೀರಿಸಲು ಬಯಸಿ 'ಕಾಯವ್ಯೂಹ' ಎಂಬ ಯೋಗಬಲದಿಂದ ಐವತ್ತು ಶರೀರಗಳನ್ನು ಧರಿಸಿದ.

ಆಗ ಮಾಂಧಾತ ಚಕ್ರವರ್ತಿ ಆಳುತ್ತಿದ್ದ. ಅವನಿಗೆ ಪುರುಕುತ್ಸ ಅಂಬರೀಷ ಮುಚುಕುಂದ ಎಂದು ಮೂವರು ಗಂಡುಮಕ್ಕಳೂ ಐವತ್ತು ಮಂದಿ ಹೆಣ್ಣುಮಕ್ಕಳೂ ಇದ್ದರು. ಸೌಭರಿ ಆ ಸಮಯದಲ್ಲಿ ಯಮುನೆಯ ಮಡುವಿನಲ್ಲಿ ನೀರೊಳಗೆ ಜಲಸ್ತಂಭ ಮಾಡಿಕೊಂಡು ತಪಸ್ಸು ಮಾಡುತ್ತಿದ್ದ. ಆದರೆ ಪ್ರಾರಬ್ಧವಶದಿಂದ ಮೀನುಗಳ ಪ್ರಣಯಲೀಲೆ ಕಣ್ಣಿಗೆ ಬಿದ್ದುದರಿಂದ ತಾನು ಗೃಹಸ್ಥಾಶ್ರಮಿಯಾಗಲು ಬಯಸಿದ. ಇಲ್ಲದಿದ್ದರೆ ಕೇವಲ ಜಲಚರಗಳ ಪ್ರಣಯಲೀಲೆಯ ದರ್ಶನದಿಂದ ಮಾನವರಿಗೆ ಕಾಮಭಾವನೆ ಕೆರಳುವುದುಂಟೆ? ಆದರಿಂದ ಪ್ರಾರಬ್ಧಭೋಗಕ್ಕೇ ಈ ಜಲಚರದರ್ಶನ ನಿಮಿತ್ತವಾಯಿತು ಎನ್ನಬೇಕು. ಅವನ ಬೇಡಿಕೆಯನ್ನು ನಿರಾಕರಿಸಲಾಗದೆ 'ನನ್ನ ಐವತ್ತು ಮಂದಿ ಕನ್ಯೆಯರಲ್ಲಿ ಒಬ್ಬಳಾದರೂ ನಿನ್ನನ್ನು ವರಿಸಿದರೆ, ನೀನು ಮದುವೆಯಾಗಬಹುದು' ಎಂದ ರಾಜ. ಆಗ ವೃದ್ಧನಾಗಿದ್ದ ಮುನಿ ತಪೋಬಲದಿಂದ ಸುಂದರ ಯುವಕನಾಗಿ ಎಲ್ಲ ಐವತ್ತು ಮಂದಿ ಕನ್ಯೆಯರೂ ತನ್ನನ್ನು ವರಿಸುವಂತೆ ಮಾಡಿಕೊಂಡ.

ಐವತ್ತು ಶರೀರಗಳಿಂದ ಐವತ್ತು ಕನ್ಯೆಯರಲ್ಲಿ ಐದುಸಾವಿರ ಮಕ್ಕಳನ್ನು ಪಡೆದು ಗಂಡುಮಕ್ಕಳಿಗೆ ಉಪನಯನಾದಿಗಳನ್ನು ಹೆಣ್ಣುಮಕ್ಕಳಿಗೆ ವಿವಾಹಾದಿ ಗಳನ್ನು ನಡೆಸಿದ. ಪ್ರಾರಬ್ಧ ಉಂಡು ತೀರಿದಾಗ,

'ಇದಕ್ಕೆ ಕೊನೆಯಿಲ್ಲ! ಇನ್ನು ಸಾಕು! ನನ್ನ ತಪಸ್ಸೆಲ್ಲವೂ ಈ ವಿಷಯಸುಖಭೋಗದಿಂದ ವ್ಯಯವಾಯಿತು' ಎಂದು ವೈರಾಗ್ಯ ತಾಳಿದ, ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಎಲ್ಲ ಪತ್ನಿಯರೊಂದಿಗೆ ಕಾಡಿಗೆ ಹೋಗಿ ತೀವ್ರ ತಪಗೈದು ಯೋಗಬಲದಿಂದ ತನ್ನ ಅಂತಃಕರಣವನ್ನು ಪರಮಾತ್ಮನಲ್ಲಿಯೂ ಐವತ್ತು ಶರೀರಗಳನ್ನು ಶ್ರೌತಾಗ್ನಿಗಳಲ್ಲಿಯೂ ಕೂಡಿಸಿದ. ಪತ್ನಿಯರು ಆ ಅಗ್ನಿಗಳಲ್ಲಿಯೇ ಸಹಗಮನ ಮಾಡಿದರು.

ಇಲ್ಲಿ ಮುನಿಯು ಪ್ರಾರಬ್ಧವನ್ನು ಉಣಲೇಬೇಕಿತ್ತು. ಆದಕ್ಕೆ ಅವನು ಪಶ್ಚಾತ್ತಾಪಪಡಲು ಕಾರಣವಿಲ್ಲ. ಆದರೂ ಅಜ್ಞಾನಿಗಳು ಹೀಗೆ ಸಂಸಾರದಲ್ಲಿ ಅತಿಯಾಗಿ ಆಸಕ್ತಿ ತಳೆಯಬಾರದೆಂದು ಎಚ್ಚರಿಸಿದ್ದಾನಷ್ಟೆ.

ಧ್ರುವನೂ ಭಗವಂತನಲ್ಲಿ ಧ್ರುವಪದವಿಯನ್ನು ಬೇಡಿದ್ದೂ ತಪ್ಪಲ್ಲ. ಪದವಿಯ ಅಧಿಕಾರವುಳ್ಳ ದೇವತೆಗಳು ಅದನ್ನು ಬೇಡಿ ಪಡೆಯಲೇಬೇಕು. ಆದರೂ ಧ್ರುವ ಅದಕ್ಕೆ ಪಶ್ಚಾತ್ತಾಪಪಟ್ಟಂತೆ ಭಾಗವತದಲ್ಲಿ ವರ್ಣನೆ ಇದೆ. ಇದೂ ಬೇರೆ ಅನಧಿಕಾರಿಗಳು ಹಾಗೆ ಮಾಡಬಾರದೆಂದು ಎಚ್ಚರಿಸುವ ಅಭಿಪ್ರಾಯದ್ದು.

ಅಧಿಕಾರಿಗಳು ಪ್ರಾರಬ್ಧವನ್ನು ಉಣಲೇಬೇಕು. ಅದನ್ನು 'ಅವರ ಅತಿಯಾದ ವಿಷಯಾಸಕ್ತಿ' ಎಂದು ಅಜ್ಞರು ಭಾವಿಸಬಾರದು.

ಅವಧೂತರು ಈ ಪ್ರಸಂಗಗಳನ್ನು ವಿಷಯಾಸಕ್ತಿಗೆ ಉದಾಹರಣೆಯಾಗಿ ತೋರಿಸಿದುದೂ ಇದೇ ಅಭಿಪ್ರಾಯದಿಂದ.

ವೈರಾಗ್ಯವನ್ನು ಬೇಡಿ ಪಡೆದವರು ರಾಜರುಗಳು ಮಾತ್ರವಲ್ಲ. ರಾಜಭೋಗಗಳಿಗಿಂತಲೂ ಅಧಿಕ ಭೋಗಗಳನ್ನು ಉಂಡ ಸೌಭರಿಯಂಥ ಋಷಿ ಗಳು ಕೂಡ ಕೊನೆಯಲ್ಲಿ ಪಶ್ಚಾತ್ತಾಪಪಟ್ಟು ವೈರಾಗ್ಯವನ್ನು ಆಶ್ರಯಿಸಿದರು, ನೋಡಿರಿ. ಈ ಉದಾಹರಣೆಯನ್ನು—

ಯದ್‌ಗಾರ್ಹಸ್ಥ್ಯಂ ತು ಸಂವೀಕ್ಷ್ಯ ಸಪ್ತದ್ವೀಪವತೀಪತಿಃ ।
ವಿಸ್ಮಿತಃ ಸ್ತಂಭಮಜಹಾತ್ ಸಾರ್ವಭೌಮಶ್ರಿಯಾನ್ವಿತಂ ॥

(ಭಾ.೯.೭.೪೮)

'ಅಳಿಯನಾದ ಸೌಭರಿಮುನಿಯ ವೈಭವಪೂರ್ಣವಾದ ಗೃಹಸ್ಥ ಜೀವನ ವನ್ನು ಕಂಡು, ಸಪ್ತದ್ವೀಪಯುಕ್ತ ಸಮಗ್ರ ಭೂಮಿಯನ್ನಾಳುವಂಥ ಸಾರ್ವಭೌಮ ಸಾಮ್ರಾಜ್ಯಲಕ್ಷ್ಮಿಯಿಂದ ಯುಕ್ತನಾದ ಮಾವ ಮಾಂಧಾತ ಮಹಾರಾಜನೆ, ತಾನೊಬ್ಬನೇ ಲೋಕದಲ್ಲಿ ಅತ್ಯಂತ ಸುಖಸಮೃದ್ಧವಾದ ಗೃಹಸ್ಥಜೀವನವನ್ನು ನಡೆಸುವವನೆಂಬ ದರ್ಪವನ್ನು ಬದಿಗಿಟ್ಟನಂತೆ!'



—೮೯—

**ಐವತ್ತು ರಾಣಿಯರಲ್ಲಿ ಐದುಸಾವಿರ ಮಕ್ಕಳ ತಂದೆಯಾದ**

**ಏಕಸ್ತಪಸ್ವ್ಯಹಮಥಾಂಭಸಿ ಮತ್ಸ್ಯಸಂಗಾತ್**
**ಪಂಚಾಶತಾಥ ಸುತಪಂಚಸಹಸ್ರಸಂಗಃ ।**
**ನಾಂತಂ ವ್ರಜಾಮ್ಯುಭಯ ಕೃತ್ಯ ಮನೋರಥಾನಾಂ**
**ಮಾಯಾಗುಣೈರ್ಹೃತಮತಿರ್ವಿಷಯೇಽರ್ಥಭಾವಃ ॥**

(ಭಾ.೯.೭.೫೩)

**ತಮೇವ ನಾಶಪ್ರಕಾರಂ ವಿಶದಯತಿ । ಏಕ ಇತಿ ।ಆದೌ ಅಥ ಅನಂತರಂ ಪಂಚಾಶತಾ ಭಾರ್ಯಾಣಾಂ ಯುಕ್ತಃ ಅಥ ಸುತಾನಾಂ ಪಂಚಸಹಸ್ರೇಣ ಸಂಗತವಾನ್ । ಉಭಯೇಷಾಂ ಪುತ್ರಾಣಾಂ ಪುತ್ರೀಣಾಂ ಚ ತತ್ತದ್ಯೋಗ್ಯಕನ್ಯಾವರಾದಿಸಂಪಾದನಾಖ್ಯಕಾರ್ಯರೂಪಮನೋರಥಾನಾಂ ಅಂತಂ ನ ವ್ರಜಾಮಿ । ವಿಷಯೇ ಜಾತ್ಯೇಕವಚನಂ ವಿಷಯೇಷು । ಅರ್ಥಭಾವಃ ಪುರುಷಾರ್ಥಸಾಧನತ್ವಬುದ್ಧಿಮಾನ್ ॥**

❖❖❖

**ಸೌಭರಿಮುನಿ ತನಗೆ ತಾನೇ ಹೇಳಿಕೊಳ್ಳುವ ಇನ್ನೊಂದು ಮಾತು— 'ಏಕಾಂಗಿಯಾಗಿ ತಪಸ್ಸು ಮಾಡುತ್ತಿದ್ದ ನಾನು ನೀರಿನಲ್ಲಿ ಒಂದು ಮೀನಿನ ಬಗ್ಗೆ ಆಸಕ್ತಿ ತಳೆದ ಪರಿಣಾಮವಾಗಿ ಐವತ್ತುಶರೀರಗಳಿಂದ ಐವತ್ತು ಹೆಂಡಂದಿರ ಮತ್ತು ಐದುಸಾವಿರ ಮಕ್ಕಳ ಸಂಗದಲ್ಲಿದ್ದುಬಿಟ್ಟೆ. ಗಂಡುಮಕ್ಕಳ ಮುಂಜಿ ಹೆಣ್ಣು ಮಕ್ಕಳ ಮದುವೆ ಮುಂತಾದ ಎರಡು ಬಗೆ ಕಾರ್ಯಕ್ರಮಗಳನ್ನು ನಡೆಸುವ ನನ್ನ ಮನೋರಥಗಳಿಗೆ ಕೊನೆಯಿಲ್ಲದಾಗಿದೆ. ಪ್ರಕೃತಿಗುಣ ಕಾರ್ಯವಾದ ರಾಗಾದಿ ಗಳಲ್ಲಿ ನನ್ನ ಬುದ್ಧಿ ಮುಳುಗಿ ಕೆಟ್ಟುಹೋಗಿದೆ. ವಿಷಯಪದಾರ್ಥಗಳನ್ನೇ ಪುರುಷಾರ್ಥವೆಂದು ಭಾವಿಸಿದ್ದೇನೆ' ಎಂದು ಪಶ್ಚಾತ್ತಾಪಪಡುತ್ತಾನೆ.**

❖❖❖

-೯೦-

**ಎಲ್ಲ ಬಿಟ್ಟವನಿಗೆ ಒಂದು ಜಿಂಕೆ ಮರಿಯ**
**ಮೇಲಿನ ಮೋಹ ಬಿಡಲಾಗಲಿಲ್ಲ**

ಅಹಂ ಪುರಾ ಭರತೋ ನಾಮ ರಾಜಾ
ವಿಮುಕ್ತ ದೃಷ್ಟಶ್ರುತ ಸಂಗಬಂಧಃ ।
ಆರಾಧನಂ ಭಗವತ ಈಹಮಾನೋ
ಮೃಗೋಽಭವಂ ಮೃಗಸಂಗಾದ್ಧತಾರ್ಥಃ ॥

(ಭಾ.೫.೧೨.೧೪)

ಕಿಮತ್ರ ವಕ್ತವ್ಯಂ ದೇಹಾನುಬಂಧಿಷು ಸಜಾತೀಯೇಷು ಸಂಗೋ ಬಂಧಕ ಇತಿ। ಯಾವತಾ ವಿಮುಕ್ತದುಸ್ತ್ಯಜಸಂಗಸ್ಯ ಮಹಾನುಭಾವಸ್ಯ ಪರಮ ಭಾಗವತಸ್ಯ ಭರತಸ್ಯ ವಿಜಾತೀಯಹರಿಣ ಶಿಶುಸಂಗೋಽಪಿ ಬಂಧಕೋ ಬಭೂವೇತ್ಯಾಶಯೇನ ಭರತರಾಜಸ್ಯ ವೃತ್ತಾಂತಂ ತೇನೈವ ಜನ್ಮಾಂತರೇ ಪ್ರೋಕ್ತಂ ಕಥಯತಿ॥ ಅಹಮಿತಿ॥ ರಹೂಗಣಂ ಪ್ರತಿ ಅವಧೂತ ವಚನಮೇತತ್। ಹೇ ವೀರ ರಹೂಗಣ ವಿಮುಕ್ತಃ ದೃಷ್ಟಶ್ರುತಯೋಃ ಐಹಿಕಪಾರತ್ರಿಕಯೋಃ ಪುರಷಾರ್ಥಯೋಃ ಸ್ನೇಹಾಖ್ಯೋ ಬಂಧೋ ಯೇನ ಸಃ। ಈಹಮಾನಃ ಇಚ್ಛನ್ ವನಂ ಗತಃ ತತ್ರ ಯಸ್ಮಾತ್ ಮೃಗಸಂಗಾತ್ ಹತಸ್ವಾರ್ಥಃ ಮೃಗತ್ವಂ ಪ್ರಾಪ್ತಃ ॥

❖❖❖

ರಹೂಗಣರಾಜನಿಗೆ ಜಡಭರತನ ಮಾತು—

'ನಾನು ಪೂರ್ವಜನ್ಮದಲ್ಲಿ ಭರತನೆಂಬ ರಾಜನಾಗಿದ್ದೆ. ಐಹಿಕ ಪಾರತ್ರಿಕ ವಿಷಯಸುಖಗಳಲ್ಲಿ ಸ್ನೇಹ ಆಸಕ್ತಿಗಳನ್ನು ತ್ಯಜಿಸಿದ್ದೆ. ಭಗವಂತನ ಆರಾಧನೆ ಮಾಡುತ್ತಿದ್ದೆ. ಒಂದು ಜಿಂಕೆಮರಿಯಲ್ಲಿ ಆಸಕ್ತಿ ನನಗೆ ಉಂಟಾದ ಪರಿಣಾಮ ವಾಗಿ ಯೋಗಭ್ರಷ್ಟನಾಗಿ ಮುಂದೆ ಜಿಂಕೆಯಾಗಿ ಜನಿಸಿದೆ' ಎಂದು.

ಒಂದು ಕೋಟಿ ವರ್ಷಕಾಲ ಭರತಚಕ್ರವರ್ತಿ ರಾಜ್ಯಭಾರಮಾಡಿ, ರಾಜ್ಯಭೋಗಪ್ರಾರಬ್ಧ ಕಳೆದುದನ್ನು ತಿಳಿದು ರಾಜ್ಯಸಂಪತ್ತನ್ನು ಮಕ್ಕಳಿಗೆ ಹಂಚಿ ತಾನು ಪುಲಹಮುನಿಯ ಆಶ್ರಮವಾದ ಸಾಲಗ್ರಾಮಕ್ಷೇತ್ರಕ್ಕೆ ನಡೆದ.

ಅಲ್ಲಿ ಒಂದುದಿನ ಅವನು ಗಂಡಕೀನದಿಯಲ್ಲಿ ಮಿಂದು ಗಾಯತ್ರೀ ಮಂತ್ರ ಜಪಿಸುತ್ತಿದ್ದಾಗ ಒಂದು ಗರ್ಭಿಣಿ ಜಿಂಕೆ ನೀರು ಕುಡಿಯಲು ಬಂದಿತು. ಅದು ನೀರು ಕುಡಿಯುವಾಗ ಸಿಂಹಗರ್ಜನೆಯನ್ನು ಕೇಳಿ ಭಯದಿಂದ ಮೇಲೆ ಹಾರಿತು. ಆಗ ಗರ್ಭಸ್ರಾವವಾಗಿ ಮರಿ ಪ್ರವಾಹದಲ್ಲಿ ಬಿದ್ದಿತು. ತಾಯಿ ಭಯದಿಂದ ಓಡಿಓಡಿ ಒಂದು ಗುಹೆಯಲ್ಲಿ ಬಿದ್ದು ಸತ್ತಿತು.

ಅನಾಥವಾಗಿ ಪ್ರವಾಹದಲ್ಲಿ ತೇಲುತ್ತಿದ್ದ ಮರಿಯನ್ನು ಕರುಣೆಯಿಂದ ಭರತನು ಎತ್ತಿ ತಂದು ಆಶ್ರಮದಲ್ಲಿ ಸಾಕಿದ. ಬೇರೆ ಮೃಗಗಳಿಂದ ಅಪಾಯ ಬಾರದಂತೆ ಬಲು ಎಚ್ಚರದಿಂದ ಕಾಪಾಡಿದ. ಮರಿಯ ಮೇಲಿನ ಕರುಣೆ ಮುಂದೆ ಮೋಹವಾಗಿ ಪರಿಣಮಿಸಿತು.

ಭರತಮುನಿ ಈಗ ಮರಿಯ ಮೇಲಿನ ಮೋಹದಿಂದ ಹರಿಯನ್ನೇ ಮರೆತುಬಿಟ್ಟ. ಪುನರ್ಜನ್ಮದಲ್ಲಿ ಜಿಂಕೆಯಾಗಿಯೆ ಜನಿಸಿದ.

ರಹೂಗಣ ರಾಜನಿಗೆ ಜಡಭರತ ತನ್ನ ಈ ಪೂರ್ವಜನ್ಮ ವೃತ್ತಾಂತವನ್ನು ಹೇಳಿ ಮಾನವಜಾತಿಯ ಹೆಂಡಿರು ಮಕ್ಕಳಲ್ಲಿ ಮೋಹವನ್ನು ಬಿಟ್ಟಿದ್ದ ತನಗೆ ಮೃಗಜಾತಿಯ ಮೇಲಿನ ಮೋಹ ಕವಿದು ಬಂಧಕವಾಯಿತು! ಮೋಹ ಎಷ್ಟು ಕೆಟ್ಟದು! ನೋಡೆನ್ನುತ್ತಾನೆ.



—೯೧—

**ಪೂರ್ವಜನ್ಮ ಸ್ಮರಣೆಯಿಂದ ಜಡಭರತ ಅವಧೂತನಾದ**

**ಸಾ ಮಾಂ ಸ್ಮೃತಿರ್ಮೃಗದೇಹೇಽಪಿ ವೀರ**
**ಕೃಷ್ಣಾರ್ಚನ ಪ್ರಭವಾ ನೋ ಜಹಾತಿ ।**
**ಅಥೋ ಅಹಂ ಜನಸಂಗಾದ್ ವಿಮುಕ್ತೋ**
**ವಿಶಂಕಮಾನೋಽವಧೂತಶ್ಚರಾಮಿ ॥**

(ಭಾ.೫.೧೨.೧೫)

**ತತ್ರ ಗರ್ಹಿತೇ ಮೃಗದೇಹೇ ಪೂರ್ವಜನ್ಮನಿ ಕೃತಾತ್ ಹರ್ಯರ್ಚನಾತ್ ಉದಿತಾ ಸಾ ಜನ್ಮಾಂತರವಿಷಯಿಣೀ ಸ್ಮೃತಿಃ ಮಾಂ ನ ತತ್ಯಾಜ । ತಸ್ಮಾದೇವ ಅಹಂ ವಿಮುಕ್ತೋಽಪಿ ಜನಸಂಗಾದ್ವಿಶಂಕಮಾನಃ ತತ ಏವ ಅವಧೂತಃ**

**ಅಜ್ಞಾತಲಿಂಗೋ ಭೂತ್ವಾ ಚರಾಮಿ ಭುವೀತಿ । ಅತ ಏವ ಇಮಂ ವಿಶೇಷಂ ಸೂಚಯಿತುಂ ರಾಜಸು ಅನುಕ್ತ್ವಾ ಅತ್ರೋಕ್ತಿರಿತಿ ಜ್ಞೇಯಂ ॥**



**ರಹೂಗಣರಾಜನಿಗೆ ಜಡಭರತನು ಹೇಳುತ್ತಾನೆ—ಶ್ರೀಕೃಷ್ಣನ ಆರಾಧನೆಯ ಬಲದಿಂದ ನನಗೆ ಆ ಜಿಂಕೆಯ ಜನ್ಮದಲ್ಲಿಯೂ ಪೂರ್ವಜನ್ಮದ ಸ್ಮರಣೆ ಇತ್ತು. ಅದು ಮರೆಯಾಗಲಿಲ್ಲ. ಆದರೂ ಹರಿಯನ್ನು ಮರೆತೆ. ಯೋಗ ಭ್ರಷ್ಟನಾದೆ. ಅದಕ್ಕೇ ನಾನು ದುರ್ಜನರಲ್ಲಿ ಆಸಕ್ತಿ ಹೊಂದಿದರೆ ಪುನಃ ಯೋಗಭ್ರಷ್ಟನಾದೇನೆಂಬ ಭಯದಿಂದ ಎಲ್ಲ ದುರ್ಜನರಲ್ಲಿ ಅಭಿಮಾನವನ್ನು ತೊರೆದು ಅವಧೂತವೇಷದಿಂದ ಸಂಚರಿಸುತ್ತಿದ್ದೇನೆ.**

'ಽವಿಕೃತಶ್ಚರಾಮಿ' ಽವಿವೃತಶ್ಚರಾಮಿ ಽವಧೂತಶ್ಚರಾಮಿ' ಎಂದು ಬೇರೆ ಬೇರೆ ಪಾಠಗಳಿವೆ. ಅವಧೂತರು 'ಽವಧೂತಶ್ಚರಾಮಿ' ಎಂದು ಪಾಠವಿಟ್ಟು ಕೊಂಡು 'ಅಜ್ಞಾತಲಿಂಗಶ್ಚರಾಮಿ' 'ಇವನು ಇಂಥವನು, ಮಹಾಜ್ಞಾನಿ, ಎಂದು ತಿಳಿಯಲು ಬೇಕಾದ ಚಿಹ್ನೆ ಒಂದೂ ಇವನಲ್ಲಿ ಹೊರಗೆ ಕಾಣುವುದಿಲ್ಲ. ಅಜ್ಞಾತ ವಾದ ಜ್ಞಾನಿಚಿಹ್ನೆಉಳ್ಳವನು' ಎಂದು ಅರ್ಥಮಾಡಿದ್ದಾರೆ. 'ಅವಿಕೃತಶ್ಚರಾಮಿ' ಎನ್ನುವ ಪಾಠದಲ್ಲಿ ವಿಷಯಸಂಪರ್ಕದಿಂದ ಅವನಲ್ಲಿ ಕಾಮಾದಿ ವಿಕಾರವಿಲ್ಲ ಎಂದರ್ಥ. 'ಅವಿವೃತಶ್ಚಾರಾಮಿ' ಪಾಠದಲ್ಲಿ ಜ್ಞಾನಾದಿಗಳು ಇವನಲ್ಲಿ ಪ್ರಕಟ ವಾಗಿ ಕಾಣುವುದಿಲ್ಲ ಎಂದರ್ಥ.

'ಅವಧೂತ' ಶಬ್ದದ ಅಭಿಪ್ರಾಯ—ಹೆಂಡತಿ ಮಕ್ಕಳು ಮುಂತಾದ ಲೌಕಿಕ ವಿಷಯವೆಲ್ಲವನ್ನೂ ತ್ಯಾಗಮಾಡಿದವನು ಜ್ಞಾನಿ. ಕೇವಲ ಶರೀರವನ್ನು ಮಾತ್ರ ಅದು ಮೋಕ್ಷಸಾಧನವೆಂಬ ದೃಷ್ಟಿಯಿಂದ ಕಾಪಾಡಿಕೊಂಡಿದ್ದಾನೆ ಹೊರತು ಶರೀರದಿಂದ ಲೌಕಿಕ ಸುಖಾನುಭವವನ್ನು ತೊರೆದಿದ್ದಾನೆ. ಏಕೆಂದರೆ 'ಮಾನವ ಜನ್ಮ ದೊಡ್ಡದು!'

'ತೈಸ್ತೈರತುಷ್ಟ ಹೃದಯಃ ಪುರುಷಂ ವಿಧಾಯ
ಬ್ರಹ್ಮಾವಬೋಧಧಿಷಣಂ ಮುದಮಾಪ ದೇವಃ ॥ (ಭಾ.೧೧.೯.೨೮)

'ಶ್ರೀಹರಿ ಮರಗಿಡ ಹಾವು ಪಕ್ಷಿ ಮುಂತಾಗಿ ನಾನಾ ಶರೀರಗಳನ್ನು ನಿರ್ಮಿಸಿಯೂ ತೃಪ್ತನಾಗದೆ ಬ್ರಹ್ಮಜ್ಞಾನಸಾಧನವಾದ ಮಾನವ ಶರೀರವನ್ನು

ನಿರ್ಮಿಸಿಯೇ ತೃಪ್ತಿಪಡೆದನೆಂದು ಹೇಳುವುದರಿಂದ ಅಪರೋಕ್ಷಜ್ಞಾನಿಗಳು ತಮಗೆ ಜ್ಞಾನಸಾಧನವಾಗಿ ಉಪಯುಕ್ತವಾಗಿದ್ದ ಹರಿಗೆ ಇಷ್ಟವಾಗಿದ್ದ ಶರೀರ ವನ್ನು ದ್ವೇಷಿಸುವುದಿಲ್ಲ.

'ಜನಸಂಗಾತ್ ವಿಮುಕ್ತಃ' ಎಂದರೆ ಎಲ್ಲ ಜನರ ಸಂಗವನ್ನು ಬಿಡುವುದಲ್ಲ. ದುರ್ಜನಸಂಗವನ್ನು ಮಾತ್ರ ಬಿಡಬೇಕು. ಸಜ್ಜನಸಂಗವನ್ನು ಬಿಡಬಾರದು. ಏಕೆಂದರೆ ಸಜ್ಜನಸಂಗ ಮಾಡಿದಷ್ಟೂ ಗುರೂಪದೇಶ ಕೇಳಿದಷ್ಟೂ ಒಳ್ಳೆಯದು. ಯದುರಾಜನಿಗೆ ದೊರೆತ ಒಬ್ಬ ಅವಧೂತ ಬ್ರಾಹ್ಮಣನು ಹೇಳುತ್ತಾನೆ, ತನಗೆ—

ಸಂತಿ ಮೇ ಗುರವೋ.....ಬುದ್ಧ್ಯಾಪಾಶ್ರಿತಾಃ ॥

ನನಗೆ ಬಹಳ ಗುರುಗಳಿದ್ದಾರೆ. ಅವರಿಂದ ಪಾಠಕಲಿತು ಶರೀರಾಭಿಮಾನ ದಿಂದ ಮುಕ್ತನಾದೆನು ಎನ್ನುತ್ತಾನೆ. 'ತಾತ್ಪರ್ಯದಲ್ಲಿ ಹೇಳಿದ ಗುರುವಿವೇಕ ಗ್ರಂಥದ ಪ್ರಕಾರ, 'ಒಬ್ಬನೆ ಗುರುವಿನಿಂದ ವಿದ್ಯೆ ಪೂರ್ಣ ಲಭಿಸುವುದಿಲ್ಲ! ಬಹುಜನರಿಂದ ವಿದ್ಯೆ ಕಲಿಯಬೇಕು'. ಹೀಗೆ ಜ್ಞಾನಿಗಳಾದ ಅವಧೂತರೂ ಕೂಡ ಸಜ್ಜನ ಸಂಗದಿಂದ ವಿದ್ಯೆ ಕಲಿಯುತ್ತಾರೆ, ಕೊನೆಯಲ್ಲಿ ಎಲ್ಲ ಅಪರೋಕ್ಷ ಜ್ಞಾನಿಗಳೂ ಚತುರ್ಮುಖನಿಂದ ಉಪದೇಶ ಪಡೆದೇ ಮುಕ್ತರಾಗಬೇಕು.

ಯದ್ಯಪಿ ಬೇರೆ ರಾಜರ ಜೊತೆಗೇ ಭರತಚಕ್ರವರ್ತಿಯ ವೈರಾಗ್ಯ ಸಾಧನೆ ಯನ್ನು ಹೇಳಬಹುದಿತ್ತು. ಆದರೂ ಈತ ಯೋಗಭ್ರಷ್ಟನಾಗಿ ಬಳಿಕ ಎಚ್ಚೆತ್ತು ಕೊಂಡ, ಸೌಭರಿ ಮುನಿಯಂತೆ, ಎಂದು ತಿಳಿಸಲು ಇಲ್ಲಿ ಈತನ ಬಗ್ಗೆ ಹೇಳಿದ್ದಾರೆ.



–೯೨–

**ದೀಪದ ಹುಳುವಿನಂತೆ ಮೋಸ ಹೋಗಬಾರದು**

**ಯೋಷಿತ್ಸು ತಲ್ಪಾಭರಣಾಂಬರಾದಿ-**
**ದ್ರವ್ಯೇಷು ಮಾಯಾರಚಿತೇಷು ಮೂಢಃ ।**
**ಪ್ರಲೋಭಿತಾತ್ಮಾ ಹ್ಯುಪಭೋಗ ಬುದ್ಧ್ಯಾ**
**ಪತಂಗವನ್ನಶ್ಯತಿ ನಷ್ಟದೃಷ್ಟಿಃ ॥**

(ಭಾ.೧೧.೮.೮)

ಏವಮಪಿ ಯಸ್ಯ ವೈರಾಗ್ಯಂ ನೋಪಪದ್ಯತೇ ತಸ್ಯ ಜನ್ಮ ವೇಶ್ಯಾಯಾ ಅಪಿ ನಿಕೃಷ್ಟಮಿತಿ ಭಾವೇನ, ಪಿಂಗಲಾನಾಮ್ನೀ ವಿದೇಹರಾಜಸ್ಯ ಪುರೇ ಸ್ಥಿತಾ ತಸ್ಯಾಃ ವಿರಕ್ತಿಪ್ರಕಾರಂ ವರ್ಣಯತಿ **ಪದ್ಯಚತುಷ್ಟಯೇನ**। ತತ್ರಾದೌ ಸ್ವವಿಷಯೇ ಪ್ರಸಜ್ಜಮಾನಾನ್ ಪುರುಷಾನ್ ಧಿಕ್ಕರೋತಿ ॥ **ಯೋಷಿತ್ಸ್ವಿತಿ** ॥ ಮೋಹಕತಯಾ ಭಗವತಾ ನಿರ್ಮಿತಾಸು ಯೋಷಿತ್ಸು ತಾದೃಶೇಷು ತಲ್ಪಾದಿದ್ರವ್ಯೇಷು ಚ ವಿಷಯೇಷು ಶೋಭನತ್ವಾಧ್ಯಾಸೇನ ಅಗ್ನೌ ಶಲಭವತ್ ಭೋಗೇಚ್ಛಯಾ ಪ್ರವರ್ತಮಾನಃ ಪುರುಷಃ ನಷ್ಟಸ್ವಪುರುಷಾರ್ಥೋ ಭವತಿ। ನನು ಶಾಸ್ತ್ರಜನ್ಯೇ ತೇಷ್ವಶೋಭನತ್ವಜ್ಞಾನೇ ಜಾಗ್ರತಿ ಕಥಮಯಂ ತತ್ರ ಪ್ರವರ್ತೇತೇತ್ಯತ ಉಕ್ತಂ ನಷ್ಟದೃಷ್ಟಿರಿತಿ। ಕುತಸ್ತನ್ನಾಶ ಇತ್ಯತಃ ಉಕ್ತಂ **ಪ್ರಲೋಭಿತಾತ್ಮೇತಿ** ॥ ತತ್ತತ್ಪದಾರ್ಥಗತಸೌಂದರ್ಯಸೌಲಕ್ಷಣ್ಯಾದಿಭಾವೈಃ ವಿಮೋಹಿತಮನಸ್ತ್ವಾದಿತಿ। ಏತಚ್ಚ ಮದುಕ್ತಂ ಶಾಸ್ತ್ರಾನುಭವಾದಿನಾ ಪ್ರಸಿದ್ಧಮಿತಿ ಹಿಶಬ್ದೇನಾಹ। ಯತ ಏವಂ ಅತಃ ಈದೃಶಾನಾಂ ಜನ್ಮ ಧಿಗಿತಿ ಪುರುಷಪದಂ ಅಪ್ರಯುಜ್ಯ ಮೂಢಪದಪ್ರಯೋಗೇಣ ಸೂಚಯತೀತಿ। **ಯಥಾಹುಃ—**

''ದೃಷ್ಟ್ವಾ ಸ್ತ್ರಿಯಂ ದೇವಮಾಯಾಂ ತದ್ಭಾವೈರಜಿತೇಂದ್ರಿಯಃ।
ಪ್ರಲೋಭಿತಃ ಪತತ್ಯಂಧೇ ತಮಸ್ಯಗ್ನೌ ಪತಂಗವದಿ''ತಿ।
''ಅಹೋ ಸುಭದ್ರಂ ಸುನಸಂ ಸುಸ್ಮಿತಂ ಚ ಮುಖಂ ಸ್ತ್ರಿಯಃ।
ತ್ವಙ್ಮಾಂಸರುಧಿರಸ್ನಾಯುಮೇದೋಮಜ್ಜಾಸ್ಥಿಸಂಹತೌ।
ವಿಣ್ಮೂತ್ರ - ಪೂಯೇ ರಮತಾಂ ಕೃಮೀಣಾಂ ಕಿಯದಂತರಮಿ''ತಿ ॥



ಒಬ್ಬ ಅವಧೂತಮುನಿ ಯದುರಾಜನಿಗೆ ತಾನು ಪತಂಗದಿಂದ ಕಲಿತ ಪಾಠವನ್ನು ಹೇಳುತ್ತಾನೆ—

ಭಗವಂತನ 'ಮಾಯೆ'ಯಿಂದ ಇಚ್ಛೆಯಿಂದ ನಿರ್ಮಿತವಾದ ಪರಸ್ತ್ರೀ ಹಾಸಿಗೆ ವಸ್ತ್ರಾಭರಣಾದಿಗಳಲ್ಲಿ ಅವೆಲ್ಲವೂ ತನ್ನ ಸುಖಭೋಗಕ್ಕಾಗಿಯೆ ಪ್ರಕೃತಿ ನಿರ್ಮಿತವಾಗಿ ಇರುವವೆಂಬ ಕಲ್ಪನೆಯಿಂದ ಭ್ರಮೆಯಿಂದ ಮೂಢಮಾನವನು ಬುದ್ಧಿ ವಿವೇಕ ಶೂನ್ಯನಾಗಿ ಪತಂಗ ಹುಳದಂತೆ ನಾಶವಾಗುತ್ತಾನೆ. ಯೋಗಿಯು ಅದರಿಂದ ಪಾಠ ಕಲಿಯುತ್ತಾನೆ' ಎಂದು. ವಸ್ತುತಃ ಇದು ಪಿಂಗಳೆ ಎಂಬ ವೇಶ್ಯೆಯ ಮಾತು.

ವಿಷಯಾಸಕ್ತಿಯಿಂದ ಭರತಚಕ್ರವರ್ತಿಯಂಥ ಯೋಗಿಗಳು ಯೋಗಭ್ರಷ್ಟರಾದುದಕ್ಕೆ ಹೀಗೆ ಉದಾಹರಣೆಗಳಿದ್ದರೂ ಮಾನವನು ವೈರಾಗ್ಯ ಸಂಪಾದನೆ ಮಾಡದಿದ್ದರೆ ಅವನ ಜನ್ಮ ವೇಶ್ಯೆಯ ಜನ್ಮಕ್ಕಿಂತಲೂ ನಿಕೃಷ್ಟವೆಂಬ ಅಭಿಪ್ರಾಯದಿಂದ, ಪಿಂಗಳೆ ಎಂಬ ವೇಶ್ಯೆಯು ವಿದೇಹರಾಜನ ನಗರದಲ್ಲಿದ್ದು ವೈರಾಗ್ಯವನ್ನು ಸಂಪಾದಿಸಿದ ಪರಿಯನ್ನು ವೇಶ್ಯೆಯ ಮಾತಿನಲ್ಲಿ ನಾಲ್ಕು ಪದ್ಯಗಳಿಂದ ಅವಧೂತಮುನಿ ಇಲ್ಲಿ ವರ್ಣಿಸುತ್ತಿದ್ದಾನೆ.

ಯದ್ಯಪಿ ಈ ಪದ್ಯದಲ್ಲಿ 'ಪತಂಗವನ್ನಶ್ಯತಿ ನಷ್ಟದೃಷ್ಟಿಃ' 'ಹೂ ಎಂಬ ಭ್ರಮೆಯಿಂದ ದೀಪದ ಮೇಲೆರಗುವ ದೀಪದ ಹುಳುವಿನಂತೆ, ಪರಸ್ತ್ರೀ-ಹಾಸಿಗೆ-ವಸ್ತ್ರಾಭರಣಾದಿಗಳನ್ನೂ ಕೂಡ ತನ್ನ ಸುಖಕ್ಕಾಗಿಯೇ ಪ್ರಕೃತಿಯು ನಿರ್ಮಿಸಿದೆ ಎಂಬ ಭಾವನೆಯಿಂದ ಮೂಢ ಮಾನವನು ಹಾಳಾಗುತ್ತಾನೆ' ಎಂದು ಹೇಳಿದೆ. ಇದರ ಹಿಂದಿನ ಪದ್ಯವೂ ಕೂಡ ಹೇಳುತ್ತಿರುವುದು ಇದನ್ನೆ!—

ದೃಷ್ಟ್ವಾ ಸ್ತ್ರಿಯಂ ದೇವಮಾಯಾಂ ತದ್ಭಾವೈರಜಿತೇಂದ್ರಿಯಃ ।
ಪ್ರಲೋಭಿತಃ ಪತತ್ಯಂಧೇ ತಮಸ್ಯಗ್ನೌ ಪತಂಗವತ್ ॥

(ಭಾ.೧೧.೮.೭)

ಇದಕ್ಕೆ ಅದು ವಿವರಣೆಯಾಗಿಯೇ ಕಾಣುತ್ತದೆ! ಹಾಗೇ ಭಾಗವತ ವ್ಯಾಖ್ಯಾನಕಾರರೂ ಅಭಿಪ್ರಾಯಪಡುತ್ತಾರೆ.

ಆದರೆ ಎರಡೂ ಕೂಡ ಅವಧೂತಮುನಿಯ ಸ್ವಂತ ಮಾತೆಂದೇ ಎಲ್ಲರೂ ಹೇಳುತ್ತಿದ್ದಾರೆ.

ಆದರೂ ನಮ್ಮ ಅವಧೂತರ ಅಭಿಪ್ರಾಯ ಹೀಗಿದೆ— 'ಈ ಯೋಷಿತ್ಸು ತಲ್ಪಾಭರಣ' ಎಂಬ ಪದ್ಯವು 'ದೃಷ್ಟ್ವಾಸ್ತ್ರಿಯಂ' ಎಂಬ ಪದ್ಯಕ್ಕೆ ವಿವರಣ ರೂಪದಲ್ಲಿದ್ದರೂ ವಸ್ತುತಃ ವೇಶ್ಯೆ ನುಡಿದ ಮಾತು, 'ದೃಷ್ಟ್ವಾಸ್ತ್ರಿಯಂ' ಎಂಬ ಪದ್ಯಕ್ಕೆ ವಿವರಣವಾಗುವುದರಿಂದ ಅದರ ಜೊತೆಗೇ ಇದನ್ನು ಅವಧೂತಮುನಿ ಹೇಳಿದ್ದಾನೆ ಎಂದು.

ಮುಂದೆ 'ಸಂತಂ ಸಮೀಪೇ ರಮಣಂ' 'ಅಹೋ ಮಯಾತ್ಮಾ' 'ಯದಸ್ಥಿಭಿರ್ನಿರ್ಮಿತಂ' ಎಂದು ಮೂರು ಪದ್ಯಗಳು ಸ್ಪಷ್ಟವಾಗಿ ಪಿಂಗಳಾವೇಶ್ಯೆ

ಹೇಳಿದ ಮಾತುಗಳಾಗಿರುವುದರಿಂದ, 'ಯೋಷಿತ್ಸು ತಲ್ಪಾಭರಣ' ಎಂಬ ಪ್ರಕೃತ ಪದ್ಯದೊಂದಿಗೆ ಒಟ್ಟು ನಾಲ್ಕು ಪದ್ಯಗಳು ವೇಶ್ಯೆ ನುಡಿದವುಗಳೇ ಎನ್ನುತ್ತಾರೆ—

'ವಿದೇಹರಾಜನ ನಗರದಲ್ಲಿದ್ದ ಪಿಂಗಳೆ ಎಂಬ ವೇಶ್ಯೆಯ ವೈರಾಗ್ಯ ಪ್ರಕರಣವನ್ನು ನಾಲ್ಕು ಪದ್ಯಗಳಿಂದ ವರ್ಣಿಸುವರು, ಅವುಗಳಲ್ಲಿ ಮೊದಲು, ತನ್ನನ್ನು ನೋಡಿ ಆಸಕ್ತರಾಗಿ ಬರುವ ಪುರುಷರನ್ನು ಧಿಕ್ಕರಿಸುವಳು 'ಯೋಷಿತ್ಸು ತಲ್ಪಾಭರಣ' ಎಂದು.

ಅಹೋ ಸುಭದ್ರಂ ಸುನಸಂ ಸುಸ್ಮಿತಂ ಚ ಮುಖಂ ಸ್ತ್ರಿಯಃ ।
ತ್ವಙ್ಮಾಂಸರುಧಿರಸ್ನಾಯುಮೇದೋ ಮಜ್ಜಾಸ್ಥಿಸಂಹತೌ ।
ವಿಣ್ಮೂತ್ರ ಪೂಯೇ ರಮತಾಂ ಕೃಮೀಣಾಂ ಕಿಯದಂತರಂ ॥

(ಭಾ.೧೧.೨೬.೨೦)

'ಆಹಾ! ಈ ಹೆಣ್ಣಿನ ನಗುಮೊಗ ಎಂಥ ಮಾಟವಾದ ಮೂಗಿನಿಂದ ಕೂಡಿದೆ! ಎಷ್ಟು ಸುಂದರವಾಗಿದೆ! ಎನ್ನುತ್ತ ಆವಳ ಚರ್ಮ ಮಾಂಸ ರಕ್ತ ಕೊಬ್ಬು ಮಜ್ಜೆ ಎಲುವುಗಳ ಗೂಡಿನಲ್ಲಿ ರಮಿಸುವ ಜನರಿಗೂ ಮಲಮೂತ್ರ ಕೀವುಗಳಲ್ಲಿ ರಮಿಸುವ ಕೃಮಿಗಳಿಗೂ ಇರುವ ಅಂತರವೆಷ್ಟು?' ಎಂದು, ಪುರೂರವನು ಉರ್ವಶೀಪ್ರಣಯ ಸುಖವನ್ನುಂಡು ಪ್ರಾರಬ್ಧ ತೀರಿದಾಗ ಹೇಳುವ ಮಾತು. ಅತ್ತ ಪಿಂಗಳಾವೇಶ್ಯೆ ಹೇಳುವ ಮಾತೂ ಹೀಗೇ ಇದೆ!



—೯೩—

**ವಿಷಯಾಸಕ್ತಿ ಭಗವಂತನನ್ನು ಮರೆಸುತ್ತದೆ**

**ಸಂತಂ ಸಮೀಪೇ ರಮಣಂ ರತಿಪ್ರದಂ**
**ವಿತ್ತಪ್ರದಂ ನಿತ್ಯಮಿಮಂ ವಿಹಾಯ ।**
**ಅಕಾಮದಂ ದುಃಖಭಯಾತಿಶೋಕ-**
**ಮೋಹಪ್ರದಂ ತುಚ್ಛಮಹಂ ಭಜೇಽಜ್ಞಾ ॥**

(ಭಾ.೧೧.೮.೩೦)

**ಆಸ್ತಾಂ ತಚ್ಚಿಂತಾ, ಮಮೈವ ಜನ್ಮ ಧಿಗಿತ್ಯಾಶಯೇನಾಹ ॥ ಸಂತಮಿತಿ ॥**

**ಸಮೀಪೇ ಸಂತಂ ನಿತ್ಯಂ ರತಿಪ್ರದಂ। ವಿತ್ತಂ ಅಪೇಕ್ಷಿತಂ ಪ್ರದದಾತೀತಿ। ನಿತ್ಯಂ ಮೃತಿರಹಿತಂ। ಇಮಂ ಈದೃಶಂ ರಮಣಂ ಪತಿಂ ವಿಹಾಯ। ಕಾಮಂ ಅಪೇಕ್ಷಿತಂ ನ ದದಾತೀತ್ಯಕಾಮದಂ। ಪ್ರತ್ಯುತ ಸ್ವಸ್ಯ ವಿಪದಾದಿನಾ ದುಃಖಾದಿಪ್ರದಂ। ಅತ ಏವ ತುಚ್ಛಂ ಹೇಯಂ ರಮಣಪದವಾಚ್ಯಂ। ಅಜ್ಞಾ ಮುಖ್ಯಪತಿಜ್ಞಾನಶೂನ್ಯಾ ಅಹಂ ಭಜೇ ಸೇವ ಇತಿ ॥**



**ಪಿಂಗಳಾವೇಶ್ಯೆ ತನ್ನ ಅವಿವೇಕಕ್ಕೆ ತಾನು ಪಶ್ಚಾತ್ತಾಪ ಪಡುತ್ತಾಳೆ— 'ಅಯ್ಯೋ ನನಗೆ ಸುಖವನ್ನು ಧನವನ್ನೂ ನೀಡುತ್ತ ಬಳಿಯಲ್ಲೇ ಇರುವ ಪ್ರಿಯಕರನಾದ ಭಗವಂತನನ್ನು ಬಿಟ್ಟು ಅಜ್ಞಳಾದ ನಾನು ಸುಖ ನೀಡದ, ದುಃಖ ಭಯ ಚಿಂತೆ ಶೋಕ ಮೋಹಗಳನ್ನೇ ನೀಡುವ ತುಚ್ಛಮಾನವನನ್ನು ಸೇವಿಸು ತ್ತಿದ್ದೇನೆ!'**

ಯದ್ಯಪಿ ಪರಮಾತ್ಮನನ್ನು 'ಪ್ರಿಯಕರ' ಎಂದು ಉಪಾಸನೆ ಮಾಡುವ ಅಧಿಕಾರ ಮಹಾಲಕ್ಷ್ಮಿಯೊಬ್ಬಳಿಗೇ. ಇನ್ನಾರಿಗೂ ಇರುವುದಿಲ್ಲ. ಹದಿನಾರು ಸಾವಿರ ಕನ್ಯೆಯರನ್ನು ಮದುವೆಯಾದರೂ ಪರಮಾತ್ಮನು ಅವರಲ್ಲಿ ಆವಿಷ್ಟಳಾದ ಮಹಾಲಕ್ಷ್ಮಿಯನ್ನೇ ರಮಿಸುತ್ತಾನೆ—

ನೈವಾನ್ಯಾಂ ರಮಯೇತ್ ಕನ್ಯಾಂ
ಪೂರ್ಣೋಽಯಂ ಪುರುಷಾಗ್ರಣೀಃ ।
ವೃತೋಽಪ್ಯನ್ಯಾಂಗನಾದೇಹೇ
ರಮಯೇತ್ ಪ್ರೇಯಸೀಮಿಮಾಂ ॥

ಪೂರ್ಣಾನಂದನಾದ ಸ್ವರಮಣನಾದ ಹರಿ ಯಾವ ಕನ್ಯೆಯೊಂದಿಗೂ ರಮಿಸುವುದಿಲ್ಲ. ರಮೆಯೊಂದಿಗೇ ರಮಿಸುತ್ತಾನೆ. ಬೇರೆ ಕನ್ಯೆಯರನ್ನು ಮದುವೆಯಾದರೂ, ಅವರೊಂದಿಗೆ ರಮಿಸುವುದಿಲ್ಲ. ಅವರೊಳಗೆ ಆವೇಶ ಗೊಳ್ಳುವ ರಮೆಯೊಡನೆ ರಮಿಸುತ್ತಾನೆ. ಎಂದಮೇಲೆ ಪಿಂಗಳೆ ಅವನನ್ನು ಪ್ರಿಯಕರನೆಂದು ಹೇಗೆ ಹೇಳುತ್ತಾಳೆ?

ನಿಜ. ಆದರೂ ಕನ್ಯೆಯಲ್ಲಿ ಆವಿಷ್ಟಳಾದ ರಮೆಯೊಡನೆ ಹರಿ ರಮಿಸಿದಾಗ ಕನ್ಯೆಗೆ ಸುಖ ವ್ಯಕ್ತವಾಗುವುದು. ಪಿಂಗಳೆ ಬಯಸುವುದು ಈಬಗೆಯ ಸುಖವನ್ನು.

ಪಿಂಗಳೆ ಬಯಸಿದಳೆಂದು ಎಲ್ಲ ಕನ್ಯೆಯರೂ ಇದನ್ನು ಬಯಸುವಂತಿಲ್ಲ. ಅದಕ್ಕೆ ಯೋಗ್ಯತೆ ಬೇಕು. ಅಪ್ಸರೆಯರಲ್ಲಿ ಕೆಲವರಿಗೆ ಮಾತ್ರ ರಮಾವೇಶದಿಂದ ಭಗವಂತನ ಪತ್ನಿಯಾಗುವ ಯೋಗ್ಯತೆ ಇದೆ. ಅವರಲ್ಲಿ ಒಬ್ಬಳು ಪಿಂಗಳೆ ವೇಶ್ಯೆಯಾಗಿ ಜನಿಸಿದ್ದಳು. ಅದರಿಂದ, 'ತ್ಯಕ್ತ್ವಾ ದುರಾಶಾಃ ಶರಣಂ ವ್ರಜಾಮಿ ತಮಧೀಶ್ವರಂ' ವಿಷಯಭೋಗದ ದುರಾಸೆಯನ್ನು ತ್ಯಜಿಸಿ ಹರಿಯನ್ನೆ ಮೊರೆಹೋಗುವೆನು ಎಂದು ನಿರ್ಧರಿಸಿ ಹರಿಯನ್ನೇ ಪತಿಯೆಂದು ಉಪಾಸನೆ ಮಾಡಿ ಕುಬ್ಜೆಯಾಗಿ ಜನಿಸಿದಳು. ಶ್ರೀಕೃಷ್ಣನನ್ನು ವರಿಸಿದಳು.

ಶ್ರೀಕೃಷ್ಣ ಅವಳ ಮನೆಗೆ ಹೋಗಿ ಅವಳನ್ನು ಗಾಂಧರ್ವವಿಧಿಯಿಂದ ವಿವಾಹವಾಗಿ ಒಂದು ತಿಂಗಳಕಾಲ ಇದ್ದು ವಿಶೋಕ ಎಂಬ ಒಬ್ಬ ಮಗನನ್ನು ಅನುಗ್ರಹಿಸಿದ.

ವಿಶೋಕ ಎಂಬ ಗಂಧರ್ವನು ವಿಶೋಕ ಎಂಬ ಮಗನಾಗಿ ಜನಿಸಿ ನಾರದರ ಶಿಷ್ಯತ್ವ ವಹಿಸಿ ಪಂಚರಾತ್ರಾಗಮವನ್ನೂ ಸಕಲ ಶಾಸ್ತ್ರಗಳನ್ನೂ ಅಧ್ಯಯನ ಮಾಡಿದ. ಶ್ರೀಭೀಮಸೇನನಿಗೆ ಸಾರಥಿಯಾದ.

ಪಿಂಗಳೆ ವಸ್ತುತಃ ಒಬ್ಬಳು ಅಪ್ಸರೆ. ಅಪರೋಕ್ಷಜ್ಞಾನಿಯಾಗಿದ್ದು ಗೋಪಿಯರಂತೇ ಅಪ್ಸರೆಯಾಗಿ ಯೋಗ್ಯವಾದ ಕಾಮಪೂರ್ವಕ ಭಕ್ತಿಯಿಂದ ಹರಿಯನ್ನು ಒಲಿಸಿಕೊಂಡಳು. ಬೇರೆಯವರು ಹೀಗೆ ಮಾಡಬಾರದು. ಮಾಡಿದರೆ ಮೂರ್ಖರೆನಿಸುತ್ತಾರೆ ಎಂದು ಭಾಗವತ ಹೇಳುತ್ತದೆ—

ದುರಾರಾಧ್ಯಂ ಸಮಾರಾಧ್ಯ ವಿಷ್ಣುಂ ಸರ್ವೇಶ್ವರೇಶ್ವರಂ ।
ಯೋ ವೃಣೀತೇ ಮನೋಽಗ್ರಾಹ್ಯಂ ಅಸತ್ವಾತ್ ಕುಮನೀಷ್ಯಸೌ ॥
(ಭಾ.೧೦.೪೭.೧೨)

'ಸರ್ವೇಶ್ವರರಿಗೂ ಈಶ್ವರನಾದ ಶ್ರೀಕೃಷ್ಣ ಸುಲಭವಾಗಿ ಒಲಿಯುವವ ನಲ್ಲ. ಅಂಥವನನ್ನು ಒಲಿಸಿಕೊಂಡೂ ಮನಸಿನಿಂದ ಆಶಿಸಲು ಯೋಗ್ಯವಲ್ಲದ ವಿಷಯಸುಖವನ್ನು ಬೇಡುವವನು ರಾಗದ್ವೇಷಯುಕ್ತನಾದ ಮೂರ್ಖನೇ ಸರಿ'.



–೯೪–

## ವಿಷಯಾಸಕ್ತಿಯಿಂದ ವೇಶ್ಯೆಯರು ಮೈಮಾರಿಕೊಳ್ಳುತ್ತಾರೆ

ಅಹೋ ಮಯಾತ್ಮಾ ಪರಿತಾಪಿತೋ ವೃಥಾ
ಸಾಂಕೇತ್ಯವೃತ್ತ್ಯಾಽತಿ ವಿಗರ್ಹ್ಯ ವಾರ್ತಯಾ ।
ಸ್ತ್ರೈಣಾನ್ನರಾಂಶ್ಚಾರ್ಥ ತೃಷಾನುಶೋಚ್ಯಾನ್
ಕ್ರೀತ್ವೇಹ ವಿತ್ತಂ ರತಿಮಾತ್ಮನೇಚ್ಛತೀ ॥

(ಭಾ.೧೧.೮.೩೦)

ಕೃತಸ್ಯ ಪಾಪಸ್ಯ ಪಶ್ಚಾತ್ತಾಪೇ ಸತ್ಯೇವ ಪ್ರಾಯಶ್ಚಿತ್ತೇನ ಶುದ್ಧಿರಿತಿ ಭಾವೇನ ತಸ್ಯಾಃ ಪಶ್ಚಾತ್ತಾಪಪ್ರಕಾರಂ ದರ್ಶಯತಿ । **ಅಹೋ ಇತಿ** ॥ ಆತ್ಮಾ ಮನಃ । ಪ್ರಯೋಜನಂ ವಿನೈವ ಪರಿತಾಪಿತಃ । ನನು ವೃಥೈವೇತ್ಯನುಪಪನ್ನಂ, ವಿತ್ತಲಾಭಾದೇಃ ಪ್ರಯೋಜನಸ್ಯ ಸದ್ಭಾವಾದಿತ್ಯತಃ । ಸತ್ಯಂ । ತಸ್ಯ ಅಜ್ಞಾನದಶಾಯಾಂ ಪ್ರಯೋಜನತ್ವೇಽಪಿ ಇದಾನೀಂ ಅಪ್ರಯೋಜನತ್ವಾದಿತ್ಯಾ-ಶಯೇನ ಪೂರ್ವತನವೃತ್ತಿವಿಷಯಪ್ರಯೋಜನಾನಿ ವಿನಿಂದತೀತ್ಯಾಹ ॥ **ಸಾಂಕೇತ್ಯೇತಿ** ॥ ಯತಃ ಅತಿವಿಗರ್ಹ್ಯಾ ವಾರ್ತಾ ಕಿಂವದಂತೀ ಯಸ್ಯಾಃ ಸಾ ತಯಾ । ಸಾಂಕೇತ್ಯಂ ಸಂಕೇತಪ್ರಾಪ್ಯದ್ರವ್ಯಂ ತೇನ ವೃತ್ತಿಃ ಆಜೀವಿಕಾ ತಯಾ । ಇಹ ವಿತ್ತಂ ಉದ್ದಿಶ್ಯ ಆತ್ಮನಾ ದೇಹೇನ, ಅರ್ಥತೃಷಾ ವಿಷಯತೃಷ್ಣಯೈವ ಅನುಶೋಚ್ಯಾನ್ ಸ್ತ್ರೈಣಾನ್ ನರಾನ್ ಕ್ರೀತ್ವಾ ರತಿಂ ಸುಖಂ ಇಚ್ಛತೀ ಅಭವಂ ತತ ಇತಿ । ಅಹೋ ಇತಿ ಖೇದೇ । ತೇನ ಪಶ್ಚಾತ್ತಾಪಂ ಧ್ವನಯತಿ ॥

❖❖❖

'ಅಯ್ಯೋ' ಎಂದು ದುಃಖದಿಂದ ಹೇಳಿಕೊಂಡು ಪಶ್ಚಾತ್ತಾಪಪಡುತ್ತಾಳೆ. ಪಿಂಗಳೆ. 'ವಿಷಯಲಾಲಸೆಯಿಂದ ಶೋಚನೀಯ ಸ್ಥಿತಿಯಲ್ಲಿರುವ ಕಾಮುಕ ಜನರಿಗೆ ನನ್ನ ಶರೀರವನ್ನು ಒಪ್ಪಿಸಿ, ಅವರನ್ನು ವಶಪಡಿಸಿಕೊಂಡು, ಅವರಿಂದ ಹೇರಳ ಹಣ ಸುಲಿದು ಬದುಕುವ ಪರಮ ನೀಚವೃತ್ತಿ ನನ್ನದಾಗಿತ್ತು. ದಾರಿಯಲ್ಲಿ ಹೋಗುವ ಧನಿಕರಾದ ಜನರನ್ನು ಮಾತ್ರ ಬಳಿಗೆ ಕರೆಸಿಕೊಳ್ಳುತ್ತಿದ್ದೆ. ಯಾರೂ ಅಂಥವರು ಸಿಗದಿದ್ದಾಗ, ಒಂದಲ್ಲ ಒಂದುದಿನ ಅಂಥವ ಸಿಗುತ್ತಾನೆ ಎಂದು ನಿರೀಕ್ಷಿಸುತ್ತ ನಿದ್ದೆ ಇಲ್ಲದೇ ರಾತ್ರಿಗಳನ್ನು ಕಳೆದೆ. ರಾತ್ರಿಗಳು ಕಳೆದವು.

**ಅವನು ಸಿಗಲಿಲ್ಲ. ವ್ಯರ್ಥವಾಗಿ ಕಾದಿದ್ದಕ್ಕೆ ನನ್ನ ಮನ ಈಗ ಪರಿತಪಿಸು ವಂತಾಯಿತು.'**

ಯದ್ಯಪಿ ಅಪ್ಸರೆಯರೂ ಎಲ್ಲರೂ ಪರಪುರುಷರಿಗೆ ಶರೀರವನ್ನು ಒಪ್ಪಿಸಿ ಯಥೇಚ್ಛ ಧನ ಸಂಪಾದಿಸುವವರೆ. ಆದರೆ ಅವರು ನಿಯತ ಪತಿಗಳಿಲ್ಲದವ ರಾದ್ದರಿಂದ ಒಲಿದು ಬಂದ ಪುರುಷರಲ್ಲಿಯೇ ಹರಿಯನ್ನು ಕಂಡು ಅವರಿಗೆ ಶರೀರ ಒಪ್ಪಿಸುತ್ತಾರೆ, ಒಲಿದ ಆ ಪುರುಷರಿಂದ ಪ್ರೀತಿಯಿಂದ ಸಂತೋಷ ದಿಂದಲೆ ಧನ ಸಂಪಾದಿಸುತ್ತಾರೆ. ಪಿಂಗಳೆ ಹಾಗೆ ಮಾಡಲಿಲ್ಲ. ತಾನು ಕೇಳಿದಷ್ಟು ಹಣ ಕೊಡಲಾರದ ಬಡಪಾಯಿಗಳಿಗೆ ನಿರ್ದಾಕ್ಷಿಣ್ಯವಾಗಿ ತನ್ನ ಸಂಗವನ್ನು ನಿರಾಕರಿಸುತ್ತಿದ್ದಳು.

ಇಂಥ ವೇಶ್ಯಾವೃತ್ತಿಯನ್ನು ನಡೆಸಿದ್ದರ ಫಲವಾಗಿಯೆ ಪಿಂಗಳೆ ಸ್ವತಃ ಓರ್ವ ಬ್ರಹ್ಮವಾದಿನಿಯಾದ ಅಪ್ಸರೆಯೇ ಆಗಿದ್ದರೂ ತ್ರಿವಕ್ರೆಯಾಗಿ ಗೂನುಬೆನ್ನಿನ ವಿಕೃತಶರೀರದವಳಾಗಿ ಜನಿಸಿದಳು. ಅದು ಪ್ರಾರಬ್ಧ. ಬಳಿಕ ಭಕ್ತಿಯಿಂದ ಶ್ರೀಕೃಷ್ಣನ ದರ್ಶನ ಮಾಡಿ ಅವನ ಅನುಗ್ರಹದಿಂದ ಗೂನನ್ನು ಕಳೆದುಕೊಂಡು ಸಾಕ್ಷಾತ್ ಅಪ್ಸರೆಯಂತಾದಳು. ಶ್ರೀಕೃಷ್ಣನ ಅಂಗಸಂಗವನ್ನು ಪಡೆದಳು.

ತನಗೆ ಶಾಶ್ವತ ಅಂಗಸಂಗ ಸುಖ ನೀಡಬಲ್ಲ ಶ್ರೀಹರಿ ಸದಾ ನನ್ನೊಳಗೇ ಬಳಿಯಲ್ಲಿ ಇರುತ್ತಿದ್ದರೂ ದುಃಖಭಯಾದಿಗಳನ್ನು ಮಾತ್ರ ನೀಡುವ ತುಚ್ಛ ಕಾಮುಕರನ್ನು ಬಳಿಗೆ ಕರೆಸಿಕೊಳ್ಳುತ್ತಿದ್ದೆನಲ್ಲ! ಎಂದು ಪಿಂಗಳೆ ಪರಿತಪಿಸುತ್ತಾಳೆ. ಇದುವೆ ವಿಷಯಗಳಲ್ಲಿ ವಿರಕ್ತಿ, ಹರಿಯಲ್ಲಿ ಭಕ್ತಿ. ಅವಳಿಗೆ ಜ್ಞಾನೋದಯ ವಾದಾಗ ಈ ವಿರಕ್ತಿ ಭಕ್ತಿಗಳು ಅಭಿವ್ಯಕ್ತವಾಗಿವೆ.

**ನನು ನಿತ್ಯರಮಣಜ್ಞಾನಾಭಾವೇನ ಅನಿತ್ಯರಮಣಂ ಸೇವಿತವತೀತಿ ಪ್ರಾಗಭಿಹಿತಂ। ತದಯುಕ್ತಂ। ತಸ್ಯಾಪಿ ದೇಹಸದ್ಭಾವೇ ಅನಿತ್ಯತ್ವಪ್ರಸಂಗಾತ್। ತದಭಾವೇ ಸೌಂದರ್ಯಸೌಲಕ್ಷಣ್ಯಾದ್ಯಭಾವೇನ ಸೌಂದರ್ಯಾದ್ಯುಪೇತ-ದೇಹಾದಿಯುಕ್ತಪುರುಷಪರಿತ್ಯಾಗೇನ ತಾದೃಶಪುರುಷೋಪಸತ್ತ್ಯಯೋಗಾತ್ ಇತ್ಯುಭಯಥಾ ಚ ದೋಷಾದಿತಿ ಚೇತ್। ಮೈವಂ। ದೇಹಸತ್ತ್ವಾಂಗೀಕಾರೇಣ ದ್ವಿತೀಯಪಕ್ಷೋಕ್ತದೋಷಾಭಾವಾತ್। ನ ಚ ಪ್ರಥಮಪಕ್ಷೋಕ್ತದೋಷಃ। ದೇಹವತ್ತ್ವಮಾತ್ರಸ್ಯ ಅನಿತ್ಯತ್ವಪ್ರಸಂಜಕತ್ವಾಭಾವಾತ್। ಭೌತಿಕದೇಹವತ್ತ್ವಸ್ಯ ಸದ್ದೇಹಃ ಸುಖಗಂಧಶ್ಚೇತಿ ಪ್ರಮಾಣಬಾಧಿತತ್ವಾತ್। ಸ್ವಯಂ ದೇಹನಾಶಾದಿ-**

**ರೂಪಸಂಸಾರೋಪೇತಸ್ಯ ಮೋಚಕತ್ವಾಯೋಗಾಚ್ಚ। ಏತದರ್ಥಮೇವ ಚ ಪ್ರಾಗ್ವಿತ್ತಪ್ರದಮಿತ್ಯುಕ್ತಂ। ಸ ಚ ದೇಹಃ ನಖಮಾರಭ್ಯ ಆಕೇಶಂ ನಿರುಪಮನಿರವಧಿಕಾನಂದಾದ್ಯಾತ್ಮಕತಯಾ ತಾದೃಶಸೌಂದರ್ಯಸೌಲಕ್ಷಣ್ಯಾ-ದ್ಯುಪೇತ ಇತಿ ಸ ಏವ ಜ್ಞಾನದಶಾಯಾಂ ಭಜನೀಯಃ। ತದೇತತ್ಸೂಚಯಿತುಂ ರತಿಪ್ರದಮಿತ್ಯುಕ್ತಂ।**

ಆದರೆ ಈ ಪಿಂಗಳೆಗೆ ಜ್ಞಾನೋದಯ ಹೇಗಾಯಿತು? ಶಾಶ್ವತ ಅಂಗಸಂಗ ಸುಖ ನೀಡಬಲ್ಲವನೊಬ್ಬನಿದ್ದಾನೆ ಎಂದು ಹೇಗೆ ನಿರ್ಣಯಿಸಿದಳು? ಅವನಿಗೆ ದೇಹವಿರುವುದಾದರೆ ದೇಹವೆಂಬುದು ಅನಿತ್ಯವೇ ಎಂದು ಕಂಡಿರುವುದರಿಂದ ಅವನು ಅನಿತ್ಯನೆ. ದೇಹವಿಲ್ಲವೆಂದರೆ ದೇಹಉಳ್ಳ ಬೇರೆ ಕಾಮುಕರನ್ನು ಬಿಟ್ಟು ದೇಹ ಸೌಂದರ್ಯಾದಿಗಳಿಲ್ಲದ ಈತನನ್ನು ಏಕೆ ಭಜಿಸಬೇಕು? ಈ ಪ್ರಶ್ನೆಗೆ ಪಿಂಗಳೆಯಲ್ಲಿರುವ ಸಮಾಧಾನ ಹೀಗೆ—

ಈತನಿಗೆ ದೇಹವಿದೆ, ಆದರೆ ಅದು ಅನಿತ್ಯದೇಹವಲ್ಲ. ಭೌತಿಕದೇಹವಾದರೆ ಅದು ಅನಿತ್ಯವಾಗಿರುತ್ತದೆ, ನನ್ನ ಪ್ರಿಯಕರನಾದ ಹರಿಯ ದೇಹವು ಜ್ಞಾನಾನಂದಮಯ—

'ಸದ್ದೇಹಃ ಸುಖಗಂಧಶ್ಚ ಜ್ಞಾನಭಾಃ ಸತ್ಪರಾಕ್ರಮಃ'

ಅವನು ಅಂಗಸಂಗದಿಂದ ನನ್ನ ಸ್ವರೂಪಾನಂದಾಭಿವ್ಯಕ್ತಿ ಎಂಬ ಮಹಾ ಸಂಪತ್ತನ್ನು ಮೋಕ್ಷದಲ್ಲಿ ಕೊಡುತ್ತಾನೆ. 'ರತಿಪ್ರದಂ ವಿತ್ತಪ್ರದಂ' ಆನಂದಮಯ ಅಂಗ ಸಂಗಸುಖವನ್ನೂ ನೀಡುತ್ತಾನೆ. ಮೋಕ್ಷವೆಂಬ ಅಕ್ಷಯವಾದ ಧನವನ್ನೂ ನೀಡುತ್ತಾನೆ, ಎಂದು ವಿಷಯಸುಖವೈರಾಗ್ಯ ಜ್ಞಾನಪೂರ್ವಕವಾಗಿ ಮುಕ್ತಿದಾಯಕನನ್ನು ಭಕ್ತಿಯಿಂದ ಆರಾಧಿಸುತ್ತಾಳೆ ಪಿಂಗಳೆ.



–೯೫–

**ಮಾನವಶರೀರ ಜ್ಞಾನಸಾಧನವೆ ಹೊರತು ವಿಷಯಸುಖ ಸಾಧನವಲ್ಲ**

**ಯದಸ್ಥಿಭಿರ್ನಿರ್ಮಿತವಂಶವಂಶ್ಯ**
**ಸ್ಥೂಣಂ ತ್ವಚಾ ರೋಮನಖೈಃ ಪಿನದ್ಧಂ।**

**ಕ್ಷರನ್ನವದ್ವಾರಮಗಾರಮೇತದ್**
**ವಿಣ್ಮೂತ್ರಪೂರ್ಣಂ ಮದುಪೈತಿ ಕಾऽನ್ಯಾ ॥**

(ಭಾ.೧೧.೮.೩೨)

**ತತೋऽನ್ಯೇಷಾಂ ತು ಭೌತಿಕಶರೀರತ್ವೇನ ಅನಿತ್ಯತ್ವಮೇವೇತ್ಯತೋ ಹೇಯತ್ವಮೇವೇತ್ಯತಃ ತೇ ನ ಜ್ಞಾನದಶಾಯಾಂ ಭಜನೀಯಾ ಇತ್ಯಾಶಯೇನ, ಭಾಗವತಂ ಸ್ವರೂಪಂ ಅಜಾನದ್ಭಿಃ ಭಜನೀಯಾ ದೇಹಾಃ ಈದೃಶಸೌಂದರ್ಯಾದ್ಯುಪೇತಾ ಇತ್ಯಾಹ ॥ ಯದಸ್ಥಿಭಿರಿತಿ ॥ ಬಹಿಃ ತ್ವಚಾರೋಮಭಿಃ ನಖೈಃ ಪಿನದ್ಧಂ ಆಚ್ಛಾದಿತಂ। ಅಂತಃ ವಂಶಾಃ ವೇಣವಃ ವಂಶ್ಯಾಃ ವಂಶಪ್ರೋತಾಃ ತಿರಶ್ಚೀನಾ ವೇಣವಃ, ಸ್ಥೂಣಾ ಸರ್ವಾಧಾರೋ ಮಹಾನ್ ವಂಶಃ ಅಸ್ಥಿಭಿಃ ನಿರ್ಮಿತಾ ವಂಶಾದಯೋ ಯಸ್ಮಿನ್ । ಕ್ಷರಂತಿ ಸ್ರವಂತಿ ನವದ್ವಾರಾಣಿ ಯಸ್ಯ ತತ್ । ಈದೃಶಂ ಅಗಾರಂ ಗೃಹಂ ಮತ್ತೋ ಜ್ಞಾನಶೂನ್ಯಾ ಯಾ ಅನ್ಯಾ ಕಾ ಸ್ತ್ರೀ ಶೋಭನತಯಾ ಸ್ವೀಕುರ್ಯಾದಿತಿ ॥**



**'ಈ ಶರೀರವೆಂಬ ಮನೆಗೆ ಎಲುಬುಗಳಿಂದ ನಿರ್ಮಿತವಾದವು ತೊಲೆ ಜಂತಿ ಕಂಬಗಳು. ತೊಗಲು ಕೂದಲು ಉಗುರುಗಳ ಹೊದಿಕೆ, ನವದ್ವಾರಗಳು ಸದಾ ಸೋರುತ್ತವೆ. ಮಲಮೂತ್ರಗಳಿಂದ ತುಂಬಿವೆ. ನನ್ನ ಹೊರತು ಪರಮಾತ್ಮ ಸ್ವರೂಪ ಜ್ಞಾನಿ ವಿವೇಕಿಯಾಗಿರುವವಳು ಯಾರು ತಾನೆ ಇಂಥ ಶರೀರವನ್ನು ರತಿಸುಖಕ್ಕಾಗಿ ಬಯಸುವಳು? ನಾನು ಅಜ್ಞಾನದಿಂದ ಇಂದಿನವರೆಗೂ, ಇಂಥ ಶರೀರದಿಂದ ವಿಷಯಸುಖವನ್ನು ಬಯಸಿದೆ' ಎಂದು ಪಿಂಗಳೆ ಪಶ್ಚಾತ್ತಾಪ ಪಡುತ್ತಾಳೆ.**

ಯದ್ಯಪಿ ಅವಳು ಅಪರೋಕ್ಷಜ್ಞಾನಿಯಾದ ಅಪ್ಸರೆ, ಹೊರತು ಅಜ್ಞಳಲ್ಲ. ಆದರೂ ಕೆಲವೊಮ್ಮೆ ಅಪರೋಕ್ಷಿಗಳಿಗೂ ಪ್ರಾರಬ್ಧಕಾಮ್ಯನಿಷಿದ್ಧಕರ್ಮಗಳಿಂದ ಜ್ಞಾನಾದಿಗಳು ಪ್ರತಿಬದ್ಧವಾಗುವುದುಂಟು, ಭಗವಂತನ ಆರಾಧನಾ ರೂಪ ವಲ್ಲದ ವಿಷಯಭೋಗ ಪ್ರವೃತ್ತಿ ಕಂಡು ಬರುವುದುಂಟು. ಪ್ರಾರಬ್ಧ ಕಳೆದಾಗ ಜ್ಞಾನಭಕ್ತಿ ವೈರಾಗ್ಯಗಳು ಅಭಿವ್ಯಕ್ತವಾಗುತ್ತವೆ.



–೯೬–

**ದುಷ್ಟಸ್ತ್ರೀಪುರುಷರ ಒಡನಾಟ ನರಕಸಾಧನ**

**ಸಂಗಂ ನ ಕುರ್ಯಾತ್ ಪ್ರಮದಾಸು ಜಾತು**
**ಯೋಗಸ್ಯ ಪಾರಂ ಪರಮಾರುರುಕ್ಷುಃ ।**
**ಮತ್ಸೇವಯಾ ಪ್ರತಿಲಬ್ಧಾತ್ಮಲಾಭೋ**
**ವದಂತಿ ಯಾಂ ನಿರಯದ್ವಾರಮಸ್ಯ ॥** (ಭಾ.೩.೩೧.೪೦)

**ತದೇವಂ ನಿರೂಪಿತವೈರಾಗ್ಯಮುಪಸಂಹರತಿ ॥ ಸಂಗಮಿತಿ ॥ ಜ್ಞಾನಿನಃ ಯಾಃ ಅಸ್ಯ ಪುಂಸಃ ನಿರಯದ್ವಾರಂ ವದಂತಿ ತಾಸು ಪ್ರಮದಾಸು ಜಾತು ಕದಾಪಿ ಸಂಗಂ ಸ್ನೇಹಂ ನ ಕುರ್ಯಾತ್ । ಸಂಗಕರಣೇ ಸ್ವಪುರುಷಾರ್ಥಹಾನಿಃ ಸ್ಯಾತ್ ಇತ್ಯಭಿಪ್ರೇತ್ಯೋಕ್ತಂ ಯೋಗಸ್ಯ ಪಾರಂ ಪರಮಾರುರುಕ್ಷುರಿತಿ ॥ ಪ್ರತಿಬಂಧಕಮಿದಂ । ಸಾಧಕಂ ಕಿಂ । ಇತ್ಯತ ಉಕ್ತಂ ಮತ್ಸೇವಯೇತಿ ॥ ಆತ್ಮಲಾಭಃ ಪುರುಷಾರ್ಥಲಾಭಃ । ಯಥಾಹುಃ—**

**''ನ ತಥಾಸ್ಯ ಭವೇನ್ಮೋಹೋ ಬಂಧಶ್ಚಾನ್ಯಪ್ರಸಂಗತಃ ।**
**ಯೋಷಿತ್ಸಂಗಾದ್ಯಥಾ ಪುಂಸೋ ಯಥಾ ತತ್ಸಂಗಿಸಂಗತಃ' ॥**

❖❖❖

**ಕಪಿಲನಾಮಕ ಪರಮಾತ್ಮನು ತಾಯಿ ದೇವಹೂತಿಗೆ ಹೇಳುತ್ತಾನೆ— 'ಜ್ಞಾನಯೋಗದಲ್ಲಿ ಸಿದ್ಧಿ ಹೊಂದಲು ಬಯಸುವವನು, ನನ್ನ ಸೇವೆಯಿಂದಲೇ ಸ್ವರೂಪಾನಂದ ಲಾಭವೆಂದು ಅರಿತುಕೊಂಡಿರುವವನು ಆ ಜ್ಞಾನಯೋಗವನ್ನು ಬಿಟ್ಟು ದುಷ್ಟ ಸ್ತ್ರೀಯರ ಸಂಗವನ್ನೆಂದೂ ಮಾಡಬಾರದು. ಅವರು ಅವನಿಗೆ ನರಕದ ಹೆಬ್ಬಾಗಿಲಾಗುವರೆಂದು ಬಲ್ಲವರು ಹೇಳುತ್ತಾರೆ—**

'ಪ್ರಮದಾಸು ಜಾತು ಸಂಗಂ ನ ಕುರ್ಯಾತ್'

ಎಂದರೆ, ಗೃಹಸ್ಥಾಶ್ರಮಿಯು ಸ್ತ್ರೀಸಂಗ ಮಾಡದಿರಲಾಗದಿರುವುದರಿಂದ, 'ದುಷ್ಟಸ್ತ್ರೀಸಂಗ ಮಾಡಬಾರದೆ'ಂದರ್ಥ. ಒಳ್ಳೆಯ ಸ್ತ್ರೀಪುರುಷರ ಒಡನಾಟ ಒಳ್ಳೆಯದೆ, ಕೆಟ್ಟದಲ್ಲ. ದುಷ್ಟಸ್ತ್ರೀ ಪುರುಷರ ಒಡನಾಟವೇ ದುಷ್ಪರಿಣಾಮ ಉಂಟು ಮಾಡುವಂಥದೆಂದು ಭಾಗವತತಾತ್ಪರ್ಯದಲ್ಲಿ ವರಾಹಪುರಾಣ ವಚನವನ್ನು ತೋರಿಸಿದ್ದಾರೆ. ಭಾಗವತಕ್ಕೂ ಇದೇ ಅಭಿಪ್ರಾಯ ಎನ್ನಬೇಕು—

ನ ತಥಾಸ್ಯ ಭವೇನ್ಮೋಹೋ ಬಂಧಶ್ಚಾನ್ಯಪ್ರಸಂಗತಃ ।
ಯೋಷಿತ್ ಸಂಗಾದ್ಯಥಾ ಪುಂಸಾಂ ಯಥಾ ತತ್ಸಂಗಿಸಂಗತಃ ॥

(ಭಾ.೩.೩೧.೩೬)

'ದುಷ್ಟಸ್ತ್ರೀ ಸಂಗದಿಂದಲೂ ದುಷ್ಟಸ್ತ್ರೀಸಂಗಿ ಸಂಗದಿಂದಲೂ ಎಷ್ಟು ಮೋಹಬಂಧಗಳುಂಟಾಗುವುವೋ ಅಷ್ಟು ಬೇರೆ ಯಾರ ಸಂಗದಿಂದಲೂ ಉಂಟಾಗುವುದಿಲ್ಲ' ಎಂದೂ ಕಪಿಲೋಪದೇಶವಿದೆ.



–೯೭–

**ಧನಸಂಪತ್ತು ಕ್ಷಣ ಭಂಗುರ**

**ರಾಯಃ ಕಲತ್ರಂ ಪಶವಃ ಸುತಾದಯೋ**
**ಗೃಹಾ ಮಹೀ ಕುಂಜರಕೋಶ ಭೂತಯಃ ।**
**ಸರ್ವೇಽರ್ಥಕಾಮಾಃ ಕ್ಷಣಭಂಗುರಾಯುಷಃ**
**ಕುರ್ವಂತಿ ಮರ್ತ್ಯಸ್ಯ ಕಿಯತ್ಪ್ರಿಯಂ ಚಲಾಃ ॥**

(ಭಾ.೭.೭.೪೦)

ಬಂಧಕೇಷು ವಿಷಯೇಷು ಶ್ರೇಷ್ಠಂ ದ್ವಯಂ ಕಾಂತಾ ಕನಕಂ ಚ । ತತ್ರ ಆದ್ಯೇ ಸಂಗಃ ಪರಿತ್ಯಾಜ್ಯಃ ಇತ್ಯಭಿಧಾಯ ದ್ವಿತೀಯೇಽಪ್ಯಾಹ ॥ ರಾಯ ಇತಿ ॥ ರಾಯಃ ಧನಾನಿ । ಭೂತಿಃ ಅಲಂಕಾರಾದಿಃ । ಇತ್ಯೇವಂ ಸರ್ವೇ ಅರ್ಥಾಃ ವಿಷಯಾಃ ಕಾಮಾಃ ತದ್ಭೋಗಾಶ್ಚ । ಅತಃ ತತ್ಪರಿತ್ಯಾಗ ಏವ ವರೀಯಾನಿತಿ ಭಾವಃ । **ಯಥಾಹುಃ—**

''ಸ್ತೇಯಂ ಹಿಂಸಾಽನೃತಂ ದಂಭಃ ಕಾಮಃ ಕ್ರೋಧಃ ಸ್ಮಯೋ ಮದಃ ।
ಭೇದೋ ವೈರಮವಿಶ್ವಾಸಃ ಸಂಸ್ಪರ್ಧಾ ವ್ಯಸನಾನಿ ಚ ॥

ಏತೇ ತ್ರಯೋದಶಾಽನರ್ಥಾ ಅರ್ಥಮೂಲಾ ಮತಾ ನೃಣಾಂ ।
ತಸ್ಮಾದನರ್ಥಮರ್ಥಾಖ್ಯಂ ಶ್ರೇಯೋರ್ಥೀ ದೂರತಸ್ತ್ಯಜೇದಿತಿ ।
''ನಿತ್ಯಾರ್ತಿದೇನ ವಿತ್ತೇನ ದುರ್ಲಭೇನಾತ್ಮಮೃತ್ಯುನಾ ।
ಗೃಹಾಪತ್ಯಾಪ್ತಪಶುಭಿಃ ಕಾ ಪ್ರೀತಿಃ ಸಾಧಿತೈಶ್ಚಲೈ''ರಿತಿ ॥



**'ಹಣ ಹೆಂಡತಿ ಪಶುಗಳು ಮಕ್ಕಳು ಮುಂತಾದವರು ಮನೆ ಭೂಮಿ ಬೊಕ್ಕಸ ಇತರ ಐಶ್ವರ್ಯಗಳು ಹೀಗೆ ಎಲ್ಲ ಅಭೀಷ್ಟ ವಸ್ತುಗಳೂ ಚಂಚಲ ವಾಗಿದ್ದು ಕ್ಷಣದಲ್ಲಿ ನಾಶವಾಗುವಂಥವು. ಅಥವಾ ಕೈತಪ್ಪಿ ಹೋಗುವವುಗಳು. ಸಾವೆಂಬುದು ಇದ್ದೇ ಇರುವವನಿಗೆ ಇವು ಎಷ್ಟುತಾನೆ ಸುಖನೀಡಬಲ್ಲುವು? –ಪ್ರಹ್ಲಾದನು ಅಸುರ ಬಾಲಕರಿಗೆ ಹೇಳಿದ ಮಾತು.**

ಬಂಧಕಗಳಲ್ಲಿ ಹೆಣ್ಣು ಹೊನ್ನು ಎರಡು ಬಹಳ ಪ್ರಧಾನ. ಅವುಗಳಲ್ಲಿ ಹೆಣ್ಣಿನ ಬಗ್ಗೆ ಇಷ್ಟರವರೆಗೆ ಹೇಳಿ ಈಗ ಹೊನ್ನಿನ ಬಗ್ಗೆ ಹೇಳಿದ್ದಾರೆ. ಪ್ರಹ್ಲಾದನ ಈ ಉಪದೇಶಕ್ಕೆ ಸಮರ್ಥನೆಯನ್ನು ಅವಧೂತಮುನಿ ನೀಡುತ್ತಾರೆ—

ಸ್ತೇಯಂ ಹಿಂಸಾಽನೃತಂ ದಂಭಃ ಕಾಮಃ ಕ್ರೋಧಃ ಸ್ಮಯೋ ಮದಃ ।
ಭೇದೋ ವೈರಮವಿಶ್ವಾಸಃ ಸಂಸ್ಪರ್ಧಾ ವ್ಯಸನಾನಿ ಚ ॥

ಏತೇ ತ್ರಯೋದಶಾನರ್ಥಾ ಹ್ಯರ್ಥಮೂಲಾ ಮತಾ ನೃಣಾಂ ।
ತಸ್ಮಾದನರ್ಥಮರ್ಥಾಖ್ಯಂ ಶ್ರೇಯೋಽರ್ಥೀ ದೂರತಸ್ತ್ಯಜೇತ್ ॥

(ಭಾ.೧೧.೨೩.೧೮,೧೯)

'ಕಳ್ಳತನ ಮಾಡುವ ದುಬುದ್ಧಿ, ಹಣಕ್ಕಾಗಿ ಹಿಂಸೆ ಮಾಡುವ ಪ್ರವೃತ್ತಿ ಸುಳ್ಳು ಹೇಳುವುದು, ದಂಭಾಚಾರ, ದುಷ್ಟಕಾಮನೆಗಳು. ತನಗಾಗದವರ ಮೇಲೆ ಕ್ರೋಧ, ಅಹಂಕಾರ, ದುಡ್ಡಿನ ಮದ, ಭೇದನೀತಿ, ಹಗೆತನ ಎಲ್ಲರಮೇಲೂ ಅವಿಶ್ವಾಸ, ಹಣಕ್ಕಾಗಿ ಪೈಪೋಟಿ, ದುಶ್ಚಟಗಳಿಗೆ ಬಲಿಯಾಗುವುದು—ಇವು ಹದಿಮೂರು ಮನುಷ್ಯರಿಗೆ ಹಣದಿಂದಾಗುವ ಅನರ್ಥಗಳು. ಅನರ್ಥಕರವಾದ ಹಣವನ್ನು, ಶ್ರೇಯಸ್ಸನ್ನು ಬಯಸುವವನು ದೂರ ಇರಿಸಬೇಕು.'

ನಿತ್ಯಾರ್ತಿದೇನ ವಿತ್ತೇನ ದುರ್ಲಭೇನಾತ್ಮ ಮೃತ್ಯುನಾ ।
ಗೃಹಾಪತ್ಯಾಪ್ತ ಪಶುಭಿಃ ಕಾ ಪ್ರೀತಿಃ ಸಾಧಿತೈಶ್ಚಲೈಃ ॥

(ಭಾ.೧೧.೩..೨೦)

ಹಣವು ಬರುವಾಗ ಹೋಗುವಾಗ ಇರುವಾಗ ಎಲ್ಲ ಕಾಲದಲ್ಲಿಯೂ ದುಃಖದಾಯಕವೆ. ಅದರ ಸಂಪಾದನೆಯೂ ಕಷ್ಟ. ರಕ್ಷಣೆಯೂ ಕಷ್ಟ. ತನ್ನ ಮರಣಕ್ಕೂ ಅದು ಕಾರಣವಾಗಬಹುದು. ಮನೆ ಮಕ್ಕಳು ಆಪ್ತರು ಪಶುಗಳು

ಇವು ಕೂಡ ಸ್ಥಿರವಲ್ಲ. ಮನುಷ್ಯ ತಾನೇ ಮೃತ್ಯುವಶನಾಗಿರುವಾಗ ಅವನ್ನು ಸಾಧಿಸಿಕೊಂಡು ಏನು ಸುಖಪಡಲು ಸಾಧ್ಯ ?



–೯೮–

**ಧನಾರ್ಜನ ಚಿಂತೆಯಲ್ಲಿಯೆ ಅಸುನೀಗುತ್ತಾನೆ ಮಾನವ**

ಕ್ಷುದ್ರಂಚರಂ ಸುಮನಸಾಂ ಶರಣೇ ಮಿಥಿತ್ವಾ
ರಕ್ತಂ ಷಡಂಘ್ರಿಗಣಸಾಮಸು ಲುಬ್ಧಕರ್ಣಂ ।
ಅಗ್ರೇ ವೃಕಾನಸುಹೃತೋಽವಿಗಣಯ್ಯ ಯಾಂತಂ
ಪೃಷ್ಠೇ ಮೃಗಂ ಮೃಗಯುಲುಬ್ಧಕ ಬಾಣಭಿನ್ನಂ ॥

ಅಸ್ಯಾರ್ಥಃ । ಸುಮನಸಾಂ ಸುಮನಃಸಧರ್ಮಾಣಾಂ ಸ್ತ್ರೀಣಾಂ ಶರಣೇ ಆಶ್ರಮೇ ಪುಷ್ಪಮಧುಗಂಧವತ್ ಕ್ಷುದ್ರತಮಂ ಕಾಮ್ಯ ಕರ್ಮವಿಪಾಕಜಂ ಕಾಮಸುಖಲವಂ ಜೈಹ್ವೌಪಸ್ಥ್ಯಾದಿ ವಿಚಿನ್ವಂತಂ ಮಿಥುನೀಭೂಯ ತದಭಿನಿವೇಶಿತಮನಸಂ ಷಡಂಘ್ರಿಗಣ-ಸಾಮಗೀತವತ್ ಅತಿಮನೋಹರವನಿತಾದಿ ಜನಾಲಾಪೇಷು ಅತಿತರಾಂ ಅತಿಪ್ರಲೋಭಿತಕರ್ಣಂ ಅಗ್ರೇ ವೃಕಯೂಥವತ್ ಆತ್ಮನಃ ಆಯುರ್ಹರತೋಽಹೋರಾತ್ರಾಂಸ್ತಾನ್ ಕಾಲವಿಶೇಷಾನ್ ಅವಿಗಣಯ್ಯ ಗೃಹೇಷು ವಿಹರಂತಂ ಪೃಷ್ಠತಃ ಪರೋಕ್ಷಂ ಅನುಪ್ರವೃತ್ತಃ ಲುಬ್ಧಕಃ ಕೃತಾಂತಃ ಶರೇಣ ಯಂ ಇಹ ಪರಿವಿಧ್ಯತಿ ತಮಿಮಂ ಆತ್ಮಾನಂ ಅಹೋ ರಾಜನ್ ಭಿನ್ನಹೃದಯಂ ದ್ರಷ್ಟುಮರ್ಹಸೀತಿ ಯಥಾ ಮೃಗಯುಹತಂ ಮೃಗಮಿತಿ ॥

(ಭಾ.೪.೨೯.೫೩)

ತದೇವಂ ವ್ಯುತ್ಪಾದಿತೇ ಅರ್ಥೇ ಅತ್ಯಾದರಜನನಾಯ ನಾರದೇನ ಪರಮರಹಸ್ಯತಯಾ ಉಕ್ತಂ ಪ್ರಮೇಯಂ ಪ್ರತಿಪಾದಯತ್ ಪದ್ಯಂ ಫಲಿತಾರ್ಥಕಥನಪರಂ ಪಠತಿ ॥ ಕ್ಷುದ್ರಮಿತಿ ॥ ದುರ್ಗಮಾರ್ಥತ್ವಾತ್ ಸ್ವಯಮೇವ ವಿವೃಣೋತಿ । ಅಸ್ಯಾರ್ಥ ಇತಿ ॥ ಸುಮನಸಾಮಿತ್ಯೇತತ್ ನ

ಪುಷ್ಪಬೋಧಕಂ ಕಿಂತು ತತ್ಸಧರ್ಮಾಣಾಂ ಇತಿ ಭಾವೇನ ತದ್ವ್ಯಾಚಷ್ಟೇ । **ಸುಮನಸಾಂ ಸುಮನಃಸಮಾನಧರ್ಮಾಣಾಮಿತಿ** ॥ ಸ ಕಃ ಸಮಾನೋ ಧರ್ಮಃ ಇತ್ಯತಃ ಕೋಮಲತರಾವಯವತ್ವಮೇವೇತ್ಯಾಶಯೇನ ತದ್ವಿವಕ್ಷಿತಮರ್ಥಂ ದರ್ಶಯತಿ ॥ **ಸ್ತ್ರೀಣಾಮಿತಿ** ॥ ಶರಣ ಇತ್ಯನೂದ್ಯ ಅರ್ಥಮಾಹ । ಆಶ್ರಮ ಇತಿ । ಕ್ಷುದ್ರಪದಾಭಿಮತಮರ್ಥಂ ದರ್ಶಯತಿ । ಕ್ಷುದ್ರತಮಮಿತಿ । ಅಲ್ಪತಮ ಮಿತ್ಯರ್ಥಃ । ಬುದ್ಧ್ಯಾರೋಹಾಯ ತತ್ರ ದೃಷ್ಟಾಂತಮಾಹ । ಪುಷ್ಪ ಮಧುಗಂಧವದಿತಿ । ಕಿಂ ತತ್ಪುಷ್ಪಗಂಧವತ್ ಕ್ಷುದ್ರತಮಮಿತ್ಯತ ಆಹ ॥ **ಕಾಮಸುಖಲವಮಿತಿ** ॥ ವಿಷಯಸುಖಲೇಶಮಿತ್ಯರ್ಥ । ಬುದ್ಧ್ಯಾರೋಹಾಯ ವಾ ಸರ್ವಾನುಭವಸಿದ್ಧಮಿತಿ ವಾ ಆಹ । **ಜೈಹ್ವ್ಯೌಪಸ್ಥ್ಯದೀತಿ** ॥ ಜಿಹ್ವೋಪಸ್ಥವಿಷಯಂ । ಚರಮಿತ್ಯಸ್ಯಾರ್ಥಃ **ವಿಚಿನ್ವಂತಮಿತಿ** ॥ ವೈಷಯಿಕ ಸುಖೇಚ್ಛಯಾ ಗವೇಷಣಂ ನ ಸತಾಂ ಮನೋಜ್ಞಂ । ತಸ್ಯ ಕಾಲತ ಏವ ಲಭ್ಯತ್ವಾದಿತ್ಯಾಶಯೇನೋಕ್ತಂ । **ಕಾಮ್ಯಕರ್ಮವಿಪಾಕಜಮಿತಿ** ॥ ಜನ್ಮಾಂತರೇ ಕೃತಕಾಮ್ಯಕರ್ಮಪರಿಪಾಕಕಾಲೇನ ಜಾಯಮಾನಮಿತ್ಯರ್ಥಃ । ಮಿಥಿತ್ವೇತ್ಯಸ್ಯ ತಾತ್ಪರ್ಯಮಾಹ । **ಮಿಥುನೀಭೂಯೇತಿ** ॥ ರಕ್ತಪದಂ ವ್ಯಾಚಷ್ಟೇ । **ತದಭಿನಿವೇಶಿತಮನಸಮಿತಿ** ॥ ಸಾಮಪದಾರ್ಥಕಥನಂ **ಗೀತೇತಿ** ॥ ಸಾಮಪದಮಪಿ ಸುಮನಃಪದವತ್ ಸಮಾನಧರ್ಮಬೋಧಕಮಿತ್ಯಾಹ । ವದಿತಿ ॥ ತಂ ದರ್ಶಯತಿ । **ಅತಿಮನೋಹರೇತಿ** ॥ ತತ್ಸ್ವರೂಪಂ ದರ್ಶಯತಿ ॥ **ವನಿತಾದಿಜನಾಲಾಪೇಷ್ವಿತಿ** ॥ ತೈಃ ಸಹ ರಹೋರಚಿತಸಂಲ್ಲಾಪೇಷ್ವಿತ್ಯರ್ಥಃ । ಲುಬ್ಧಕರ್ಣಮಿತ್ಯಸ್ಯ ಅಭಿಪ್ರೇತಾರ್ಥಮಾಹ ॥ **ಅತಿತರಾಮತಿಪ್ರಲೋಭಿತ ಕರ್ಣಮಿತಿ** ॥ ಅಗ್ರೇ ವೃಕಾನಿತ್ಯೇತದಪಿ ಸಮಾನಧರ್ಮವದ್ಬೋಧಕ-ಮಿತ್ಯಾಶಯೇನೋಕ್ತಂ **ಅಗ್ರೇ ವೃಕಯೂಥವದಿತಿ** ॥ ಅಸುಹೃದ ಇತ್ಯಸ್ಯಾರ್ಥಃ **ಆತ್ಮನ ಆಯುರ್ಹರತ** ಇತಿ ॥ ಅನೇನ ಅನಿಷ್ಟಕಾರಿತ್ವಂ ಸಮಾನೋ ಧರ್ಮಃ ಇತಿ ಸೂಚಯತಿ ॥ ತತ್ಸ್ವರೂಪಮಾಹ । **ಅಹೋರಾತ್ರಾನಿತಿ** ॥ ಏತಸ್ಯ ಅವಿಗಣಯ್ಯೇತ್ಯನೇನ ಅನ್ವಯಪ್ರದರ್ಶನೇನ ದ್ವಿತೀಯಾಂತತ್ವಂ ವ್ಯನಕ್ತಿ ॥ **ತಾನ್ ಕಾಲವಿಶೇಷಾನವಿಗಣಯ್ಯೇತಿ** ॥ ಯಾಂತಮಿತ್ಯಸ್ಯಾನ್ವಯಪ್ರದರ್ಶನಪೂರ್ವ ಕಮರ್ಥಮಾಹ ॥ **ಗೃಹೇಷು ವಿಹರಂತಮಿತಿ** ॥ ಪೃಷ್ಠ ಇತ್ಯತ್ರ ನಿಮಿತ್ತಸಪ್ತಮೀತಿ ಪ್ರತೀತಿಂ ನಿವಾರಯತಿ । **ಪೃಷ್ಠತ ಇತಿ** ॥ ಫಲಿತಾರ್ಥಂ ದರ್ಶಯತಿ । **ಪರೋಕ್ಷಮಿತಿ** ॥ ತಸ್ಯ ಲುಬ್ಧಕಪದೇನಾನ್ವಯಮಾಹ । **ಅನುಪ್ರವೃತ್ತೋ ಲುಬ್ಧಕ** ಇತಿ ॥ ಲುಬ್ಧಕಬಾಣಭಿನ್ನಮಿತ್ಯತ್ರ ಭೇದೇನ ಸಂಬಂಧಿ ದ್ವಯಂ ಪ್ರತೀಯತೇ । ತತ್ರ ಉಭಯಸ್ಯ ಕರ್ತೃತ್ವಂ ಕರಣತ್ವಂ ವಾ ವಿರುದ್ಧಂ ಇತಿ

ಏಕಸ್ಯ ಕರ್ತೃತ್ವಂ ಅಪರಸ್ಯ ಕರಣತ್ವಂ ಇತ್ಯೇವ ವಾಚ್ಯಂ। ತತ್ರ ಕಃ ಕರ್ತಾ, ಕಿಂ ಕರಣಂ ಇತ್ಯತೋ ಯಥಾಯೋಗ್ಯಂ ತದುಭಯಂ ಪ್ರದರ್ಶಯತಿ ॥ **ಕೃತಾಂತಃ ಶರೇಣೇತಿ** ॥ ಏತೇನ ಲುಬ್ಧಕಪದಮಪಿ ಮಾರಕತ್ವರೂಪಸಮಾನಧರ್ಮ-ವತ್ಪರಮಿತಿ ಸೂಚಯತಿ। ಉಕ್ತಮರ್ಥಂ ನಿಗಮಯತಿ ॥ **ಹೇ ರಾಜನ್ ಇತಿ** ॥ ಉಕ್ತಪ್ರಕಾರೇಣ ಯಂ ಪರಾವಿಧ್ಯತಿ ತಂ ಇಮಂ ಆತ್ಮಾನಂ। ಭಿನ್ನಮಿತ್ಯಸ್ಯಾರ್ಥಃ **ಭಿನ್ನಹೃದಯಮಿತಿ** ॥ ಈದೃಶಂ ಜ್ಞಾತುಮರ್ಹಸೀತಿ। ಮೃಗಮಿತ್ಯಸ್ಯ ಲುಪ್ತೋಪಮತ್ವಂ ಮೃಗಯುಪದಸ್ಯ ಭಿನ್ನಮಿತ್ಯನೇನ ಅನ್ವಯಂ ಚಾಭಿಪ್ರೇತ್ಯ ವ್ಯಾಚಷ್ಟೇ ॥ **ಯಥೇತಿ** ॥ ಇತಿಶಬ್ದಸ್ಯ ಅಸ್ಯಾರ್ಥ ಇತಿ ಪೂರ್ವೇಣಾನ್ವಯಃ ॥

**ಇದಮುದಿತಂ ಭವತಿ**— ಯಥಾ ಹಿ ಪುಷ್ಪವನೇ ಕಶ್ಚನ ಮೃಗಃ ಪುಷ್ಪಗಂಧಂ ಮಧುಕರಶಬ್ದಂ ಬಾಲತೃಣಾದಿಕಂ ಸ್ವಜಾತೀಯಸ್ತ್ರೀ ಸಂಭೋಗಾದಿಕಂ ಚ ಈಹಮಾನಃ ತತ್ರ ತತ್ರ ಪರಿಭ್ರಮನ್ ತತ್ಸರ್ವಂ ಪ್ರಾಪ್ಯ ತತ್ರೈವ ನಿರತಸರ್ವೇಂದ್ರಿಯವ್ಯಾಪಾರಃ ಸ್ವಸ್ಯ ಪಶ್ಚಾತ್ ಸ್ಥಿತಂ ಮೃಗಯುಂ ಅಗ್ರೇ ಸ್ಥಿತಾನ್ ವೃಕಾಂಶ್ಚ ಅವಿಗಣಯ್ಯ ವಿಹರನ್ ತೇನ ಹತೋ ಭವತಿ। ತಥಾ ಜೀವೋಽಪಿ ಪಾರೋಕ್ಷ್ಯೇಣೈವ ಸ್ಥಿತಂ ಮೃತ್ಯುಂ ಅಹೋರಾತ್ರಾಭ್ಯಾಂ ಗಚ್ಛದಾಯುಶ್ಚ ಅವಿಗಣಯ್ಯ ಜೈಹ್ವ್ಯೌಪಸ್ಥ್ಯಾದಿನಿರತಃ ಸಹಸೈವ ಮೃತ್ಯುಂ ಆಪದ್ಯತ ಇತಿ ॥



'ಪುಷ್ಪಭರಿತವಾದ ಅರಣ್ಯದಲ್ಲಿ ಒಂದು ಜಿಂಕೆ ಹೆಣ್ಣುಜಿಂಕೆಯೊದಿಗೆ ಸಣ್ಣ ಹುಲ್ಲು ಚಿಗುರೆಲೆಗಳನ್ನು ಮೇಯುತ್ತ ದುಂಬಿಗಳ ಮಧುರ ಝೇಂಕಾರಕ್ಕೆ ಕಿವಿಗೊಟ್ಟು ಅದರಲ್ಲಿ ಆಸಕ್ತವಾಗಿದೆ. ಅದಕ್ಕೆ ತನ್ನ ಮುಂದೆಯೇ ಪ್ರಾಣ ತೆಗೆವ ತೋಳಗಳಿವೆ. ಅವುಗಳ ಪರಿವೇ ಇಲ್ಲದೆ ಮೇಯುತ್ತಿರುವ ಈ ಜಿಂಕೆಯನ್ನು ಹಿಂದುಗಡೆಯಿಂದ ಒಬ್ಬ ಬೇಡನು ಬಾಣವನ್ನೆಸೆದು ಘಾಸಿಗೊಳಿಸುತ್ತಾನೆ. ಆಗ ಆ ಜಿಂಕೆಯ ಸ್ಥಿತಿಯನ್ನು, ಆ ಜಿಂಕೆಯಂತೆಯೇ ನೀನೂ ಎಂದು ರಾಜನೆ, ನೀನು ವಿಚಾರಮಾಡು'— ಪ್ರಾಚೀನಬರ್ಹಿ ರಾಜನಿಗೆ ನಾರದರ ಉಪದೇಶ.

ರಾಜನು ಸ್ವರ್ಗಕ್ಕಾಗಿ ಒಂದೇ ಸವನೆ ಯಾಗಗಳಲ್ಲಿ ಪ್ರಾಣಿಬಲಿ ಕೊಡುತ್ತಿರುವುದನ್ನು ಕಂಡು ನಾರದರು 'ಕಾಮ್ಯಕರ್ಮಗಳಲ್ಲಿ ಆಸಕ್ತರಾದವರು ಪರಮಾತ್ಮ ತತ್ವಜ್ಞಾನದಿಂದ ವಂಚಿತರಾಗಿ ಹೇಗೆ ಅನರ್ಥಭಾಗಿಗಳಾಗುವರು' ಎಂಬುದನ್ನು ಹೇಳುತ್ತ 'ಕಾಡಿನಲ್ಲಿ ಒಂದು ಜಿಂಕೆಯ ಪಾಡೇನಾಯಿತು,

ಆಲೋಚಿಸು, ಆದರಂತೆ ವಿಷಯಭೋಗದಲ್ಲಿ ಮೈಮರೆತು ಸತ್ತು ನರಕ ಭಾಗಿಯಾಗಬೇಡ. ವಿಷಯಗಳಲ್ಲಿ ವಿರಕ್ತಿ, ಹರಿಯಲ್ಲಿ ಭಕ್ತಿಗಳನ್ನು ಸಂಪಾದಿಸು, ಮುಕ್ತಿ ಭಾಜನನಾಗೆ'ಂದು ಉಪದೇಶಿಸುತ್ತಾರೆ.

ಆ ರಾಜನ ಪಾಡು ಈ ಬಡಪಾಯಿ ಜಿಂಕೆಯ ಪಾಡಿಗಿಂತ ಹೇಗೆ ಬೇರೆ ಅಲ್ಲ ಎಂಬುದನ್ನು ನಾರದರೇ ರಾಜನಿಗೆ ಮನವರಿಕೆ ಮಾಡಿಕೊಡುತ್ತಾರೆ— 'ಇದರ ಅರ್ಥ ಹೀಗೆ' ಎಂದು—

ಹೂಗಳಂತೆ ಕೋಮಲಾಂಗಿಯರಾದ ಸ್ತ್ರೀಯರು, ಇವರು. ಪುಷ್ಪರಸ ಪರಿಮಳಗಳಂತೆ ಆಕರ್ಷಕವಾದುದು ಕಾಮ್ಯಕರ್ಮಫಲರೂಪವಾದ ವಿಷಯ ಸುಖ.. ನಾಲಿಗೆಯೂ ಜನನೇಂದ್ರಿಯವೂ ಅದಕ್ಕಾಗಿಯೆ ಹಾತೊರೆಯುತ್ತದೆ. ಅದನ್ನು ಅರಸುತ್ತ ನೀನು ಸ್ತ್ರೀಯರೊಡನೆ ವಿಹರಿಸುತ್ತಿರುವೆ. ಅವರಲ್ಲಿಯೆ, ಜಿಂಕೆಯಂತೆಯೇ ಮನಸಿಟ್ಟಿರುವೆ. ದುಂಬಿಗಳ ಝೇಂಕಾರದಂತೆ ಮನೋಜ್ಞ ವಾಗಿರುವ ಹೆಂಡಿರುಮಕ್ಕಳ ಮಾತುಗಳನ್ನು ಅತಿ ಆಸಕ್ತಿಯಿಂದ ಆಲಿಸುವೆ. ಜಿಂಕೆಯ ಪ್ರಾಣ ತೆಗೆವ ತೋಳಗಳಂತೇ ಹಗಲು ರಾತ್ರಿ ಮಾಸವರ್ಷಗಳೆಂಬ ಕಾಲಗಳು ಉರುಳಿ ನಿನ್ನಾಯುಷ್ಯವನ್ನು ಅಪಹರಿಸುತ್ತಿವೆ. ಕಾಲದ ಪರಿವೇ ಇಲ್ಲದೇ ಅರಮನೆಯಲ್ಲಿ ವಿಹರಿಸುವೆ. ಹಿಂದಿನಿಂದಲೆ ಹೆಡತಲೆಯಲ್ಲಿದ್ದು ನಿನಗರಿವಿಲ್ಲದಂತೇ ಮೃತ್ಯುವೆಂಬ ಬೇಟೆಗಾರ ನಿನ್ನ ಮೇಲೆ ಗುರಿಯಿಟ್ಟು ಬಾಣಹೂಡಿ ನಿಂತಿದ್ದಾನೆ! ಒಂದು ದಿನ ನಿನ್ನೆದೆ ಒಡೆದು ಚೂರಾಗುವುದರಲ್ಲಿ ಸಂಶಯವಿಲ್ಲ, ಆಲೋಚಿಸಿ ನೋಡು' ಎಂದು.



– ೯೯ –

**ವಿಷಯಾಸಕ್ತನಾಗಿ ಮೃತ್ಯುವಶನಾಗಬೇಡ, ಹರಿದಾಸನಾಗು**

ಸ ತ್ವಂ ವಿಚಕ್ಷ್ವ ಮೃಗಚೇಷ್ಟಿತಮಾತ್ಮನೋಽಂತ
ಶ್ಚಿತ್ತಂ ನಿಯಚ್ಛ ಹೃದಿ ಕರ್ಣಧುನೀಂ ಚ ಚಿತ್ತಿಂ ।
ಜಹ್ಯಂಗನಾಭ್ರಮಮಸತ್ತಮಯೂಥಗಾಥಂ
ಪ್ರೀಣೀಹಿ ಹಂಸಶರಣಂ ವಿರಮ ಕ್ರಮೇಣ ॥

(ಭಾ.೪.೨೯.೫೭)

**ತದೇವಂ ನಿರೂಪಿತಫಲಾರ್ಥಾನುವಾದಪೂರ್ವಕಂ ಮುಮುಕ್ಷುಣಾ ಅವಶ್ಯಂ ಸಾಧ್ಯಮಪಿ ಸೂಚಯನ್ ಉಪಸಂಹರತಿ ॥ ಸ ತ್ವಮಿತಿ ॥ ಯಃ ಪೂರ್ವಂ ಕರ್ಮಠಃ ಸಃ ತ್ವಂ ಆತ್ಮನಃ ತವ ಚೇಷ್ಟಿತಂ ಸರ್ವಮಪಿ ಮೃಗಚೇಷ್ಟಿತಂ ತತ್ಸದೃಶಂ ಜಾನೀಹಿ। ಅತ ಏವ ಆಸನ್ನಮೃತ್ಯುತ್ವಾತ್ ಆತ್ಮನಃ ಚಿತ್ತಂ ಹರೌ ನಿಯಚ್ಛ। ಚಿತ್ತಿಂ ಬುದ್ಧಿಂ ಚ ಕರ್ಣಯೋಃ ತದ್ವಿಷಯೇಷ್ವೇವ ವಿಹರಂತೀಂ ತತ್ರೈವ ನಿಯಚ್ಛ। ಅಸತ್ತಮಾನಾಂ ಯೂಥ್ಯೈಃ ಗಾಥಂ ಉಪಾದೇಯತಯಾ ಶ್ಲಾಘಿತಂ। ಅಂಗನಾನಾಂ ಭ್ರಮಂ ವಿಲಾಸಂ ತ್ಯಜ। ಪರಮಹಂಸಾನಾಂ ಆಶ್ರಯಂ ಪ್ರೀಣೀಹಿ। ಭಾಗವತಧರ್ಮಂ ಅನುಷ್ಠಾಯ ತತ್ಪ್ರೀತಿಂ ಸಂಪಾದಯೇತಿ ಹೃದಯಂ। ಕ್ರಮೇಣ ವಿರಮ ವಿರಕ್ತೋ ಭವ। ತತಃ ಕ್ರಮೇಣ ವಿರಮ ಸಂಸಾರಾತ್ ಮುಕ್ತೋ ಭವೇತಿ ॥ ೯೯ ॥**



ನಾರದರು ವಿಷಯಾಸಕ್ತಿಯ ದುಷ್ಪರಿಣಾಮವನ್ನು ತಿರುಗಿ ಒತ್ತಿ ಹೇಳಿ, ಮೋಕ್ಷಸಾಧನೆಗಾಗಿ ಭಾಗವತಧರ್ಮಗಳನ್ನು ಚೆನ್ನಾಗಿ ಅನುಷ್ಠಾನ ಮಾಡು, ಕ್ರಮವಾಗಿ ವೈರಾಗ್ಯವನ್ನು ಸಂಪಾದಿಸಿ ಸಂಸಾರದಿಂದ ಮುಕ್ತನಾಗೆಂದು ಪ್ರಾಚೀನ ಬರ್ಹಿರಾಜನಿಗೆ ಉಪದೇಶಿಸಿ ಆಶೀರ್ವದಿಸುವರು—

**'ರಾಜನೆ, ನೀನೂ ಆ ಜಿಂಕೆಯಂತೆಯೆ ನಡೆದುಕೊಳ್ಳುತ್ತಿರುವುದನ್ನು ಆಲೋಚಿಸು, ನಿನ್ನ ಚಿತ್ತವನ್ನು 'ಹೃದಯ'ದೊಳಗೆ ಹೃದಯನಾಮಕ ಹರಿಯಲ್ಲಿ ನೆಲೆಗೊಳಿಸು. ಅವನನ್ನೇ ನೆನೆಯುತ್ತಿರು. ಕಿವಿಕಣ್ಣು ಮುಂತಾದ ಸಕಲೇಂದ್ರಿಯಗಳಿಗೆ ಪ್ರೇರಕವಾದ ಬುದ್ಧಿಯನ್ನು ಅವನಲ್ಲಿ ನೆಲೆಗೊಳಿಸು. ಶ್ರವಣಾದಿಗಳಲ್ಲಿಯೇ ಆಸಕ್ತನಾಗಿರು. ಸ್ತ್ರೀಯರು ಓಡಾಡುವ ಅರಮನೆಯನ್ನು ಪರಿತ್ಯಜಿಸು. ಅಲ್ಲಿ ನಿನಗೆ ಸದಾ ನಿಷಿದ್ಧವಿಷಯ ಸೇವನೆಯ ವ್ಯವಹಾರಗಳು ನಡೆಯುತ್ತವೆ. ಅವನ್ನು ಬಿಟ್ಟು ಏಕಾಂತದಲ್ಲಿ ಪರಮಹಂಸರಿಗೆ ಆಶ್ರಯನಾದ ಹರಿಯನ್ನು ಆರಾಧಿಸು. ಸಂಸಾರದಿಂದ ಮುಕ್ತನಾಗು.'**



## –೧೦೦–

### ಭಾಗವತದ ಕಥೆಗಳೆಲ್ಲವೂ ಜ್ಞಾನವೈರಾಗ್ಯಸಾಧನೆಗಾಗಿ

ಕಥಾ ಇಮಾಸ್ತೇ ಕಥಿತಾ ಮಹೀಯಸಾಂ
ವಿತಾಯ ಲೋಕೇಷು ಯಶಃ ಪರೇಯುಷಾಂ ।
ವಿಜ್ಞಾನ ವೈರಾಗ್ಯವಿವಕ್ಷಯಾ ವಿಭೋ
ವಚೋ ವಿಭೂತೀರ್ನತು ಪಾರಮಾರ್ಥ್ಯಂ ॥

(ಭಾ.೧೨.೩.೧೪)

ನನು ಪ್ರಥಮಪ್ರಕರಣೇ ಅತ್ರ ಶ್ರೀಹರಿರೇವ ಅನುಪದಂ ಪ್ರತಿಪಾದ್ಯತೇ ಇತ್ಯುಕ್ತಂ । ಇದಾನೀಂ ದೃಷ್ಟಾಂತತಯಾ ಬಹವಲುದಾಹೃತಾಃ ತೇನ ಜ್ಞಾಯತೇ ಅನ್ಯೇಽಪ್ಯತ್ರ ಪ್ರತಿಪಾದ್ಯಂತ ಇತ್ಯತಃ ಕಥಂ ನ ವಿರೋಧ ಇತ್ಯತ ಆಹ ॥ **ಕಥಾ ಇತಿ** ॥ ಹೇ ವಿಭೋ ರಾಜನ್ ತೇ ತುಭ್ಯಂ ಇಹ ಲೋಕೇಷು ದೇಶೇಷು ಯಶೋ ವಿತಾಯ ವಿಸ್ತೃತ್ಯ ಪರೇಯುಷಾಂ ಪರಲೋಕಂ ಪ್ರಾಪ್ತಾನಾಂ ಮಹೀಯಸಾಂ ಮಹತ್ತಮಾನಾಂ ಯಾಃ ಕಥಾಃ ಕಥಿತಾಃ ಇಮಾಃ ಕರ್ಮ । ವಿಜ್ಞಾನವೈರಾಗ್ಯ ವಿವಕ್ಷಯಾ ವಿಜ್ಞಾನಪದೇನ ಭಕ್ತಿರಪಿ ವಿವಕ್ಷಿತಾ ಜ್ಞಾನಭಕ್ತಿವೈರಾಗ್ಯಾಣಿ ಭವಂತು ಇತ್ಯಭಿಪ್ರಾಯೇಣೈವ । ವಚೋವಿಭೂತೀಃ ಅಸ್ಮದೀಯವಚಸಾಂ ವಿಭೂತೀಃ ವಿಶೇಷೇಣ ವಿಷಯಭೂತಾ ವಿದ್ಧೀತಿ । ನ ತು ಪಾರಮಾರ್ಥ್ಯಂ ನ ತು ತೇಷಾಂ ಮುಖ್ಯೋದ್ದೇಶ್ಯತ್ವಂ । ತಾದೃಶಸ್ತು ಹರಿರೇವ । **ಇದಮುದಿತಂ ಭವತಿ**— ತ್ರಿವಿಧಾ ಹಿ ಭಾಗವತಾಃ ಅದೃಢವಿರಾಗಾಃ । ದೃಢವಿರಾಗಾ ಅಪಿ ಅವಿಶದಬೋಧಾಃ ವಿಶದಬೋಧಾ ಅಪಿ ಅವಿಶದಭಕ್ತಯ ಇತಿ । ತೇಷಾಂ ವಿರಾಗಾದಿದಾರ್ಢ್ಯಾದಿಪ್ರಾಪ್ತಯೇ ರಾಜಕಥಾಮಿಷೇಣ ತಾದೃಶಾನಿ ಸಾಧನಾನಿ ನಿರೂಪ್ಯಂತೇ । ಅತಃ ಭಕ್ತ್ಯಾದೀನಾಮೇವ ಅಸ್ಮನ್ನಿರೂಪಣ ವಿಷಯತಾ । ನ ತು ತೇಷಾಂ । ಬಾಹುಲ್ಯೇನ ತೇಷಾಮುಕ್ತಿಸ್ತು ನಾಸ್ತ್ಯೇವೇತಿ ಪ್ರಾಗೇವ ಪ್ರತಿಪಾದಿತಂ । ಕ್ವಚಿತ್ತದುಕ್ತಿರಪಿ ಭಗವದ್ಭಕ್ತ್ಯಾದಿವಿವಕ್ಷಯೈವ ತಾದರ್ಥ್ಯೇನೇತಿ । ಹರಿರೇವ ಪುನಃ ಪುನಃ ಪಠಿತ ಇತಿ ನ ಕೋಽಪಿ ವಿರೋಧ ಇತಿ ॥



ರಾಜನೆ, ಈ ರಾಜರು ಋಷಿಗಳು ಮುಂತಾದವರು ಎಲ್ಲರೂ ಮಹಾತ್ಮರು. ಲೋಕದಲ್ಲಿ ತಮ್ಮ ಯಶಸ್ಸನ್ನು ಎಲ್ಲೆಡೆ ಹಬ್ಬಿಸಿ ಪರಗತಿಯನ್ನು ಹೊಂದಿದವರು

**ಅವರ ಕಥೆಗಳನ್ನೇ ಹೇಳುವುದು ಇಲ್ಲಿ ಮುಖ್ಯ ಉದ್ದೇಶವಲ್ಲ. ತತ್ವಜ್ಞಾನ ಭಕ್ತಿ ವಿಷಯವೈರಾಗ್ಯಗಳು ಶ್ರೋತೃಗಳಲ್ಲಿ ದೃಢವಾಗಲೆಂಬ ಉದ್ದೇಶದಿಂದ ಅವರ ಬಗ್ಗೆ ಹೇಳಿದ್ದೇವೆ. ಅವರ ಕಥೆ ಕೇವಲ ದೃಷ್ಟಾಂತವಾಗಿ ಉಕ್ತವಾಗಿದೆ'—ಎಂದು ಶುಕಮುನಿ ಪರೀಕ್ಷಿದ್ರಾಜನಿಗೆ ಹೇಳಿದ್ದಾರೆ.**

ಭಾಗವತರು ಮೂರು ಬಗೆ ಇರುತ್ತಾರೆ. ಹೆಚ್ಚಿನವರಲ್ಲಿ ವೈರಾಗ್ಯ ದೃಢವಿರುವುದಿಲ್ಲ. ದೃಢವೈರಾಗ್ಯಉಳ್ಳವರಲ್ಲಿಯೂ ತತ್ವಜ್ಞಾನ ದೃಢವಾಗಿರುವುದಿಲ್ಲ. ದೃಢಜ್ಞಾನಉಳ್ಳವರಲ್ಲಿಯೂ ಭಕ್ತಿ ದೃಢವಿರುವುದಿಲ್ಲ. ವೈರಾಗ್ಯ ಜ್ಞಾನಭಕ್ತಿ ಈ ಮೂರೂ ದೃಢವಾಗಬೇಕು. ಅದಕ್ಕೇ ರಾಜ ಋಷಿ ಮುಂತಾದವರ ಕಥೆಗಳನ್ನು ಹೇಳಿದೆವು. ಅವರು ಹೇಗೆ ವೈರಾಗ್ಯಾದಿಗಳಲ್ಲಿ ದಾರ್ಢ್ಯ ಸಂಪಾದಿಸಿದರೆಂದು ತಿಳಿಯಬೇಕು. ಅವರ ಕಥೆಯನ್ನು ಮಾತ್ರ ತಿಳಿದು ಫಲವಿಲ್ಲ. ಮತ್ತು ಕಥೆಯನ್ನೇ ವಿಸ್ತಾರವಾಗಿ ಹೇಳಿ ನಾವು ಸುಮ್ಮನಾಗಿಲ್ಲ. ಕೊನೆಯಲ್ಲಿ ಅದರ ನೀತಿಯನ್ನೂ ಹೇಳಿದ್ದೇವೆ. ಪರಮಾತ್ಮನ ಮಹಿಮೆಯನ್ನೇ ಹೊಗಳಿದ್ದೇವೆ. ಆದರಿಂದ ಮೊದಲನೆಯ ಭಾಗವತಾಗತಿ ಪ್ರಕರಣದಲ್ಲಿ—

'ಉರುಕ್ರಮಸ್ಯಾಖಿಲಬಂಧಮುಕ್ತಯೇ
ಸಮಾಧಿನಾನುಸ್ಮರ ಯದ್ ವಿಚೇಷ್ಟಿತಂ'

'ಎಲ್ಲ ಸಜ್ಜನರ ಬಂಧಮುಕ್ತಿಗಾಗಿ ಸರ್ವಶಕ್ತ ಭಗವಂತನ ಲೀಲೆಯನ್ನೇ ಸ್ಪಷ್ಟವಾಗಿ ಸಮಾಧಿಭಾಷೆಯಿಂದ ಹೇಳುವದಕ್ಕೇ ಭಾಗವತ ರಚಿತವಾಯಿತೆಂ'ದು ಹೇಳಿ, ಮುಂದೆ ಅನೇಕ ರಾಜ ಋಷಿ ಮುಂತಾದವರ ಕಥೆಗಳನ್ನು ಹೇಳಿದ್ದು ಅಸಂಗತವಲ್ಲವೆ? ಎಂದು ಆಕ್ಷೇಪ ಮಾಡಲು ಅವಕಾಶವಿಲ್ಲ. ರಾಜ ಋಷಿ ಮುಂತಾದವರ ಕಥೆಯನ್ನು ಕೇವಲ ದೃಷ್ಟಾಂತವಾಗಿ ಹೇಳಿದ್ದೇವೆ.

ದೃಷ್ಟಾಂತವಾಗಿ ಹೇಳಿದ ರಾಜ ಋಷಿಗಳೆಲ್ಲರೂ ಜೀವನ್ಮುಕ್ತರು ಅಪರೋಕ್ಷಿಗಳು 'ಅವರಲ್ಲಿ ಜ್ಞಾನ ಭಕ್ತಿ ವೈರಾಗ್ಯವೆಲ್ಲವೂ ಪೂರ್ಣಪ್ರಮಾಣದಲ್ಲಿವೆ. ಪ್ರಾರಬ್ಧದಿಂದ ಕೆಲವೊಮ್ಮೆ ಸ್ವಲ್ಪಮರೆಯಾಗಿದ್ದು ಸುಲಭವಾಗಿ ತಿರುಗಿ ವ್ಯಕ್ತವಾಗಿವೆ. ನಮ್ಮಂಥ ಅಜ್ಞಾನಿಗಳಿಗೆ ಹಾಗೆ ವೈರಾಗ್ಯಾದಿಗಳು ಹೇಗೆ ಬರಬೇಕು? ಜ್ಞಾನಿಗಳ ದೃಷ್ಟಾಂತದಿಂದೇನು ಉಪಯೋಗ' ಎಂಬ ಪ್ರಶ್ನೆ ಸಹಜ. ಅವಧೂತರು ಹೇಳುತ್ತಾರೆ, ಪ್ರಯತ್ನಮಾಡಿರಿ. ಪರಮಾತ್ಮನ ಅನುಗ್ರಹದಿಂದ

ಅದು ಫಲ ನೀಡುತ್ತದೆ. ಮುಖ್ಯವಾಗಿ ನಾವು ಹೇಳಿದ್ದು ಹರಿಕಥೆಯನ್ನೇ, ಭಾಗವತಧರ್ಮವನ್ನೆ.



–೧೦೧–

**ಶ್ರವಣಾದಿಸುಖ ಮೋಕ್ಷಸುಖಕ್ಕಿಂತ ಅಧಿಕ**

ಯಾ ನಿರ್ವೃತಿಸ್ತನುಭೃತಾಂ ತವ ಪಾದಪದ್ಮ-
ಧ್ಯಾನಾತ್ ಭವಜ್ಜನಕಥಾಶ್ರವಣೇನ ವಾ ಸ್ಯಾತ್ ।
ಸಾ ಬ್ರಹ್ಮಣಿ ಸ್ವಮಹಿಮನ್ಯಪಿ ನಾಥ ಮಾ ಭೂತ್
ಕಿಮ್ವಂತಕಾಸಿ ಲುಲಿತಾತ್ ಪತತಾಂ ವಿಮಾನಾತ್ ॥

(ಭಾ.೪.೧೦.೧೦)

ಕಿಂಚ ಕೇಷಾಂಚಿದ್ಭಾಗವತಾನಾಂ ಆದಿರಾಜಕಥಾಶ್ರವಣಮಾತ್ರೇಣ ಮುಕ್ತೇರಪ್ಯಧಿಕಃ ಆನಂದೋ ಭವತಿ । ತಥಾ ತನ್ಮಹಿಮಾಶ್ರವಣೇನ ಪ್ರೀತೋ ಭಗವಾನ್ ಅನುಗೃಹ್ಣಾತಿ ಚ । ಇತ್ಯತ ಆನಂದಾದಿಪ್ರಾಪ್ತಯೇ ಕುತ್ರಚಿತ್ ತತ್ಕಥಾವರ್ಣನಮಿತಿ ಭಾವೇನಾಹ ॥ **ಯಾ ನಿರ್ವೃತಿರಿತಿ** ॥ ಹೇ ನಾಥ ಭವತೋ ಜನಾನಾಂ ಭಾಗವತಾನಾಂ ಕಥಾಶ್ರವಣೇನ ತನುಭೃತಾಂ ಕೇಷಾಂಚಿತ್ ಯಾ ನಿರ್ವೃತಿಃ ಸ್ಯಾತ್ ಭವೇತ್, ಸಾ ಅನ್ಯೇಷಾಂ ತನುಭೃತಾಂ ಭವತ್ಕಥಾ ಶ್ರವಣೇನಾಪಿ ನ ಭವೇತ್ । ಯಾ ಚ ನಿರ್ವೃತಿಃ ಅನ್ಯೇಷಾಂ ಭವತ್ಕಥಾಶ್ರವಣೇನ ಸ್ಯಾತ್, ಸಾ ಅಪರೇಷಾಂ ತವ ಪಾದಪದ್ಮಧ್ಯಾನಾದಪಿ ಮಾ ಭೂತ್ । ಯಾ ನಿರ್ವೃತಿಃ ಪರೇಷಾಂ ತವ ಪಾದಪದ್ಮಧ್ಯಾನಾತ್ ಸ್ಯಾತ್, ಸಾ ಕ್ವಚಿತ್ ಪುಂಸಿ ಸ್ವೇ ಮಹಿಮ್ನಿ ಜ್ಞಾನಾನಂದಾದಿರೂಪೇ ಸ್ಥಿತೇ ಮುಕ್ತೇ ಬ್ರಹ್ಮಣಿ ಜೀವೇ ಅಧಿ ಕಾರಿವಿಶೇಷೇ ಮಾ ಭೂತ್ । ಇತಿ ಯದಾ ತದಾ ಅಂತಕಸ್ಯ ಮೃತ್ಯೋಃ ಅಸಿನಾ ಖಡ್ಗೇನ ಲುಲಿತಾತ್ ಕಂಪಿತಾತ್ ವಿಮಾನಾತ್ ಪತತಾಂ ಸ್ವರ್ಗಿಣಾಂ ತನುಭೃತಾಂ ಕೇವಲಂ ದೇಹಧಾರಿಣಾಂ ಸಾ ನಿರ್ವೃತಿಃ ಮಾ ಭೂದಿತಿ ಕಿಮು ವಾಚ್ಯಮಿತಿ । **ಯಥಾಹುಃ—**

''ಯದ್ಯೇಷೋಪರತಾ ದೇವೀ ಮಾಯಾ ವೈಶಾರದೀ ಮತಿಃ ।
ಸಂಪನ್ನ ಏವೇತಿ ವಿದುರ್ಮಹಿಮ್ನಿ ಸ್ವೇ ಮಹೀಯತೇ'' ಇತಿ ।
''ಇತಿ ಕೌಷಾರವಾಖ್ಯಾತಾಮಾಶ್ರುತ್ಯ ಭಗವತ್ಕಥಾಂ ।

**ಕ್ಷತ್ತಾऽऽನಂದಂ ಪರಂ ಲೇಭೇ ಮಹಾಭಾಗವತೋ ನೃಪ ।**
**ಅನ್ಯೇಷಾಂ ಪುಣ್ಯಶ್ಲೋಕಾನಾಮುದ್ದಾಮಯಶಸಾಂ ಸತಾಂ ।**
**ಉಪಶ್ರುತ್ಯ ಭವೇನ್ಮೋದಃ ಶ್ರೀವತ್ಸಾಂಕಸ್ಯ ಕಿಂ ಪುನಃ ॥'' ಇತಿ ಚ ।**

**ತದನೇನ ವೈರಾಗ್ಯಸ್ಯ ಜ್ಞಾನಾದಿಶುಭಗುಣಸ್ಥಿರೀಕರಣಹೇತುತಯಾ ಮಹಾಪುರುಷಾರ್ಥಸಾಧನತ್ವೇನ ಸಕಲಭಾಗವತೋತ್ತಮೈಃ ಸ್ವೀಕೃತತ್ವೇನ ಚ ಅವಶ್ಯಂ ತತ್ರ ಅವಹಿತೈರ್ಭಾವ್ಯಂ ಇತಿ ಸೂಚನೇನ ಸಕಲಭಾಗವತ ಧರ್ಮಾಣಾಂ ಪೀಠರೂಪೋऽತ ಏವ ಆದಿಮೋ ಗುಣೇಷ್ವಸಂಗರೂಪೋ ವೈರಾಗ್ಯಾಪರಪರ್ಯಾಯೋ ಭಾಗವತಧರ್ಮಃ ಸೂಚಿತೋ ಭವತಿ ॥**



**ಅಪರೋಕ್ಷ ಬಂದ ಬಳಿಕ ಆ ಜ್ಞಾನಿ ಮೋಕ್ಷಕಾಮನೆ ಮಾಡದೆ ಕೇವಲ ಪ್ರೀತಿಯಿಂದಲೇ ನಿನ್ನ ಭಕ್ತರ ಕಥಾಶ್ರವಣ ಮಾಡುತ್ತಿದ್ದರೆ ಆ ಏಕಾಂತಭಕ್ತನಿಗೆ ಜೀವನ್ಮುಕ್ತ್ಯವಸ್ಥೆಯಲ್ಲಿಯೂ ನಿನ್ನ ಪಾದಕಮಲ ಧ್ಯಾನಕ್ಕಿಂತಲೂ ನಿನ್ನ ಕಥಾಶ್ರವಣಕ್ಕಿಂತಲೂ ಹೆಚ್ಚಿನದಾದ, ಮೋಕ್ಷಾನಂದಕ್ಕಿಂತಲೂ ಅಧಿಕವಾದ ಆನಂದ ದೊರಕುತ್ತದೆ. ಅಪರೋಕ್ಷ ಬಂದ ಬಳಿಕ ಮೋಕ್ಷಕಾಮನೆ ಮಾಡಿ, ನಿನ್ನ ಧ್ಯಾನ, ನಿನ್ನ ಮತ್ತು ನಿನ್ನ ಭಕ್ತರ ಕಥಾ ಶ್ರವಣಗಳನ್ನು ವಿಶೇಷ ಮಾಡದೆಯೇ ನೇರವಾಗಿ ನಿನ್ನನ್ನು ಮುಕ್ತಿಯಲ್ಲಿ ಹೊಂದುವ ಸಾಧಾರಣ ಭಕ್ತರಿಗೆ, ಮುಕ್ತಿಯಲ್ಲಿಯೂ ಕೂಡ ಏಕಾಂತ ಭಕ್ತರ ಆನಂದ ಲಭಿಸಲಾರದು. ಇನ್ನು ಕಾಲದ ಹೊಡೆತದಿಂದ ವಿಮಾನಗಳಿಂದ ನೆಲಕ್ಕುರುಳುವ ಸ್ವರ್ಗವಾಸಿಗಳಿಗೆ ಸ್ವರ್ಗದಲ್ಲಿ ಆ ಆನಂದವಿಲ್ಲವೆಂದು ಬೇರೇನು ಹೇಳಬೇಕು?**

ಅಪರೋಕ್ಷಾನಂತರ ಹರಿಯ ಮತ್ತು ಹರಿಭಕ್ತರ ಕಥೆಗಳನ್ನು ವಿಶೇಷ ಪ್ರೀತಿಯಿಂದ ಶ್ರವಣ ಮನನ ಮಾಡದೆ ಮೋಕ್ಷ ಪಡೆಯುವವರು ಸಾಧಾರಣ ಭಕ್ತರು. ವಿಶೇಷ ಪ್ರೀತಿಯಿಂದ ಹರಿಯ ಮತ್ತು ಹರಿಭಕ್ತರ ಕಥಾಶ್ರವಣ ಮಾಡುವವರಿಗೆ ಸಂಸಾರದಲ್ಲಿಯೇ ಯಾವ ಆನಂದ ಲಭಿಸುವುದೋ ಆ ಆನಂದವು ಮುಕ್ತಿ ಯಲ್ಲಿಯೂ ಸಾಧಾರಣ ಭಕ್ತರಿಗೆ ದೊರಕಲಾರದು.

ಧ್ರುವನು ಶ್ರೀವಾಸುದೇವನನ್ನು ಪ್ರತ್ಯಕ್ಷಕಂಡು ಸ್ತುತಿಸುತ್ತ ಹೇಳುವ ಮಾತು ಇದು. ಇದರಿಂದ ಹರಿಭಕ್ತರ ಕಥಾಶ್ರವಣವೂ ಕೂಡ ಹರಿಕಥಾಶ್ರವಣ

ದಂತೆ ಮೋಕ್ಷಾನಂದದಾಯಕವಾಗುವುದರಿಂದ ಭಾಗವತದಲ್ಲಿ ಹರಿಕಥೆಗಳೊಂದಿಗೆ ಹರಿಭಕ್ತರ ಕಥೆಗಳನ್ನು ಕೂಡ ಹೇಳುವುದು ಯುಕ್ತವೆ. ಹರಿಭಕ್ತರ ಕಥೆಗಳನ್ನು ಕೇಳುವುದರಿಂದ ಹರಿಯ ಏಕಾಂತಭಕ್ತರಿಗೆ ಮುಕ್ತಿಗಿಂತಲೂ ಅಧಿಕ ಆನಂದ ಲಭಿಸುತ್ತದೆ ಮತ್ತು ಭಕ್ತರ ಮಹಿಮೆ ಶ್ರವಣ ಮಾಡಿದರೆ ಭಗವಂತನಿಗೆ ಬಲು ಸಂತೋಷವಾಗುವುದು. ಅವನು ಸಂತುಷ್ಟನಾಗಿ ವಿಶೇಷ ಅನುಗ್ರಹ ಮಾಡುವನು. ಹೀಗೆ ತತ್ಕಾಲದಲ್ಲಿ ಕಥಾಶ್ರವಣವು ಶ್ರವಣಾನಂದಕ್ಕೂ, ಹರಿಯ ಅನುಗ್ರಹದಿಂದ ಮುಂದೆ ಲಭಿಸುವ ವಿಶೇಷ ಆನಂದಕ್ಕೂ ಕಾರಣವಾಗುವುದೆಂದು ಭಾಗವತರ ಕಥೆ ಭಾಗವತದಲ್ಲಿ ಹೇಳಿದ್ದು ಯುಕ್ತವೇ ಆಗಿದೆ.

ಯದ್ಯೇಷೋಪರತಾ ದೇವೀ ಮಾಯಾ ವೈಶಾರದೀ ಮತಿಃ ।
ಸಂಪನ್ನ ಏವೇತಿ ವಿದುರ್ಮಹಿಮ್ನಿ ಸ್ವೇ ಮಹೀಯತೇ ॥ (ಭಾ.೧.೩.೩೪)

'ತ್ರಿಗುಣ ಮಾನಿನಿಯಾದ ದೇವಿದುರ್ಗೆ ಜೀವನಿಗೆ ಪರಮಾತ್ಮ ತತ್ವಜ್ಞಾನವನ್ನು ನೀಡಿದಾಗ, ಅವನಿಗೆ ಸಂಸಾರಬಂಧವು ದುಃಖ ನೀಡುವುದನ್ನು ನಿಲ್ಲಿಸಿದಾಗ ಜೀವನಿಗೆ ಮುಕ್ತಿಯಾಯಿತೆಂದೇ ತಿಳಿಯುತ್ತಾರೆ. ಏಕೆಂದರೆ ಪ್ರಾರಬ್ಧ ತೀರಿದೊಡನೆ ಅವನು ಅಭಿವ್ಯಕ್ತ ಸ್ವರೂಪಾನಂದ ಶರೀರನೇ ಆಗುತ್ತಾನೆ. ತನ್ನಿಂದ ಕೆಳಗಿನ ಮುಕ್ತಜೀವರಿಗೆ ಅವನು ಪೂಜ್ಯನಾಗಿ ಮೆರೆಯುತ್ತಾನೆ'— ಇದು ಸೂತರು ಶೌನಕಾದಿ ಮುನಿಗಳಿಗೆ ಹೇಳಿದ ಮಾತು.

ಹರಿಯ ಮತ್ತು ಹರಿಭಕ್ತರ ಕಥಾಶ್ರವಣದಿಂದ ಉಂಟಾಗುವ ಜ್ಞಾನವನ್ನು ಕೊಡುವವಳು ಅದಕ್ಕೆ ಅಭಿಮಾನಿನಿಯಾದ ದುರ್ಗಾದೇವಿ. ಈ ಜ್ಞಾನವನ್ನು ಅವಳೇ ಜೀವನಿಗೆ ಕೊಟ್ಟಳೆಂದರೆ ಅವಳು ಮುಂದೆ ಆ ಜೀವನಿಗೆ ಸಂಸಾರದ ದುಃಖವನ್ನು ಕೊಡುವುದಿಲ್ಲ. ಹೀಗೆ ಕಥಾಶ್ರವಣದಿಂದ ಬರುವ ಆನಂದವು ನಿರ್ದುಃಖ ಆನಂದವೆ ಮೋಕ್ಷಾನಂದವೆ.

ಇತಿ ಕೌಶಾರವಾಖ್ಯಾತಾಂ ಆಶ್ರುತ್ಯ ಭಗವತ್ಕಥಾಂ ।
ಕ್ಷತ್ತಾನಂದಂ ಪರಂ ಲೇಭೇ ಮಹಾಭಾಗವತೋ ನೃಪ ॥
ಅನ್ಯೇಷಾಂ ಪುಣ್ಯಶ್ಲೋಕಾನಾಮುದ್ದಾಮಯಶಸಾಂ ಸತಾಂ ।
ಉಪಶ್ರುತ್ಯ ಭವೇನ್ಮೋದಃ ಶ್ರೀವತ್ಸಾಂಕಸ್ಯ ಕಿಂ ಪುನಃ ॥
(ಭಾ.೩.೨೦.೩೩,೩೪)

ಶುಕಮುನಿ ಪರೀಕ್ಷಿತನಿಗೆ ಹೇಳುತ್ತಾರೆ—'ರಾಜನೆ, ಹೀಗೆ ಮೈತ್ರೇಯ ಮುನಿ ಹೇಳಿದ ಭಗವಂತನ ಕಥೆಯನ್ನು ಕೇಳಿ ಮಹಾ ಭಗವದ್‌ಭಕ್ತನಾದ ವಿದುರನು ಪರಮಾನಂದ ಭರಿತನಾದನು.

'ಭಗವದ್‌ಭಕ್ತರ ಕಥೆ ಕೇಳಿದರೂ ಆನಂದ ಉಂಟಾಗುವುದೆಂದ ಮೇಲೆ ಭಗವಂತನ ಕಥಾಶ್ರವಣದಿಂದ ಆನಂದವಾಗುವುದೆಂದು ಬೇರೇನು ಹೇಳ ಬೇಕು?'

ಹೀಗೆ ಭಗವದ್‌ಭಕ್ತರು ಎಲ್ಲರೂ ವೈರಾಗ್ಯವನ್ನು ಭಾಗ್ಯವೆಂದು ಪ್ರಯತ್ನ ದಿಂದ ಸಂಪಾದಿಸಿದ್ದಾರೆ, ಜ್ಞಾನ ಭಕ್ತ್ಯಾದಿ ಸದ್ಗುಣಗಳಿಗೆ ದಾರ್ಢ್ಯ ಉಂಟಾಗು ವುದೂ ವೈರಾಗ್ಯದಿಂದ. ಜ್ಞಾನಭಕ್ತ್ಯಾದಿಗಳಂತೆ ವೈರಾಗ್ಯವು ಮೋಕ್ಷಕ್ಕೆ ಕಾರಣವೂ ಆಗಿದೆ. ಎಲ್ಲ ಭಾಗವತ ಧರ್ಮಾನುಷ್ಠಾನಗಳೂ ನಿಷ್ಕಾಮನೆ ಯಿಂದಲೇ ಮಾಡಬೇಕಾದವುಗಳಾದ್ದರಿಂದ ಅದಕ್ಕೆ ವೈರಾಗ್ಯವು ಪೀಠಿಕೆ, ಬುನಾದಿಯೂ ಆಗಿದೆ.



# (೬) ಮಹತ್ಸಮಾಗಮ ಪ್ರಕರಣ

## ಪ್ರಕರಣ ಸಾರಾಂಶ

ಮೋಕ್ಷ ಸಾಧನವಾಗಬೇಕಿದ್ದ ಧನವನ್ನು ಕೇವಲ ಶರೀರ ಪೋಷಣೆಗಾಗಿ ವ್ಯಯ ಮಾಡುತ್ತ ನರಕಸಾಧನವಾಗಿ ಮಾಡಿಕೊಳ್ಳುತ್ತಾರೆ. 'ಮಹತ್-ಸಮಾಗಮ' ಅಂದರೆ ಮಹಾಗುರುಗಳ ಪ್ರಾಪ್ತಿಯಾದರೆ ಅವರ ಉಪದೇಶದಿಂದ ಈ ಅಪಾಯ ದೂರವಾಗುವುದು. ಮೋಕ್ಷ ಸಾಧನೆ ಕೈಗೂಡುವುದು. ಜ್ಞಾನ ಭಕ್ತಿ ವೈರಾಗ್ಯ ಮೋಕ್ಷಗಳನ್ನು ಹರಿಯು ಗುರುಗಳ ಮೂಲಕವೇ ಅನುಗ್ರಹಿಸುತ್ತಾನೆ. ಮಾನವಜನ್ಮ ದೊಡ್ಡದು. ಏಕೆಂದರೆ ಮಾನವನಿಗೇ ಗುರುಗಳ ಸಮಾಗಮ ದೊರೆಯುವುದು.



–೧೦೨–

**ಗುರುವಿನ ಗುಲಾಮನಾಗದೆ ಮುಕ್ತಿ ಇಲ್ಲ**

ಧನಂ ಹಿ ಧರ್ಮೈಕಫಲಂ ಯತೋಽಸ್ಯ
ಜ್ಞಾನಂ ಸವಿಜ್ಞಾನಮನು ಪ್ರಶಾಂತಿಃ ।
ಗೃಹೇಷು ಯುಂಜಂತಿ ಕಲೇವರಸ್ಯ
ಮೃತ್ಯುಂ ನ ಪಶ್ಯಂತಿ ದುರಂತವೀರ್ಯಂ ॥

(ಭಾ.೧೧.೫.೧೨)

ಏವಂ ಜಾತವಿರಾಗಸ್ಯಾಪಿ ಪುಂಸೋ ವಿನಾ ಮಹತ್ಸಮಾಗಮಂ ನ ಕಿಂಚಿತ್ಸಾಧನಂ ಸಿಧ್ಯತೀತ್ಯತಃ ತತ್ಸಮಾಗಮಂ ಸಹೇತುಕಂ ವಕ್ತುಂ ತತ್ರಾದರಜನನಾಯ ವಿಪಕ್ಷೇ ಬಾಧಕಂ ತಾವದುಪನ್ಯಸ್ಯತಿ ॥ ಧನಂ ಹೀತಿ ॥ ಯತೋ ಯಸ್ಮಾತ್ ಧನಂ ಧರ್ಮ ಏವ ಏಕಂ ಮುಖ್ಯಂ ಫಲಂ ಯಸ್ಯ ತತ್ । ಅಸ್ಯ ಧರ್ಮಸ್ಯ ಚ ಮುಖ್ಯಂ ಫಲಂ ಜ್ಞಾನಮೇವ । ತಸ್ಯ ಚ ಮುಖ್ಯಂ ಫಲಂ ವಿಜ್ಞಾನಮೇವೇತ್ಯಾಶಯೇನ ಸವಿಜ್ಞಾನಮಿತಿ ವಿಶೇಷಿತಂ । ವಿಜ್ಞಾನಸ್ಯ ಚ ಮುಖ್ಯಂ ಫಲಂ ಅನು ವಿಜ್ಞಾನಮನುಸೃತ್ಯೈವ ಪ್ರಕೃಷ್ಟಾ ಶಾಂತಿರ್ಮೋಕ್ಷ ಇತಿ

**ನಿರ್ಣಯಃ । ಅತೋಽನೇನ ಮೋಕ್ಷ ಏವ ಸಂಪಾದ್ಯಃ । ಏವಂ ಉಪದೇಶಕಾನಾಂ ಮಹತಾಂ ಸಮಾಗಮಾಭಾವೇ ಈದೃಶಂ ಮಹಾಫಲಸಾಧನಮಪಿ ಧನಂ ಕಲೇವರಸ್ಯಾರ್ಥೇ ಗೃಹೇಷು ಅಸತ್ಕುಟುಂಬೇಷ್ವೇವ ಯುಂಜಂತಿ ವಿನಿಯೋಗಂ ಕೃತ್ವಾ ತತ್ರೈವ ಸಕ್ತಾ ಭವಂತಿ । ದುರಂತವೀರ್ಯಂ ಸಮೀಪಸ್ಥಂ ಮೃತ್ಯುಂ ನ ಪಶ್ಯಂತಿ ॥**



**ಏಕಾದಶಸ್ಕಂಧದಲ್ಲಿ ಚಮಸಮುನಿ ವಿದೇಹರಾಜನಿಗೆ ನುಡಿಯುತ್ತಾರೆ— 'ಧನಕ್ಕೆ ಮುಖ್ಯ ಫಲ ಧರ್ಮಸಾಧನೆ, ಧರ್ಮದಿಂದ 'ಪ್ರಶಾಂತಿ' ವೈರಾಗ್ಯ. ಅದರಿಂದ ಜ್ಞಾನ ವಿಜ್ಞಾನಗಳು, ಅವುಗಳಿಂದ 'ಪ್ರಶಾಂತಿ'. ಉತ್ತಮವಾದ ಸುಖರೂಪವಾದ ಮೋಕ್ಷಸಾಧನೆ ಫಲ. ಹೀಗೆ ಮೋಕ್ಷ ಸಾಧನವಾಗಬೇಕಾಗಿರುವ ಧನವನ್ನು ಗುರುಗಳ ಮಾರ್ಗದರ್ಶನವಿಲ್ಲದಿದ್ದರೆ ಶರೀರ ಪೋಷಣೆಗಾಗಿ ಕುಟುಂಬ ವಿಷಯದಲ್ಲಿ ವ್ಯಯಮಾಡುತ್ತಾರೆ. ಅದರಲ್ಲಿಯೇ ಆಸಕ್ತರಾಗುತ್ತಾರೆ. ಅದು ನರಕ ಸಾಧನವಾಗಿ ಪರಿಣಮಿಸುವುದನ್ನೂ ಅಪ್ರತಿಹತಶಕ್ತಿಉಳ್ಳ ಮೃತ್ಯು ಮೇಲೇರಿ ಬರುವುದನ್ನೂ ಅರಿತುಕೊಳ್ಳುವುದಿಲ್ಲ.'**

'ಮಹತ್ ಸಮಾಗಮ' ಮಹಾಗುರುಗಳ ಭೇಟಿಯಾದರೆ, ಅವರ ಸಮಾಗಮದಿಂದ ಈ ಅಪಾಯ ದೂರವಾಗುವುದು. ಧನದಿಂದ ಜ್ಞಾನ ವೈರಾಗ್ಯ ಸಾಧನದ್ವಾರಾ ಮೋಕ್ಷಸಾಧನೆ ಕೈಗೂಡುವುದು. ಗುರುಗಳ ಉಪದೇಶ ವಿಲ್ಲದಿದ್ದರೆ ವಿಷಯಾಸಕ್ತಿ ಇಲ್ಲದ, ವಿರಕ್ತನಾದ ಸಜ್ಜನನೂ ಕೂಡ ಧನವನ್ನು ಕುಟುಂಬ ರಕ್ಷಣೆಗೆ ವ್ಯಯಮಾಡುವುದರಿಂದ ಧರ್ಮಮೋಕ್ಷಸಾಧನೆ ಇಲ್ಲ ವಾಗುವುದು. ವೈರಾಗ್ಯ ಸಂಪಾದನೆ ಮಾಡಿದ್ದು ವ್ಯರ್ಥವಾಗುವುದು.



**–೧೦೩–**

**ಬದುಕುವಾಸೆ ಬಲವಾಗಿದ್ದರೂ ಕ್ಷಣದಲ್ಲಿ ಚಿವುಟಿಹಾಕುವನು ಮೃತ್ಯು**

**ಲೋಕೋ ವಿಕರ್ಮನಿರತಃ ಕುಶಲೇ ಪ್ರಮತ್ತಃ**
**ಕರ್ಮಣ್ಯಯಂ ತ್ವದುದಿತೇ ಭವದರ್ಚನೇ ಸ್ವೇ ।**

**ಯಸ್ತಾವದಸ್ಯ ಬಲವಾನಿಹ ಜೀವಿತಾಶಾಂ**
**ಸದ್ಯಶ್ಛಿನತ್ತ್ಯನಿಮಿಷಾಯ ನಮೋಽಸ್ತು ತಸ್ಮೈ ॥**

(ಭಾ.೩.೧೦.೧೭)

ತತಶ್ಚ ಏವಂ ಭವತೀತ್ಯಾಹ ॥ **ಲೋಕ ಇತಿ** ॥ ಇಹ ಕರ್ಮಸಾಧನೇ ಭಾರತಖಂಡೇ ಅಯಂ ಬ್ರಾಹ್ಮಣಾದಿಕುಲೋತ್ಪನ್ನಃ ಲೋಕಃ ಜನಃ ಧನಂ ಹಿ ಧರ್ಮೈಕಫಲಮಿತ್ಯುಕ್ತದಿಶಾ ತ್ವಯೋದಿತೇ ತ್ವತ್ಪೂಜಾರೂಪೇ ಸ್ವಪುರುಷಾರ್ಥ ಸಾಧನೇ ಕರ್ಮಣಿ ಪ್ರಮತ್ತಃ ಸನ್ ತದ್ವಿರುದ್ಧೇ ಕುಟುಂಬಪೋಷಣಾದಿರೂಪೇ ಕರ್ಮಣಿ ನಿತರಾಂ ರತೋ ಭವತಿ । ಕಿಮೇವಮುಕ್ತಾನುವಾದೇನೇತ್ಯತ ಉಕ್ತಂ । ಯಸ್ತಾವದಿತಿ । ಏವಂ ಯಃ ವರ್ತತೇ ಅಸ್ಯ ಲೋಕಸ್ಯ ಪರಲೋಕೇ ಭವದ್ ದುಃಖಂ ತಾವದಸ್ತು ಸದ್ಯಃ ಜೀವಿತಸ್ಯ ಜೀವನಸ್ಯ ಆಶಾಮೇವ ಬಲವಾನ್ ಯಃ ಕಾಲನಾಮಾ ಭಗವಾನ್ ಸಃ ಛಿನತ್ತಿ । ತಸ್ಮೈ ನಿಮೇಷಾದಿಕಾಲಕೃತವಿಕಾರ-ರಹಿತಾಯ ನಮೋಽಸ್ತ್ವಿತಿ । **ಯಥಾಹುಃ—**

"ಲಬ್ಧ್ವಾ ಜನ್ಮಾಂತರಪ್ರಾರ್ಥ್ಯಂ ಮಾನುಷ್ಯಂ ತದ್ದ್ವಿಜಾಗ್ರ್ಯತಾಂ ।
ತದನಾದೃತ್ಯ ಯೇ ಸರ್ವಂ ಘ್ನಂತಿ ಯಾಂತ್ಯಶುಭಾಂ ಗತಿಂ ॥

ಸ್ವರ್ಗಾಪವರ್ಗಯೋರ್ದ್ವಾರಂ ಪ್ರಾಪ್ಯ ಲೋಕಮಿಮಂ ಪುಮಾನ್ ।
ದ್ರವಿಣೇ ಕೋಽನುಷಜ್ಜೇತ ಮರ್ತ್ಯೋಽನರ್ಥಸ್ಯ ಧಾಮನಿ ॥

ದೇವರ್ಷಿಪಿತೃಭೂತಾನಿ ಜ್ಞಾತೀನನ್ಯಾಂಶ್ಚ ಭಾಗಿನಃ ।
ಅಸಂವಿಭಜ್ಯ ಚಾತ್ಮಾನಂ ಯಕ್ಷವಿತ್ತಃ ಪತತ್ಯಧಃ ॥

ತಸ್ಮಾತ್ಸಂಕ್ಲಿಶ್ಯತೇಽವಿದ್ವಾನ್ ವ್ಯರ್ಥಯಾರ್ಥೇಹಯಾಽಸಕೃತ್ ।
ಕಸ್ಯಚಿನ್ಮಾಯಯಾ ನೂನಂ ಲೋಕೋಽಯಂ ಸುವಿಮೋಹಿತ" ಇತಿ ।

ತದನೇನ ಶ್ಲೋಕದ್ವಯೇನ ಸತ್ಸಮಾಗಮಾಭಾವೇ ಯಥೋಕ್ತಸಾಧನಂ ಪರಿತ್ಯಜ್ಯ ವಿಪರೀತಕಾರ್ಯನಿರತತ್ವಂ ಜನಸ್ಯ ಭವತೀತಿ ಕಥನೇನ ಆತಿಥ್ಯಪದೋದಿತೋ ಯಥಾರ್ಹತೋ ಭೂತೇಭ್ಯೋಽನ್ನಾದಿವಿಭಜನರೂಪಃ ಪರಾರ್ಥೇಹಾಪದಪ್ರತಿಪಾದಿತೋ ನೃಣಾಂ ವಿಪರ್ಯಯೇಹೇಕ್ಷಾಽಪರ-ಪರ್ಯಾಯೋ ಮನೋವಾಕ್ಕಾಯ ದಂಡರೂಪಶ್ಚ ಭಾಗವತೋ ಧರ್ಮಃ ಸಂಪಾದನೀಯ ಇತಿ ಸೂಚಿತಂ ಭವತಿ । ಅರ್ಥಸಂವಿಭಜನಾಭಾವೇ ನಾರಕದುಃಖವಿಶೇಷಶ್ಚ ನಾಮಪ್ರಶಂಸಾಪ್ರಕರಣೇ ವಕ್ಷ್ಯತ ಇತಿ ॥



**ಬ್ರಹ್ಮದೇವರು ಶ್ರೀಹರಿಯನ್ನು ಸ್ತುತಿಸುತ್ತಾರೆ—ಧನದಿಂದ ಧರ್ಮ, ಧರ್ಮದಿಂದ ವೈರಾಗ್ಯ, ವೈರಾಗ್ಯದಿಂದ ಜ್ಞಾನ ವಿಜ್ಞಾನಗಳ ದ್ವಾರಾ ಮೋಕ್ಷ ಸಾಧನೆ ಎಂದು 'ತ್ವದುದಿತೇ ಭವದರ್ಚನೇ ಸ್ವೇ' ನೀನು ದತ್ತ ಕಪಿಲ ವ್ಯಾಸಾದಿ ರೂಪಗಳಿಂದ ಬೋಧಿಸಿರುವ ನಿನ್ನ ಆರಾಧನಾರೂಪವಾದ 'ಸ್ವೇ' ತನಗೆ ವಿಹಿತವಾದ 'ಕುಶಲೇ' ಸತ್ಕರ್ಮದಲ್ಲಿ ಮಾನವನು ಮೈಮರೆತು ಮನಸ್ಸು ಹಾಕದೆ ವಿಕರ್ಮನಿರತನಾದರೆ, ಅವನ ಬದುಕಿನಾಸೆಯನ್ನೇ 'ಅನಿಮಿಷ' ಬಲಿಷ್ಠನಾದ ಕಾಲನಾಮಕನಾದ ನೀನು 'ಸದ್ಯಃ' ಅನಿರೀಕ್ಷಿತವಾಗಿ ವಿಲಂಬವಿಲ್ಲದೆ ಚಿವುಟಿ ಹಾಕುವಿ. ಅಂಥ ಅನಿಮಿಷನಾದ ನಿನಗೆ ನಮೋ ನಮಃ**

–ಹೀಗೆ ಮೋಕ್ಷಸಾಧನೆಯಾಗದೆ ಮಾನವನ ಬಾಳು ವ್ಯರ್ಥವಾಗುವುದು.

ಲಬ್ಧ್ವಾ ಜನ್ಮಾಂತರೈಃ ಪ್ರಾರ್ಥ್ಯಂ ಮಾನುಷ್ಯಂ ತದ್ ದ್ವಿಜಾಗ್ರ್ಯತಾಂ ।
ತದನಾದೃತ್ಯ ಯೇ ಸರ್ವಂ ಘ್ನಂತಿ ಯಾಂತ್ಯಶುಭಾಂ ಗತಿಂ ।
ಸ್ವರ್ಗಾಪವರ್ಗಯೋ ರ್ದ್ವಾರಂ ಪ್ರಾಪ್ಯ ಲೋಕಮಿಮಂ ಪುಮಾನ್ ।
ದ್ರವಿಣೇ ಕೋಽನುಷಜ್ಜೇತ ಮರ್ತ್ಯೋಽನರ್ಥಸ್ಯ ಧಾಮನಿ ।
ದೇವರ್ಷಿಪಿತೃಭೂತಾನಿ ಜ್ಞಾತೀನನ್ಯಾಂಶ್ಚ ಭಾಗಿನಃ ।
ಅಸಂವಿಭಜ್ಯ ಚಾತ್ಮಾನಂ ಯಕ್ಷವಿತ್ತಃ ಪತತ್ಯಧಃ ।
ತಸ್ಮಾತ್ ಸಂಕ್ಲಿಶ್ಯತೇಽವಿದ್ವಾನ್ ವ್ಯರ್ಥಯಾರ್ಥೇಹಯಾಽಸಕೃತ್ ।
ಕಸ್ಯಚಿನ್ಮಾಯಯಾ ನೂನಂ ಲೋಕೋಽಯಂ ಸುವಿಮೋಹಿತಃ ॥
(ಭಾ.೧೧.೨೩.೨೨-೨೬)

'ಅನೇಕ ಜನ್ಮಗಳಿಂದ ಸಾಧನೆ ಮಾಡಿ ಪಡೆದ ಮಾನವಜನ್ಮವನ್ನು ಅದರಲ್ಲಿಯೂ ಉತ್ತಮ ಬ್ರಾಹ್ಮಣ ಜನ್ಮವನ್ನು ಅನಾದರದಿಂದ ಕಂಡು, ಸಾಧನ ಮಾಡಿಕೊಳ್ಳದವರು ನರಕಾದ್ಯನರ್ಥವನ್ನು ಹೊಂದುವರು.

ಈ ಶರೀರವು ಸ್ವರ್ಗಕ್ಕೂ ಮೋಕ್ಷಕ್ಕೂ ಸಾಧನವಾಗಬಲ್ಲುದು. ಇಂಥ ಶರೀರ ಸಿಕ್ಕಾಗ ಯಾವ ಬುದ್ಧಿವಂತನು ಅನರ್ಥಕ್ಕೆ ಕಾರಣವಾಗಿರುವ ಅರ್ಥದಲ್ಲಿ ಆಸಕ್ತನಾಗುವನು?

ದೇವತೆಗಳು ಋಷಿಗಳು ಪಿತೃಗಳು ಭೂತಗಳು ಸಂಬಂಧಿಗಳು ಮುಂತಾದವರಿಗೆ ಅವರವರ ಭಾಗಗಳನ್ನು ನೀಡದೆ ಇದ್ದರೆ ದೇವತೆಗಳಿಗೆ

ಯಜ್ಞ, ಋಷಿಗಳಿಗೆ ವೇದಾಧ್ಯಯನ, ಪಿತೃಗಳಿಗೆ ಶ್ರಾದ್ಧಾದಿ, ಭೂತಗಳಿಗೆ ಬಲಿ, ಸಂಬಂಧಿ ಪರಿವಾರದವರಿಗೆ ಪೋಷಣೆಗಳನ್ನು ನೀಡದಿದ್ದರೆ, ಯಕ್ಷನ ರಕ್ಷಣೆಯಲ್ಲಿ ಬಿಟ್ಟಿರುವ ನಿಧಿಯಂತೆ ಆ ಧನವು ತನಗೂ ಇಲ್ಲ ಪರರಿಗೂ ಇಲ್ಲವೆಂದಾಗುವುದು. ತನಗೆ ಅಧೋಗತಿಯೇ ಆಗುವುದು.

ವ್ಯರ್ಥಹಣದಾಸೆಯಿಂದ ಮೈಮರೆತವರಿಗೆ ಹಣ ವಯಸ್ಸು ಶರೀರಬಲ ಇವು ಮೂರೂ ಮೋಕ್ಷಸಾಧನೆಗೆ ಉಪಯೋಗವಾಗದೆ ಹೋಗುತ್ತದೆ. ಆಮೇಲೆ ದರಿದ್ರ ವೃದ್ಧ ಅಶಕ್ತನೆನಿಸುವ ಆತ ಏನು ಧ್ಯೇಯಸಾಧನೆ ಮಾಡಿಕೊಳ್ಳಬಲ್ಲ?'

ಈ ಎರಡು ಪದ್ಯಗಳಲ್ಲಿ ಗುರೂಪದೇಶ, ಸತ್ಸಮಾಗಮವಿಲ್ಲದಿದ್ದರೆ ಮೋಕ್ಷ ಸಾಧನೆಯಾಗುವುದಿಲ್ಲ, ನರಕಸಾಧನೆಯಾಗುವುದು ಎಂದು ಹೇಳಿದಂತಾ ಯಿತು. ಏಕೆಂದರೆ ಗುರೂಪದೇಶವಿಲ್ಲದವನು ದೇವರ್ಷಿ ಪಿತೃ ಮುಂತಾದವರಿಗೆ ಅನ್ನಾದಿದಾನ ಮಾಡುವುದಿಲ್ಲ. 'ಆತಿಥ್ಯ'ವೆಂಬ ಭಾಗವತ ಧರ್ಮವನ್ನಾಚರಿಸು ವುದಿಲ್ಲ. ಪರೋಪಕಾರಕ್ಕಾಗಿ ತ್ರಿಕರಣಗಳಿಂದ ಶ್ರಮಿಸುವುದೆಂಬ 'ಪರಾರ್ಥೇಹಾ' 'ವಿಪರ್ಯಯೇಹೇಕ್ಷಾ' ಎಂಬ ಭಾಗವತಧರ್ಮವನ್ನೂ ಆಚರಿಸುವುದಿಲ್ಲ.

ಧನವನ್ನು ದೇವ 'ಋಷಿ ಮುಂತಾದವರಿಗೆ ಹಂಚಿ ಉಣದಿದ್ದರೆ ನರಕಾ ದ್ಯನರ್ಥವನ್ನು ಮುಂದೆ ನಾಮ ಪ್ರಶಂಸಾಪ್ರಕರಣದಲ್ಲಿ ಸ್ಪಷ್ಟಪಡಿಸುವೆವು.



–೧೦೪–

**ಕೃಷ್ಣನಿಗೆ ವಿಮುಖರಾಗಿ ಕಷ್ಟಪಡುವವರನ್ನು ಗುರು ಕಾಪಾಡುತ್ತಾನೆ**

ಜನಸ್ಯ ಕೃಷ್ಣಾದ್ ವಿಮುಖಸ್ಯ ದೈವಾತ್
ಅಧರ್ಮಶೀಲಸ್ಯ ಸುದುಃಖಿತಸ್ಯ ।
ಅನುಗ್ರಹಾಯೇಹ ಚರಂತಿ ನೂನಂ
ಭೂತಾನಿ ಭವ್ಯಾನಿ ಜನಾರ್ದನಸ್ಯ ॥

(ಭಾ.೩.೫.೩)

ಏವಮುಪದೇಶಕಾನಾಂ ಮಹತಾಂ ಸಮಾಗಮಾಭಾವೇ ಬಾಧಕಂ ಭವದುಪಪಾದ್ಯ ಅಧುನಾ ತತ್ಸಮಾಗಮೋಽಪಿ ದೈವವಶಾದೇವ ಭವತೀತ್ಯಾಹ । ಜನಸ್ಯೇತಿ ॥ ಉಪದೇಶಕಾಭಾವೇನ ಕೃಷ್ಣಾದ್ವಿಮುಖಸ್ಯ ಅತ ಏವ ಅಧರ್ಮಶೀಲಸ್ಯ ತತ ಏವ ಅತ್ಯಂತದುಃಖಿತಸ್ಯ ಜನಸ್ಯ ಉಪದೇಶಾದಿನಾ ಅನುಗ್ರಹಂ ಕರ್ತುಂ ಜನಾರ್ದನಸ್ಯ ಭಗವತೋ ದಾಸಭೂತಾನಿ ಭವ್ಯಾನಿ ಮಂಗಲಕರಾಣಿ ಭೂತಾನಿ ಪರಮಭಾಗವತರೂಪಾಣಿ ಸತ್ವಾನಿ ಇಹ ಭಾರತೇ ಖಂಡೇ ಚರಂತಿ ಅಟಂತಿ ನೂನಂ। ಪರಂತು ದೈವಾತ್ ದೈವವಶಾತ್ ಏವ ಈದೃಶಸ್ಯ ಜನಸ್ಯ ಸಮೀಪೇ ಚರಂತಿ ಆಗಚ್ಛಂತೀತಿ ॥



ವಿದುರನು ಮೈತ್ರೇಯರ ಮುಂದೆ ಹೇಳುತ್ತಾನೆ— ಪ್ರಾಚೀನ ಕರ್ಮ ವಶದಿಂದ ಸದ್ಗುರುಗಳ ಉಪದೇಶದಿಂದ ವಂಚಿತರಾಗಿ ಸಜ್ಜನರೂ ಕೂಡ ಕೃಷ್ಣನಿಗೆ ವಿಮುಖರಾಗುತ್ತಾರೆ. ಅಧರ್ಮನಿರತರಾಗುತ್ತಾರೆ. ದುಃಖಿಗಳಾಗು ತ್ತಾರೆ. ಹರಿಭಕ್ತರಾದ ತಮ್ಮಂಥ ಜ್ಞಾನಿಗಳು ಕೇವಲ ಅವರ ದುಃಖಪರಿಹಾರಕ್ಕಾಗಿ ಸುಖಪ್ರಾಪ್ತಿಗಾಗಿ ಈ ಕರ್ಮಭೂಮಿಯಲ್ಲಿ ಸಂಚರಿಸುತ್ತಾರೆ. ಅಂಥ ಸಜ್ಜನರನ್ನು ಅರಸುತ್ತ ಬರುತ್ತಾರೆ. ಅದರಿಂದ ಮಹತ್ ಸಮಾಗಮವು ಪ್ರಾಚೀನದುಷ್ಕರ್ಮ ವಿನಾಶಕ್ಕೆ ಕಾಲ ಬಂದಾಗಲೇ ದೈವಾತ್ ಲಭಿಸುವುದು. ಆಗ ಅವರ ಉಪದೇಶದಿಂದ ಸಜ್ಜನರು ಕೃಷ್ಣನಿಗೆ ವಿಮುಖರಾಗಿದ್ದವರು ಕೃಷ್ಣನ ಕಡೆಗೆ ಧಾವಿಸಿ ಬರುವರು.



–೧೦೫–

**ಮೋಕ್ಷಕ್ಕೆ ಕಾಲ ಬಂದಾಗಲೆ ಸದ್ಗುರು ದೊರೆಯುತ್ತಾನೆ**

ಭವಾಪವರ್ಗೋ ಭ್ರಮತೋ ಯದಾ ಭವೇ-
ಜ್ಜನಸ್ಯ ತರ್ಹ್ಯಚ್ಯುತ ಸತ್ಸಮಾಗಮಃ ।
ಸತ್ಸಂಗಮೋ ಯರ್ಹಿ ತದೈವ ಸದ್‌ಗತೌ
ಪರಾವರೇಶೇ ತ್ವಯಿ ಜಾಯತೇ ರತಿಃ ॥

(ಭಾ.೧೦.೫೪,೫೫)

**ಏವಂ ಸತ್ಸಮಾಗಮೇ ದೈವಮೇವ ಹೇತುರಿತ್ಯಭಿಧಾಯ ಕೃಷ್ಣಾದ್ವೈಮುಖ್ಯಂ ಚ ಜನಸ್ಯ ವಿನಾ ಸತ್ಸಮಾಗಮಂ ನ ಗಚ್ಛತೀತ್ಯತೋ ಮೋಚಕಕಾಲ ಏವ ತತ್ಸಮಾಗಮೋ ಭವತಿ ನಾನ್ಯದೇತ್ಯಾಹ ॥ ಭವಾಪವರ್ಗ ಇತಿ ॥ ಹೇ ಅಚ್ಯುತ ತರ್ಹಿ ತದೈವ ಸತಾಮಾಶ್ರಯೇ ತ್ವಯಿ ರತಿಃ ಭಕ್ತಿಃ ॥**



**ರಾಜಾ ಮುಚುಕುಂದನು ಶ್ರೀಕೃಷ್ಣನನ್ನು ಸ್ತುತಿಸುತ್ತಾನೆ—ಅಚ್ಯುತನೆ! ಸಂಸಾರಚಕ್ರದಲ್ಲಿ ಸುತ್ತುತ್ತಲೇ ಇರುವ ಸುಜನನಿಗೆ ಮೋಕ್ಷಕಾಲ ಬಂದಾಗಲೇ ಸದ್ಗುರುಗಳ ಸಂಗ ದೊರಕುವುದು. ಸದ್ಗುರುಗಳ ಉಪದೇಶ ದೊರೆತಾಗಲೇ ಸುಜನರಿಗೆ ಲಭ್ಯವಾದ ಮುಕ್ತಾಮುಕ್ತನಿಯಾಮಕನಾದ ನಿನ್ನ ವಿಷಯದಲ್ಲಿ ಜ್ಞಾನಭಕ್ತಿ ವೈರಾಗ್ಯಗಳುಂಟಾಗುತ್ತವೆ.**

ಇದರ ಮುಂದಿನ ಶ್ಲೋಕದಲ್ಲಿಯೇ ಮುಚುಕುಂದ ಹೇಳುತ್ತಾನೆ—

'ಮನ್ಯೇ ಮಮಾನುಗ್ರಹ ಏಷ ತೇ ಕೃತಃ'

'ನನಗೆ ಜ್ಞಾನಭಕ್ತಿ ವೈರಾಗ್ಯಗಳು ಲಭಿಸಿದುದು ನೀನು ನನ್ನ ಮೇಲೆ ಮಾಡಿದ ಅನುಗ್ರಹ' ಎನ್ನುತ್ತಾನೆ. ಅದರಿಂದ ಭಾಗವತವು ರಾಜರ ಋಷಿಗಳ ವೃತ್ತಾಂತವನ್ನು ಹೇಳುವುದು ಹೀಗೆ ದೃಷ್ಟಾಂತಗಳನ್ನು ತೋರಿಸುವುದಕ್ಕಾಗಿ ಎಂದು ತಿಳಿಯಬೇಕು ಎಂದು ಹಿಂದೆ ಹೇಳಿದ್ದಾರೆ. ಸದ್ಗುರುಗಳ ಉಪದೇಶವನ್ನು ಕೇಳಿದರೂ ನಮಗೆ ಭಕ್ತಿ ವೈರಾಗ್ಯಗಳು ಬರಲಿಲ್ಲ! ಎಂದು ಗೊಣಗಬಾರದು. ಭಕ್ತಿವೈರಾಗ್ಯಗಳು ಬಂದೇ ಬರುತ್ತವೆ. ಅದಕ್ಕೆ ಕಾಲ ಬರಬೇಕು. ಗುರೂಪದೇಶ ವಿಲ್ಲದೆ ಮಾತ್ರ ಎಂದೂ ಅವು ಬರಲಾರವು.



—೧೦೬—

## ಗುರುಸೇವೆ ಮಾಡಿದರೆ ಜ್ಞಾನಾದಿ ಲಾಭವಿದೆ

**ಸತಾಂ ಪ್ರಸಂಗಾನ್ಮಮ ವೀರ್ಯ ಸಂಪದೋ**
**ಭವಂತಿ ಹೃತ್ ಕರ್ಣ ರಸಾಯನಾಃ ಕಥಾಃ ।**
**ತಜ್ಜೋಷಣಾದಾಶ್ವಪವರ್ಗಜನ್ಮನಿ**
**ಶ್ರದ್ಧಾವತೀ ಭಕ್ತಿರನುಕ್ರಮಿಷ್ಯತಿ ॥** (ಭಾ.೩.೨೬.೨೫)

ಸತ್ಸಮಾಗಮಾದಪಿ ನ ತಾತ್ಕಾಲಿಕಾತ್ ನಾಪಿ ಸಾಕ್ಷಾತ್ ಕಿಂತು ಬಹುಕಾಲೀನಾತ್ ಶ್ರವಣಾದಿದ್ವಾರೈವೇತ್ಯಭಿಪ್ರೇತ್ಯ ಉಕ್ತಮುಪಪಾದಯತಿ। **ಸತಾಮಿತಿ** ॥ ಪ್ರಕೃಷ್ಟಾತ್ ಬಹುಕಾಲೀನಾತ್ ಸಂಗಾತ್ ಸತ್ಸಮಾಗಮಾತ್। ನನು ಪೂರ್ವಪ್ರಕರಣೇ ಸರ್ವಸಂಗೋ ವರ್ಜನೀಯ ಇತ್ಯಭಿಹಿತಂ। ತತ್ಕಥಮುಚ್ಯತೇ ಬಹುದಿನಸಂಗಃ ಕಾರ್ಯ ಇತಿ। ಸತ್ಯಂ। ಭಗವತ್ಸೇವಾವಿರೋಧಿಷು ವರ್ಜನೀಯ ಇತಿ। ಏತೇ ತು ತತ್ಸಾಧಕತಮಾ ಅವಶ್ಯಂ ಪ್ರಾರ್ಥನೀಯ ಸಮಾಗಮಾಃ ದುಃಸಂಗದೋಷಹರಾಶ್ಚೇತ್ಯಾಶಯೇನೋಕ್ತಂ ಸತಾಮಿತಿ ॥ ಹೃತ್ಕರ್ಣರಸಾಯನಾಃ ಹೃತ್ಕರ್ಣಯೋಃ ಸುಖಪ್ರದಾಃ। ಮಮ ಯಾನಿ ವೀರ್ಯಾಣಿ ತಾನ್ಯೇವ ಸಂಪದೋ ಯಾಸು ತಾಃ ಮಮ ಕಥಾಸ್ತಾವತ್ ಸತಾಂ ಸಮೀಪೇ ಭವಂತಿ। ಕಿಂ ತತಃ ತಾಸಾಂ ಕಥಾನಾಂ ಜೋಷಣಾತ್ ಸೇವನಾತ್ ಅಪವರ್ಗಪ್ರದೇ ಹರೌ ಭಕ್ತಿಃ ಅನುಕ್ರಮಿಷ್ಯತಿ। ಭಕ್ತಿರಪಿ ಕಥಾಶ್ರವಣೇನ ನ ಸಾಕ್ಷಾತ್ ಕಿಂತು ವೈಮುಖ್ಯವಿರೋಧಿಶ್ರದ್ಧಾಜನನದ್ವಾರೈವೇತ್ಯಾಶಯೇನ ಶ್ರದ್ಧಾವತೀತಿ ಭಕ್ತಿರ್ವಿಶೇಷಿತಾ। ಅವಶ್ಯಂ ಚೈತದೇವಂ। ಅನ್ಯಥಾ ತಚ್ಛ್ರದ್ಧಯಾ ಭಗವದ್ಧರ್ಮಚರ್ಯಯೇತ್ಯತ್ರ ಭಕ್ತಿಸಾಧನೇಷು ಶ್ರದ್ಧಾಪರಿಗಣನಮಯುಕ್ತಂ ಸ್ಯಾತ್ ಇತಿ ಮಂತವ್ಯಂ। **ಯಥಾಹುಃ—**

''ಪ್ರಸಂಗಮಜರಂ ಪಾಶಮಾತ್ಮನಃ ಕವಯೋ ವಿದುಃ।
ಸ ಏವ ಸಾಧುಷು ಕೃತೋ ಮೋಕ್ಷದ್ವಾರಮಪಾವೃತಂ ॥

ತಿತಿಕ್ಷವಃ ಕಾರುಣಿಕಾಃ ಸುಹೃದಃ ಸರ್ವದೇಹಿನಾಂ।
ಅಜಾತಶತ್ರವಃ ಶಾಂತಾಃ ಸಾಧವಃ ಸಾಧುಭೂಷಣಾಃ ॥

ಮಯ್ಯನನ್ಯೇನ ಭಾವೇನ ಭಕ್ತಿಂ ಕುರ್ವಂತಿ ಯೇ ದೃಢಾಂ।
ಮತ್ಕೃತೇ ತ್ಯಕ್ತಕರ್ಮಾಣಸ್ತ್ಯಕ್ತಸ್ವಜನ ಬಾಂಧವಾಃ ॥

ಮದಾಶ್ರಯಾಃ ಕಥಾ ಮೃಷ್ಟಾಃ ಶೃಣ್ವಂತಿ ಕಥಯಂತಿ ಚ।
ತಪಂತಿ ವಿವಿಧಾಂಸ್ತಾಪಾನ್ನೈಕಾತ್ಮ್ಯಗತಚೇತಸಃ ॥

ತ ಏತೇ ಸಾಧವಃ ಸಾಧ್ವಿ ಸರ್ವಸಂಗವಿವರ್ಜಿತಾಃ।
ಸಂಗಸ್ತೇಷ್ವಥ ತೇ ಪ್ರಾರ್ಥ್ಯಃ ಸಂಗದೋಷಹರಾ ಹಿ ತೇ ॥

ಸಂಯೋಗಃ ಸಂಸ್ಕೃತೇರ್ಹೇತುರಸತ್ಸು ವಿಹಿತೋಧಿಯಾ।
ಸ ಏವ ಸಾಧುಷು ಕೃತೋ ನಿಃಸಂಗತ್ವಾಯ ಕಲ್ಪತ'' ಇತಿ ॥



**ಕಪಿಲ ಪರಮಾತ್ಮನು ತಾಯಿಗೆ ಉಪದೇಶಿಸುತ್ತಾನೆ—ಬಹುಕಾಲ ಸಜ್ಜನರ ಸಂಗ ಮಾಡಿದರೆ, ಗುರೂಪದೇಶ ಕೇಳಿದರೆ, ಮನಸು ಕಿವಿಗಳಿಗೆ ಆಪ್ಯಾಯಮಾನವಾಗುವಂಥ ನನ್ನ ಲೀಲೆಗಳ ಬಗ್ಗೆ ಕಥೆಗಳು ಮಾತುಕತೆಗಳು ನಡೆಯುತ್ತವೆ. ಅವುಗಳನ್ನು ಮನನ ಮಾಡಿದಾಗ ಮೋಕ್ಷಸಾಧನವಾದ ಜ್ಞಾನಾದಿಗಳನ್ನು ನೀಡುವ ನನ್ನಲ್ಲಿ ಬೇಗನೆ ಶ್ರದ್ಧಾಭಕ್ತಿಗಳು ಉದಿಸುತ್ತವೆ.**

'ಬೇಗನೆ ಶ್ರದ್ಧಾಭಕ್ತಿಗಳು ಉದಿಸುತ್ತವೆ' ಎಂದರೆ ಬಹುಕಾಲ ಗುರುಸೇವೆ ಮಾಡಲೇಬೇಕು. ಆಗ 'ಜನಸ್ಯ ಕೃಷ್ಣಾದ್ ವಿಮುಖಸ್ಯ' ಎಂಬ ಶ್ಲೋಕದಲ್ಲಿ ಹೇಳಿದಂತೆ ಅಂದಿನವರೆಗಿದ್ದ ಕೃಷ್ಣಕಥಾಸಕ್ತಿಯ ಕೊರತೆಯ ನಿವಾರಣೆಯಾಗುತ್ತದೆ. ಕೃಷ್ಣಕಥೆಯಲ್ಲಿ ಶ್ರದ್ಧೆ ಆಸಕ್ತಿ ಬರುತ್ತದೆ. ಅದರಿಂದ ಭಕ್ತಿ ಉಂಟಾಗುತ್ತದೆ. ಈ ಶ್ರದ್ಧಾಭಕ್ತಿ ಉಂಟಾಯಿತೆಂದರೆ ಗುರುಗಳ ಸಂಗವು 'ಪ್ರ-ಸಂಗ'ವಾಗುತ್ತದೆ. ಪ್ರಸಂಗದಿಂದ 'ಆಶು' ಬೇಗನೆ ಅಧಿಕವಾದ ಶ್ರದ್ಧಾಭಕ್ತಿ ಉಂಟಾಗುತ್ತದೆ ಎಂದು ಅಭಿಪ್ರಾಯ. ಗೀತೆಯಲ್ಲಿ 'ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ' ಎಂದು ಇದನ್ನೇ ಶ್ರೀಕೃಷ್ಣ ಹೇಳಿದ್ದಾನೆ. ಭಾಗವತದಲ್ಲಿ ಕಪಿಲನೂ ಹಾಗೇ ಹೇಳಿದ್ದಾನೆ—

ಪ್ರಸಂಗಮಜರಂ ಪಾಶಂ ಆತ್ಮನಃ ಕವಯೋ ವಿದುಃ ।
ಸ ಏವ ಸಾಧುಷು ಕೃತೋ ಮೋಕ್ಷದ್ವಾರಮಪಾವೃತಂ ॥
(ಭಾ.೩.೨೬.೨೦)

ಹರಿಭಕ್ತಿಯನ್ನೊಲ್ಲದಿರುವ ಬಂಧುಮಿತ್ರರುಗಳಲ್ಲಿಯೂ ಬಹುಕಾಲದ ಅತಿಯಾದ ಆಸಕ್ತಿ ಒಳ್ಳೆಯದಲ್ಲ. ಅದು ಶಿಥಿಲವಾಗದ ದೃಢ ಪಾಶವಾಗುವುದು ಎಂದು ಜ್ಞಾನಿಗಳ ಮತ. ಆದರೆ ಅದೇ ಅತಿಯಾದ ಆಸಕ್ತಿಯನ್ನು ಬಹುಕಾಲ ಸಾಧುಗಳಲ್ಲಿ ಗುರುಗಳಲ್ಲಿ ಮಾಡಿದರೆ ಅದು ಮುಕ್ತಿಗೆ ತೆರೆದಬಾಗಿಲು, ಬೇಗನೆ ಮುಕ್ತಿದಾಯಕವಾಗುವುದು ಎಂದು. ಯಾರು 'ಸಾಧು'ಗಳು ಗುರುಗಳು?

ತಿತಿಕ್ಷವಃ ಕಾರುಣಿಕಾಃ ಸುಹೃದಃ ಸರ್ವದೇಹಿನಾಂ ।
ಅಜಾತಶತ್ರವಃ ಶಾಂತಾಃ ಸಾಧವಃ ಸಾಧುಭೂಷಣಾಃ ।
ಮಯ್ಯನನ್ಯೇನ ಭಾವೇನ ಭಕ್ತಿಂ ಕುರ್ವಂತಿ ಯೇ ದೃಢಾಂ ।
ಮತ್ಕೃತೇ ತ್ಯಕ್ತಕರ್ಮಾಣಸ್ತ್ಯಕ್ತಸ್ವಜನಬಾಂಧವಾಃ ॥

ಮದಾಶ್ರಯಾಃ ಕಥಾ ಹೃಷ್ಟಾಃ ಶೃಣ್ವಂತಿ ಕಥಯಂತಿ ಚ ।
ತಪಂತಿ ವಿವಿಧಾಂಸ್ತಾಪಾನ್ ಐಕಾತ್ಮ್ಯಗತಚೇತಸಃ ॥
ತ ಏತೇ ಸಾಧವಃ ಸಾಧ್ವಿ ಸರ್ವಸಂಗ ವಿವರ್ಜಿತಾಃ ।
ಸಂಗಸ್ತೇಷ್ವಥ ತೇ ಪ್ರಾರ್ಥ್ಯಃ ಸಂಗದೋಷಹರಾ ಹಿ ತೇ ॥

'ತಿತಿಕ್ಷವಃ' ಉತ್ತಮರು ತನ್ನಲ್ಲಿ ಅಪರಾಧ ಮಾಡಿದರೆ ಸಹಿಸಿಕೊಳ್ಳುವವರು ಕಿರಿಯರಲ್ಲಿ ಕರುಣೆ ತೋರುವವರು, ಸಮಾನರಲ್ಲಿ ಸೌಹಾರ್ದಉಳ್ಳವರು ಸಜ್ಜನ ರಲ್ಲಿ ಯಾರನ್ನೂ ಶತ್ರುವೆಂದು ಬಗೆಯದವರು, ಭಗವದ್‌ಭಕ್ತರು ಸತ್ಕರ್ಮ ವನ್ನೇ ತಮಗೆ ಭೂಷಣವೆಂದು ತಿಳಿಯುವವರು–ಇವರೇ ಸಾಧು ಸಜ್ಜನರು, ಗುರುಗಳು.

ನನ್ನಲ್ಲಿ ಅನನ್ಯ ಭಾವದಿಂದ ದೃಢಭಕ್ತಿ ಮಾಡುತ್ತ ನನ್ನ ಅನುಗ್ರಹ ಒಂದನ್ನೇ ಬಯಸಿ ಕಾಮ್ಯ ನಿಷಿದ್ಧಕರ್ಮಗಳನ್ನು ತೊರೆದು ಲೌಕಿಕ ಸ್ವಜನಬಾಂಧವರನ್ನೂ ತೊರೆದವರು ಸಾಧುಗಳು.

ನನ್ನ ಕಥೆಗಳನ್ನೆ ಆನಂದದಿಂದ ಹೇಳುತ್ತ ಕೇಳುತ್ತ 'ಐಕಾತ್ಮ್ಯ' ನಾನು ಸರ್ವೋತ್ತಮನೆಂಬ ವಿಷಯದಲ್ಲಿ ಸ್ಥಿರಬುದ್ಧಿಯವರಾಗಿದ್ದು ನಾನಾವಿಧ ತಪಸ್ಸು ಗಳನ್ನು ಆಚರಿಸುವರು ಸಾಧುಗಳು.

ಈ ಎಲ್ಲ ಸಾಧುಗಳೂ ದುಷ್ಟಸಂಗ ಪರಿತ್ಯಾಗಿಗಳು. ಅವರೊಡನೆ ಸಂಗವನ್ನು ಬಯಸಬೇಕು. ಅವರು ವಿಷಯಾಸಕ್ತಿ ಮೂಲಕವಾದ ದುರ್ಜನ ಸಂಗ ಮೂಲಕವಾದ ದೋಷಗಳನ್ನು ಕಳೆಯುವರು.

ಸಂಯೋಗಃ ಸಂಸೃತೇ ಹೇತುರಸತ್ಸು ವಿಹಿತೋ ಧಿಯಾ ।
ಸ ಏವ ಸಾಧುಷು ಕೃತೋ ನಿಃಸಂಗತ್ವಾಯ ಕಲ್ಪತೇ ॥

ನನ್ನನ್ನೊಲ್ಲದವರಲ್ಲಿ ಮಾಡುವ ಸ್ನೇಹವು ಸಂಸಾರ ಬಂಧಕವಾಗುವುದು. ನನ್ನವರಲ್ಲಿ ಮಾಡುವ ಸ್ನೇಹವು ಸಂಸಾರ ಮೋಚಕವಾಗುವುದು.



–೧೦೭–

## ವಿಷಯಭೋಗದಲ್ಲಿ ಸುಖವಿಲ್ಲ ಯೋಗಮಾರ್ಗವನ್ನು ಹಿಡಿಯಬೇಕು

ಭಕ್ತ್ಯಾಪುಮಾನ್ ಜಾತವಿರಾಗ ಐಂದ್ರಿಯಾದ್
ದೃಷ್ಟಶ್ರುತಾತ್ಮ ದ್ರವಿಣಾನುಚಿಂತಯಾ ।
ಚಿತ್ತಸ್ಯ ಯತ್ತೋ ಗ್ರಹಣೇ ಯೋಗಯುಕ್ತೋ
ಯತಿಷ್ಯತೇ ಋಜುಭಿರ್ಯೋಗಮಾರ್ಗೈಃ ॥

(ಭಾ.೩.೨೬.೨೬)

ತಯಾ ಭಕ್ತ್ಯಾ ಚ ಪುಮಾನ್ ಐಂದ್ರಿಯಾತ್ ಇಂದ್ರಿಯೈಃ ಸದ್ಯೋಽನುಭೂಯಮಾನಾತ್ ವಿಷಯಾತ್ ಜಾತವಿರಾಗೋ ಭವತಿ । ತತೋ ದೃಷ್ಟಾನಿ ಶ್ರುತಾನಿ ಚ ಯಾನಿ ಆತ್ಮನಾಂ ದೇಹಧಾರಿಣಾಂ ದ್ರವಿಣಾನಿ ಸಂಪದಃ ತೇಷಾಂ ಅನುಚಿಂತಯಾ ಅಸಾರಾನಿತ್ಯತ್ವಾನುಸಂಧಾನೇನ ಜಾತವಿರಾಗಃ। ಐಹಿಕಾಮುಷ್ಮಿಕವಿಷಯವಿರಕ್ತ ಇತಿ ಯಾವತ್ । ತತಶ್ಚಿತ್ತಸ್ಯ ನಿಗ್ರಹಣೇ ವಿಷಯೇ ಯತ್ತಃ ಅಪ್ರಮತ್ತೋ ಭವತಿ । ತತಃ ಸ್ವಾಧೀನಮನಸ್ತ್ವರೂಪಯೋಗಯುಕ್ತಃ ಸನ್ ಋಜುಭಿಃ ಅವಕ್ರ ಗತಿಭಿಃ ಯೋಗಮಾರ್ಗೈಃ ಭಾಗವತಧರ್ಮಾನುಷ್ಠಾನಲಕ್ಷಣೈಃ ಭಗವತ್ಸೇವಾರ್ಥಂ ಯತಿಷ್ಯತೇ ॥

❖❖❖

ಕಪಿಲ ಪರಮಾತ್ಮನು ತಾಯಿಗೆ ಹೇಳುತ್ತಾನೆ—

'ದೃಷ್ಟಶ್ರುತ ಆತ್ಮದ್ರವಿಣ' ನೋಡಿದ ಕೇಳಿದ ಎಲ್ಲ ಜೀವಾತ್ಮರ ಧನಸಂಪತ್ತುಗಳ 'ಅನುಚಿಂತಯಾ' ಅಸಾರತ್ವ ಅನಿತ್ಯತ್ವ ಮತ್ತು ಸದುಃಖತ್ವಗಳು. ಇವುಗಳ ಜ್ಞಾನಉಳ್ಳವನು, ಇಂದ್ರಿಯ ವಿಷಯಗಳಲ್ಲಿ ವೈರಾಗ್ಯ ತಾಳಿ, ಮನಸ್ಸನ್ನು ಭಕ್ತಿಯಿಂದ ಹರಿಯಲ್ಲಿ ನಿಲ್ಲಿಸಬೇಕು. ಋಜುವಾದ, ಶರೀರಕ್ಕೆ ಒಗ್ಗುವಂಥ ಯಮನಿಯಮಾದಿ ಯೋಗಮಾರ್ಗವನ್ನು ಹಿಡಿಯಬೇಕು. ಅಂದರೆ ಭಾಗವತ ಧರ್ಮಗಳನ್ನಾಚರಿಸಬೇಕು.

❖❖❖

-೧೦೮-

**ವಿಷಯಭೋಗವನ್ನು ತ್ಯಜಿಸಿ ಬಿಂಬೋಪಾಸನೆ ಮಾಡಬೇಕು**

**ಅಸೇವಯಾಽಯಂ ಪ್ರಕೃತೇರ್ಗುಣಾನಾಂ**
**ಜ್ಞಾನೇನ ವೈರಾಗ್ಯವಿಜೃಂಭಿತೇನ ।**
**ಯೋಗೇನ ಮಯ್ಯರ್ಪಿತಯಾ ಚ ಭಕ್ತ್ಯಾ**
**ಮಾಂ ಪ್ರತ್ಯಗಾತ್ಮಾನ ಮಿಹಾವರುಂಧೇ ॥**

(ಭಾ.೩.೨೬.೨೭)

**ಪ್ರಕೃತೇರ್ಗುಣಾನಾಂ ಪ್ರಕೃತಿಕಾರ್ಯಾಣಾಂ ವಿಷಯಾಣಾಂ ಅಸೇವಯಾ । ಉಪಲಕ್ಷಣಮೇತತ್ । ಗ್ರಾಮ್ಯೇಹೋಪರಮೋಪಲಕ್ಷಿತಭಾಗವತ ಧರ್ಮಾನುಷ್ಠಾನರೂಪೇಣ ಯೋಗೇನೋಪೋದ್ಬಲಿತಂ ಯದ್ವೈರಾಗ್ಯಂ ತೇನ ವೈರಾಗ್ಯೇಣ । ವಿಜೃಂಭಿತೇನ ಅಭಿವೃದ್ಧೇನ ಜ್ಞಾನೇನ ಉಪೋದ್ಬಲಿತಾ ಯಾ ಮಯ್ಯರ್ಪಿತಾ ಭಕ್ತಿಃ ತಯಾ ಚ ಪ್ರತ್ಯಗಾತ್ಮಾನಂ ಜೀವಸ್ವರೂಪಾಂತರ್ಗತಂ ಬಿಂಬಂ ಮಾಂ ಇಹ ದೇಹೇ ಅವರುಂಧೇ ಪಶ್ಯತಿ ಪ್ರಾಪ್ನೋತಿ ಚ । ಅನೇನ—**

**''ಭವಾಪವರ್ಗೋ ಭ್ರಮತೋ ಯದಾ ಭವೇ ।**
**ಜ್ಞನಸ್ಯ ತರ್ಹ್ಯಚ್ಯುತ ಸತ್ಸಮಾಗಮ'' ಇತ್ಯೇತದ್ವಿವೃತಂ ಭವತಿ ॥**



**ಕಪಿಲಪರಮಾತ್ಮನು ಮುಂದುವರಿದು ತಾಯಿಗೆ ಉಪದೇಶಿಸುತ್ತಾನೆ— ಪ್ರಕೃತಿಯಿಂದ ಉತ್ಪನ್ನವಾದ ವಿಷಯಪದಾರ್ಥಗಳನ್ನು ಸೇವಿಸದಿರಬೇಕು. ವೈರಾಗ್ಯದಿಂದ ಪರೋಕ್ಷಜ್ಞಾನವನ್ನು ದೃಢಪಡಿಸಿಕೊಳ್ಳಬೇಕು. ಧ್ಯಾನಾದಿ ಯೋಗ ವನ್ನೂ ಸಾಧಿಸಿಕೊಳ್ಳಬೇಕು. ಯೋಗದಿಂದ ಭಕ್ತಿಪಾಶದಿಂದ ಜೀವಾಂತರ್ಗತ ಬಿಂಬರೂಪನಾದ ನನ್ನನ್ನು ಕಟ್ಟಿಹಾಕಿ ಪ್ರತ್ಯಕ್ಷ ಕಾಣಬೇಕು.**

ಇದು 'ಭವಾಪವರ್ಗೋ ಭ್ರಮತೋ ಯದಾ ಭವೇತ್...
ತ್ವಯಿ ಜಾಯತೇ ಮತಿಃ'
ಎಂದು ಹಿಂದೆ ಹೇಳಿದ್ದರ ವಿವರಣೆ.

ಸದ್ಗುರುಗಳ ಉಪದೇಶದಿಂದಲೇ ಅಪರೋಕ್ಷದ್ವಾರಾ ದೃಢವಾದ ಜ್ಞಾನ

ಭಕ್ತಿ ವೈರಾಗ್ಯಸಿದ್ಧಿ. ಅದರಿಂದ ಲಿಂಗಭಂಗ ಸ್ವರೂಪಾನಂದಾವಿರ್ಭಾವರೂಪ ಮೋಕ್ಷಲಾಭ ಎಂದು.



—೧೦೯—

**ಗುರುಸೇವೆ ಮಾಡಿದರೇ ಜನ್ಮ ಸಾರ್ಥಕ**

**ಅಹೋ ನೃಜನ್ಮಾಖಿಲಜನ್ಮಶೋಭನಂ**
**ಕಿಂ ಜನ್ಮಭಿಸ್ತ್ವಪರೈರಪ್ಯಮುಷ್ಮಿನ್ ।**
**ನ ಯದ್ಧೃಷೀಕೇಶಯಶಃಕೃತಾತ್ಮನಾಂ**
**ಮಹಾತ್ಮನಾಂ ವಃ ಪ್ರಚುರಃ ಸಮಾಗಮಃ ॥**

(ಭಾ.೫.೧೩.೨೧)

ತದೇವಂಪ್ರಣಾಡಿಕಯಾ ಬಹುಕಾಲೀನಸ್ಯೈವ ಮಹತ್ಸಮಾಗಮಸ್ಯ ಸ್ವಪುರುಷಾರ್ಥಸಾಧನತಯಾ ತತ್ರೈವಾದರೇಣ ಭಾವ್ಯಮಿತಿ ಜ್ಞಾಪಯಿತುಂ ಯಸ್ಮಿನ್ ದೇಹೇ ಮಹತಾಂ ಪ್ರಚುರಃ ಸಮಾಗಮೋ ಭವತಿ, ಸ ಏವ ಸರ್ವಜನ್ಮಸು ವರಿಷ್ಠ ಇತಿ ಸ್ತೌತಿ ॥ **ಅಹೋ** ಇತಿ ॥ ಯತ್ ಯದಿ । ಹೃಷೀಕೇಶಸ್ಯ ಯಶಸಿ ಸ್ಥಾಪಿತಮನಸಾಂ ಅತ ಏವ ಮಹಾತ್ಮನಾಂ ವಃ ಪ್ರಚುರಃ ಸಮಾಗಮಃ । ತರ್ಹ್ಯೇತದೇವ ನೃಜನ್ಮಾಖಿಲಜನ್ಮಶೋಭನಂ ವರಿಷ್ಠಂ ಅಪರೈರ್ಜನ್ಮಭಿಸ್ತು ಕಿಂ ಪ್ರಯೋಜನಂ। ವ್ಯರ್ಥಾನಿ ತಾನೀತಿ। ಅಮುಷ್ಮಿನ್ನಪಿ ಯದಿ ವಃ ಪ್ರಚುರಃ ಸಮಾಗಮೋ ನಾಸ್ತಿ ತರ್ಹಿ ಇದಮಪ್ಯಶೋಭನಮೇವ । ಯದಿ ಚೈವಮಪೀದಂ ಶೋಭನಮಿತ್ಯುಚ್ಯತೇ ತರ್ಹಿ ಕೇವಲಂ ತತ್ರಭವತಾಂ ಪ್ರದ್ವೇಷ ಏವ ಮೂಲಂ ದೃಶ್ಯತೇ । ತು ಇತೋಽಪಿ ವಿಶೇಷೇಣ ಅಪರೈರ್ಜನ್ಮಭಿಃ ಕಿಮಪರಾದ್ಧಮಹೋ ಇತಿ ॥



ರಹೂಗಣರಾಜ ಜಡಭರತನನ್ನು ಸ್ತುತಿಸುತ್ತಾನೆ—ಆಹಾ! ಎಲ್ಲ ಜನ್ಮಗಳಲ್ಲಿಯೂ ಮಾನವ ಜನ್ಮ ಒಳ್ಳೆಯದೆನ್ನುವುದು ನಿಜ. ಸ್ವರ್ಗದಲ್ಲಿ ಸುಖಭೋಗಕ್ಕಾಗಿ ಕಾಮ್ಯಕರ್ಮಗಳಿಂದ ಗಳಿಸಿದ ಜನ್ಮಗಳಿಂದೇನು ಫಲ? ಜನ್ಮ ಸಫಲವಾಗಬೇಕಾದರೆ ಹೃಷೀಕೇಶನ ಗುಣಗಳಲ್ಲಿ ಮನಸ್ಸಿಟ್ಟ ನಿಮ್ಮಂಥ

**ಮಹಾತ್ಮರ ಗುರುಗಳ ಸಮಾಗಮವು ಮತ್ತೆಮತ್ತೆ ಆಗಬೇಕು. ಇಲ್ಲದಿದ್ದರೆ ಮಾನವಜನ್ಮವೂ ಹಾಳು. ಆದರೂ ಅದನ್ನು ಒಳ್ಳೆಯದೆಂದರೆ ಅದು ಮಹಾತ್ಮರ ಮೇಲಿನ ದ್ವೇಷವೆ ಸರಿ. ಏಕೆಂದರೆ ಇಂಥ ಹಾಳು ಜನ್ಮವೂ ಒಳ್ಳೆಯದೆಂದರೆ ಬೇರೆ ಜನ್ಮಗಳಿಂದೇನು ಅಪರಾಧವಾಗಿದೆ?**

ಯಾವ ಜನ್ಮದಲ್ಲಿ ಮತ್ತೆಮತ್ತೆ ಮಹಾತ್ಮರ ಸಮಾಗಮ ಲಭಿಸುವುದೋ ಆ ಜನ್ಮವೇ ಮಹಾಪುರುಷಾರ್ಥ ಸಾಧಕವಾಗುವುದರಿಂದ ಅದೇ ಎಲ್ಲಕ್ಕಿಂತ ಉತ್ತಮವಾದ ಜನ್ಮ. ಅದರಿಂದ ಮಾನವನು ಬಹುಕಾಲ ಮತ್ತೆಮತ್ತೆ ಜ್ಞಾನಿಗಳ ಮಹಾತ್ಮರ ಸೇವೆ ಮಾಡಬೇಕು.



–೧೧೦–

**ಗುರುಗಳ ಬಳಿ ಮುಹೂರ್ತಕಾಲವಿದ್ದರೂ**
**ಎಲ್ಲ ಸಂಶಯ ಪರಿಹಾರ ಸಾಧ್ಯ**

**ನಹ್ಯದ್ಭುತಂ ತ್ವಚ್ಚರಣಾಬ್ಜರೇಣುಭಿ-**
**ರ್ಹತಾಂಹಸೋ ಭಕ್ತಿರಧೋಕ್ಷಜೇಽಮಲಾ ।**
**ಮೌಹೂರ್ತಿಕಾದ್ ಯಸ್ಯ ಸಮಾಗಮಾಚ್ಚ ಮೇ**
**ದುಸ್ತರ್ಕಮೂಲೋಽಪಹತೋಽವಿವೇಕಃ ॥**

(ಭಾ.೫.೧೩.೨೨)

**ಪ್ರಚುರಸ್ಯ ಮಹತ್ಸಮಾಗಮಸ್ಯ ಪುರುಷಾಪೇಕ್ಷಿತಾಶೇಷಾರ್ಥಸಾಧಕತ್ವಂ ಕೈಮುತ್ಯನ್ಯಾಯೇನ ಸಿದ್ಧಂ । ಯತೋ ಮುಹೂರ್ತಮಾತ್ರಂ ಸಮಾಗಮಾದೇವ ಪುರುಷಾರ್ಥಸಿದ್ಧಿರ್ದೃಷ್ಟಾ ಇತ್ಯಾಶಯೇನಾಹ ॥ ನ ಹೀತಿ ॥ ಮುಹೂರ್ತ ಮಾತ್ರಂ ಅವಸ್ಥಿತಾತ್ ಯಸ್ಯ ಮಹಚ್ಛಿಖಾಮಣೇಃ ತವ ಸಮಾಗಮಾತ್ ಮೇ ಮಮ ಕುತರ್ಕಮೂಲೋಽವಿವೇಕೋ ಅನ್ಯಥಾಮತಿರೂಪಃ ಅಪಹತೋ ನಾಶಿತೋಽಭೂತ್ । ತಾದೃಶಸ್ಯ ತವ ಪ್ರಚುರಸಮಾಗಮವತಃ ಚರಣಾಬ್ಜ-ರೇಣುಭಿಃ ಸುಚಿರಂ ಧೃತ್ಯೈರ್ಹತಾಂಹಸಃ ಪುಂಸೋಽಧೋಕ್ಷಜೇ ಅಮಲಾ ವೈರಾಗ್ಯಾದಿನಾ ಪ್ರಭಾಸಮಾನಾ ಭಕ್ತಿರ್ಮುಕ್ತಿದಾಯಿನೀತ್ಯೇತದದ್ಭುತ-ಮಾಶ್ಚರ್ಯಂ ನೇತಿ । ಹಿಶಬ್ದೇನ ಜ್ಞಾನಿಭಿರನುಭೂತಮಿದಮಿತಿ ಸೂಚಯತಿ । ''ವ ಇತಿ ತವೇತಿ' ಚ ರಹೂಗಣಸ್ಯ ಅವಧೂತಂ ಪ್ರತಿ ವಚನಂ ॥**

**ರಹೂಗಣ ರಾಜನು ಜಡಭರತನನ್ನು ಸ್ತುತಿಸುತ್ತಾನೆ—**

**ಬಹುಕಾಲ ಗುರುಗಳ ಸೇವೆ ಮಾಡಿ ಪುನಃಪುನಃ ಉಪದೇಶ ಪಡೆದರೆ ಮೋಕ್ಷಾದಿ ಸಕಲಾಭೀಷ್ಟಸಿದ್ಧಿಯಾಗುವುದು ಎಂದರೆ ಅದೇ ಆಶ್ಚರ್ಯ. ಏಕೆಂದರೆ ಒಂದು ಮುಹೂರ್ತಕಾಲ ನಿನ್ನೊಡನೆ ಭಕ್ತಿಯಿಂದ ಸಂಭಾಷಣೆ ಮಾಡಿದ್ದರಿಂದಲೇ ನನ್ನ ಎಲ್ಲ ಸಂಶಯ ಪರಿಹಾರವಾಯಿತು. ಹರಿಯಲ್ಲಿ ನಿರ್ಮಲ ಭಕ್ತಿ ಲಭಿಸಿತು. ಮುಕ್ತಿ ಕರಗತವಾಯಿತು. ಅವಿವೇಕದಿಂದ ಕೆಟ್ಟ ಶುಷ್ಕ ತರ್ಕವನ್ನು ಮುಂದಿಟ್ಟುಕೊಂಡು ಭಗವಂತನ ಸ್ವತಂತ್ರ ಕರ್ತೃತ್ವವನ್ನು ನಾನು ವಿರೋಧಿಸುತ್ತಿದ್ದೆ.**

'ಜೀವರಿಗೆ ತಮ್ಮ ಕರ್ಮಗಳ ಫಲವಾಗಿ ಶ್ರಮವಾಗುವುದು ಎಂದಮೇಲೆ ಅವರಿಗೇ ಸ್ವತಂತ್ರ ಕರ್ತೃತ್ವ' ಭಗವಂತನಿಗಲ್ಲ.

'ಅವನಿಗೆ ಭಗವಂತನ ಅನುಗ್ರಹವೂ ಬೇಕಾಗುತ್ತದಷ್ಟೆ. ಕಾಲ ಅದೃಷ್ಟಾದಿಗಳಂತೆ ಭಗವಂತನೂ ನಿಮಿತ್ತ ಮಾತ್ರವಾಗುತ್ತಾನೆ' ಎಂದು ನಾನು ವಾದ ಮಾಡುತ್ತಿದ್ದೆ!

ಆದರೆ ನೀನು ಸುಲಭವಾಗಿ ಆ ವಾದವನ್ನು ತಳ್ಳಿ ಹಾಕಿರುವೆ.

'ಜೀವನಿಗೆ ಸಂಸಾರವೆಂಬುದು ಒಂದು ನಿರ್ಜನವಾದ ಭಯಂಕರ ಗೊಂಡಾರಣ್ಯ. ಅದರಿಂದ ಹೊರಗೆ ಬರಲು ದಾರಿಗಾಣದೆ ಎಲ್ಲ ದೇವತೆಗಳ ಸಹಾಯವನ್ನು ಮಾನವ ಯಾಚಿಸುತ್ತಾನೆ. ಆದರೆ ಆ ದೇವತೆಗಳಾರೂ ಸ್ವತಂತ್ರರಲ್ಲ.

'ಸೃಷ್ಟಿಕರ್ತನಾದ ಬ್ರಹ್ಮನೂ ಸ್ವತಂತ್ರನಲ್ಲ, ಅವನನ್ನು ಸೃಜಿಸಿದ ಚೇತನ ಪ್ರಕೃತಿ ಮಹಾಲಕ್ಷ್ಮಿಯೂ ಸ್ವತಂತ್ರಳಲ್ಲ. ಹರಿಯೊಬ್ಬನೇ ಸ್ವತಂತ್ರ. ಲಕ್ಷ್ಮಿ ಅವನ ಭಾರ್ಯೆ.

'ರಹೂಗಣ, ನೀನು ರಾಜನೆಂದುಕೊಳ್ಳುವೆ. ಸಮಗ್ರ ಭೂಮಿಗೆ ತಾನೇ ಪಾಲಕ ಎನ್ನುವೆ. ಆದರೆ, ರಾಜ ಭೂಪಾಲನಲ್ಲ. ಭೂಮಿಯೇ ರಾಜನನ್ನು ಪಾಲಿಸುತ್ತಾಳೆ. ನಿನಗೆ ಆಶ್ರಯ ನೀಡುತ್ತಾಳೆ.

'ರಾಜನು ಪಾಲಕ ಆಶ್ರಯ ಎಂದು ವ್ಯವಹಾರವೇನೊ ಇದೆ. ಅದನ್ನು ಒಪ್ಪಿದರೆ, ತಲೆಗೆ ಕುತ್ತಿಗೆ ಆಧಾರ. ಕುತ್ತಿಗೆಗೆ ಎದೆ ಆಧಾರ ಎಂದು ಮುಂತಾಗಿ ಏಕೆ

ಹೇಳಬಾರದು?' ಎಂದು ಮುಂತಾಗಿ ಹೇಳಿ ಜಡಭರತನು ರಹೂಗಣರಾಜನಿಗೆ ಹರಿಯೇ ಸ್ವತಂತ್ರ ಎಂದು ಮನವರಿಕೆ ಮಾಡಿಸಿಕೊಟ್ಟಿದ್ದಾನೆ. ರಹೂಗಣನಿಗೆ ಜ್ಞಾನೋದಯವಾಯಿತು.

'ನಮೋ ಮಹದ್ಭ್ಯಃ!' ನನ್ನಂತೆ ಅವಧೂತರಲ್ಲಿ ಅಪಚಾರ ಮಾಡಿರಬಹುದಾದ ಬೇರೆ ರಾಜರುಗಳೆಲ್ಲರಿಗೂ ನನ್ನ ಈ ಗುರು ನಮಸ್ಕಾರಗಳ ಫಲವಾಗಿ ಶುಭವಾಗಲಿ, ಅನಿಷ್ಟ ಉಂಟಾಗದಿರಲಿ ಎಂದ.



—೧೧೧—

**ಶಿರವು ಗುರುಪಾದ ಸ್ಪರ್ಶಿಸದೆ ಬುದ್ಧಿ ಹರಿಪಾದವನ್ನು ಸ್ಪರ್ಶಿಸದು**

**ನೈಷಾಂ ಮತಿಸ್ತಾವದುರುಕ್ರಮಾಂಘ್ರಿಂ**
**ಸ್ಪೃಶತ್ಯನರ್ಥಾಪಗಮೋ ಯದುತ್ಥಃ ।**
**ಮಹೀಯಸಾಂ ಪಾದರಜೋಭಿಷೇಕಂ**
**ನಿಷ್ಕಿಂಚನಾನಾಂ ನ ವೃಣೀತ ಯಾವತ್ ॥**

(ಭಾ.೭.೫.೩೨)

**ಯತೋ ವಿರಕ್ತಸ್ಯಾಪಿ ಪುಂಸೋ ವಿನಾ ಮಹತ್ಸಮಾಗಮಂ ನ ಕಿಂಚಿತ್ಸಾಧನಂ ಸಿಧ್ಯತಿ, ಅತಸ್ತತ್ರೈವ ಆದರವತಾ ಭವಿತವ್ಯಮಿತಿ ಸ್ವಾಭಿಪ್ರೇತಮರ್ಥಮುಪಸಂಹರತಿ ॥ ನೈಷಾಮಿತಿ ॥ ಅನರ್ಥಸ್ಯ ಸಂಸಾರರೂಪಸ್ಯ ಅಪಗಮೋ ನಿರಸನಂ ಯಸ್ಮಾತ್ ಪಾದರಜೋಭಿಷೇಕಾತ್ ಉತ್ಥ ಉತ್ಪನ್ನೋ ಭವತಿ। ತಾದೃಶಂ ನಿಷ್ಕಿಂಚನಾನಾಂ ಮಹೀಯಸಾಂ ಪಾದರಜೋಭಿಷೇಕಂ ಯಾವತ್ಪರ್ಯಂತಂ ನ ವೃಣೀತ ನ ಸ್ವೀಕುರ್ಯಾತ್ ತಾವತ್ಪರ್ಯಂತಂ ಏಷಾಂ ಪುಂಸಾಂ ಮತಿಃ ಉರುಕ್ರಮಸ್ಯ ಹರೇಃ ಅಂಘ್ರಿಂ ನ ಸ್ಪೃಶತಿ ತದ್ವಿಷಯಿಣೀ ನ ಭವತಿ ॥**



ಪ್ರಹ್ಲಾದನು ಹಿರಣ್ಯಕಕಶಿಪುವಿಗೆ ಹೇಳುತ್ತಾನೆ—ಮಹಾತ್ಮರ ಪಾದರಜವನ್ನು ಎಂದಿನವರೆಗೆ ಮಾನವರು ತಲೆಯಮೇಲೆ ಧರಿಸುವುದಿಲ್ಲವೋ ಅಂದಿನವರೆಗೆ ಮಾನವರ ಬುದ್ಧಿ ಪರಮಾತ್ಮನ ಪಾದವನ್ನು ಮುಟ್ಟಲಾರದು.

**ಮಹಾತ್ಮರ ಪಾದ ತಲೆಗೆ ಸೋಕಿದರೆ ಮಾತ್ರ ಹರಿಯ ಪಾದ ಇವರ ಬುದ್ಧಿಗೆ ಗೋಚರವಾಗುವುದು. ಧನವನಿತಾದಿಗಳಲ್ಲಿ ವೈರಾಗ್ಯ ಹೊಂದಿದ ಮಾತ್ರಕ್ಕೆ ಮಹಾತ್ಮರ ಪಾದಗಳಿಗೆ ಮಣಿಯದಿದ್ದರೆ ಪರಮಾತ್ಮ ತತ್ವಜ್ಞಾನ ಬರಲಾರದು. ಧನವನಿತಾದಿಗಳು ಕಳ್ಳಕಾಕರ ವಶವಾದೀತು. ಈತ ಬೀದಿಬಿಕಾರಿಯಾಗಿ ಇಹಪರ ಸುಖಗಳಿಂದ ವಂಚಿತನೇ ಆಗುವನು. ಅವನಿಂದ ಧ್ಯೇಯಸಾಧನೆ ಏನೂ ಆಗಲಾರದು.**

ಅವನ ವೈರಾಗ್ಯಮಾರ್ಗ ಗೋಪಾಲದಾಸರು ಹೇಳಿದಂತೆ ಕೇವಲ ದಾರಿದ್ರ್ಯ ಮಾರ್ಗವಾಗುವುದು. ಅದಕ್ಕೆ ಮಹತ್ ಸಮಾಗಮ ಗುರುಸೇವೆ ಅವಶ್ಯ ಮಾಡಬೇಕು.



# ೭. ಮಹತ್ಸೇವಾ ಪ್ರಶಂಸಾ ಪ್ರಕರಣ

## ಪ್ರಕರಣ ಸಾರಾಂಶ

ಗುರುಸೇವೆ ಮುಕ್ತಿಗೆ ದ್ವಾರ ಎಂದು ಭಾಗವತ ಉದ್ಘೋಷಿಸುತ್ತಿದೆ. ತಾಯಿಯ ಗರ್ಭದಲ್ಲಿರುವ ಶಿಶು ನಾನೆಂದು ಗರ್ಭದಿಂದ ಹೊರಗೆ ಬಂದು ಗುರುಗಳನ್ನು ಕಂಡೇನೆಂದು ತವಕಿಸುತ್ತದೆ ಎಂದು ಕಪಿಲನು ತಾಯಿಗೆ ಉಪದೇಶಿಸುತ್ತಾನೆ.

ಬಾಹ್ಯಯಜ್ಞದಲ್ಲಿ ಅಗ್ನಿಮುಖದಲ್ಲಿ ಅನ್ನಾಹುತಿ ನೀಡುವುದಕ್ಕಿಂತ ಭೋಜನಯಜ್ಞದಲ್ಲಿ ಬ್ರಾಹ್ಮಣ ಮುಖದಲ್ಲಿ ಅನ್ನದ ತುತ್ತು ನೀಡಿದರೆ ಪರಮಾತ್ಮನಿಗೆ ಹೆಚ್ಚು ತೃಪ್ತಿ ಎಂದು ಪೃಥುರಾಜನ ಉಪದೇಶವಿದೆ.

ಬ್ರಾಹ್ಮಣರಲ್ಲಿ ಅಪಚಾರ ಮಾಡಿದರೆ ತನ್ನ ಬಾಹುವನ್ನೂ, ಅಂದರೆ ಬಾಹುವಿನಿಂದ ಜನಿಸಿದ ಕ್ಷತ್ರಿಯನಾದ ದೊರೆಯನ್ನು ಕಡಿದು ಹಾಕುವೆನೆಂದು ಹರಿ ವೈಕುಂಠದಲ್ಲಿ ಸನಕಾದಿಗಳ ಮುಂದೆ ಹೇಳುತ್ತಾನೆ. ಭೃಗುಮುನಿ ಹರಿಯ ಎದೆಗೆ ಒದ್ದಾಗ ಮುನಿಯ ಕಾಲಿಗೆ ಎಷ್ಟು ನೋವಾಯಿತೊ ಎಂದು ಹರಿಗೆ ಆತಂಕವಾಯಿತಂತೆ! ಜ್ಞಾನಿಗಳಾದ ಗುರುಗಳೂ ಕೂಡ ಕಾರಣಾಂತರದಿಂದ ಕೆಲವೊಮ್ಮೆ ಶಿಷ್ಯನಲ್ಲಿ ನಿಷ್ಕಾರಣ ವಿರೋಧ ಮಾಡಬಹುದು. ಅದಕ್ಕೆ ಶಿಷ್ಯನು ಕೋಪಿಸಿಕೊಳ್ಳಬಾರದು. ಇನ್ನೂ ಹೆಚ್ಚಿನ ಆದರವನ್ನೇ ಮಾಡಬೇಕು.

ಜ್ಞಾನಿಗಳು ಭಗವಂತನಲ್ಲಿ ವಿರೋಧ ಮಾಡಿದರೆ ಅವರು ಇನ್ನೂ ಹೆಚ್ಚು ಭಗವಂತನಿಗೆ ಹತ್ತಿರದವರಾಗುತ್ತಾರೆ. ತನ್ನ ಭಕ್ತರು ಬ್ರಾಹ್ಮಣನಿಗೆ ಅವಮಾನ ಮಾಡಿದಾಗ ಹರಿ ತಾನೇ ಅದಕ್ಕೆ ಕ್ಷಮೆ ಕೇಳುತ್ತಾನೆ! ಜಯವಿಜಯರು ಮಾಡಿದ ತಪ್ಪಿಗೆ ಹರಿ ತಾನೇ ಸನಕಾದಿಗಳಲ್ಲಿ ಕ್ಷಮೆ ಬೇಡಿದ್ದಾನೆ. ಗುರು ಶಿಷ್ಯನನ್ನು ನೀನೆ ಹೆಚ್ಚು ಜ್ಞಾನಿ ಎಂದು ಹೊಗಳಿದರೆ ಶಿಷ್ಯ ಬೀಗುವುದಿಲ್ಲ. ಭಗವಂತ ಭಕ್ತನ ಕಾಲು ತೊಳೆದರೆ ಭಕ್ತ ಬೀಗುವುದಿಲ್ಲ. ಭಕ್ತವತ್ಸಲನೆಂದು ಭಗವಂತ

ದೊಡ್ಡವನಾಗುತ್ತಾನೆ, ಸಣ್ಣವನಾಗುವುದಿಲ್ಲ. ಇದನ್ನು ಕುಚೇಲ ಬ್ರಾಹ್ಮಣನ ಕಾಲು ತೊಳೆವ ಮೂಲಕ ಶ್ರೀಕೃಷ್ಣ ಸ್ಪಷ್ಟಪಡಿಸಿದ್ದಾನೆ.

ಬ್ರಾಹ್ಮಣರಿಗೆ ಪೂಜ್ಯತ್ವವೇಕೆ ಎಂದರೆ ಅವರು ಹೃದಯದಲ್ಲಿ ಸ್ಥಿರವಾಗಿ ಭಗವಂತನನ್ನು ನಿಲ್ಲಿಸಿಕೊಂಡಿರುತ್ತಾರೆ ಎಂದು. ಅಂಥ ಬ್ರಹ್ಮಜ್ಞಾನಿಗಳ ದರ್ಶನ ಸ್ಪರ್ಶ ಉಪದೇಶಗ್ರಹಣಗಳು ಮಹಾಪಾಪಿ ಚಂಡಾಲಾದಿಗಳನ್ನೂ ಉದ್ಧರಿಸಬಲ್ಲವು ಎಂದು ಮಾರ್ಕಂಡೇಯರಿಗೆ ಶಿವವಚನವಿದೆ.



–೧೧೨–

**ಗರ್ಭದಲ್ಲಿ ಶಿಶುವಿನ ಮೊರೆ,**
**'ನಾನು ಹೊರಗೆಬಂದರೆ ಗುರುಸೇವೆ ಮಾಡುವೆ'**

**ಯನ್ಮಾಯಯೋರುಗುಣಕರ್ಮನಿಬಂಧನೇಽಸ್ಮಿನ್**
**ಸಾಂಸಾರಿಕೇ ಪಥಿ ಚರಂಸ್ತದತಿಶ್ರಮೇಣ ।**
**ನಷ್ಟಸ್ಮೃತಿಃ ಪುನರಯಂ ಪ್ರವೃಣೀತ ಲೋಕೋ**
**ಯುಕ್ತ್ಯಾ ಕಯಾ ಮಹದನುಗ್ರಹ ಮಂತರೇಣ ॥**

(ಭಾ.೩.೩೨.೧೬)

ಏವಂ ವಿರಕ್ತೇನ ಲಬ್ಧಮಹತ್ಸಮಾಗಮೇನ ಪುರುಷೇಣ ಮಹತ್ಸೇವಾಯಾಂ ಅವಹಿತೇನ ಭಾವ್ಯಮಿತಿ ಪ್ರತಿಪಾದಯಿತುಮಿದಂ ಪ್ರಕರಣಂ। ತತ್ರಾದೌ ಮಹದ್ಭಿಃ ಪ್ರಸಾದಪೂರ್ವಕಮುಪದಿಷ್ಟಮೇವ ಮಹಾಫಲಪ್ರದಮಿತಿ ಭಾವೇನ ತತ್ಪ್ರಸಾದಸ್ಯ ಮುಖ್ಯತಃ ಶ್ರೇಯಃಸಾಧನತ್ವಮಾಹ ॥ **ಯನ್ಮಾಯಯೇತಿ** ॥ ಯಸ್ಯ ಹರೇರ್ಮಾಯಯಾ ಇಚ್ಛಯಾ ಬಂಧಕಶಕ್ತ್ಯಾ ವಾ ಉರೂಣಿ ಬಹೂನಿ ಗುಣಾಃ ಸತ್ತ್ವಾದಯಃ ಕರ್ಮ ಪುಣ್ಯಪಾಪಲಕ್ಷಣಮೇತದಾದೀನಿ ಕಾರಣಾನಿ ಯಸ್ಯ ತಸ್ಮಿನ್ ಸಂಸಾರಾಖ್ಯೇಽಸ್ಮಿನ್ಮಾರ್ಗೇ ಗಚ್ಛನ್ ತತ್ಪ್ರಯುಕ್ತೇನ ಮಹಾಶ್ರಮೇಣ ನಷ್ಟಾ ಭಗವತ್ಸ್ಮೃತಿರ್ಯಸ್ಯ ಸ ತಾದೃಶೋಽಯಂ ಲೋಕೋ ಮಹತಾಮನುಗ್ರಹಂ ವಿನಾ ಕಯಾ ಯುಕ್ತ್ಯಾ ಕೇನೋಪಾಯೇನ ತಾಂ ಸ್ಮೃತಿಂ ಪುನಃ ಪ್ರವೃಣೀತೇತಿ। ಯಸ್ಯ ಮಾಯಯೈವ ಸಾಂಸಾರಿಕೇ ಪಥಿ ಚರತಿ ತಂ ವಂದೇ ಇತಿ ಪೂರ್ವೇಣಾನ್ವಯ ಇತಿ ಜ್ಞೇಯಂ ॥

**ಗರ್ಭದಲ್ಲಿ ಶಿಶುವಿನ ಮೊರೆ ಏನೆಂದು ಕಪಿಲನು ತಾಯಿಗೆ ಹೇಳುತ್ತಾನೆ—**

**ಗುರುಗಳು ಪ್ರಸನ್ನರಾಗಿ ಉಪದೇಶಿಸಿದರೆ ಮಾತ್ರ ಅದು ಮಹಾ ಫಲವನ್ನುಂಟು ಮಾಡುವುದರಿಂದ ಅವರ ಪ್ರಸನ್ನತೆಯೆ ಮುಖ್ಯವಾಗಿ ಶ್ರೇಯಸ್ಸಿಗೆ ಕಾರಣವಾಗುವುದು. ನಾನು ನಿನ್ನಿಚ್ಛೆಯಿಂದಲೇ ತ್ರಿಗುಣಗಳಿಗೆ ಮತ್ತು ಕರ್ಮಗಳಿಗೆ ವಶನಾಗಿ ಈ ಗರ್ಭವಾಸಾದಿ ಸಂಸಾರ ದುಃಖಮಾರ್ಗದಲ್ಲಿ ಸಂಚರಿಸುತ್ತಿದ್ದೇನೆ. ಅತಿಯಾದ ಕ್ಲೇಶದಿಂದ ಮೈಮರೆತು ನಿನ್ನ ಸ್ಮರಣೆಯನ್ನು ಕಳೆದುಕೊಂಡಿದ್ದೇನೆ. ತಿರುಗಿ ನಾನು ನಿನ್ನ ಸ್ಮರಣೆಯನ್ನು ಸಂಪಾದಿಸಬೇಕೆಂದರೆ ಮಹಾತ್ಮರಾದ ಗುರುಗಳ ಅನುಗ್ರಹವಲ್ಲದೆ ಬೇರೇನು ಉಪಾಯವಿದೆ? ಅದರಿಂದ ನಾನು ಗರ್ಭದಿಂದ ಹೊರಗೆ ಬರಬೇಕು. ಗುರುಗಳ ಅನುಗ್ರಹ ಸಂಪಾದಿಸಬೇಕು, ಹೇಗೆ? ನಾನು ನಿನ್ನಿಚ್ಛೆಯಿಂದಲೇ ಸಂಸಾರ ದುಃಖ ಮಾರ್ಗದಲ್ಲಿ ಸಂಚರಿಸುತ್ತಿದ್ದೇನೆ. 'ತಂ ಏಮಿ' ಆ ನಿನ್ನನ್ನೇ ವಂದಿಸುತ್ತೇನೆ ಎಂದು ಹಿಂದಿನ ಶ್ಲೋಕಕ್ಕೇ ಇದು ಅನ್ವಯಿಸುವುದು.**

'ವಿರಕ್ತನಾದ ಮಾನವನು ಗುರುಸೇವೆ ಮಾಡುವಲ್ಲಿ ಬಹಳ ಆಸ್ಥೆವಹಿಸಬೇಕು' ಎನ್ನುವುದು ಈ ಪ್ರಕರಣದ ಉದ್ದೇಶ.



—೧೧೩—

**ಗುರುಸೇವೆ ಮುಕ್ತಿದ್ವಾರ. ವಿಷಯಸೇವನೆ ನರಕದ್ವಾರ**

**ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇಃ**
**ತಮೋದ್ವಾರಂ ಯೋಷಿತಾಂ ಸಂಗಿ ಸಂಗಂ ।**
**ಮಹಾಂತಸ್ತೇ ಸಮಚಿತ್ತಾಃ ಪ್ರಶಾಂತಾ**
**ವಿಮನ್ಯವಃ ಸುಹೃದಃ ಸಾಧವೋ ಯೇ ॥**

(ಭಾ.೫.೫.೨)

ಭವತ್ಸೇವಂ ಮಹತಾಮನುಗ್ರಹಃ ಸರ್ವಶ್ರೇಯೋಮುಖ್ಯಸಾಧನಂ ಸ ಏವ ಕಥಂ ಭವೇದಿತ್ಯತಸ್ತತ್ಸೇವಯೈವೇತ್ಯಾಶಯೇನಾಹ ॥ ಮಹತ್ಸೇವಾಮಿತಿ ॥ ವಿಮುಕ್ತೇರ್ದ್ವಾರಂ ಸಾಧನಮಾಹುಃ । ತಥಾ ಯೋಷಿತಾಂ ಸಂಗಿನಾಂ ಸಂಗಂ ತಮೋದ್ವಾರಮಾಹುಃ । ಅತೋ ದುಃಸಂಗೋ ವರ್ಜನೀಯ ಇತಿ ಭಾವಃ । ನನು

ಕೇ ತೇ ಮಹಾಂತಃ ಯತ್ಸೇವಯಾ ಲಬ್ಧೋऽನುಗ್ರಹೋ ಮುಕ್ತಿಸಾಧನಂ ಸ್ಯಾದಿತ್ಯತಸ್ತಲ್ಲಕ್ಷಣಾನಿ ದರ್ಶಯತಿ । । ಮಹಾಂತಸ್ತ ಇತಿ ॥ ಯೇ ಸಮಚಿತ್ತಾಃ ಸರ್ವತ್ರ ಭಗವಂತಮೇವಾನುಸ್ಮರಂತಃ ಪ್ರಸನ್ನಚಿತ್ತಾಃ ಕ್ರೋಧರಹಿತಾಃ ಸರ್ವಭೂತಸುಹೃದಃ ಮಂಗಲಾಚಾರಾಃ ॥



ಋಷಭದೇವನ ಉಪದೇಶ—

ಗುರುಗಳ ಅನುಗ್ರಹವಾಗಬೇಕಾದರೆ ಅವರ ಸೇವೆ ಮಾಡಬೇಕು. ಗುರುಗಳ ಅನುಗ್ರಹವೇ ಮೋಕ್ಷಕ್ಕೆ ತೆರೆದಿಟ್ಟ ಬಾಗಿಲು. ವಿಷಯಾಸಕ್ತರ ಒಡನಾಟ ನರಕಕ್ಕೆ ಹೋಗಲು ತೆರೆದ ಬಾಗಿಲು. ಪರಸ್ತ್ರೀ ಮುಂತಾದ ವಿಷಯ ಸೇವನೆಯಲ್ಲಿ ಆಸಕ್ತರಾದವರು ಮಾತ್ರವಲ್ಲ, ಅವರ ಒಡನಾಟದಲ್ಲಿರುವವರೂ ಕೂಡ ಅಧಃಪತನ ಹೊಂದುವರು. ಗುರುಗಳೆಂದರೆ ಅವರು ಎಲ್ಲೆಡೆ ಸಮನಾಗಿಯೇ ನಿರ್ದೋಷ ಗುಣಪೂರ್ಣನಾಗಿರುವ ಪರಮಾತ್ಮನಲ್ಲಿ ಮನವಿಟ್ಟವರು. ಇಂದ್ರಿಯನಿಗ್ರಹ ಮಾಡಿಕೊಂಡು ಮನಸ್ಸಿನಲ್ಲಿ ನೆಮ್ಮದಿ ಹೊಂದಿರುವವರು. ಅವರಿಗೆ ಸಜ್ಜನರಲ್ಲಿ ಎಂದೂ ಕೋಪತಾಪಗಳಿಲ್ಲ. ಮತ್ಸರವಿಲ್ಲ. ವಿಹಿತಕರ್ಮಗಳನ್ನು ತಪ್ಪದೆ ಆಚರಿಸುತ್ತ ಜ್ಞಾನಭಕ್ತಿವೈರಾಗ್ಯಗಳನ್ನು ಸಂಪಾದಿಸಿರುತ್ತಾರೆ.



—೧೧೪—

## ಹರಿಭಕ್ತಿಯನ್ನೇ ಪರಮವೆಂದು ನಂಬಿದವರು ಗುರುಗಳು

ಯೇ ವಾ ಮಯೀಶೇ ಕೃತ ಸೌಹೃದಾರ್ಥಾ
ಜನೇಷು ದೇಹಂಭರವಾರ್ತಿಕೇಷು ।
ಗೃಹೇಷು ಜಾಯಾತ್ಮಜರಾತಿರಾಸು
ನ ಪ್ರೀತಿಯುಕ್ತಾ ಯಾವದರ್ಥಾಶ್ಚ ಲೋಕೇ ॥

(ಭಾ.೫.೫.೩)

ಈಶೇ ಮಯಿ ಕೃತಂ ಸೌಹೃದಂ ಸ್ನೇಹ ಏವ ಅರ್ಥಃ ಪ್ರಯೋಜನಂ ಯೇಷಾಂ ತೇ ನಿಷ್ಕಾಮಾ ದೇಹಂಭರಾಣಾಂ ವಾರ್ತಾ ಯೇಷು ತೇಷು ಜನೇಷು ತಥಾ ಗೃಹೇಷು ದಾರಪುತ್ರಮಿತ್ರದ್ರವ್ಯೇಷು ಪ್ರೀತಿಯುಕ್ತಾಃ ನ। ಲೋಕೇ

ಪ್ರಾಕೃತವಿಷಯೇ। ಯಾವಾನ್ ಸ್ವದೇಹಧಾರಣಾದ್ಯುಪಯೋಗೀ ಅರ್ಥೋ ವಿಷಯಃ ಸ್ವೀಕಾರ್ಯೋ ಯೇಷಾಂ ತೇ ಮಹಾಂತ ಇತಿ ॥



ಇದು ಕೂಡ ಋಷಭ ದೇವನ ಉಪದೇಶ— ಗುರುಗಳು ಯಾರೆಂದರೆ, ಅವರಿಗೆ ಪರಮೇಶ್ವರನಾದ ನನ್ನಲ್ಲಿ ಭಕ್ತಿ ಉಂಟಾದರೆ ಅದನ್ನೇ ಪರಮ ಪುರುಷಾರ್ಥ ವೆಂದು ತಿಳಿಯುತ್ತಾರೆ. ಹೊಟ್ಟೆ ಹೊರೆಯುವ ಮಾತುಕತೆ ಗಳಲ್ಲಿಯೇ ಆಸಕ್ತರಾದ ಜನರಲ್ಲಿ ಮನೆ ಮಡದಿ ಮಕ್ಕಳು ಸ್ನೇಹಿತರು ಹಣಗಳಲ್ಲಿ ಇವರು ಆಸಕ್ತಿ ತೋರುವುದಿಲ್ಲ. ಬದುಕಲು ಎಷ್ಟು ಆವಶ್ಯಕವೋ ಅಷ್ಟು ಮಾತ್ರ ಲೌಕಿಕದಲ್ಲಿ ತೊಡಗುತ್ತಾರೆ. ಇಂಥವರು ಮಹಾತ್ಮರು ಗುರುಗಳು.



—೧೧೫—

**ಬ್ರಾಹ್ಮಣ ಸೇವೆಗೆ ಹರಿ ಒಲಿಯುತ್ತಾನೆ**

ಯತ್ಸೇವಯಾಽಶೇಷಗುಹಾಶ್ರಯಃ ಸ್ವರಾಟ್
ವಿಪ್ರಪ್ರಿಯಸ್ತುಷ್ಯತಿ ಕಾಮಮೀಶ್ವರಃ ।
ತದೇವ ತದ್ಧರ್ಮಪರೈರ್ವಿನೀತೈಃ
ಸರ್ವಾತ್ಮನಾ ಬ್ರಹ್ಮಕುಲಂ ನಿಷೇವ್ಯತಾಂ ॥

(ಭಾ.೪.೨೧.೩೮)

ಏವಂ ಮಹತಾಂ ಲಕ್ಷಣಾನ್ಯಭಿಧಾಯ ತೇಷಾಂ ಸೇವಾ ಪುರುಷಾರ್ಥಾರ್ಥಿಭಿಃ ಕಾರ್ಯೇತ್ಯಭಿಹಿತಂ। ತೇಷು ಭಕ್ತಿವಿಶೇಷೋತ್ಪಾದನಾಯ ಪೃಥ್ವಾದಿಭಿರಾದಿರಾಜೈರ್ಮಹಾಭಾಗವತೈಃ ಸೇವಿತತ್ವರೂಪ ಮಹಿಮಾ-ನಮಾಹ ತ್ರಿಭಿಃ। ತೇಽಪಿ ಕಿಮಿತಿ ಮಹತಾಂ ಸೇವಾಂ ಕೃತವಂತ ಇತ್ಯತಸ್ತಸ್ಯಾಃ ಹರಿಪ್ರೀತಿಸಾಧನತ್ವಾದಿತಿ ಭಾವೇನಾದೌ ತೈಃ ಕೃತಂ ಸ್ವೀಯಾನ್ಪ್ರತಿ ಸೇವಾಕರಣಶಿಕ್ಷಣಪ್ರಕಾರಂ ದರ್ಶಯತಿ। ಯತ್ಸೇವಯೇತಿ॥ ಯಸ್ಯ ಬ್ರಹ್ಮಕುಲಸ್ಯ ಸೇವಯಾ। ಹರಿಃ ಕಾಮಂ ಬಾಹುಲ್ಯೇನ ತುಷ್ಯತಿ, ತದ್ಬ್ರಹ್ಮಕುಲಂ ತದ್ಧರ್ಮಪರೈರ್ವಿಷ್ಣುಧರ್ಮಪರೈರ್ನಿಷೇವ್ಯತಾಮಿತಿ ॥



**ಪೃಥುರಾಜನು ರಾಜರುಗಳಿಗೆ ಉಪದೇಶಿಸುತ್ತಾನೆ— ಸರ್ವಗುಣ ಪೂರ್ಣ ಸ್ವತಂತ್ರ ಸರ್ವೇಶ್ವರನಾದ ಹರಿ ಬ್ರಾಹ್ಮಣಪ್ರಿಯ. ಬ್ರಾಹ್ಮಣರ ಸೇವೆ ಯಿಂದ ಅವನು ಬಹಳ ಸಂತುಷ್ಟನಾಗುತ್ತಾನೆ. ಅದರಿಂದ ವಿಷ್ಣುಧರ್ಮ ಪರರೂ ವಿನಯಶೀಲರೂ ಆದ ಕ್ಷತ್ರಿಯರು ನೀವು ಎಲ್ಲ ಬಗೆಯಿಂದಲೂ ಆ ಬ್ರಾಹ್ಮಣ ಕುಲವನ್ನೇ ಸೇವಿಸಿರಿ.**

ಪೃಥು ಮುಂತಾದ ಮಹಾಭಾಗವತರಾದ ಆದಿರಾಜರು ಜ್ಞಾನಿಗಳಾದ ಬ್ರಾಹ್ಮಣರ ಸೇವೆ ಹೇಗೆ ಮಾಡಬೇಕೆಂದು ತಮ್ಮವರಿಗೆ ಉಪದೇಶದಿಂದ ಮಾರ್ಗದರ್ಶನ ಮಾಡಿದುದು ಇಲ್ಲಿಂದ ಮೂರು ಶ್ಲೋಕಗಳಲ್ಲಿ ಸ್ಪಷ್ಟವಿದೆ. ಅವುಗಳಲ್ಲಿ ಮೊದಲನೆ ಶ್ಲೋಕ ಇದು. ವಿಷ್ಣುಧರ್ಮಪರರಾದ ಮಹಾತ್ಮರು ಈ ಬ್ರಾಹ್ಮಣರು. ಆದ್ದರಿಂದ ಅವರ ಸೇವೆಯನ್ನು ವಿಷ್ಣುಪ್ರೀತಿಗಾಗಿ ಮಾಡ ಬೇಕೆಂದು ಇಲ್ಲಿ ಪೃಥು ಮಹಾರಾಜ ಹೇಳುತ್ತಾನೆ.



**–೧೧೬–**

**ಅಗ್ನಿಯಲ್ಲಿ ನೀಡುವ ಆಹುತಿಗಿಂತಲೂ**
**ಬ್ರಾಹ್ಮಣನುಣ್ಣುವ ತುತ್ತು ಹರಿಗೆ ಹೆಚ್ಚು ಪ್ರಿಯ**

**ಅಶ್ನಾತ್ಯನಂತಃ ಖಲು ತತ್ವಕೋವಿದೈಃ**
**ಶ್ರದ್ಧಾ ಹುತಂ ಯನ್‌ಮುಖ ಇಜ್ಯ ನಾಮಭಿಃ ।**
**ನ ವೈ ತಥಾ ಚೇತನಯಾ ಬಹಿಷ್ಕೃತೇ**
**ಹುತಾಶನೇ ಪಾರಮಹಂಸ್ಯವರ್ಯಗುಃ ॥**

(ಭಾ.೪.೨೧.೪)

**ವಿಶೇಷತೋ ಭಗವದಧಿಷ್ಠಾನೇಷು ಶ್ರೇಷ್ಠತ್ವಾಚ್ಚ ತತ್ಸೇವಾ ಕಾರ್ಯೇತ್ಯಾಹ ॥ ಅಶ್ನಾತೀತಿ ॥ ತತ್ತ್ವವೇದಿಭಿರ್ಯೇಷಾಂ ಬ್ರಾಹ್ಮಣಾನಾಂ ಮುಖೇ । ಇಜ್ಯಸ್ಯ ಹರೇರ್ನಾಮಭಿಃ ಪ್ರಾಣಾದಿಭಿಃ । ಶ್ರದ್ಧಯಾ ಹುತಮನಂತೋ ಯಥಾಽಶ್ನಾತಿ । ಚೇತನಯಾ ಬಹಿಷ್ಕೃತೇ ಜಡೇ । ಹುತಾಶನೇ ತಥಾ ನಾಶ್ನಾತಿ । ವೈ ಖಲು । ತದ್ಬ್ರಹ್ಮಕುಲಮಿತಿ ಪೂರ್ವೇಣಾನ್ವಯಃ ।**

**ನನು ಬ್ರಾಹ್ಮಣಮುಖೇ ಹುತಂ ಭಗವಾನಶ್ನಾತಿ, ಅಶ್ನನ್ನಪಿ**

ಹುತಾಶನಾದಿಭ್ಯಃ ಆಧಿಕ್ಯೇನೈವ। ಹೋಮಶ್ಚ ಭಗವನ್ನಾಮಭಿರ್ಮಂತ್ರೈಃ, ತತ್ತ್ವಕೋವಿದೈಃ ಕರ್ತೃಭಿರಿತಿ ಚೋಕ್ತಂ। ತತ್ರ ಭಗವಾನಶ್ನಾತೀತ್ಯೇತತ್ತಾವನ್ನ ಮನೋಜ್ಞಂ। ವ್ಯಧಿಕರಣತ್ವಾತ್। ಅನ್ಯಥಾ ಅತಿಪ್ರಸಂಗಾತ್। ಆಧಿಕ್ಯೇನೇತ್ಯಪಿ। ಸರ್ವತ್ರ ಭಗವತ ಏವ ಭೋಕ್ತೃತ್ವೇನ ತದಯೋಗಾತ್। ಭಗವನ್ನಾಮಭಿರಿತಿ ಚಾಸಮಂಜಸಂ। ನ ಹಿ ತತ್ರ ವಿಷ್ಣವೇ ಸ್ವಾಹೇತ್ಯಾದಿರೂಪೋ ಮಂತ್ರೋಽಸ್ತಿ ಯೇನೇಜ್ಯನಾಮಭಿರಿತಿ ಯುಜ್ಯೇತ। ಕಿಂ ನಾಮ ಪ್ರಾಣಾಯ ಸ್ವಾಹೇತ್ಯಾದಿರೂಪ ಏವ। ನ ಚ ಪ್ರಾಣಾದಿಶಬ್ದಾನಾಮಪಿ ವಿಷ್ಣುನಾಮತ್ವಂ ಸಾಂಪ್ರತಂ। ತಥಾ ಸತಿ ಏಕೇನೈವ ಪೂರ್ತ್ಯಾಽಪಾನಾಯ ಸ್ವಾಹೇತ್ಯಾದಿನಾ ಪೌನರುಕ್ತ್ಯಾಪಾತಾತ್। ತತ್ತ್ವಕೋವಿದೈ ರ್ಹುತಮಶ್ನಾತೀತ್ಯೇತದಪಿ ನ ಮಹಾಜನಸಭಾರಂಜನಂ। ತದಿತರೈರ್ಹುತಸ್ಯಾನಶನ ಪ್ರಸಂಗಾತ್। ತಥಾ ಸತಿ ಸರ್ವಭೋಕ್ತೃತ್ವ-ಹಾನ್ಯಾಪಾತಾತ್। ಕಿಂಚ। ಕಿಂ ತತ್ತತ್ತ್ವಕೋವಿದತ್ವಂ ಯದ್ವಿಶಿಷ್ಟೈರ್ದತ್ತಮೇವ ಭಗವಾನಶ್ನಾತೀತ್ಯತ ಆಹ ॥ **ಪಾರಮಹಂಸ್ಯವರ್ಯಾಗುರಿತಿ** ॥

ಯತ್ತಾವದುಕ್ತಂ ವೈಯಧಿಕರಣ್ಯಾದಿತಿ ತನ್ನ। ಭಗವತ ಏವ ಭಕ್ತಪ್ರದತ್ತಾನ್ನಭೋಕ್ತೃತ್ವೇನ ವಿವಕ್ಷಿತತ್ವಾತ್। ಅತ ಏವಾತಿಪ್ರಸಂಗೋಽಪಿ ಪರಾಸ್ತಃ। ಭಗವತ ಏವ ಹೋಮೋದ್ದೇಶ್ಯತ್ವಾತ್। ತದೇತದಭಿಸಂಧಾಯಾಹ। **ಪಾರಮಹಂಸ್ಯವರ್ಯಾಗುರಿತಿ** ॥ ಪಾರಮಹಂಸ್ಯೈಃ ಪರಮಹಂಸೈರ್ಭಾಗವತ ಧರ್ಮನಿರತೈರೇವ ವರಣೀಯಾ ಗಾವೋ ರೂಪಾಣಿ ಯಸ್ಯೇತಿ। ಭಾಗವತಾ ಹಿ ಬ್ರಾಹ್ಮಣೇಷು ಭಗವಂತಮೇವ ಭಾವಯಂತಸ್ತಸ್ಮೈ ಏವಾನ್ನಾದಿ ದದತಿ। ಯದಪ್ಯಾಧಿಕ್ಯೇನೇತ್ಯೇತನ್ನ ಮನೋಜ್ಞಮಿತಿ ತತ್ರಾಪೀದಮೇವೋತ್ತರಂ। ಪಾರಮಹಂಸ್ಯೈಸ್ತಾರತಮ್ಯೇನೈವ ಭಜನೀಯಾ ಗಾವೋ ನಾಮಾನ್ಯಸ್ಯೇತಿ। ಸರ್ವತ್ರ ಭಗವಂತಮೇವ ಭಾವಯಂತೋಽಪ್ಯಧಿಷ್ಠಾನತಾರತಮ್ಯೇನೈವ ಭಾವಯಂತೀತ್ಯಂಗೀಕಾರಾತ್। ತಥಾಚ ವಕ್ಷ್ಯತೇ। ಯಚ್ಚೋಕ್ತಂ ಭಗವನ್ನಾಮಭಿರಿತಿ ಚಾಸಮಂಜಸಮಿತಿ ತತ್ರಾಪೀದಮೇವೋ ಪತಿಷ್ಠತೇ ॥ **ಪಾರಮಹಂಸ್ಯವರ್ಯಾಗುರಿತಿ** ॥ ಪಾರಮಹಂಸ್ಯವರ್ಯಾ ಗಾವೋ ನಾಮಾನ್ಯಸ್ಯೇತಿ ಯುಜ್ಯತ ಏವೇಜ್ಯನಾಮಭಿರಿತಿ। ಪ್ರಾಣಾದಿಪದಾನಾಮಪಿ ಭಗವನ್ನಾಮತ್ವಾತ್। ನ ಚ ಪುನರುಕ್ತಿಃ। ರೂಪಭೇದೇನ ತದಭಾವಾತ್। ಏತದಪ್ಯಾಹ। ಪಾರಮಹಂಸ್ಯವರ್ಯಾಗುರಿತಿ। ಪಾರಮಹಂಸ್ಯವರ್ಯಾ ಗಾವೋಽಂಶವಸ್ತದ್ವದ್ವಿದ್ಯಮಾನಾನಿ ರೂಪಾಣಿ ಯಸ್ಯೇತಿ। ಅತ್ರ ಗೋಪದೇನ ರೂಪಗ್ರಹಣೇನ ಯಥಾ ಸೂರ್ಯಸ್ಯ ತದಂಶೂನಾಂ ಚಾಭೇದೇಽಪ್ಯಂಶ-ವೋಽಂಶುಮಾನಿತಿ। ತಥಾ ಭಗವದ್ರೂಪಾಣಿ ಭಗವಾನಿತಿ ಚ ಯುಜ್ಯತೇ

ವಿಶೇಷಬಲಾದಿತಿ ಸೂಚನಾಯೇತಿ ಮಂತವ್ಯಂ। ಯದಪಿ ನ ಮಹಾಜನಸಭಾರಂಜನ ಮಿತಿ ತತ್ರಾಪೀದಮೇವೋತ್ತರಂ। ಪಾರಮಹಂಸ್ಯಾಃ ಪರಮಹಂಸಸಂಬಂಧಿನ್ಯಸ್ತತ್ಪ್ರದತ್ತಾ ಏವ ವರ್ಯಾ ವರಣೀಯಾ ಗ್ರಾಹ್ಯಾ ಗಾವಸ್ತೋಯಪ್ರಭೃತಯಃ ಪದಾರ್ಥಾ ಯೇನೇತಿ ॥ ಇದಮುದಿತಂ ಭವತಿ—

ಭಕ್ತ್ಯೈವ ತುಷ್ಯತಿ ಹರಿರಿತಿ ನಿಷ್ಕೃಷ್ಟಂ। ತಥಾಚ ತತ್ತ್ವಕೋವಿದೈರ್ದತ್ತಮೇವಾಶ್ನಾತಿ ಭಗವಾನಿತಿ ಯುಕ್ತಮೇವ। ತೇ ಹಿ ಯದ್ದದತಿ ತುಲಸ್ಯಾದಿಪತ್ರಂ ವಾ ಪುಷ್ಪಂ ವಾ ಫಲಂ ವಾ ತೋಯಂ ವಾನ್ಯದ್ವಾ ತತ್ಸರ್ವಂ ಭಕ್ತಿಪೂರ್ವಕಮೇವ ದದತಿ। ಅಶ್ನಾತಿ ಚ ಖಲು ಭಗವಾನ್ ಸಾದರಂ। ಏತಚ್ಚ ಪ್ರಮಾಣ ಪ್ರಮಿತಮಿತ್ಯಾಹ ಖಲ್ವಿತ್ಯನೇನ। ತತ್ರ ಹೇತುಶ್ಚ ವಕ್ಷ್ಯತೇ। ನ ಚ ಸರ್ವಭೋಕ್ತೃತ್ವಹಾನಿಃ। ಅನ್ಯದತ್ತಭೋಕ್ತೃತ್ವಸ್ಯಾಪ್ಯಂಗೀಕಾರಾತ್। ನಚ ಕೋವಿದೈರ್ದತ್ತಮೇವೇತ್ಯೇವಕಾರಾನುಪಪತ್ತಿಃ। ತತ್ರ ಸಾದರಂ ಭೋಕ್ತೃತ್ವಸ್ಯೈವ ವಿವಕ್ಷಿತತಯಾ ತಸ್ಯೈವ ನಿಷೇಧೇನ ಭೋಕ್ತೃತ್ವಮಾತ್ರಸ್ಯಾ ನಿಷೇಧಾದಿತಿ। ಯದತ್ರ ವಕ್ತವ್ಯಂ ತದುಪರಿಷ್ಟಾದ್ವಕ್ಷ್ಯತೇ।

ಕಿಂಚ। ಕಿಂ ತತ್ತತ್ತ್ವಕೋವಿದತ್ವಮಿತ್ಯತ್ರಾಪೀದಮೇವೋತ್ತರಂ। ಪಾರಮಹಂಸ್ಯೈರ್ವರ್ಯಾಣಿ ಭಜನೀಯಾನಿ ನಾಮಾನಿ ರೂಪಾಣಿ ಚಾಸ್ಯೇತಿ। ಯೇ ಹಿ ಸರ್ವೇಷ್ವಪ್ಯಧಿಷ್ಠಾನೇಷು ಬ್ರಾಹ್ಮಣಾದಿಷು, ಬಾಹ್ಯೇಷು, ಪ್ರಾಣಾದಿಷು ಚಾಂತರೇಷು ತತ್ತದಧಿಷ್ಠಾನವಾಚಕೈರ್ನಾಮಭಿಃ ಭಗವದ್ರೂಪಾಣ್ಯೇವ ಭಾವಯಂತಿ। ತ ಏವ ತತ್ತ್ವಕೋವಿದಾ ಇತಿ ॥



ಹರಿಯ ಅಧಿಷ್ಠಾನಗಳಲ್ಲಿ ಶ್ರೇಷ್ಠರಾದ ಬ್ರಾಹ್ಮಣರ ಅಧಿಷ್ಠಾನದಲ್ಲಿ ಹರಿಯನ್ನು ಆರಾಧಿಸುವುದರಿಂದ ಹರಿಪ್ರೀತಿ ವಿಶೇಷವಾಗಿ ಉಂಟಾಗುವುದೆಂದು ಪೃಥುರಾಜನು ಒಂದು ಮಹಾಸತ್ರದ ಅಂಗವಾಗಿ ನಡೆದ ದೇವತೆಗಳ ದೇವರ್ಷಿ ಬ್ರಹ್ಮರ್ಷಿಗಳ ಸಭೆಯಲ್ಲಿ ನುಡಿದ.

ಬ್ರಾಹ್ಮಣರಲ್ಲಿ ಹರಿಯ ಸನ್ನಿಧಾನ ಅಧಿಕವೆಂದು ತತ್ವವನ್ನು ತಿಳಿದವರು ಶ್ರದ್ಧೆಯಿಂದ ಬ್ರಾಹ್ಮಣರ ಮುಖದಲ್ಲಿ ಹೋಮಿಸಿದ ಅನ್ನವನ್ನು ಅನಂತನು ಉಂಡು ಅನಂತಫಲ ನೀಡುವನು. ಬುದ್ಧಿಯಿಲ್ಲದ ಜಡವಾದ ಅಗ್ನಿಯಲ್ಲಿ ಶ್ರದ್ಧೆಯಿಂದ ಹೋಮಿಸಿದರೂ ಅಷ್ಟು ಪ್ರೀತಿಯಿಂದ ಅನಂತನು ಉಣ್ಣುವುದಿಲ್ಲ.

**ಏಕೆಂದರೆ 'ಪಾರಮಹಂಸ್ಯ'ರು ಅಂದರೆ ಪರಮಹಂಸರು. ಅವರಿಂದ 'ವರ್ಯ' ಪೂಜ್ಯನಾದ 'ಗು' ಅಂದರೆ ನಾಮ ಹಾಗೂ ರೂಪಗಳುಳ್ಳವನು.**

ಈ ಪರಮಹಂಸರು ಬುದ್ಧಿಶೂನ್ಯವಾದ ಜಡ ಅಗ್ನಿಗಿಂತ ಬಹಳ ಉತ್ತಮರು. ಉತ್ತಮರಲ್ಲಿ ಶ್ರೀಹರಿಯ ಸನ್ನಿಧಾನ ಅಧಿಕ, ಅಂದರೆ ಉತ್ತಮರ ಆರಾಧನೆಗೆ ಬೇಗನೆ ಚೆನ್ನಾಗಿ ಒಲಿದು ಉತ್ತಮಫಲ ನೀಡುತ್ತಾನೆ. ಹೀಗಾಗಿ ಜಡ ಅಗ್ನಿಯಲ್ಲಿ ಎಷ್ಟು ಶ್ರದ್ಧೆಯಿಂದ ವಿಧ್ಯುಕ್ತವಾಗಿ ಹೋಮಮಾಡಿದರೂ ಅದು ಪರಮಹಂಸರ ಮುಖದಲ್ಲಿ ಮಾಡಿದ ಹೋಮದಷ್ಟು ಅನಂತನಿಗೆ ಪ್ರಿಯವೆನಿಸ ಲಾರದು. ಹೀಗೆ ಬ್ರಾಹ್ಮಣ ಭೋಜನವು ಅಗ್ನಿಯಲ್ಲಿ ಮಾಡಿದ ಹೋಮಕ್ಕಿಂತ ಹೆಚ್ಚು ಹರಿಪ್ರೀತಿಕರ ಎನ್ನುವುದು ಒಂದು ಯುಕ್ತಿ.

ಮತ್ತು ಈ ಭೋಜನವು, ತತ್ವಕೋವಿದರು 'ಪ್ರಾಣಾಯ ಸ್ವಾಹಾ ಅಪಾನಾಯ ಸ್ವಾಹಾ' ಎಂದು ಮುಂತಾಗಿ ಮಂತ್ರಪೂರ್ವಕವಾಗಿ ನೀಡಿದ ಆಹುತಿ ರೂಪವಾದ್ದರಿಂದಲೂ ಹರಿಗೆ ಅತ್ಯಂತ ಪ್ರಿಯ. ಪ್ರಾಣಾಯ ಸ್ವಾಹಾ ಇತ್ಯಾದಿ ಮಂತ್ರಪ್ರತಿಪಾದ್ಯನು ಹರಿಯೆ 'ಪಾರಮಹಂಸ್ಯ'ರಿಂದ ಪರಮಹಂಸ ರಿಂದ 'ವರ್ಯ' ಭಕ್ತಿಯಿಂದ ಉಚ್ಚರಿತವಾಗುವ 'ಗು' ನಾಮವುಳ್ಳವನು ಹರಿಯೇ. ಪ್ರಾಣಾದಿ ಶಬ್ದಗಳು ಮುಖ್ಯವಾಗಿ ಹರಿನಾಮ. ಅಮುಖ್ಯವಾಗಿ ಮುಖ್ಯಪ್ರಾಣನಿಗೂ ಅವು ನಾಮವಾಗಿರುತ್ತವೆ.

ಮತ್ತು 'ಅಶ್ನಾತಿ ಅನಂತ' ಈ ಆಹುತಿಗಳನ್ನು ಅನಂತನು ಸಂತೋಷ ದಿಂದ ಉಣ್ಣುತ್ತಾನೆ. ಬ್ರಾಹ್ಮಣರು ಉಣ್ಣುವಂತೆ ನಮಗೆ ಕಂಡರೂ, ಶ್ರೀಕೃಷ್ಣನೆ–

ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ'

ಎಂದು ಗೀತೆಯಲ್ಲಿ ಹೇಳಿದಂತೆ ತಾನೇ ಉಂಡು ಬ್ರಾಹ್ಮಣರಿಗೆ ಉಣಿಸುತ್ತಾನೆ.

ಪತ್ರಂ ಪುಷಂ ಫಲಂ ತೋಯಂ ಯೋ ಮೇ ಭಕ್ತ್ಯಾಪ್ರಯಚ್ಛತಿ
ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ (ಗೀ.೯.೨೬)

ಎಂದು ಇದನ್ನು ಸ್ಪಷ್ಟ ಹೇಳಿದ್ದಾನೆ. ಅದರಿಂದ ಅನಂತನು ಉಣ್ಣುವನೆಂಬಲ್ಲಿ ಸಂಶಯವಿಲ್ಲ. ಅಗ್ನ್ಯಾದಿಗಿಂತ ಬ್ರಾಹ್ಮಣ ಮುಖದಲ್ಲಿ ಹೆಚ್ಚು ಉಣ್ಣುವನೆಂಬು ದರಲ್ಲಿಯೂ ಸಂಶಯವಿಲ್ಲ. ಬ್ರಾಹ್ಮಣಮುಖದಲ್ಲಿ ನೀಡುವ ಆಹುತಿಯು 'ಪ್ರಾಣಾಯಸ್ವಾಹಾ' ಇತ್ಯಾದಿ ಮಂತ್ರಪೂರ್ವಕವಾಗಿಯೇ ತತ್ವಕೋವಿದರಿಂದ

ಭಕ್ತಿಪೂರ್ವಕವಾಗಿ ಅರ್ಪಿತವಾಗುತ್ತದೆ ಎನ್ನುವಲ್ಲಿಯೂ ಸಂಶಯವಿಲ್ಲ. 'ವಿಷ್ಣವೇ ಸ್ವಾಹಾ' ಎಂದು ಮುಂತಾಗಿ ಹೇಳಿದರೆ ಮಾತ್ರ ಅದು ವಿಷ್ಣುಮಂತ್ರ ವಾಗುತ್ತದೆ ಹೊರತು 'ಪ್ರಾಣಾಯ ಸ್ವಾಹಾ' ಎಂದರೆ ಅದು ವಿಷ್ಣುಮಂತ್ರವಾಗುವುದಿಲ್ಲ' ಎನ್ನುವ ಆಕ್ಷೇಪ ಮಾಡುವುದಕ್ಕೂ ಅವಕಾಶವಿಲ್ಲ.

'ಪ್ರಾಣಾಯಸ್ವಾಹಾ' ಎಂದು ಒಂದು ವಿಷ್ಣುಮಂತ್ರ ಸಾಕು, 'ಅಪಾನಾಯಸ್ವಾಹಾ' ಎಂದು ಮುಂತಾಗಿ ಬೇರೆ ಮಂತ್ರವನ್ನು ಹೇಳಿದರೆ ಪುನರುಕ್ತಿಯಲ್ಲವೆ? ಎಂದರೆ, ಇಲ್ಲ, ಪ್ರಾಣಾದಿ ಪಂಚರೂಪಿಯಾದ ಹರಿಗೆ ಪಂಚಮಂತ್ರವನ್ನು ಹೇಳಿದಾಗ ಒಂದೊಂದು ರೂಪಕ್ಕೆ ಒಂದೊಂದು ಮಂತ್ರವೆಂದಾಗುವುದರಿಂದ ಪುನರುಕ್ತಿ ಇಲ್ಲ.

ಪಾರಮಹಂಸ್ಯರಿಂದ 'ವರ್ಯ'ವಾದ ಆರಾಧ್ಯವಾದ ರೂಪಗಳು 'ಪಂಚ' ಐದೇ ಇದ್ದರೂ ಅವೆಲ್ಲವೂ ಒಬ್ಬನೆ ಹರಿ. ವಿಶೇಷಬಲದಿಂದ ಐದು ರೂಪ ಧರಿಸುತ್ತಾನೆ.

ಇಲ್ಲಿ 'ವರ್ಯ–ಗು' ಎಂದರೆ ಪೂಜ್ಯವಾದ ಕಿರಣ. ಗೋ ಶಬ್ದಕ್ಕೆ ಕಿರಣ ಎಂದರ್ಥ. ಸೂರ್ಯ–ಸೂರ್ಯಕಿರಣಗಳಿಗೆ ಭೇದವಿಲ್ಲ. ಹಾಗೆ ಹರಿಗೂ ಅವನ ರೂಪಗಳಿಗೂ ಭೇದವಿಲ್ಲ.

ತತ್ವ ಕೋವಿದರೇ ಆಹುತಿ ನೀಡಬೇಕು, ಏಕೆ? ಎಂದರೆ 'ತದಹಂ ಭಕ್ತ್ಯುಪ ಹೃತಂ' ಎನ್ನುವಂತೆ ಭಕ್ತಿಯಿಂದ ತತ್ವಕೋವಿದರೇ ನೀಡಬೇಕು. ಆಗ ಅನಂತನು ಉಣ್ಣುತ್ತಾನೆ. ಇದಕ್ಕೆ ಅನ್ಯರು ಕೊಟ್ಟರೆ ಅನಂತ ಉಣ್ಣುವುದಿಲ್ಲ ಎಂದರ್ಥವಲ್ಲ. ಅವನು ಸರ್ವಭೋಕ್ತ. ಯಾರೇ ಕೊಟ್ಟರೂ ಯಾರು ಕೊಡದಿದ್ದರೂ ಅವನು ಉಣ್ಣುತ್ತಾನೆ. ತತ್ವಕೋವಿದರು ಕೊಟ್ಟರೆ ಆದರದಿಂದ ಉಣ್ಣುತ್ತಾನೆ.

ತತ್ವಕೋವಿದರೆಂದರೆ ಯಾರು? ಎಂದರೂ ಈ 'ಪಾರಮಹಂಸ್ಯ–ವರ್ಯಗುಃ' ಎಂಬ ಶಬ್ದವೆ ಉತ್ತರ ನೀಡುತ್ತದೆ. 'ಪರಮಹಂಸರಿಂದ ಭಜಿಸಲ್ಪಡುವ ನಾಮರೂಪಗಳುಳ್ಳವನು ಅನಂತ' ಎಂದರೆ ಅನಂತನ ನಾಮ ರೂಪಗಳನ್ನು ತಿಳಿದು ಭಜಿಸುವವರೆ ತತ್ವಕೋವಿದರು ಎಂದು ಹೇಳಿದಂತಾಗುವುದು.

ಎಲ್ಲ ಬ್ರಾಹ್ಮಣಾದಿ ಹೊರಗಿನ ಅಧಿಷ್ಠಾನಗಳಲ್ಲಿಯೂ ಪ್ರಾಣಾದಿ ಆಂತರ

ತತ್ವಗಳಲ್ಲಿಯೂ ಆಯಾ ವಸ್ತುವನ್ನು ಹೇಳುವ ನಾಮಗಳು ಆಯಾ ವಸ್ತುಗಳೊಳಗಿರುವ ಭಗವಂತನ ರೂಪಗಳನ್ನೆ ಮುಖ್ಯವಾಗಿ ಹೇಳುತ್ತವೆ ಎಂದು ತಿಳಿದು ಎಲ್ಲ ವಸ್ತುಗಳಲ್ಲಿ ಭಗವಂತನನ್ನು ತಿಳಿದು ಉಪಾಸನೆ ಮಾಡುವವರೆ ತತ್ವಕೋವಿದರು. ಅವರು ಬ್ರಾಹ್ಮಣ ಮುಖದಿಂದ ನೀಡುವ ಪತ್ರಪುಷ್ಪಫಲ ತೋಯಾದಿ ಅನ್ನಾಹುತಿಗಳನ್ನು ಅನಂತ ಬಲು ಆದರದಿಂದಲೆ ಉಣ್ಣುತ್ತ ಅವರನ್ನು ಅನುಗ್ರಹಿಸುವನು. ಹೀಗೆ ತತ್ವಕೋವಿದರಿಂದ ಪೂಜಿತರಾಗುವ 'ಬ್ರಾಹ್ಮಣ'ರು ಅಂದರೆ ಬ್ರಹ್ಮಾದಿ ತತ್ವಾಭಿಮಾನಿ ದೇವತೆಗಳೇ ಮುಖ್ಯ ಗುರುಗಳು.



–೧೧೭–

**ಹರಿಧ್ಯಾನ ಸಮರ್ಥರಾದ ಗುರುಗಳ**
**ಸೇವೆಯಿಂದ ಹರಿಯ ಸ್ಪಷ್ಟಜ್ಞಾನ**

**ಯದ್‌ಬ್ರಹ್ಮ ನಿತ್ಯಂ ವಿರಜಂ ಸನಾತನಂ**
**ಶ್ರದ್ಧಾತಪೋಮಂಗಲ ಮೌನ ಸಂಯಮೈಃ ।**
**ಸಮಾಧಿನಾ ಬಿಭ್ರದಿಹಾರ್ಥಸಿದ್ಧಯೇ**
**ಯತ್ರೇದಮಾದರ್ಶ ಇವಾವ ಭಾಸತೇ ॥**

(ಭಾ.೪.೨೧.೪೧)

**ಬ್ರಹ್ಮೋಪಾಸನಯಾ ಸ್ವಯಂ ಪ್ರಾಪ್ತಪುರುಷಾರ್ಥತ್ವಾದಪ್ರಾಪ್ತ ಪುರುಷಾರ್ಥಾನಾಂ ಬ್ರಹ್ಮೋಪದೇಶಕತ್ವಾಚ್ಚ ತತ್ಸೇವಾ ಕಾರ್ಯೇತ್ಯಭಿಸಂಧಿನಾ ಬ್ರವೀತಿ । ಯದಿತಿ ॥ ಯದ್ಬ್ರಹ್ಮಕುಲಂ ಶ್ರದ್ಧಾದಿಭಿಃ ಸಮಾಧಿನಾ ಚಿತ್ತನಿರೋಧಲಕ್ಷಣೇನ ಪುರುಷಾರ್ಥಸಿದ್ಧಯೇ ನಿತ್ಯತ್ವಾದಿಧರ್ಮೋಪೇತಂ ಬ್ರಹ್ಮ ಬಿಭ್ರದ್ವಿಷಯೀಕುರ್ವದಾಸ್ತೇ, ಯತ್ರ ಯಸ್ಮಿಂಶ್ಚ ಸೇವಿತೇ ಇದಂ ಬ್ರಹ್ಮ ಆದರ್ಶೇ ದರ್ಪಣ ಇವ ಸ್ಪಷ್ಟಮವಭಾಸತೇ ತದಿತ್ಯನ್ವಯಃ ॥**



ಪೃಥುರಾಜನು ಮಹಾಸತ್ರದಲ್ಲಿ ಸಭೆ ಸೇರಿದ್ದ ದೇವತೆಗಳ ಋಷಿಗಳ ಮುಂದೆ ಹೇಳುತ್ತಾನೆ—ಶ್ರದ್ಧೆ ತಪಸ್ಸು ವಿಹಿತಾಚರಣೆ ನಿಷಿದ್ಧ ಕರ್ಮವರ್ಜನ

**ವ್ಯರ್ಥವಚನತ್ಯಾಗ ಇಂದ್ರಿಯನಿಗ್ರಹಗಳಿಂದ ಅಪ್ರಯತ್ನವಾಗಿ ಧ್ಯಾನಾವಸ್ಥೆಗೆ ಏರುವ ಸಾಮರ್ಥ್ಯ ಲಭಿಸುತ್ತದೆ. ಇಂಥ ಸಾಮರ್ಥ್ಯಉಳ್ಳವರು ಗುರುಗಳು ಪುರುಷಾರ್ಥಸಿದ್ಧಿಗಾಗಿ ನಿತ್ಯ ನಿರ್ದೋಷ ಗುಣಪೂರ್ಣ ಸನಾತನನಾದ ಹರಿಯನ್ನು ಹೃದಯದಲ್ಲಿ ಧರಿಸುತ್ತಾರೆ. ಇವರನ್ನು ಸೇವಿಸಿದರೆ ಈ ಹರಿಯು ಚಿತ್ತದಲ್ಲಿ ಕನ್ನಡಿಯಲ್ಲಿ ಮುಖ ತೋರುವಂತೆ ಸ್ಪಷ್ಟವಾಗಿ ಕಾಣುತ್ತಾನೆ.**

ಹೀಗೆ ಪರಮಾತ್ಮನ ಉಪಾಸನೆ ಮಾಡಿ ಪುರುಷಾರ್ಥಸಾಧನೆ ಮಾಡಿಕೊಂಡವರು ಪರಮಾತ್ಮ ತತ್ವಜ್ಞಾನವನ್ನು ಉಪದೇಶಿಸಬಲ್ಲವರಾದ್ದರಿಂದ ಅವರ ಸೇವೆಯನ್ನು ಅವಶ್ಯ ಮಾಡಬೇಕು.



–೧೧೮–

**'ಬ್ರಾಹ್ಮಣರ ವಿರೋಧಗೈದರೆ ರಾಜನನ್ನು ಕತ್ತರಿಸಿ ಹಾಕುವೆ' ಎನ್ನುತ್ತಾನೆ ಶ್ರೀಹರಿ**

**ಯಸ್ಯಾಮೃತಾಮಲಯಶಃ ಶ್ರವಣಾವಗಾಹಃ**
**ಸದ್ಯಃ ಪುನಾತಿ ಜಗದಾ ಶ್ವಪಚಂ ವಿಕುಂಠಃ ।**
**ಸೋಽಹಂ ಭವದ್ಭ್ಯ ಉಪಲಬ್ಧಸುತೀರ್ಥಕೀರ್ತಿ-**
**ಶ್ಛಿಂದ್ಯಾಂ ಸ್ವಬಾಹುಮಪಿ ವಃ ಪ್ರತಿಕೂಲವೃತ್ತಿಂ ॥**

(ಭಾ.೩.೧೬.೬)

**ನ ಕೇವಲಂ ಭಾಗವತೈರೇವ ಸಂಭಾವಿತಾಃ ಕಿಂ ನಾಮ ಭಗವತಾಪೀತಿ ಭಾವೇನಾನ್ಯತೋ ವಿಶೇಷೇಣ ಭಗವತ್ಪ್ರೀತಿಪಾತ್ರತ್ವರೂಪಂ ಮಹಿಮಾಂತರಂ ಚಾಹ ತ್ರಿಭಿಃ। ತತ್ರಾದೌ ಭಗವದ್ಭಕ್ತೇಷು ಭಗವನ್ಮಹಿಮಪ್ರತಿಪಾದಕತ್ವಾದ್ವಿಶೇಷತೋ ಭಗವತ್ಪ್ರೀತಿಪಾತ್ರತ್ವಮಿತ್ಯಾಹ ॥ ಯಸ್ಯೇತಿ। ಸನಕಾದೀನ್ ಪ್ರತಿ ಭಗವದ್ವಚನಮೇತತ್ । ಯಸ್ಯ ಮಮ ಅಮೃತಂ ಕರ್ಣಪೀಯೂಷಂ, ಯಶಸಃ ಶ್ರವಣಂ ತದೇವಾವಗಾಹಃ ಸ್ನಾನಂ। ಸದ್ಯಸ್ತತ್ಕ್ಷಣಾತ್ ಜಗತ್ ಆಶ್ವಪಚಂ ತತ್ಪರ್ಯಂತಂ ಪುನಾತಿ। ತಾದೃಶಯಶೋವಿಶಿಷ್ಟೋಽಹಂ ಭವದ್ಭ್ಯಃ ಸಕಾಶಾದುಪಲಬ್ಧಾ ಲೋಕೇಷು ವಿಸ್ತಾರಿತಾ ಸುತೀರ್ಥಾ ಪಾವನತಮಾ ಕೀರ್ತಿರ್ಯಸ್ಯ ಸಃ।ಯತೋಽತೋ ವೋ ಮಮ ಪರಮಸೇವಾಕಾರಿತಯಾ ಪರಮಪ್ರೀತಿ ಪಾತ್ರಾಣಾಂ। ಪ್ರತಿಕೂಲಾ ವಿರುದ್ಧಾ ವೃತ್ತಿರ್ವರ್ತನಂ ಯಸ್ಯ ತಂ**

**ಸ್ವಬಾಹುಂ ತಜ್ಜಾತಂ ಸಾಕ್ಷಾತ್ಪಟ್ಟಾಭಿಷಿಕ್ತಂ ಕ್ಷತ್ರಿಯಮಪಿ ಛಿಂದ್ಯಾಂ ವಿಗತಸಂಪದಂ ಕರೋಮಿ ಕಿಮನ್ಯಮಿತಿ ॥**

**'ಮುಕ್ತಿದಾಯಕವಾದ ನಿರ್ಮಲವಾದ ನನ್ನ ಕೀರ್ತಿಶ್ರವಣದಲ್ಲಿ ಮಗ್ನವಾದರೆ ಚಂಡಾಲಪರ್ಯಂತ ಸಮಸ್ತ ಜಗತ್ತೂ ಕೂಡ ಪವಿತ್ರವಾಗುವುದು. ಅಂಥ ಪಾವನವಾದ ಕೀರ್ತಿ ನನಗೆ ಲಭಿಸಿರುವುದು ನೀವು ನನ್ನ ಮಹಿಮೆಯನ್ನು ಯೋಗ್ಯರಿಗೆ ಉಪದೇಶಿಸಿದ್ದರಿಂದ ತಾನೆ? ಹೀಗೆ ನನಗೆ ಉತ್ತಮಸೇವೆ ಮಾಡಿ ನನ್ನ ಪರಮಾನುಗ್ರಹಕ್ಕೆ ಪಾತ್ರರಾದ ನಿಮಗೆ ವಿರೋಧ ಮಾಡುವವನು ನನ್ನ ಬಾಹುವಿನಿಂದ ಜನಿಸಿದ ಪಟ್ಟಾಭಿಷಿಕ್ತನಾದ ಕ್ಷತ್ರಿಯನಾದರೂ ಸರಿಯೆ ಅವನನ್ನು ಕತ್ತರಿಸಿ ಹಾಕುತ್ತೇನೆ' ಎಂದು ಸನಕಾದಿಗಳಿಗೆ ವೈಕುಂಠ ದ್ವಾರದಲ್ಲಿ ಜಯ ವಿಜಯರು ಅಪಚಾರಗೈದಾಗ ಶ್ರೀಹರಿ ನುಡಿದ ಮಾತು.**

ತಮ್ಮ ಬಗ್ಗೆ ಶ್ರೀಹರಿ ಮಾಡಿದ ಪ್ರಶಂಸೆ ಅತಿಯಾಯಿತೆಂದು ಸನಕಾದಿಗಳೆ ಮುಂದೆ ಹೇಳುತ್ತಾರೆ. ಹರಿ ಏಕೆ ಹಾಗೆ ಮಾಡುತ್ತಾನೆ? ಎಂದರೆ ಅವನು ಹಾಗೆ ಮಾಡದಿದ್ದರೆ ಅವನನ್ನು ಅನುಸರಿಸುವ ಲೋಕ ಬ್ರಾಹ್ಮಣರನ್ನು ಕಡೆಗಣಿಸಿ ಧರ್ಮಮಾರ್ಗದಿಂದ ಭ್ರಷ್ಟವಾದೀತು. ಧರ್ಮ ಹಾಳಾದೀತು. ಆಗ ಲೋಕ ನಶಿಸುವುದು' ಎನ್ನುತ್ತಾರೆ. ಅವನು ತನಗೆ ಕೀರ್ತಿ ಬ್ರಾಹ್ಮಣರಿಂದ' ಎನ್ನುವುದು ಬರಿ ಮೋಹಕ. ಎಂದು ತಾತ್ಪರ್ಯದಲ್ಲಿ ಹೇಳಿದ್ದಾರೆ.

'ಛಿಂದ್ಯಾಂ' ಕತ್ತರಿಸುತ್ತೇನೆ, ಎಂದರೆ, ಜಯವಿಜಯರನ್ನು ಹರಿ ಕತ್ತರಿಸುತ್ತೇನೆ ಎನ್ನುವುದಿಲ್ಲ. ಅವರ ಸಂಪತ್ತನ್ನು ನಾಶಮಾಡುತ್ತೇನೆ ಎನ್ನುತ್ತಿದ್ದಾನೆ. ಅದರಂತೆ, ಒಂದು ರೂಪದಲ್ಲಿ ವೈಕುಂಠದ್ವಾರಪಾಲನಾಧಿಕಾರದ ಅವರ ಸಂಪತ್ತನ್ನು ಸ್ವಲ್ಪಕಾಲ ಅಪಹರಿಸಿದ್ದಾನೆ ಹರಿ.



—೧೧೯—

## ಬ್ರಾಹ್ಮಣನು ಹರಿಯಲ್ಲಿ ಅಪಚಾರಗೈದರೂ ಅವನಲ್ಲಿ ಕೋಪಸಲ್ಲದು

**ಯೇ ಬ್ರಾಹ್ಮಣಾನ್ ಮಯಿ ಧಿಯಾ ಕ್ಷಿಪತೋಽರ್ಚಯಂತಿ**
**ತುಷ್ಯದ್ಧೃದಃ ಸ್ಮಿತ ಸುಧೋಕ್ಷಿತ ಪದ್ಮವಕ್ತ್ರಾಃ ।**

**ವಾಣ್ಯಾನುರಾಗಕಲಯಾಽಽತ್ಮಜವದ್ ಗೃಣಂತಃ**
**ಸಂಬೋಧಯಂತ್ಯಹಮಿವಾಹಮುಪಾಕೃತಸ್ತೈಃ ॥**

(ಭಾ.೩.೧೬.೧೧)

ನ ಕೇವಲಂ ಸೇವಾಕಾರಿತಯಾನ್ಯವತ್ಪ್ರೀತಿಪಾತ್ರತ್ವಂ ಕಿಂ ನಾಮ ವಿರುದ್ಧವ್ಯಾಪಾರಕರಣೇಽಪಿ ಭಗವತ್ಪ್ರೀತಿಪಾತ್ರತ್ವಮಿತ್ಯಾಹ । **ಯ ಇತಿ** ॥ ಯೇ ಧಿಯಾ ಬುದ್ಧಿಪೂರ್ವಕಮೇವ । ಆಕ್ಷಿಪತಃ ಸ್ವವಿರುದ್ಧವ್ಯಾಪಾರಂ ಸರ್ವಮಪಿ ಕುರ್ವತೋ ಬ್ರಾಹ್ಮಣಾನ್ । ಸ್ವಯಂ ತುಷ್ಟಮನಸ ಏವ ಭೂತ್ವಾ ತತ ಏವ ಸ್ಮಿತಲಕ್ಷಣಸುಧಯೋಕ್ಷಿತಂ ಆಸಿಕ್ತಂ ಪದ್ಮಸದೃಶಂ ವಕ್ತ್ರಂ ಯೇಷಾಂ ತೇ । ಸ್ನೇಹಕಲಾವತ್ಯಾ ವಾಣ್ಯಾ । ಮಯಿ ಧಿಯಾ ಮದ್ವಿಷಯಯಾ ಬುದ್ಧ್ಯಾ । ಮದಧಿಷ್ಠಾನತ್ವಬುದ್ಧ್ಯೇತಿ ಯಾವತ್ । ಮಾತರೋ ಧಿಯಾಕ್ಷಿಪತೋಽ-ಪ್ಯಾತ್ಮಜಾನ್ ಸ್ವಯಂ ತುಷ್ಯದ್ಧೃದಃ ಸ್ಮಿತಸುಧೋಕ್ಷಿತಪದ್ಮವಕ್ತ್ರಾಃ ಅನುರಾಗಕಲಯಾ ವಾಣ್ಯಾ ಮಮ ಪಿತಾ ತ್ವಂ, ಮಮ ಮಾತಾ ತ್ವಂ, ಅವಶ್ಯಮುತ್ತಿಷ್ಠ, ಭುಂಕ್ಷ್ವ, ತ ಇದಂ ದ್ರವ್ಯಂ ದಾಸ್ಯ ಇತ್ಯಾದಿರೂಪಯಾ ಗೃಣಂತಃ ಸಂಬೋಧಯಂತಿ ಯಥಾ ತಥಾ ಗೃಣಂತಃ ಸ್ತುವಂತಃ ಸಂಬೋಧಯಂತಿ ಸಮಾಹಿತಾನ್ ಕುರ್ವಂತಿ । ಅರ್ಚಯಂತಿ ಪೀಠಾದೌ ಸ್ಥಾಪಯಿತ್ವಾ ಪೂಜಯಂತಿ । ದೃಷ್ಟಾಂತಾಂತರಮಾಹ ॥ **ಅಹಮಿವೇತಿ** ॥ ಯಥಾಹಂ ಧಿಯಾ ಮಾಮಾಕ್ಷಿಪತೋಽಪಿ ಬ್ರಾಹ್ಮಣಾನ್ ಸಂತುಷ್ಟಮನಾ ವಿಕಸಿತವದನಃ ಅನುರಾಗಕಲೋಪೇತಯಾ ವಾಣ್ಯಾ ಸ್ತುವನ್ ಸಂಬೋಧಯಾಮಿ ಪೂಜಯಾಮಿ ಚ । ತಥೇತಿ । ಇದಂ ಚ ಭೃಗ್ವಾದಿಷು ಮುನಿಷ್ವನುಭವಸಿದ್ಧ-ಮಿತ್ಯಹಂ ವಿಷ್ಣುರಿವೇತ್ಯನೇನ ಸೂಚಯತಿ । ತೇ ಚ ವಿಷ್ಣುಮನೇನೈವ ಗುಣೇನ ಸರ್ವೋತ್ತಮಂ ನಿಶ್ಚಿತವಂತ ಇತಿ ಹಿ ಘಂಟಾಘೋಷಃ । ಏವಂ ತತ್ಕೃತಂ ವಿರುದ್ಧಮಪಿ ಕರ್ಮ ಅವಿಗಣಯ್ಯ ತತ್ಪೂಜನೇ ಕೃತೇ ಕಿಂ ಫಲಮಿತಿ ತತ್ರಾಹ ॥ **ತೈರಿತಿ** ॥ ತೈಃ ಏವಂವಿಧವೃತ್ತಿಭಿಃ ನರೈಃ ಅಹಮೇವೋಪಾಕೃತಃ ಪೂಜಿತೋ ವಶೀಕೃತಶ್ಚೇತಿ । ಯಥಾಹುಃ——

"ತದ್ವಃ ಪ್ರಸಾದಯಾಮ್ಯದ್ಯ ಬ್ರಹ್ಮ ದೈವಂ ಪರಂ ಹಿ ಮೇ ।
ತದ್ಧ್ಯೇವಾತ್ಮಕೃತಂ ಮನ್ಯೇ ಯತ್ಸ್ವಪುಂಭಿರಸತ್ಕೃತಂ ॥
ಯನ್ನಾಮಾನಿ ಚ ಗೃಹ್ಣಾತಿ ಲೋಕೋ ಭೃತ್ಯೇ ಕೃತಾಗಸಿ ।
ಸೋಽಸಾಧುವಾದಸ್ತತ್ಕೀರ್ತಿಂ ಹಂತಿ ತ್ವಚಮಿವಾಮಯಃ ॥ "

ಇದಂ ಚ ಭೃತ್ಯಾಪರಾಧ ಕ್ಷಮಾಪನವಚನಂ ಭಗವತಃ ।

ವಿಪ್ರಂ ಕೃತಾಗಸಮಪಿ ನೈವ ದ್ರುಹ್ಯತ ಮಾಮಕಾಃ ।
ಘ್ನಂತಂ ಬಹು ಶಪಂತಂ ವಾ ನಮಸ್ಕುರುತ ನಿತ್ಯಶಃ ॥

ಯಥಾಹಂ ಪ್ರಣಮೇ ವಿಪ್ರಾನ್ ಸರ್ವಕಾಲಂ ಸಮಾಹಿತಃ ।
ತಥಾ ನಮತ ಯೂಯಂ ಚ ಯೋಽನ್ಯಥಾ ಮೇ ಸ ದಂಡಭಾಕ್ ॥''
ಇತ್ಯನ್ಯಾನ್ ಪ್ರತಿ ಶಿಕ್ಷಾವಚನಂ ।
ಪುನಃ ಸ್ವಸತ್ರಮಾಸಾದ್ಯ ಮುನೀನಾಂ ಬ್ರಹ್ಮವಾದಿನಾಂ ।
ಸ್ವಾನುಭೂತಮಶೇಷೇಣ ರಾಜನ್ ಭೃಗುರವರ್ಣಯತ್ ॥

ತನ್ನಿಶಮ್ಯಾಥ ಮುನಯೋ ವಿಸ್ಮಿತಾ ಮುಕ್ತಸಂಶಯಾಃ ।
ಭೂಯಃ ಸಂಶ್ರದ್ದಧುರ್ವಿಷ್ಣುಂ ಯತಃ ಶಾಂತಿರ್ಯತೋಽಭಯಮಿತಿ ॥



ಜಯವಿಜಯರು ಸನಕಾದಿಮುನಿಗಳಲ್ಲಿ ಅಪಚಾರ ಮಾಡಿದಾಗ ಶ್ರೀಹರಿ ಮುನಿಗಳನ್ನು ಸಂತೈಸುತ್ತಾನೆ— ಬ್ರಾಹ್ಮಣರು ಕಟುವಾಗಿ ನುಡಿದರೂ ಬುದ್ಧಿಪೂರ್ವಕವಾಗಿ ಎಲ್ಲ ಬಗೆಯಿಂದ ವಿರೋಧವಾಗಿ ವರ್ತಿಸಿದರೂ ಅವರಲ್ಲಿ ಕೋಪ ಮಾಡದೆ ತುಷ್ಟಚಿತ್ತರಾಗಿ ಮಂದಹಾಸಾಮೃತ ರಸವನ್ನು ಸುರಿಸುವ ಮುಖಕಮಲದಿಂದ ಪ್ರೀತಿ ತುಂಬಿದ ಮಾತಿನಿಂದ ಮಾತನಾಡಿಸಬೇಕು. ಬುದ್ಧಿಪೂರ್ವಕವಾಗಿ ವಿರೋಧವಾಗಿ ವರ್ತಿಸುವ ಮಕ್ಕಳಮೇಲೆ ತಾಯಿ ಮುನಿಸಿಕೊಳ್ಳದೆ ತುಷ್ಟಚಿತ್ತಳಾಗಿ ಅಪ್ಪ, ಮಗು, ಎದ್ದೇಳು ತಿಂಡಿ ತಿನ್ನೆಂದು ಪ್ರೀತಿಯಿಂದ ಸಮಾಧಾನಪಡಿಸುವಂತೆ, ಬ್ರಾಹ್ಮಣರನ್ನು ಪರಮಾತ್ಮನ ವಿಶೇಷ ಸನ್ನಿಧಾನ ಉಳ್ಳವರೆಂಬ ಭಾವನೆಯಿಂದ ಆಸನದಲ್ಲಿ ಕೂಡಿಸಿ ಉಪಚಾರ ಮಾಡ ಬೇಕು. ನಾನು ಹಾಗೇ ವಿರೋಧವಾಗಿ ವರ್ತಿಸಿದ ಬ್ರಾಹ್ಮಣರ ವಿಷಯದಲ್ಲಿ ಕೋಪ ಮಾಡದೆ ತುಷ್ಟಚಿತ್ತದಿಂದ ಅರಳಿದ ಮೊಗದಿಂದ ಪ್ರೀತಿತುಂಬಿದ ಮಾತಿನಿಂದ ಅವರನ್ನು ಹೊಗಳುತ್ತ ಸಮಾಧಾನಪಡಿಸಿ ಸತ್ಕರಿಸುತ್ತೇನೆ.

ಇದಕ್ಕೆ ಉದಾಹರಣೆ ಭೃಗುಮುನಿ ನನ್ನ ಎದೆಗೆ ಒದ್ದರೂ ಕೋಪಿಸಿಕೊಳ್ಳದೆ ನಾನು 'ನನ್ನ ಕಠಿಣ ಹೃದಯದ ಮೇಲೆ ಒದ್ದಿದ್ದರಿಂದ ನಿಮ್ಮ ಕೋಮಲಪಾದಕ್ಕೆ ಎಷ್ಟು ನೋವಾಯಿತೋ' ಎನ್ನುತ್ತ ಅವರನ್ನು ಆಸನದಲ್ಲಿ ಕೂಡಿಸಿ ಸತ್ಕಾರ ಮಾಡಿದ್ದೇನೆ. ಹಾಗೆ ಇಂಥ ಗುಣವನ್ನು ನನ್ನಲ್ಲಿ ಪ್ರತ್ಯಕ್ಷ ಕಂಡು ಮುನಿ ನನ್ನನ್ನು

ಸರ್ವೋತ್ತಮನೆಂದು ನಿಶ್ಚಯಿಸಿ ಲೋಕಕ್ಕೆ ತಿಳಿಸಿದರು. ಹೀಗೇ ಜ್ಞಾನಿಗಳಾದ ಗುರುಗಳು ಏನೇ ವಿರೋಧಮಾಡಿದರೂ ಕೋಪಿಸಿಕೊಳ್ಳದೆ ಸಹಿಸಿಕೊಂಡು ಅವರಿಗೆ ಇನ್ನೂ ಹೆಚ್ಚಿನ ಆದರ ತೋರಬೇಕು. ಅವರು ಭಗವಂತನಲ್ಲಿ ವಿರೋಧಮಾಡಿದರೂ ಅವನಿಗೆ ಪ್ರಿಯರೇ ಆಗಿರುತ್ತಾರೆ. ಅವರ ವಿರುದ್ಧ ವರ್ತನೆಗಳನ್ನು ಲೆಕ್ಕಿಸದೆ ಸತ್ಕಾರವನ್ನೇ ಮಾಡಿದರೆ ಭಗವಂತನಿಗೆ ಅದು ಸತ್ಕಾರವಾಗುವುದು. ಅದರಿಂದ ಭಗವಂತ ಬಲು ತುಷ್ಟನಾಗಿ ಭಕ್ತನಿಗೆ ಅಧೀನ ನಾಗುವನು. ಇದು ಈ ಭಾಗವತವಚನಗಳಿಂದಲೂ ಸ್ಪಷ್ಟವಾಗುತ್ತದೆ—

ತದ್ವಃ ಪ್ರಸಾದಯಾಮ್ಯದ್ಯ ಬ್ರಹ್ಮ ದೈವಂ ಪರಂ ಹಿ ಮೇ ।
ತದ್ಧ್ಯೇವಾತ್ಮಕೃತಂ ಮನ್ಯೇ ಯತ್ ಸ್ವಪುಂಭಿರಸತ್ಕೃತಾಃ ॥

(ಭಾ.೩.೧೬.೪)

ಬ್ರಾಹ್ಮಣರು ನನಗೆ ಪರದೈವ ಅತ್ಯಂತ ಪ್ರೀತಿಪಾತ್ರರು. ಅದರಿಂದ ನಾನು ನಿಮ್ಮಲ್ಲಿ ಕ್ಷಮೆ ಬೇಡುತ್ತೇನೆ. ನನ್ನ ಸೇವಕರಿಂದ ನಿಮಗೆ ಅಪಚಾರವಾಗಿದೆ ಎಂದಮೇಲೆ ಅದು ನಾನೇ ಮಾಡಿದ ಅಪಚಾರವಾಯಿತೆಂದು ಭಾವಿಸುತ್ತೇನೆ.

ಯನ್ನಾಮಾನಿ ಚ ಗೃಹ್ಣಾತಿ ಲೋಕೋ ಭೃತ್ಯೇ ಕೃತಾಗಸಿ ।
ಸೋऽಸಾಧುವಾದ ಸ್ತತ್ಕೀರ್ತಿಂ ಹಂತಿ ತ್ವಚಮಿವಾಮಯಃ ॥

(ಭಾ.೩.೧೬.೫)

ಲೋಕದಲ್ಲಿ ಸೇವಕನು ಅಪರಾಧ ಮಾಡಿದಾಗ ಅದಕ್ಕೆ ಯಜಮಾನನ ಹೆಸರನ್ನೇ ಎತ್ತಿ ಹೇಳುತ್ತಾರೆ. ಈ ನಿಂದೆ ಯಜಮಾನನ ಕೀರ್ತಿಯನ್ನು ಹಾಳು ಮಾಡುತ್ತದೆ. ಚರ್ಮರೋಗ ಚರ್ಮವನ್ನು ನಾಶ ಮಾಡುವಂತೆ.

ವಿಪ್ರಂ ಕೃತಾಗಸಮಪಿ ನೈವ ದ್ರುಹ್ಯತ ಮಾಮಕಾಃ ।
ಘ್ನಂತಂ ಬಹು ಶಪಂತಂ ವಾ ನಮಸ್ಕುರುತ ನಿತ್ಯಶಃ ॥

ಯಥಾಹಂ ಪ್ರಣಮೇ ವಿಪ್ರಾನ್ ಸರ್ವಕಾಲಂ ಸಮಾಹಿತಃ ।
ತಥಾ ನಮತ ಯೂಯಂ ಚ ಯೋऽನ್ಯಥಾ ಮೇ ಸ ದಂಡಭಾಕ್ ॥

'ಮಕ್ಕಳೆ, ಬಹುವೇಳೆ ಬ್ರಾಹ್ಮಣನು ನಿಮ್ಮಲ್ಲಿ ಅಪರಾಧ ಮಾಡಿದರೂ ಅವನಿಗೆ ನೀವು ಪ್ರತಿಯಾಗಿ ಶಿಕ್ಷೆಮಾಡಬೇಡಿ, ಅವರು ನಿಮಗೆ ಹೊಡೆಯಲಿ ಅಥವಾ ಬೈಯಲಿ, ಬ್ರಾಹ್ಮಣರಿಗೆ ನಮಸ್ಕಾರವನ್ನೇ ಮಾಡಿ. ಇದಕ್ಕೆ

ಉದಾಹರಣೆ— ವಿಶ್ವಾಮಿತ್ರರು ವಸಿಷ್ಠರ ಆಶ್ರಮವನ್ನು ಸುಟ್ಟರು. ಸಾವಿರ ಶಿಷ್ಯರನ್ನು ಕೊಲ್ಲಿಸಿದರು. ನೂರು ಗಂಡುಮಕ್ಕಳನ್ನು ರಾಕ್ಷಸನಿಗೆ ಆಹಾರವಾಗಿತ್ತರು! ಅವರನ್ನೂ ಕೊಲ್ಲಲು ಯತ್ನಿಸಿದರು. ಸಾಯಲೆಂದು ವೇದಮಂತ್ರಗಳಿಂದಲೆ ಶಪಿಸಿದರು. ವಸಿಷ್ಠವಿದ್ವೇಷಿಣೀ ಮಂತ್ರಗಳೆಂದೆ ಆ ಮಂತ್ರಗಳು ಪ್ರಸಿದ್ಧವಾಗಿವೆ. ಆದರೆ ವಸಿಷ್ಠರು ವಿಶ್ವಾಮಿತ್ರರನ್ನು 'ನೀನು ಬ್ರಹ್ಮರ್ಷಿ' ಎಂದು ಹೃತ್ಪೂರ್ವಕ ಅಭಿನಂದಿಸಿದರು!

'ನಾನು ಹೇಗೆ ಯಾವಾಗಲೂ ಶ್ರದ್ಧೆಯಿಂದ ವಿಪ್ರರಿಗೆ ತಲೆಬಾಗುವೆನೊ ಹಾಗೇ ನೀವೂ ಕೂಡ ನಮಿಸಿ, ಸತ್ಕಾರಮಾಡಿ. ಇಲ್ಲದಿದ್ದರೆ ನಾನು ನಿಮಗೆ ಶಿಕ್ಷೆ ನೀಡುವೆನು.' —ಇದು ಶ್ರೀಕೃಷ್ಣ ಕ್ಷತ್ರಿಯರೆಲ್ಲರಿಗೂ ನೀಡಿದ ಉಪದೇಶ. (ಭಾ.೧೦.೮೯.೫೪,೫೪)

ಪುನಃ ಸ್ವಸತ್ರಮಾಸಾದ್ಯ ಮುನೀನಾಂ ಬ್ರಹ್ಮವಾದಿನಾಂ
ಸ್ವಾನುಭೂತಮಶೇಷೇಣ ರಾಜನ್ ಭೃಗುರವರ್ಣಯತ್ ।
ತನ್ನಿಶಮ್ಯಾಥ ಮುನಯೋ ವಿಸ್ಮಿತಾಃ ಮುಕ್ತಸಂಶಯಾಃ
ಭೂಯಾಂಸಂ ಶ್ರದ್ಧಧುರ್ವಿಷ್ಣುಂ ಯತಃ ಶಾಂತಿರ್ಯತೋಽಭಯಂ ॥
(ಭಾ.೧೦.೮೯.೧೫,೧೬)

'ರಾಜನೆ, ಭೃಗುಮುನಿ ಪುನಃ ತಮ್ಮ ಸತ್ರಕ್ಕೆ ಬಂದು ಬ್ರಹ್ಮಜ್ಞಾನಿಗಳಾದ ಮುನಿಗಳ ಮುಂದೆ ತಾನು ಅನುಭವದಿಂದ ಕಂಡಿದ್ದೆಲ್ಲವನ್ನೂ ವರ್ಣಿಸಿ ಹೇಳಿದರು.

'ಮುನಿಗಳು ಅದನ್ನು ಕೇಳಿ ಸಂಶಯವನ್ನು ದೂರಮಾಡಿಕೊಂಡರು. ವಿಸ್ಮಯಗೊಂಡರು. ಶಾಂತಿ ಅಭಯಗಳನ್ನು ನೀಡುವ ವಿಷ್ಣುವನ್ನೇ ಇನ್ನೂ ಹೆಚ್ಚು ಸರ್ವೋತ್ತಮನೆಂದು ನಂಬಿದರು'. (ಭಾ.೧೦.೮೯.೧೫,೧೬)



—೧೨೦—

**ತನ್ನೆದೆಗೆ ಒದ್ದ ಭೃಗುಮುನಿಯ ಪಾದಗಳನ್ನು ಹರಿ ತೊಳೆದ**

**ತಸ್ಯಾವನಿಜ್ಯ ಚರಣೌ ತದಪಃ ಸ್ವಮೂರ್ಧ್ನಿ**
**ಬಿಭ್ರಜ್ಜಗದ್ಗುರುತಮೋಽಪಿ ಸತಾಂ ಪತಿರ್ಹಿ ।**

**ಬ್ರಹ್ಮಣ್ಯದೇವ ಇತಿ ಯದ್‌ಗುಣನಾಮ ಯುಕ್ತಂ**
**ತಸ್ಯೈವ ಯಚ್ಚರಣಶೌಚಮಶೇಷ ತೀರ್ಥಂ ||** (ಭಾ.೧೦.೬೯.೧೮)

**ಇಯತಾ ಪ್ರಬಂಧೇನ ಬ್ರಾಹ್ಮಣಾನಾಂ ಭಗವತಾಪಿ ಮಾನ್ಯತಾಭಿಹಿತಾ । ಸಾ ನ ತತೋಽಪ್ಯುತ್ತಮತಯಾ । ಕಿಂತು ಗುರುಣಾ ಶ್ಲಾಘಿತಾಃ ಶಿಷ್ಯಾಃ ಲೋಕೇ ಖ್ಯಾತಿಂ ಲಭಂತೇ ಇತಿ ಭಾವೇನೈವ । ಕಿಂಚ ಜಗದ್ಗುರೂಣಾಮಪಿ ಗುರುಣಾ ಸ್ವಚರಣ ತೀರ್ಥ ಸ್ಪರ್ಶಮಾತ್ರೇಣಾಶೇಷ ಲೋಕ ಪಾವನೇನ ಭಗವತಾ ಕ್ರಿಯಮಾಣಂ ಬ್ರಾಹ್ಮಣನಮನಪಾದೋದಕಧಾರಣಾದಿಕಂ ತಸ್ಯ "ಬ್ರಹ್ಮಣ್ಯೋ ವಿಷ್ಣುರ್ದೇವೇಷ್ವಿ"ತಿ ಗುಣಸೂಚನೇನ ಸರ್ವದೇವೋತ್ತಮತ್ವಮೇವ ವ್ಯನಕ್ತೀತಿ ಭಾವೇನ ಶ್ರೀಕೃಷ್ಣಕೃತಂ ಬ್ರಾಹ್ಮಣಚರಣಾವನೇಜನೋದಕಧಾರಣಂ ದರ್ಶಯತಿ ॥ ತಸ್ಯೇತಿ ॥ ಯಸ್ಯ ಚರಣಯೋಃ ಪ್ರಕ್ಷಾಲನೋದಕಂ ಅಶೇಷಾಣಾಮಪಿ ಜನಾನಾಂ ಪಾವಿತ್ರ್ಯಪ್ರದಂ ಸ ತಾದೃಶೋಽಪಿ ಜಗದ್ಗುರುತಮೋಽಪಿ ಸತಾಂ ಪ್ರತಿಷ್ಠಾದಿದಾನೇನ ಪಾಲಕತ್ವಾದೇವ ತಸ್ಯ ಏಕೇನ ಕೃಷ್ಣೇನ ಕ್ರಿಯಮಾಣಂ ಷೋಡಶಸಹಸ್ರಸ್ತ್ರೀಣಾಂ ಭೋಗೇನ ತರ್ಪಣಂ ದ್ರಷ್ಟುಮಾಗತಸ್ಯ ನಾರದಸ್ಯ ಚರಣಾವವನಿಜ್ಯ ತದಪಃ ಪ್ರಕ್ಷಾಲನೋದಕಂ ಸ್ವಸ್ಯ ಮೂರ್ಧ್ನಿ ಬಿಭ್ರತ್ ಅಬಿಭ್ರತ್ ಬಭಾರ । ಯತ್ ಯತೋಽತೋ ಬ್ರಹ್ಮಣ್ಯದೇವ ಇತಿ ದೇವಾನಾಂ ಬ್ರಹ್ಮಾದೀನಾಂ ಮಧ್ಯೇ "ಅಯಂ ಬ್ರಹ್ಮಣ್ಯ" ಇತಿ "ಬ್ರಹ್ಮವತ್ಸಲ" ಇತಿ ಗುಣಪ್ರವೃತ್ತಿನಿಮಿತ್ತಂ ನಾಮ ತಸ್ಯೈವ ಯುಕ್ತಂ। ಹೀತ್ಯನೇನ ಪ್ರಸಿದ್ಧಮಿದಮಿತಿ ಸೂಚಯತಿ। ಅತ ಏವ "ಬ್ರಹ್ಮಣ್ಯೋ ಬ್ರಾಹ್ಮಣಪ್ರಿಯ" ಇತಿ ತನ್ನಾಮಸು ಪಾಠ ಇತಿ । ಯಥಾಹುಃ—**

**"ಯಸ್ಮಾದ್ಬ್ರಹ್ಮಕುಲಂ ಬ್ರಹ್ಮನ್ ಶಾಸ್ತ್ರಯೋನೇಸ್ತವಾತ್ಮನಃ ।**
**ಸಭಾಜಯತಿ ಸದ್ಧಾಮ ತದ್ಬ್ರಹ್ಮಣ್ಯಗುಣೋ ಭವಾನಿ"ತಿ ।**
**"ದೃಷ್ಟ್ವಾ ಬ್ರಹ್ಮಣ್ಯದೇವಸ್ತಮವರುಹ್ಯ ನಿಜಾಸನೇ ।**
**ಉಪವೇಶ್ಯಾರ್ಹಯಾಂಚಕ್ರೇ ಯಥಾತ್ಮಾನಂ ದಿವೌಕಸ" ಇತಿ ॥**



ಶ್ರೀಕೃಷ್ಣನ ಗೃಹಸ್ಥಧರ್ಮಾಚರಣವನ್ನು ನೋಡಲು ಬಂದ ನಾರದರನ್ನು ಶ್ರೀಕೃಷ್ಣ ಸತ್ಕರಿಸಿದ. ಜಗದ್ಗುರುವಾದ ಶ್ರೀಕೃಷ್ಣ ಮುನಿಯ ಪಾದಗಳನ್ನು ತೊಳೆದು ನೀರನ್ನು ಶಿರದಮೇಲೆ ಧರಿಸಿದ. ವಸ್ತುತಃ ಅವನ ಕಾಲುತೊಳೆದ ಗಂಗಾ ಜಲವೇ ಸಮಸ್ತ ಪ್ರಪಂಚವನ್ನು ಪವಿತ್ರಗೊಳಿಸುತ್ತಿದೆ. ಅದರಿಂದ ಬ್ರಾಹ್ಮಣರನ್ನು

**ದೇವರಂತೆ ಕಾಣುವ ಶ್ರೀಕೃಷ್ಣನಿಗೆ 'ಬ್ರಹ್ಮಣ್ಯದೇವ' ಎಂಬ ಹೆಸರು ಅನ್ವರ್ಥವಾಗಿ ಒಪ್ಪುತ್ತದೆ.**

ಇಷ್ಟರಿಂದ ಬ್ರಾಹ್ಮಣನು ವಿಷ್ಣುವಿಗಿಂತ ಉತ್ತಮನೆಂದು ತಿಳಿಯಬಾರದು. ಗುರು ಶಿಷ್ಯನನ್ನು ನೀನೇ ಹೆಚ್ಚು ಬುದ್ಧಿವಂತನೆಂದು ಪ್ರಶಂಸೆ ಮಾಡಿದರೆ ಗುರುವನ್ನು ಶಿಷ್ಯ ಮೀರಿಸಿದ್ದಾನೆ ಎಂದರ್ಥವಲ್ಲ. ಗುರುವಿನಿಂದಲೂ ಹೊಗಳಿಸಿ ಕೊಂಡರೆ ಶಿಷ್ಯನಿಗೆ ಕೀರ್ತಿ ಹೆಚ್ಚುತ್ತದೆ. ಹಾಗೇ ಭಗವಂತನಿಂದ ಹೊಗಳಿಸಿ ಕೊಳ್ಳುವ ಭಕ್ತನಿಗೆ ಕೀರ್ತಿ ಹೆಚ್ಚುತ್ತದೆ. ಇಲ್ಲದಿದ್ದರೆ, ಜಗದ್ಗುರುಗಳಾದ ಬ್ರಹ್ಮರುದ್ರೇಂದ್ರಾದಿಗಳಿಗೂ ಗುರು ವಿಷ್ಣು, ತನ್ನ ಕಾಲು ತೊಳೆದ ಗಂಗೆಯನ್ನು ಸ್ಪರ್ಶಿಸಿದರೆ ಸಾಕು ಎಲ್ಲರನ್ನೂ ಪವಿತ್ರಗೊಳಿಸುವವನು ವಿಷ್ಣು. ಅಂಥ ವಿಷ್ಣು ಬ್ರಾಹ್ಮಣರಿಗೆ ವಂದಿಸಿ ಅವರ ಕಾಲು ತೊಳೆದ ನೀರನ್ನು ಶಿರದಲ್ಲಿ ಧರಿಸಿದರೆ ವಿಷ್ಣು ಸಣ್ಣವನಾಗುವನೆ? ದೇವತೆಗಳಲ್ಲೆಲ್ಲ ಬ್ರಾಹ್ಮಣವತ್ಸಲನು ವಿಷ್ಣು ಎಂಬ ಸ್ತುತಿಗೇ ಪಾತ್ರನಾಗಿ ದೊಡ್ಡವನೇ ಆಗುತ್ತಾನೆ. ಸರ್ವೋತ್ತಮನೆನಿಸುತ್ತಾನೆ. ಅದರಿಂದಲೇ 'ಬ್ರಹ್ಮಣ್ಯೋ ಬ್ರಾಹ್ಮಣಪ್ರಿಯಃ' ಎಂದು ವಿಷ್ಣುಸಹಸ್ರನಾಮ ಗಳಲ್ಲಿ ಅವನ ನಾಮಗಳಿವೆ.

ಯಸ್ಮಾದ್ ಬ್ರಹ್ಮಕುಲಂ ಬ್ರಹ್ಮನ್ ಶಾಸ್ತ್ರಯೋನೇಸ್ತವಾತ್ಮನಃ ।
ಸಭಾಜಯತಿ ಸದ್ಧಾಮ ತದ್ ಬ್ರಹ್ಮಣ್ಯಗುಣೋ ಭವಾನ್ ॥
ದೃಷ್ಟ್ವಾ ಬ್ರಹ್ಮಣ್ಯದೇವಸ್ತಂ ಅವರುಹ್ಯ ನಿಜಾಸನೇ ।
ಉಪವೇಶ್ಯಾರ್ಹಯಾಂಚಕ್ರೇ ಯಥಾತ್ಮಾನಂ ದಿವೌಕಸಃ ।

(ಭಾ.೧೦.೫೭.೨೬)

'ಹೇ ಗುಣಪೂರ್ಣ ನಾರಾಯಣನೆ, ನಿನ್ನನ್ನು ಶಾಸ್ತ್ರದಿಂದಲೇ ತಿಳಿಯ ಬೇಕು. ನೀನೆ ಅಂತರ್ಯಾಮಿ ಸರ್ವೇಶ್ವರ ನಿನ್ನ ಮಹಾ ಮಹಿಮೆಯನ್ನು ಸದಾ ಹೊಗಳಿ ಬ್ರಾಹ್ಮಣರು ಆನಂದಿಸುವುದರಿಂದ ನೀನು ಬ್ರಹ್ಮಣ್ಯದೇವನೆನಿಸಿರುವೆ. ಬ್ರಾಹ್ಮಣರಿಗೆ ಪ್ರಿಯನೆನಿಸಿರುವೆ.

'ಬ್ರಹ್ಮಣ್ಯದೇವನಾದ ಶ್ರೀಕೃಷ್ಣನು ಕುಚೇಲನನ್ನು ಕಂಡು ಆಸನದಿಂದ ಕೆಳಗಿಳಿದುಬಂದು ಅವನನ್ನು ಆಸನದಲ್ಲಿ ಕೂಡಿಸಿ ತನ್ನನ್ನು ದೇವತೆಗಳು ಹೇಗೆ ಪೂಜಿಸುವರೋ ಹಾಗೆ ಅವನನ್ನು ಸತ್ಕರಿಸಿದನು.'

ಹೀಗೆ ಬ್ರಾಹ್ಮಣ ವಾತ್ಸಲ್ಯರೂಪ ಮಹಾಗುಣವನ್ನು ಶ್ರೀಕೃಷ್ಣ ತೋರಿಸಿ ಅವನೆ ಸರ್ವೋತ್ತಮ ಎಂಬುದನ್ನು ಸ್ಪಷ್ಟವಾಗಿ ತಿಳಿಸಿದ್ದಾನೆ.



—೧೨೧—

## ಬಹುಪಾಪ ಮಾಡಿದವರೂ ಹರಿಭಕ್ತರ ಸೇವೆಗೈದರೆ ಪುನೀತರಾಗುವರು

**ಕಿರಾತಹೂಣಾಂಧ್ರಪುಲಿಂದಪುಲ್ಕಸಾ**
**ಆಭೀರಕಂಕಾ ಯವನಾಃ ಶಕಾದಯಃ ।**
**ಯೇಽನ್ಯೇ ಚ ಪಾಪಾ ಯದಪಾಶ್ರಯಾಶ್ರಯಾತ್**
**ಶುಧ್ಯಂತಿ ತಸ್ಮೈ ಪ್ರಭವಿಷ್ಣವೇ ನಮಃ ॥**

(ಭಾ.೨.೪.೧೮)

ಯದಾ ಖಲು ಯದ್ದಾಸಾನಾಂ ಭಾಗವತಾನಾಂ ಪಾದೋದಕ ಧಾರಣಾದಿನಾ ಮಹಾಪಾತಕಿನಾಮಪಿ ಶುದ್ಧಿಸ್ತದಾ ತಸ್ಯ ಸ್ವಪಾವಿತ್ರ್ಯಾಯ ಬ್ರಾಹ್ಮಣಪಾದೋದಕಧಾರಣಮಿತ್ಯೇತದಪಹಸನೀಯ ಪ್ರಕ್ರಿಯಮಿತಿ ಕಿಂ ವಾಚ್ಯಮಿತ್ಯಾಶಯೇನಾಹ ॥ **ಕಿರಾತೇತಿ** ॥ ಯೇ ಕಿರಾತಾದಯೋ ಹೀನಕುಲಜಾ ಯೇ ಚೋತ್ತಮಕುಲಜಾ ಅಪೀದಾನೀಮೇವ ಪಾಪಕರ್ಮಾಣಸ್ತೇ ಸರ್ವೇಽಪಿ । ಯೋ ಹರಿರಾಶ್ರಯೋ ಯೇಷಾಂ ತೇ ಯದಪಾಶ್ರಯಾ ಭಾಗವತಾಃ ತೇಷಾಮಾಶ್ರಯಾತ್ಸೇವಾಲಕ್ಷಣಾಚ್ಛುಧ್ಯಂತಿ ಗತಪಾಪಾ ಭವಂತಿ । ತಸ್ಮೈ ಪವಿತ್ರಾಣಾಂ ಪವಿತ್ರಾಯ ನೂತನಭಕ್ತಸಂಗ್ರಹೀತ್ರೇ ನಮಃ ॥ ಯಥಾಹುಃ—

"ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।
ತೇ ಪುನಂತ್ಯುರುಕಾಲೇನ ಯೂಯಂ ದರ್ಶನಮಾತ್ರತಃ ॥
ಬ್ರಾಹ್ಮಣೇಭ್ಯೋ ನಮಸ್ಯಾಮೋ ಯೇಽಸ್ಮದ್ರೂಪಂ ತ್ರಯೀಮಯಂ ।
ಬಿಭ್ರತ್ಯಾತ್ಮಸಮಾಧಾನಂ ತಪಸ್ಸ್ವಾಧ್ಯಾಯಸಂಯಮೈಃ ।
ಶ್ರವಣಾದ್ ದರ್ಶನಾ ದ್ವಾಪಿ ಮಹಾಪಾತಕಿನೋಽಪಿ ಚ ।
ಶುದ್ಧ್ಯೇರನ್ನಂತ್ಯಜಾಶ್ಚಾಪಿ ಕಿಮು ಸಂಭಾಷಣಾದಿಭಿ"ರಿತಿ ।
ತದನೇನ ಸಮದೃಕ್ಸೇವಾಖ್ಯೋ ಭಾಗವತೋ ಧರ್ಮಃ
ಪ್ರತಿಪಾದಿತೋ ಭವತಿ ॥



**ಕಿರಾತ ಹೂಣ ಆಂಧ್ರ ಪುಲಿಂದ ಪುಲ್ಕಸ ಆಭೀರ ಕಂಕ ಯವನ ಶಕ ಮುಂತಾದ ಪಾಪಯೋನಿಜಾತರೂ ಉತ್ತಮಕುಲದವರಾಗಿದ್ದೂ ಪಾಪಕರ್ಮ ಮಾಡುವವರೂ ನಿನ್ನ ಭಕ್ತರನ್ನು ಸೇವಿಸಿದ ಮಾತ್ರಕ್ಕೇ ಪುನೀತರಾಗುತ್ತಾರೆ. ಅಂಥ ಮಹಾಮಹಿಮನಿಗೆ ನನ್ನ ನಮನ.**

ಹೀಗೆ ಹರಿಯ ಪಾದಸೇವೆ ಮಾಡುವ ಭಕ್ತರ ಪಾದೋದಕವೇ ಪವಿತ್ರವೆಂದಬಳಿಕ ಹರಿಯು ತನ್ನ ಪಾವಿತ್ರ್ಯಕ್ಕಾಗಿ ಬ್ರಾಹ್ಮಣ ಪಾದೋದಕವನ್ನು ಶಿರದಲ್ಲಿ ಧಾರಣ ಮಾಡಬೇಕಾಗುತ್ತದೆ ಎನ್ನುವುದು ಎಷ್ಟು ಹಾಸ್ಯಾಸ್ಪದ ವಾಗುತ್ತದೆ! ಅದರಿಂದ ಹರಿಯು ಬ್ರಾಹ್ಮಣ ಪ್ರಿಯನಾದ್ದರಿಂದ ಆ ಗುಣವನ್ನು ಲೋಕಕ್ಕೆ ತಿಳಿಸುವುದಕ್ಕಾಗಿ ಬ್ರಾಹ್ಮಣಪಾದೋದಕ ಧಾರಣ ಮಾಡುತ್ತಾನೆ ಎಂದೇ ಹೇಳಬೇಕು.

ಇದನ್ನು ಭಾಗವತವೇ ಹೇಳುತ್ತದೆ (೧೨.೯.೨೩,೨೪,೨೫)

ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।
ತೇ ಪುನಂತ್ಯುರು ಕಾಲೇನ ಯೂಯಂ ದರ್ಶನ ಮಾತ್ರತಃ ॥
ಬ್ರಾಹ್ಮಣೇಭ್ಯೋ ನಮಸ್ಯಾಮೋ ಯೇಽಸ್ಮದ್ರೂಪಂ ತ್ರಯೀಮಯಂ ।
ಭಿಭ್ರತ್ಯಾತ್ಮ ಸಮಾಧಾನಂ ತಪಃಸ್ವಾಧ್ಯಾಯಸಂಯಮೈಃ ।
ಶ್ರವಣಾದ್ ದರ್ಶನಾದ್ವಾಪಿ ಮಹಾಪಾತಕಿನೋಽಪಿ ಚ ।
ಶುಧ್ಯೇರನ್ನಂತ್ಯಜಾಶ್ಚಾಪಿ ಕಿಮು ಸಂಭಾಷಣಾದಿಭಿಃ ॥

ತೀರ್ಥಗಳೆಂದರೆ ಬರಿ ನೀರಲ್ಲ. ದೇವತೆಗಳೆಂದರೆ ಬರಿ ಕಲ್ಲುಮಣ್ಣು ಪ್ರತಿಮೆಗಳಲ್ಲ. ನೀರಲ್ಲಿ ಗಂಗಾ ವರುಣರನ್ನೂ ಕ್ಷೇತ್ರಗಳಲ್ಲಿ ಕಾಶಿಯಲ್ಲಿ ಅನ್ನಪೂರ್ಣಾ ವಿಶ್ವನಾಥರನ್ನು, ಘಟಿಕಾಚಲದಲ್ಲಿ ಭಾರತೀಮುಖ್ಯಪ್ರಾಣನನ್ನು, ತಿರುಪತಿಯಲ್ಲಿ ಲಕ್ಷ್ಮೀ ವೇಂಕಟೇಶರನ್ನು ಚಿಂತಿಸಿ ಸ್ನಾನ ಪೂಜಾದಿಕರ್ಮ ಮಾಡಿದರೇ ನೀರು ತೀರ್ಥವೆನಿಸುವುದು. ಕ್ಷೇತ್ರದ ಪ್ರತಿಮೆಗಳು ದೇವತೆಗಳೆನಿಸು ವುವು. ಆದರೂ ಬಹುಕಾಲ ತೀರ್ಥಕ್ಷೇತ್ರಗಳಲ್ಲಿ ಸ್ನಾನಪೂಜಾದಿಗಳನ್ನು ಮಾಡಿದರೇ ಅವು ಮಾನವನನ್ನು ಪರಿಶುದ್ಧನನ್ನಾಗಿಸುವುವು. ಏಕೆಂದರೆ ಅವು ಜ್ಞಾನಿಗಳಾದ ಗುರುಗಳ ಸಮಾಗಮ ಉಂಟುಮಾಡುವ ಮೂಲಕವೇ ಜ್ಞಾನ ನೀಡಿ ಮಾನವ ನನ್ನು ಉದ್ಧರಿಸುವವು. ಆದರಿಂದ ವಿಲಂಬವಾಗುವುದು ಸಹಜ.

ಮಹಾತ್ಮರಾದ ಬ್ರಾಹ್ಮಣರು ನೀವು ವಿಲಂಬ ಮಾಡುವುದಿಲ್ಲ. ದರ್ಶನ ಮಾಡಿದೊಡನೆ ಒಂದಾದರೂ ಉಪದೇಶದ ಮಾತನ್ನಾಡಿ ಆ ಮೂಲಕ ಜ್ಞಾನನೀಡಿ ಉದ್ಧಾರ ಮಾಡುವಿರಿ.

ಬ್ರಾಹ್ಮಣರಿಗೆ ನಮಸ್ಕಾರ. ಈ ಬ್ರಾಹ್ಮಣರು ವೇದವೇದ್ಯವಾದ ಜೀವಾಂತರ್ಗತ ಹರಿರೂಪವನ್ನು ಹೃದಯದಲ್ಲಿ ಧರಿಸಿ ಮನಸ್ಸಿನಲ್ಲಿರುವ ವಿಷಯ ಕಾತರತೆಯನ್ನು ದೂರಮಾಡಿಕೊಂಡು ಸಮಾಧಾನ ಹೊಂದುವರು. ತಪಸ್ಸು ವೇದಾಧ್ಯಯನ ಇಂದ್ರಿಯನಿಗ್ರಹಗಳೇ ಇದಕ್ಕೆ ಸಾಧನ ಗಳಾಗಿವೆ.

ಅಂಥ ಮಹಾನುಭಾವರ ದರ್ಶನ ಶ್ರವಣಾದಿಗಳನ್ನು ಮಾಡಿದರೆ ಮಹಾ ಪಾಪಿಗಳಾದ ಚಂಡಾಲಾದಿಗಳೂ ಕೂಡ ಮನಃಶುದ್ಧಿ ಪಡೆಯುವರು ಎಂದಮೇಲೆ ಅವರೊಡನೆ ಸಂಭಾಷಣ ಮಾಡಿದರೆ ಪಾವನರಾಗುವರೆಂದು ಬೇರೇನು ಹೇಳಬೇಕು?

ಎಂದು ಮಾರ್ಕಂಡೇಯರಿಗೆ ಶಿವನು ಹೇಳುತ್ತಾನೆ. ಇದು 'ಸಮದೃಕ್ ಸೇವೆ' ಎಂಬ ಭಾಗವತಧರ್ಮಾನುಷ್ಠಾನವೆಂದು ತಿಳಿಯಬೇಕು.

'ಸಮದೃಕ್‌ಸೇವಾ' ಅಂದರೆ ಎಲ್ಲೆಡೆ ಹರಿ ಸರ್ವಗುಣಪೂರ್ಣ ದೋಷದೂರನೆಂದು ಸಮವಾಗಿ ಕಾಣುವ ಜ್ಞಾನಿಗಳ ಸೇವೆ. ಸಪ್ತಮಸ್ಕಂಧದಲ್ಲಿ ನಾರದರು ಧರ್ಮರಾಜನಿಗೆ ವರ್ಣಾಶ್ರಮಧರ್ಮವನ್ನು ಹೇಳುವಾಗ 'ಸ್ವಾಧ್ಯಾಯಃ ಸಮದೃಕ್‌ಸೇವಾ' (ಭಾ.೭.೧೨.೯) ಎಂದು ಹೇಳಿದ ಭಾಗವತ ಧರ್ಮವಿದು.



# (೮) ಮಹನ್ನಿಂದಾವರ್ಜನ

## ಪ್ರಕರಣ ಸಾರಾಂಶ

ಗುರುನಿಂದೆ ಮಾಡಬಾರದು ಮಾಡುವುದನ್ನು ಕೇಳಲೂಬಾರದು. ದಕ್ಷಪ್ರಜಾಪತಿ ಸ್ವತಃ ತನಗೆ ಜನ್ಮ ಕೊಟ್ಟ ತಂದೆಯೆ, ಒಬ್ಬ ದೇವೋತ್ತಮನೇ ಆದರೂ ಅವನು ಶಿವನನ್ನು ನಿಂದಿಸುವುದನ್ನು ಕೇಳಿ ಸತೀದೇವಿ ತನ್ನ ಶರೀರವನ್ನೇ ತ್ಯಾಗ ಮಾಡಿದಳು.

ರಹೂಗಣ ರಾಜ ಜಡಭರತನನ್ನು ತಿಳಿಯದೆ ನಿಂದಿಸಿ ಬಳಿಕ ಇದು ಕ್ಷತ್ರಿಯಜಾತಿಗೇ ಅನರ್ಥ ಉಂಟುಮಾಡುವುದೆಂದು ಭಯದಿಂದ ಎಲ್ಲ ಕ್ಷತ್ರಿಯರ ಪರವಾಗಿ ಎಲ್ಲ ಬ್ರಾಹ್ಮಣರಿಗೂ 'ನಮೋ ಮಹದ್ಭ್ಯಃ' ಎಂದು ಮತ್ತೆ ಮತ್ತೆ ನಮಸ್ಕಾರ ಮಾಡುತ್ತಾನೆ. ಅವಧೂತರು ಜ್ಞಾನದಲ್ಲಿ ವಯಸಿನಲ್ಲಿ ಹಿರಿಯರು ಕಿರಿಯರು ಯುವಕರು ಬಾಲಕರೆಂದು ನಾನಾ ಬಗೆಯವರಿರ ಬಹುದು. ಎಲ್ಲರೂ ಪೂಜ್ಯರೆ ಎನ್ನುತ್ತಾನೆ.

ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ
ನಮೋ ಯುವಭ್ಯೋ ನಮ ಆಶಿನೇಭ್ಯಃ ॥

ಎನ್ನುವ ವೇದಮಂತ್ರದ ಭಾವವನ್ನೇ

ನಮೋ ಮಹದ್ಭ್ಯೋಽಸ್ತು ನಮಃಶಿಶುಭ್ಯೋ
ನಮೋ ಯುವಭ್ಯೋ ನಮ ಆ ವಟುಭ್ಯಃ ॥

ಎಂದು ಅನುವಾದ ಮಾಡುತ್ತ ರಹೂಗಣ ರಾಜ ಎಲ್ಲ ಮಹಾತ್ಮರನ್ನೂ ನಮಿಸಿ ಕ್ಷಮಾಯಾಚನೆ ಮಾಡುತ್ತಾನೆ. ಈ ಶ್ಲೋಕದ ಅರ್ಥವಿಸ್ತಾರ ವನ್ನು ಮುಂದೆ ಹೇಳುವಂತೆ ಅವಧೂತರ ಮುಖದಿಂದಲೇ ಕೇಳಿ ಧನ್ಯರಾಗಬೇಕು, ಶ್ರೋತೃಗಳು.



## –೧೨೨–

### ಹಿರಿಯರ ನಿಂದೆ ಅನರ್ಥಕರ ಎನ್ನಲು ದಕ್ಷನುಗೈದ ಶಿವನಿಂದೆ ಉದಾಹರಣೆ

**ಕಥಂ ಸುತಾಯಾಃ ಪಿತೃಗೇಹ ಕೌತುಕಂ**
**ನಿಶಮ್ಯ ದೇಹಃ ಸುರವರ್ಯ ನೇಂಗತೇ ।**
**ಅನಾಹುತಾ ಅಪ್ಯಭಿಯಾಂತಿ ಸೌಹೃದಾದ್**
**ಭರ್ತುರ್ಗುರೋರ್ದೇಹಕೃತಶ್ಚ ಕೇತನಂ ॥**

(ಭಾ.೪.೩.೧೩)

**ಯಥಾ ಸಾಧಕಾನಾಂ ಮಹತ್ಸೇವಾವಶ್ಯಕೀ ತಥಾ ತನ್ನಿಂದಾವರ್ಜನಮಪೀತಿ ವಕ್ತುಮುತ್ತರಂ ಪ್ರಕರಣಂ ।ತತ್ರಾದೌ ಭವನಿಂದಯಾ ಭವಶ್ವಶುರಸ್ಯ ಮಹಾನರ್ಥಪ್ರಾಪ್ತಿರ್ದೃಷ್ಟಾ, ಅತಃ ಸಾವಧಾನೈಸ್ತತ್ರ ಭಾವ್ಯಮಿತಿ ಭವಭವಾನ್ಯೋಃ ಸಂವಾದಂ ಕಥಯತಿ ॥ ಕಥಮಿತಿ ॥ ಹೇ ಸುರವರ್ಯ ಭವ ಸುತಾಯಾ ದೇಹಃ ಪಿತೃಗೇಹೇ ಭವತ್ ಕೌತುಕಂ ನಿಶಮ್ಯ ಕಥಂ ನೇಂಗತೇ ನ ಚಲತಿ। ಆಹ್ವಾನಾಭಾವೇ ಕಥಂ ಗಮನಂ ಯುಕ್ತಂ ಸ್ಯಾದಿತಿ ತತ್ರಾಹ। ಅನಾಹುತಾ ಅಪೀತಿ ॥ ಸೌಹೃದಾದೇವ ಗಚ್ಛಂತಿ ॥**



ಸಾಧಕರಿಗೆ ಗುರುಗಳ ಸೇವೆಮಾಡುವಂತೆ ಅವರ ನಿಂದೆ ಮಾಡದಿರುವುದೂ ಅಷ್ಟೇ ಆವಶ್ಯಕ. ಶಿವನು ದಕ್ಷಪ್ರಜಾಪತಿಗೆ ಅಳಿಯನೇ ಆದರೂ ಯೋಗ್ಯತೆಯಲ್ಲಿ ಗುರುವಾಗಿರುವುದರಿಂದ ಅವನನ್ನು ದಕ್ಷನು ನಿಂದಿಸಿದ್ದು ಮಹಾ ಅನರ್ಥಕರ ವಾದುದು ಕಂಡಿದೆ. ಆದರಿಂದ ಗುರುನಿಂದೆಯ ವಿಷಯದಲ್ಲಿ ಬಹಳ ಜಾಗರೂಕತೆ ಬೇಕು. ಅದಕ್ಕೆ ಸತೀದೇವಿಗೂ ಶಿವನಿಗೂ ನಡೆದ ಸಂಭಾಷಣೆಯನ್ನು ಅಡವಿಸ್ವಾಮಿಗಳು ಮೊದಲಿಗೆ ತೋರಿಸುತ್ತಾರೆ.

**ಸತೀದೇವಿ ಮಹರುದ್ರದೇವರಿಗೆ ಹೇಳುತ್ತಾರೆ—ದೇವೋತ್ತಮ, ತಂದೆಯ ಮನೆಯಲ್ಲಿ ವಿಶೇಷ ಮಹೋತ್ಸವ ಕಾರ್ಯಕ್ರಮವೇನಾದರೂ ನಡೆಯುತ್ತಿದ್ದರೆ ಮಗಳು ಕೇಳಿ ಅತ್ತ ನಡೆಯದಿರುವುದು ಹೇಗೆ ಸಾಧ್ಯ? ಹೆಣ್ಣುಮಕ್ಕಳು ಪತಿಯ, ಗುರುವಿನ ಮತ್ತು ತಂದೆಯ ಮನೆಗೆ ಆಹ್ವಾನ ವಿಲ್ಲದಿದ್ದರೂ ನಡೆಯುತ್ತಾರೆ.**

–೧೨೩–

**ದೇಹಾಭಿಮಾನ ಹಿರಿಯರ ನಿಂದೆಗೆ ಕಾರಣ**

ತ್ವಯೋದಿತಂ ಶೋಭನಮೇವ ಶೋಭನೇ
ಅನಾಹುತಾ ಅಪ್ಯಭಿಯಾಂತಿ ಬಂಧುಷು ।
ತೇ ಯದ್ಯನುತ್ಪಾದಿತದೋಷದೃಷ್ಟಯೋ
ಬಲೀಯಸಾನಾತ್ಮ್ಯ ಮದೇನ ಮನ್ಯುನಾ ॥

(ಭಾ.೪.೩..೧೬)

ಏವಂ ಭವಾನ್ಯಾಃ ಸ್ವಾಶಯಾವಿಷ್ಕಾರೇ ಭವೋಕ್ತಮುತ್ತರಮಾಹ ॥ ತ್ವಯೇತಿ ॥ ಹೇ ಶೋಭನೇ ಬಂಧುಷು ವಿಷಯೇ ಅನಾಹುತಾ ಅಪ್ಯಭಿಯಾಂತೀತಿ ಯತ್ ತ್ವಯೋದಿತಂ ತದೇವ ತತ್ ಶೋಭನಂ ಯುಕ್ತಮೇವ। ಯದಿ ತೇ ಬಂಧವಃ ಅನಾತ್ಮಾ ದೇಹಸ್ತತ್ರ ಭವೋಽನಾತ್ಮ್ಯಂ ಅಭಿಮಾನಃ ತತ್ಪ್ರಯುಕ್ತೇನ ಮದೇನೋತ್ಪನ್ನೇನ ಬಲೀಯಸಾ ಮನ್ಯುನಾ ಅನುತ್ಪಾದಿತಾ ದೋಷಾಣಾಂ ದೃಷ್ಟಿಶ್ಚಿಂತನಂ ಯೇಷಾಂ ತಾದೃಶಾ ಭವೇಯುರಿತಿ ॥

❖❖❖

ಶಿವನು ಸತೀದೇವಿಗೆ ಹೇಳುತ್ತಾನೆ—ಮಂಗಳೆ, ನೀನು ಹೇಳುವುದು ಸರಿಯಾಗೇ ಇದೆ. ಬಂಧುಗಳ ಮನೆಗೆ ಅವರು ಕರೆಯದಿದ್ದರೂ ಹೆಣ್ಣುಮಕ್ಕಳು ಹೋಗುತ್ತಾರೆ. ಆದರೆ ಆ ಬಂಧುಗಳಲ್ಲಿ ಪ್ರಬಲ ದೇಹಾಭಿಮಾನ ಜನ್ಯವಾದ ಅಹಂಕಾರ ಕ್ರೋಧಗಳಿಂದ ನಮ್ಮಲ್ಲಿಲ್ಲದ ದೋಷವನ್ನು ಕಾಣುವ ಪ್ರವೃತ್ತಿ ಇರಬಾರದು ತಾನೆ?

❖❖❖

–೧೨೪–

**ದೇಹಾಭಿಮಾನದಿಂದಾಗುವ ಅನರ್ಥ**

ನೈತಾದೃಶಾನಾಂ ಸ್ವಜನವ್ಯಪೇಕ್ಷಯಾ
ಗೃಹಾನ್ ಪ್ರತೀಯಾದನವಸ್ಥಿತಾತ್ಮನಾಂ ।
ಯೇಽಭ್ಯಾಗತಾನ್ ವಕ್ರಧಿಯಾ ವಿಚಕ್ಷತೇ
ಆರೋಪಿತ ಭ್ರೂಭಿರಮರ್ಷಣಾಕ್ಷಿಭಿಃ ॥ (ಭಾ.೪.೩.೧೮)

-೧೨೨-

## ಹಿರಿಯರ ನಿಂದೆ ಅನರ್ಥಕರ ಎನ್ನಲು ದಕ್ಷನುಗೈದ ಶಿವನಿಂದೆ ಉದಾಹರಣೆ

**ಕಥಂ ಸುತಾಯಾಃ ಪಿತೃಗೇಹ ಕೌತುಕಂ**
**ನಿಶಮ್ಯ ದೇಹಃ ಸುರವರ್ಯ ನೇಂಗತೇ ।**
**ಅನಾಹುತಾ ಅಪ್ಯಭಿಯಾಂತಿ ಸೌಹೃದಾದ್**
**ಭರ್ತುರ್ಗುರೋರ್ದೇಹಕೃತಶ್ಚ ಕೇತನಂ ॥**

(ಭಾ.೪.೩.೧೩)

ಯಥಾ ಸಾಧಕಾನಾಂ ಮಹತ್ಸೇವಾವಶ್ಯಕೀ ತಥಾ ತನ್ನಿಂದಾವರ್ಜನಮಪೀತಿ ವಕ್ತುಮುತ್ತರಂ ಪ್ರಕರಣಂ ।ತತ್ರಾದೌ ಭವನಿಂದಯಾ ಭವಶ್ವಶುರಸ್ಯ ಮಹಾನರ್ಥಪ್ರಾಪ್ತಿರ್ದೃಷ್ಟಾ, ಅತಃ ಸಾವಧಾನೈಸ್ತತ್ರ ಭಾವ್ಯಮಿತಿ ಭವಭವಾನ್ಯೋಃ ಸಂವಾದಂ ಕಥಯತಿ ॥ **ಕಥಮಿತಿ** ॥ ಹೇ ಸುರವರ್ಯ ಭವ ಸುತಾಯಾ ದೇಹಃ ಪಿತೃಗೇಹೇ ಭವತ್ ಕೌತುಕಂ ನಿಶಮ್ಯ ಕಥಂ ನೇಂಗತೇ ನ ಚಲತಿ। ಆಹ್ವಾನಾಭಾವೇ ಕಥಂ ಗಮನಂ ಯುಕ್ತಂ ಸ್ಯಾದಿತಿ ತತ್ರಾಹ। **ಅನಾಹುತಾ ಅಪೀತಿ** ॥ ಸೌಹೃದಾದೇವ ಗಚ್ಛಂತಿ ॥



ಸಾಧಕರಿಗೆ ಗುರುಗಳ ಸೇವೆಮಾಡುವಂತೆ ಅವರ ನಿಂದೆ ಮಾಡದಿರುವುದೂ ಅಷ್ಟೇ ಆವಶ್ಯಕ. ಶಿವನು ದಕ್ಷಪ್ರಜಾಪತಿಗೆ ಅಳಿಯನೇ ಆದರೂ ಯೋಗ್ಯತೆಯಲ್ಲಿ ಗುರುವಾಗಿರುವುದರಿಂದ ಅವನನ್ನು ದಕ್ಷನು ನಿಂದಿಸಿದ್ದು ಮಹಾ ಅನರ್ಥಕರ ವಾದುದು ಕಂಡಿದೆ. ಅದರಿಂದ ಗುರುನಿಂದೆಯ ವಿಷಯದಲ್ಲಿ ಬಹಳ ಜಾಗರೂಕತೆ ಬೇಕು. ಅದಕ್ಕೆ ಸತೀದೇವಿಗೂ ಶಿವನಿಗೂ ನಡೆದ ಸಂಭಾಷಣೆಯನ್ನು ಅಡವಿಸ್ವಾಮಿಗಳು ಮೊದಲಿಗೆ ತೋರಿಸುತ್ತಾರೆ.

**ಸತೀದೇವಿ ಮಹರುದ್ರದೇವರಿಗೆ ಹೇಳುತ್ತಾರೆ—ದೇವೋತ್ತಮ, ತಂದೆಯ ಮನೆಯಲ್ಲಿ ವಿಶೇಷ ಮಹೋತ್ಸವ ಕಾರ್ಯಕ್ರಮವೇನಾದರೂ ನಡೆಯುತ್ತಿದ್ದರೆ ಮಗಳು ಕೇಳಿ ಅತ್ತ ನಡೆಯದಿರುವುದು ಹೇಗೆ ಸಾಧ್ಯ? ಹೆಣ್ಣುಮಕ್ಕಳು ಪತಿಯ, ಗುರುವಿನ ಮತ್ತು ತಂದೆಯ ಮನೆಗೆ ಆಹ್ವಾನ ವಿಲ್ಲದಿದ್ದರೂ ನಡೆಯುತ್ತಾರೆ.**

-೧೨೩-

**ದೇಹಾಭಿಮಾನ ಹಿರಿಯರ ನಿಂದೆಗೆ ಕಾರಣ**

ತ್ವಯೋದಿತಂ ಶೋಭನಮೇವ ಶೋಭನೇ
ಅನಾಹುತಾ ಅಪ್ಯಭಿಯಾಂತಿ ಬಂಧುಷು ।
ತೇ ಯದ್ಯನುತ್ಪಾದಿತದೋಷದೃಷ್ಟಯೋ
ಬಲೀಯಸಾನಾತ್ಮ್ಯ ಮದೇನ ಮನ್ಯುನಾ ॥

(ಭಾ.೪.೩..೧೬)

ಏವಂ ಭವಾನ್ಯಾಃ ಸ್ವಾಶಯಾವಿಷ್ಕಾರೇ ಭವೋಕ್ತಮುತ್ತರಮಾಹ ॥ **ತ್ವಯೇತಿ ॥** ಹೇ ಶೋಭನೇ ಬಂಧುಷು ವಿಷಯೇ ಅನಾಹುತಾ ಅಪ್ಯಭಿಯಾಂತೀತಿ ಯತ್ ತ್ವಯೋದಿತಂ ತದೇವ ತತ್ ಶೋಭನಂ ಯುಕ್ತಮೇವ। ಯದಿ ತೇ ಬಂಧವಃ ಅನಾತ್ಮಾ ದೇಹಸ್ತತ್ರ ಭವೋऽನಾತ್ಮ್ಯಂ ಅಭಿಮಾನಃ ತತ್ಪ್ರಯುಕ್ತೇನ ಮದೇನೋತ್ಪನ್ನೇನ ಬಲೀಯಸಾ ಮನ್ಯುನಾ ಅನುತ್ಪಾದಿತಾ ದೋಷಾಣಾಂ ದೃಷ್ಟಿಶ್ಚಿಂತನಂ ಯೇಷಾಂ ತಾದೃಶಾ ಭವೇಯುರಿತಿ ॥

❖❖❖

ಶಿವನು ಸತೀದೇವಿಗೆ ಹೇಳುತ್ತಾನೆ—ಮಂಗಳೆ, ನೀನು ಹೇಳುವುದು ಸರಿಯಾಗೇ ಇದೆ. ಬಂಧುಗಳ ಮನೆಗೆ ಅವರು ಕರೆಯದಿದ್ದರೂ ಹೆಣ್ಣುಮಕ್ಕಳು ಹೋಗುತ್ತಾರೆ. ಆದರೆ ಆ ಬಂಧುಗಳಲ್ಲಿ ಪ್ರಬಲ ದೇಹಾಭಿಮಾನ ಜನ್ಯವಾದ ಅಹಂಕಾರ ಕ್ರೋಧಗಳಿಂದ ನಮ್ಮಲ್ಲಿಲ್ಲದ ದೋಷವನ್ನು ಕಾಣುವ ಪ್ರವೃತ್ತಿ ಇರಬಾರದು ತಾನೆ?

❖❖❖

-೧೨೪-

**ದೇಹಾಭಿಮಾನದಿಂದಾಗುವ ಅನರ್ಥ**

ನೈತಾದೃಶಾನಾಂ ಸ್ವಜನವ್ಯಪೇಕ್ಷಯಾ
ಗೃಹಾನ್ ಪ್ರತೀಯಾದನವಸ್ಥಿತಾತ್ಮನಾಂ ।
ಯೇऽಭ್ಯಾಗತಾನ್ ವಕ್ರಧಿಯಾ ವಿಚಕ್ಷತೇ
ಆರೋಪಿತ ಭ್ರೂಭಿರಮರ್ಷಣಾಕ್ಷಿಭಿಃ ॥ (ಭಾ.೪.೩.೧೮)

ಉಕ್ತಮೇವ ವಿಶದಯತಿ ॥ **ನೇತಿ** ॥ ಯೇ ವಿಚಕ್ಷತೇ ಪಶ್ಯಂತಿ । ಏತಾದೃಶಾನಾಂ ಗೃಹಾನ್ ಸ್ವಜನವ್ಯಪೇಕ್ಷಯಾ ಬಂಧುತ್ವಬುದ್ಧ್ಯಾ । ಮನ್ಯುಕಾರ್ಯಪ್ರದರ್ಶನೇನ ವಿಶದೀಕರಣಂ ದ್ರಷ್ಟವ್ಯಂ ॥



ಶಿವನು ಸತೀದೇವಿಗೆ ಹೇಳುತ್ತಾನೆ—ಇಂಥವರ ಮನೆಗೆ, 'ಇವರು ಬಂಧುಗಳೆ ತಾನೆ?' ಎಂಬ ಭಾವನೆಯಿಂದ ಹೋಗಕೂಡದು. ಅವರ ಬುದ್ಧಿ ನೆಟ್ಟಗಿರುವುದಿಲ್ಲ. ಬಂಧುಗಳೆಂಬ ಭಾವನೆಯಿಂದ ಬಂದವರನ್ನು ವಕ್ರಬುದ್ಧಿಯಿಂದ ಹುಬ್ಬು ಮೇಲೇರಿಸಿ ಕೋಪದ ಕಣ್ಣುಗಳಿಂದ ನೋಡುತ್ತಾರೆ.



—೧೨೫—

**ಹಿರಿಯರ ನಿಂದೆ ಅವರ ವಧೆಗಿಂತ ಹೆಚ್ಚು**

ತಥಾರಿಭಿರ್ನ ಪ್ರಧನೇ ಶಿಲೀಮುಖೈಃ
ಶೇತೇಽರ್ದಿತಾಂಗೋ ಹೃದಯೇನ ದೂಯತಾ ।
ಸ್ವಾನಾಂ ಯಥಾ ವಕ್ರಧಿಯಾಂ ದುರುಕ್ತಿಭಿ
ರ್ದಿವಾನಿಶಂ ತಪ್ಯತಿ ಮರ್ಮ ತಾಡಿತಃ ॥

(ಭಾ.೪.೩.೧೯)

ನ ಕೇವಲಂ ಶಾರೀರೇಣ ವ್ಯಾಪಾರೇಣಾವಮನ್ಯಂತೇ ಕಿಂತುಂ ವಾಚನಿಕೇನಾಪೀತಿ ಭಾವೇನಾಹ ॥ **ತಥೇತಿ** ॥ ಪ್ರಧನೇ ಯುದ್ಧೇ । ಶಿಲೀಮುಖೈರ್ಬಾಣೈಃ । ತತೋ ನ ಗಂತವ್ಯಮಿತ್ಯಾಕೂತಂ । **ಯಥಾಹುಃ**—

''ನ ತಥಾ ತಪ್ಯತೇ ವಿದ್ಧಃ ಪುಮಾನ್ ಬಾಣೈರ್ಹಿ ಮರ್ಮಗೈಃ ।
ಯಥಾ ತುದಂತಿ ಮರ್ಮಸ್ಥಾ ಅಸತಾಂ ಪರುಷೇಷವ'' ಇತಿ ॥



ಶಿವನು ಸತೀದೇವಿಗೆ ಹೇಳುತ್ತಾನೆ—ವಕ್ರಬುದ್ಧಿಯ ಬಂಧುಗಳ ಕೆಟ್ಟಮಾತುಗಳಿಂದ ಮರ್ಮಕ್ಕೆ ಏಟು ತಗುಲಿದಾಗ ಹೃದಯದಲ್ಲಿ ವೇದನೆ ಉಂಟಾಗುತ್ತದೆ. ಹಗಲಿರುಳು ನರಳಾಟ, ರಾತ್ರಿ ನಿದ್ದೆ ಬರುವುದಿಲ್ಲ. ಇಂಥ ವೇದನೆ ಯುದ್ಧದಲ್ಲಿ ಶತ್ರುಗಳೆಸೆವ ಬಾಣಗಳಿಂದ ಮೈಗಾಯಗೊಂಡಾಗಲೂ

**ಉಂಟಾಗದು. ಬುದ್ಧಿ ನೆಟ್ಟಗಿಲ್ಲದವರು ನಡೆಯಿಂದ ಮಾತ್ರವಲ್ಲದೆ ನುಡಿಯಿಂದಲೂ ಬಂಧುಗಳನ್ನು ನೋಯಿಸುವರು.**

ನ ತಥಾ ತಪ್ಯತೇ ವಿದ್ಧಃ ಪುಮಾನ್ ಬಾಣೈರ್ಹಿ ಮರ್ಮಗೈಃ
ಯಥಾ ತುದಂತಿ ಮರ್ಮಸ್ಥಾಃ ಅಸತಾಂ ಪರುಷೇಷವಃ ॥

(ಭಾ.೧೧.೨೩.೩)

ಭಿಕ್ಷುಗೀತದಲ್ಲಿ ಭಗವಂತ ಉದ್ಧವನಿಗೆ ಹೀಗೇ ಹೇಳುತ್ತಾನೆ—'ಕಠೋರ ಬಾಣದಂಥ ದುರ್ಜನರ ಮಾತುಗಳು ಮರ್ಮಕ್ಕೆ ನಾಟಿದಾಗ ಕೊಡುವಷ್ಟು ನೋವು ಮನುಷ್ಯನಿಗೆ ಮರ್ಮಭೇದಕವಾದ ಬಾಣಗಳು ತಾಗಿದಾಗಲೂ ಉಂಟಾಗಲಾರದು' ಎಂದು.



–೧೨೬–

**ಹಿರಿಯರ ನಿಂದೆ ಕೇಳಲೂಬಾರದು**

**ಕರ್ಣೌ ಪಿಧಾಯ ನಿರಿಯಾದ್ ಯದಕಲ್ಪ ಈಶೇ**
**ಧರ್ಮಾವಿತರ್ಯಘೃಣಿಭಿರ್ನೃಭಿರಸ್ಯಮಾನೇ ।**
**ಛಿಂದ್ಯಾತ್ ಪ್ರಸಹ್ಯ ರುಶತೀಂ ಅಸತಾಂ ಪ್ರಭುಶ್ಚೇತ್**
**ಜಿಹ್ವಾಮಸೂನಪಿ ತತೋ ವಿಸೃಜೇತ್ ಸ ಧರ್ಮಃ ॥**

(ಭಾ.೪.೪.೧೭)

ಏವಂ ಪತ್ಯಾ ನಿಷಿದ್ಧೇಽಪಿ ಭಾವಿಕಾರ್ಯವಶಾತ್ತತ್ರ ಗತಾ ॥ ತದುಕ್ತಪ್ರಕಾರೇಣ ತತೋಽಲಬ್ಧಮಾನಾ ಪತ್ಯುರ್ನಿಂದಾಂ ಪಿತೃಕೃತಾಂ ಶೃಣ್ವಾನಾಽऽಹ ॥ **ಕರ್ಣಾವಿತಿ** ॥ ಧರ್ಮಪ್ರವರ್ತಕೇ ಮಹಾತ್ಮನಿ ಭೂತದಯಾಶೂನ್ಯೈರ್ನೃಭಿಃ ಸಭಾದೌ ನಿಂದ್ಯಮಾನೇ ಸತಿ, ಯತ್ ಯದಿ ಸ್ವಯಮಸಮರ್ಥಸ್ತದಾ ಕರ್ಣೌ ಹಸ್ತಾಭ್ಯಾಂ ಪಿಧಾಯ, ತತಃ ಸ್ಥಾನಾದ್ಗಚ್ಛೇತ್ । **ಯಥಾಹುಃ—**

''ನಿಂದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯ ವಾ ।
ತತೋ ನಾಪೈತಿ ಯಃ ಸೋಽಪಿ ಯಾತ್ಯಧಃ ಸುಕೃತಾಚ್ಚ್ಯುತ'' ಇತಿ ॥

ಅಪಿ ಪಕ್ಷಾಂತರಮಪಿ ಅಸೂನ್ವಾ ವಿಸೃಜೇದಿತಿ ಯದ್ ದ್ವಯಂ ಸ

**ಏವಾಸಮರ್ಥಸ್ಯ ಧರ್ಮಃ ಪಾಪಸಾಧನಂ ನ ಭವತಿ। ಚೇದ್ಯದಿ ಪ್ರಭುಃ ಸಮರ್ಥಃ ಶಿಕ್ಷಾಯಾಂ। ತದಾ ರುಶತೀಂ ಪರುಷಭಾಷಿಣೀಂ ಅಸತಾಂ ಜಿಹ್ವಾಂ ಪ್ರಸಹ್ಯ ಬಲಾತ್ಕೃತ್ಯ ಛಿಂದ್ಯಾತ್। ಅಸೂನ್ವಾ ಹರೇದಿತಿ ಯದ್ ದ್ವಯಂ ಸ ಏವ ಸಮರ್ಥಸ್ಯ ಧರ್ಮ ಇತಿ ॥**



ಪತಿಯು ಬೇಡವೆಂದು ಹೇಳಿದರೂ ಕೇಳದೆ ಮುಂದೆ ಅವಶ್ಯ ನಡೆಯಬೇಕಾಗಿದ್ದ ಕಾರ್ಯವಶದಿಂದ ಸತೀದೇವಿ ದಕ್ಷನ ಯಜ್ಞಶಾಲೆಗೆ ಹೋದಳು. ಅಲ್ಲಿ ಮಹಾದೇವನು ಹೇಳಿದಂತೆಯೇ ಆಯಿತು. ಅವಳಿಗೆ ಮರ್ಯಾದೆ ಸಿಗಲಿಲ್ಲ. ದಕ್ಷನು ಪತಿಯನ್ನು ಅವಮಾನಿಸಿದ. ಯಜ್ಞದಲ್ಲಿ ಅವನಿಗೆ ಕೊಡಬೇಕಾಗಿದ್ದ ಹವಿರ್ಭಾಗವನ್ನು ಕೊಡಲಿಲ್ಲ. ದೇವಿ ತಂದೆಗೆ ಹೇಳುತ್ತಾಳೆ—

**'ದರ್ಮರಕ್ಷಕನಾದ ಸ್ವಾಮಿಯನ್ನು ನಿರ್ದಯಿ ಮನುಷ್ಯರು ನಿಂದಿಸುತ್ತಿರುವಾಗ ಆ ನಿಂದೆಯನ್ನು ಆಲಿಸಬಾರದು. ಶಕ್ತನಾಗಿದ್ದರೆ ನಿಂದಕರ ಕಟುನುಡಿ ನುಡಿವ ನಾಲಿಗೆಯನ್ನೆ ಬಲಾತ್ಕಾರವಾಗಿ ಕತ್ತರಿಸಬೇಕು. ಶಕ್ತನಲ್ಲದಿದ್ದರೆ ಕಿವಿಮುಚ್ಚಿಕೊಂಡು ಅಲ್ಲಿಂದ ಎದ್ದು ಹೋಗಬೇಕು. ಎರಡನ್ನೂ ಮಾಡಲಾಗದಿದ್ದರೆ ತನಗೆ ಅತಿಪ್ರಿಯವಾದ ಪ್ರಾಣಗಳನ್ನೇ ತೊರೆಯಬೇಕು. ಹೀಗೆ ಮಾಡಿದರೇ ನಿಂದಾಶ್ರವಣದಿಂದ ಪಾಪಸಾಧನೆ ಇಲ್ಲವಾಗುವುದು.**

ನಿಂದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯಚ ।
ತತೋ ನಾಪೈತಿ ಯಃ ಸೋಽಪಿ ಯಾತ್ಯಧಃ ಸುಕೃತಾಚ್ಚ್ಯುತಃ ॥
(ಭಾ.೧೦.೮೪.೪೧)

'ಭಗವಂತನ, ಭಕ್ತಜನರ ನಿಂದೆ ಕೇಳಿ ಬರುತ್ತಿದ್ದರೆ ಯಾರು ಆ ಸ್ಥಳದಿಂದ ಆಚೆ ತೊಲಗುವುದಿಲ್ಲವೋ ಅವನೂ ಕೂಡ ಪುಣ್ಯವನ್ನು ಕಳೆದುಕೊಂಡು ನರಕಭಾಗಿಯಾಗುವನು'.

ಶಿಶುಪಾಲನು ಶ್ರೀಕೃಷ್ಣನನ್ನು ನಿಂದಿಸುತ್ತಿದ್ದಾಗ ರಾಜಸೂಯ ಯಜ್ಞಮಂಟಪದಲ್ಲಿದ್ದ ಸಭಾಸದರು ಕಿವಿ ಮುಚ್ಚಿಕೊಂಡು ಕೋಪದಿಂದ ಶಿಶುಪಾಲನನ್ನು ಬೈಯುತ್ತ ಎದ್ದು ಹೊರಟುಹೋದರು ಎನ್ನುವ ಸಂದರ್ಭಲ್ಲಿ ಶುಕಮುನಿ ಪರೀಕ್ಷಿತನಿಗೆ ಹೇಳಿದ ಮಾತು ಇದು.

**ಕರ್ಣೌ ಪಿಧಾಯ ನಿರ್ಗಮೇಽಪಿ ತೈರ್ನಿಂದಕೈರ್ನಿಗಡಾದಿನಾ ನಿಬಧ್ಯ, ಪುನಃ ಪುನಃ ಪ್ರತಿದಿನಂ ನಿಂದನೇ ಕೃತೇ ಬಹುದಿನಾನಿ ಪರೀಕ್ಷ್ಯ, ದೇಹಂ ತ್ಯಕ್ಷ್ಯಾಮೀತ್ಯುದಿತೇಽಪಿ ಪುನಃ ಪುನರ್ನಿಂದನೇ ಕೃತೇ ದೇಹೋಽಪಿ ತ್ಯಾಜ್ಯಃ। ಆದೌ ದಂಡಂ ಗೃಹೀತ್ವಾ ಮಹನ್ನಿಂದನಂ ನ ಕರ್ತವ್ಯಮಿತ್ಯುದಿತೇಽಪಿ ಪುನರಾರಬ್ಧೇ ಜಿಹ್ವಾಮೇವ ಛಿಂದ್ಯಾತ್ । ತದಾಪಿ ಪುನಃ ಪ್ರಕಾರಾಂತರೇಣಾರಬ್ಧೇ ಪ್ರಾಣಾನೇವ ಹರೇದಿತಿ। ಯೋಽಲ್ಪಾನಲ್ಪಯೋರ್ಧರ್ಮ ಉದಿತಃ ಸ ತ್ವಿಮಂ ಮಹಾಜನಮಾರ್ಗಮಾಶ್ರಿತ್ಯೈವೋದಿತಃ। ವಸ್ತುತೋ ಭಾಗವತ ಮಾರ್ಗಾಶ್ರಯಣೇ ತು ನ ಕೋಽಪಿ ಪ್ರಯಾಸಃ ನಿಂದೇಯಮೇಷಾಂ ಮಹಾದುಃಖಸಾಧನಮಿತ್ಯನುಸಂಧಾನಮೇವ ಕೇವಲಮಿತ್ಯಭಿಪ್ರೇತ್ಯಾಹ। ನೇತಿ ॥**

ಸುಜನರು ಕಿವಿ ಮುಚ್ಚಿಕೊಂಡು ಹೋಗುತ್ತಿದ್ದರೂ ನಿಂದಕರು ಬಿಡದೆ ಅವರನ್ನು ಸಂಕೋಲೆಗಳಿಂದ ಕಟ್ಟಿಹಾಕಿ ಅವರ ಮುಂದೆಯೇ ನಿಂದಿಸುತ್ತಿದ್ದರೆ, ಬಲುದಿನಗಳವರೆಗೆ ನೋಡಿ ಪರೀಕ್ಷಿಸಿ, 'ಇನ್ನು ನಿಂದೆ ಕೇಳುತ್ತ ನಾನು ಬದುಕಿರ ಲಾರೆ, ಸಾಯುತ್ತೇನೆ' ಎನ್ನಬೇಕು. ಹಾಗಾದರೂ ಮತ್ತೂ ನಿಂದನೆ ಮುಂದುವರಿದರೆ ಅಸಮರ್ಥನು ಬೇರೆ ಉಪಾಯವಿಲ್ಲದೆ ಶರೀರವನ್ನು ಬಿಡಬೇಕು. ಇದು ಧರ್ಮ. ಸಮರ್ಥನಾಗಿದ್ದರೆ ತಾನೇ ಶಸ್ತ್ರವನ್ನು ಕೈಗೆತ್ತಿಕೊಂಡು 'ನಿಂದಿಸಬೇಡ!' ಎನ್ನುತ್ತ ಹೆದರಿಸಬೇಕು. ಅದಕ್ಕೆ ಆತ ಬಗ್ಗದಿದ್ದರೆ ಅವನ ನಾಲಿಗೆಯನ್ನು ಸೆಳೆದು ಸೀಳಬೇಕು. ಹಾಗಿದ್ದರೂ ಬೇರೆ ರೀತಿಯಿಂದ ನಿಂದೆ ಮಾಡುತ್ತಿದ್ದರೆ ಕೊಂದೇ ಬಿಡಬೇಕು.

ಇದೆಲ್ಲ ಸಮರ್ಥರು ಅಸಮರ್ಥರೆಂದು ಎರಡು ಬಗೆಯವರಿಗೆ ಹೇಳಿದ ಧರ್ಮಾನುಷ್ಠಾನವು, ಶ್ರೀಭೀಮಸೇನನಂಥ ದೊಡ್ಡವರ ವಿಷಯದಲ್ಲಿ ಹೇಳಿದ್ದಾಗಿದೆ. ಸಾಮಾನ್ಯರಾದ ಭಗವದ್‌ಭಕ್ತರ ವಿಷಯದಲ್ಲಿ 'ನಿಂದಕರು ನಿಂದಿಸಿದರೆ ಅದು ಅವರ ಯೋಗ್ಯತೆ! ಅವರಿಗೆ ಮಹಾದುಃಖ ಸಾಧನ ವಾಗುವುದೆಂ'ದು ಅವರು ತಿಳಿಯಬೇಕು. ಅಷ್ಟು ಸಾಕು. ಇದು ಮುಂದಿನ ಶ್ಲೋಕಗಳಲ್ಲಿ ಸ್ಪಷ್ಟವಿದೆ.



-೧೨೭-

**ಹಿರಿಯರ ನಿಂದೆಯಿಂದ ಕಿರಿಯರಿಗೇ ಕೇಡು**

**ನಾಶ್ಚರ್ಯಮೇತದ್ ಯದಸತ್ಸು ಸರ್ವದಾ**
**ಮಹದ್‌ವಿನಿಂದಾ ಕುಣಪಾತ್ಮವಾದಿಷು ।**
**ಸೇರ್ಷ್ಯಾ ಮಹಾಪೂರುಷ ಪಾದಪಾಂಸುಭಿ**
**ರ್ನಿರಸ್ತ ತೇಜಃಸು ತದೇವ ಶೋಭನಂ ॥**

(ಭಾ.೪.೪.೧೩)

**ಕುಣಪ ಏವಾಹಮಿತ್ಯಭಿಮಾನವತ್ಸು ಕಿನ್ನಿಮಿತ್ತಾ ನಿಂದಾಪಿ ಸೇರ್ಷ್ಯಾ ಈರ್ಷ್ಯಾಽಸಹನಂ ತನ್ನಿಮಿತ್ತಾ। ಸಾಪಿ ಕುತಃ। ವ್ಯಾಪಕಸಮಾವೇಶೇ ಸೂರ್ಯೋದಯೇ ನಕ್ಷತ್ರಾಣಾಮಿವ ಹತತೇಜಸ್ತ್ವಾದಿತಿ ಭಾವೇನಾಹ। ನಿರಸ್ತತೇಜಸ್ಸ್ವಿತಿ। ಕಿಂಚ ತತ್ಸರ್ವದಾ ಮಹನ್ನಿಂದನಮೇವ ತೇಷಾಂ ಶೋಭನಂ ಯುಕ್ತಂ ತದನುರೂಪಫಲಯೋಗ್ಯತ್ವಾದಿತಿ ॥**

❖❖❖

**ಸತೀದೇವಿ ತಂದೆ ದಕ್ಷಪ್ರಜಾಪತಿಗೆ ಹೇಳುತ್ತಾಳೆ—ಜಡದೇಹವನ್ನೇ ಆತ್ಮವೆಂದು ವಾದಿಸುವ ದುರ್ಜನರು ಯಾವಾಗಲೂ ಭಗವದ್‌ಭಕ್ತರನ್ನು ನಿಂದಿಸುವುದು ಅವರಲ್ಲಿ ಮತ್ಸರದಿಂದ. ಅದು ಆಶ್ಚರ್ಯವೇನಲ್ಲ. ಅವರ ಯೋಗ್ಯತೆಗೆ ಅದು ಯುಕ್ತವೆನಿಸುತ್ತದೆ. ಅವರಿಗೆ ಯೋಗ್ಯಗತಿ ಹೊಂದಲು ಅದು ಸಾಧನವಾಗುತ್ತದೆ. ಸೂರ್ಯನು ಉದಿಸುತ್ತಲೇ ನಕ್ಷತ್ರಗಳ ತೇಜಸ್ಸು ಮರೆಯಾಗುವಂತೆ ಮಹಾತ್ಮರ ಕೇವಲ ಪಾದಧೂಳಿಯ ಪ್ರಭಾವದಿಂದಲೇ ದುರ್ಜನರ ಪ್ರತಾಪವು ಅಡಗುತ್ತಿರುವಾಗ ಮಹಾತ್ಮರಿಗೇ ನಿಂದೆ ಮಾಡಿದರೆ ಇನ್ನೇನು ಹೇಳಬೇಕು?**

ದುರ್ಜನರು ಮಹಾತ್ಮರ ನಿಂದೆ ಮಾಡಿದರೆ ಅದರಿಂದ ಆ ದುರ್ಜನರಿಗೇ ದುರ್ಗತಿಯಾಗುವುದೆಂದುಕೊಂಡು ಸುಮ್ಮನಿದ್ದರೆ ಸಾಕು, ಸಾಮಾನ್ಯ ಭಗವದ್‌ಭಕ್ತರಿಗೆ ಇದು ಧರ್ಮ. ಈ ಧರ್ಮಾನುಷ್ಠಾನದಲ್ಲಿ ಏನೂ ಪ್ರಯಾಸವೇ ಇಲ್ಲ.

❖❖❖

-೧೨೮-

## ಹಿರಿಯರ ನಿಂದೆಯಿಂದ ಹಿರಿಯರಿಗೇನೂ ಕೇಡಿಲ್ಲ

ಸರ್ವೇ ಪ್ರಯಾಸಾ ಅಭವನ್ ವಿಮೋಘಾಃ
ಕೃತಾಃ ಕೃತಾ ದೇವಗಣೇಷು ದೈತ್ಯೈಃ ।
ಕೃಷ್ಣಾನುಕೂಲೇಷು ಯಥಾ ಮಹತ್ಸು
ಕ್ಷುದ್ರೈಃ ಪ್ರಯುಕ್ತಾ ರುಶತೀ ರೂಕ್ಷವಾಚಃ ॥

(ಭಾ.೬.೧೦.೨೯)

ಏವಂ ಭಾಗವತಮಾರ್ಗಾನುಸರಣೇ ನ ಕೋಽಪಿ ಪ್ರಯಾಸ ಇತ್ಯಭಿಹಿತಮೇವ ದ್ರಢಯಿತುಂ, ನಿಂದನೇನ ನಿಂದ್ಯಾನಾಂ ರೋಮಹಾನಿರಪಿ ನ ಭವತೀತಿ ದೃಷ್ಟಾಂತತಯಾ ಕಥಿತಮಿತಿ ಕಥಯತಿ ॥ **ಸರ್ವ ಇತಿ** ॥ ಯೇ ಯೇ ಕೃತಾಃ ಕೃತಾಃ ಪುನಃ ಪುನಃ ಕೃತಾಃ। ತೇ ಸರ್ವೇಽಪಿ ಪ್ರಯಾಸಾಃ ಆಯುಧಾದಿಪ್ರಕ್ಷೇಪರೂಪಾಃ ವಿಮೋಘಾಃ ಅಕಿಂಚಿತ್ಕರಾಃ ಅಭವನ್ । ಕಥಂ। ಕೃಷ್ಣ ಏವಾನುಕೂಲೋಽನುಗ್ರಹೋನ್ಮುಖೋ ಯೇಷಾಂ ತೇಷು ಮಹತ್ಸು। ಅಸೂಯಯಾಽಲ್ಪೈರುದಿತಾ ಅನ್ಯೇಷಾಂ ಸಾಧಾರಣಾನಾಂ ಪುಂಸಾಂ ರುಶತೀಃ ರುಶತ್ಯಃ ಅಮಂಗಲಾಃ ಅತ ಏವ ರೂಕ್ಷಾ ದುಃಖದಾಯಕಾಃ ವಾಚೋ ವಚನಾನಿ ವಿಮೋಘಾಃ ವಿಮೋಘಾನಿ ಅಕಿಂಚಿತ್ಕರಾಣಿ ಭವಂತಿ ಯಥಾ ತದ್ವತ್ ಕಾಯಿಕಂ ಪ್ರಯಾಸಂ ಕರ್ತುಮನೀಶ್ವರೈಃ ಕ್ಷುದ್ರೈಃ ಮಹತ್ಸು ಕ್ರಿಯಮಾಣವಾಚನಿಕ ಪ್ರಯಾಸವತ್ ದೈತ್ಯಕೃತಕಾಯಿಕಪ್ರಯಾಸೋಽಪಿ ದೇವೇಷು ವ್ಯರ್ಥೋಽಭೂದಿತಿ ದೃಷ್ಟಾಂತತಯಾ ಗ್ರಹಣೇನ ನಿಂದಯಾ ನ ಕಾಪಿ ಹಾನಿರಿತಿ ನಿಶ್ಚಯೇನ ನ ಕೋಽಪಿ ಮನೋವಿಷಾದಃ ಕಾರ್ಯ ಇತಿ ॥

❖❖❖

ದೇವಾಸುರ ಸಂಗ್ರಾಮವನ್ನು ಶುಕಮುನಿ ಬಣ್ಣಿಸುತ್ತ ಹೇಳುತ್ತಾರೆ— ಕ್ಷುದ್ರಜನರು ಆಡುವ ಮರ್ಮಭೇದಕವಾದ ಕೆಟ್ಟ ಮಾತುಗಳು ಮಹಾತ್ಮರಲ್ಲಿ ಹೇಗೆ ವ್ಯರ್ಥವಾಗುವುವೋ ಹಾಗೇ ಕೃಷ್ಣಭಕ್ತರಾದ ದೇವತೆಗಳ ಮೇಲೆ ದುಷ್ಟ ದಾನವರು ಮತ್ತೆಮತ್ತೆ ಮಾಡಿದ ಆಕ್ರಮಣಗಳೆಲ್ಲವೂ ವ್ಯರ್ಥವಾದುವು.

ಇಲ್ಲಿ ಬಲಿಷ್ಠರಿಗೆ ದೈಹಿಕವಾಗಿ ಹಿಂಸೆ ಮಾಡಲು ಶಕ್ತರಾಗದ ಅಲ್ಪಜನರು ಕೆಟ್ಟ ಮಾತುಗಳಿಂದ ಪೀಡಿಸಲು ಯತ್ನಿಸಿದರೆ ಅದು ವ್ಯರ್ಥವಾಗುವಂತೆ

-೧೨೭-

**ಹಿರಿಯರ ನಿಂದೆಯಿಂದ ಕಿರಿಯರಿಗೇ ಕೇಡು**

**ನಾಶ್ಚರ್ಯಮೇತದ್ ಯದಸತ್ಸು ಸರ್ವದಾ**
**ಮಹದ್‌ವಿನಿಂದಾ ಕುಣಪಾತ್ಮವಾದಿಷು ।**
**ಸೇರ್ಷ್ಯಾ ಮಹಾಪೂರುಷ ಪಾದಪಾಂಸುಭಿ**
**ರ್ನಿರಸ್ತ ತೇಜಃಸು ತದೇವ ಶೋಭನಂ ॥**

(ಭಾ.೪.೪.೧೩)

**ಕುಣಪ ಏವಾಹಮಿತ್ಯಭಿಮಾನವತ್ಸು ಕಿನ್ನಿಮಿತ್ತಾ ನಿಂದಾಪಿ ಸೇರ್ಷ್ಯಾ ಈರ್ಷ್ಯಾಽಸಹನಂ ತನ್ನಿಮಿತ್ತಾ । ಸಾಪಿ ಕುತಃ । ವ್ಯಾಪಕಸಮಾವೇಶೇ ಸೂರ್ಯೋದಯೇ ನಕ್ಷತ್ರಾಣಾಮಿವ ಹತತೇಜಸ್ತ್ವಾದಿತಿ ಭಾವೇನಾಹ । ನಿರಸ್ತತೇಜಸ್ವಿತಿ । ಕಿಂಚ ತತ್ಸರ್ವದಾ ಮಹನ್ನಿಂದನಮೇವ ತೇಷಾಂ ಶೋಭನಂ ಯುಕ್ತಂ ತದನುರೂಪಫಲಯೋಗ್ಯತ್ವಾದಿತಿ ॥**

❖❖❖

**ಸತೀದೇವಿ ತಂದೆ ದಕ್ಷಪ್ರಜಾಪತಿಗೆ ಹೇಳುತ್ತಾಳೆ—ಜಡದೇಹವನ್ನೇ ಆತ್ಮವೆಂದು ವಾದಿಸುವ ದುರ್ಜನರು ಯಾವಾಗಲೂ ಭಗವದ್‌ಭಕ್ತರನ್ನು ನಿಂದಿಸುವುದು ಅವರಲ್ಲಿ ಮತ್ಸರದಿಂದ. ಅದು ಆಶ್ಚರ್ಯವೇನಲ್ಲ. ಅವರ ಯೋಗ್ಯತೆಗೆ ಅದು ಯುಕ್ತವೆನಿಸುತ್ತದೆ. ಅವರಿಗೆ ಯೋಗ್ಯಗತಿ ಹೊಂದಲು ಅದು ಸಾಧನವಾಗುತ್ತದೆ. ಸೂರ್ಯನು ಉದಿಸುತ್ತಲೇ ನಕ್ಷತ್ರಗಳ ತೇಜಸ್ಸು ಮರೆಯಾಗುವಂತೆ ಮಹಾತ್ಮರ ಕೇವಲ ಪಾದಧೂಳಿಯ ಪ್ರಭಾವದಿಂದಲೇ ದುರ್ಜನರ ಪ್ರತಾಪವು ಅಡಗುತ್ತಿರುವಾಗ ಮಹಾತ್ಮರಿಗೇ ನಿಂದೆ ಮಾಡಿದರೆ ಇನ್ನೇನು ಹೇಳಬೇಕು?**

ದುರ್ಜನರು ಮಹಾತ್ಮರ ನಿಂದೆ ಮಾಡಿದರೆ ಅದರಿಂದ ಆ ದುರ್ಜನರಿಗೇ ದುರ್ಗತಿಯಾಗುವುದೆಂದುಕೊಂಡು ಸುಮ್ಮನಿದ್ದರೆ ಸಾಕು, ಸಾಮಾನ್ಯ ಭಗವದ್‌ಭಕ್ತರಿಗೆ ಇದು ಧರ್ಮ. ಈ ಧರ್ಮಾನುಷ್ಠಾನದಲ್ಲಿ ಏನೂ ಪ್ರಯಾಸವೇ ಇಲ್ಲ.

❖❖❖

–೧೨೮–

**ಹಿರಿಯರ ನಿಂದೆಯಿಂದ ಹಿರಿಯರಿಗೇನೂ ಕೇಡಿಲ್ಲ**

**ಸರ್ವೇ ಪ್ರಯಾಸಾ ಅಭವನ್ ವಿಮೋಘಾಃ**
**ಕೃತಾಃ ಕೃತಾ ದೇವಗಣೇಷು ದೈತ್ಯೈಃ ।**
**ಕೃಷ್ಣಾನುಕೂಲೇಷು ಯಥಾ ಮಹತ್ಸು**
**ಕ್ಷುದ್ರೈಃ ಪ್ರಯುಕ್ತಾ ರುಶತೀ ರೂಕ್ಷವಾಚಃ ॥**

(ಭಾ.೬.೧೦.೨೮)

**ಏವಂ ಭಾಗವತಮಾರ್ಗಾನುಸರಣೇ ನ ಕೋಽಪಿ ಪ್ರಯಾಸ ಇತ್ಯಭಿಹಿತಮೇವ ದ್ರಢಯಿತುಂ, ನಿಂದನೇನ ನಿಂದ್ಯಾನಾಂ ರೋಮಹಾನಿರಪಿ ನ ಭವತೀತಿ ದೃಷ್ಟಾಂತತಯಾ ಕಥಿತಮಿತಿ ಕಥಯತಿ ॥ ಸರ್ವ ಇತಿ ॥ ಯೇ ಯೇ ಕೃತಾಃ ಕೃತಾಃ ಪುನಃ ಪುನಃ ಕೃತಾಃ। ತೇ ಸರ್ವೇಽಪಿ ಪ್ರಯಾಸಾಃ ಆಯುಧಾದಿಪ್ರಕ್ಷೇಪರೂಪಾಃ ವಿಮೋಘಾಃ ಅಕಿಂಚಿತ್ಕರಾಃ ಅಭವನ್ । ಕಥಂ। ಕೃಷ್ಣ ಏವಾನುಕೂಲೋಽನುಗ್ರಹೋನ್ಮುಖೋ ಯೇಷಾಂ ತೇಷು ಮಹತ್ಸು। ಅಸೂಯಯಾಽಲ್ಪೈರುದಿತಾ ಅನ್ಯೇಷಾಂ ಸಾಧಾರಣಾನಾಂ ಪುಂಸಾಂ ರುಶತೀಃ ರುಶತ್ಯಃ ಅಮಂಗಲಾಃ ಅತ ಏವ ರೂಕ್ಷಾ ದುಃಖದಾಯಕಾಃ ವಾಚೋ ವಚನಾನಿ ವಿಮೋಘಾಃ ವಿಮೋಘಾನಿ ಅಂಕಿಚಿತ್ಕರಾಣಿ ಭವಂತಿ ಯಥಾ ತದ್ವತ್ ಕಾಯಿಕಂ ಪ್ರಯಾಸಂ ಕರ್ತುಮನೀಶ್ವರೈಃ ಕ್ಷುದ್ರೈಃ ಮಹತ್ಸು ಕ್ರಿಯಮಾಣವಾಚನಿಕ ಪ್ರಯಾಸವತ್ ದೈತ್ಯಕೃತಕಾಯಿಕಪ್ರಯಾಸೋಽಪಿ ದೇವೇಷು ವ್ಯರ್ಥೋಽಭೂದಿತಿ ದೃಷ್ಟಾಂತತಯಾ ಗ್ರಹಣೇನ ನಿಂದಯಾ ನ ಕಾಪಿ ಹಾನಿರಿತಿ ನಿಶ್ಚಯೇನ ನ ಕೋಽಪಿ ಮನೋವಿಷಾದಃ ಕಾರ್ಯ ಇತಿ ॥**

❖❖❖

**ದೇವಾಸುರ ಸಂಗ್ರಾಮವನ್ನು ಶುಕಮುನಿ ಬಣ್ಣಿಸುತ್ತ ಹೇಳುತ್ತಾರೆ— ಕ್ಷುದ್ರಜನರು ಆಡುವ ಮರ್ಮಭೇದಕವಾದ ಕೆಟ್ಟ ಮಾತುಗಳು ಮಹಾತ್ಮರಲ್ಲಿ ಹೇಗೆ ವ್ಯರ್ಥವಾಗುವುವೋ ಹಾಗೇ ಕೃಷ್ಣಭಕ್ತರಾದ ದೇವತೆಗಳ ಮೇಲೆ ದುಷ್ಟ ದಾನವರು ಮತ್ತೆಮತ್ತೆ ಮಾಡಿದ ಆಕ್ರಮಣಗಳೆಲ್ಲವೂ ವ್ಯರ್ಥವಾದುವು.**

ಇಲ್ಲಿ ಬಲಿಷ್ಠರಿಗೆ ದೈಹಿಕವಾಗಿ ಹಿಂಸೆ ಮಾಡಲು ಶಕ್ತರಾಗದ ಅಲ್ಪಜನರು ಕೆಟ್ಟ ಮಾತುಗಳಿಂದ ಪೀಡಿಸಲು ಯತ್ನಿಸಿದರೆ ಅದು ವ್ಯರ್ಥವಾಗುವಂತೆ

ದೇವತೆಗಳ ಮೇಲೆ ದಾನವರು ಆಕ್ರಮಣ ಮಾಡಿದ್ದು ವ್ಯರ್ಥವಾಯಿತೆಂದು ಈ ದೃಷ್ಟಾಂತದಿಂದ, ದುರ್ಜನರಾಡುವ ನಿಂದೆಯಿಂದ ಮಹಾತ್ಮರಿಗೇನೂ ರೋಮಕ್ಕೂ ಹಾನಿ ಇಲ್ಲ ಎಂದು ದುರ್ಬಲಸಾಧಕನು ನಿಶ್ಚಯಿಸಿ ಸುಮ್ಮನಿರ ಬೇಕು. ವಿಷಾದ ಪಡಬೇಕಾಗಿಲ್ಲ ಎಂದು ಹೇಳಿದಂತಾಯಿತು.

ಭಾಗವತಧರ್ಮಾನುಷ್ಠಾನದಲ್ಲಿ ಪ್ರಯಾಸವಿಲ್ಲ ಎಂದಂತಾಯಿತು.



–೧೨೯–

**ಅಹಂಕಾರದಿಂದ ಕುರುಡಾದವರಿಗೆ ಹಿರಿಯರ ಹಿರಿಮೆ ಕಾಣುವುದಿಲ್ಲ**

**ವಿದ್ಯಾತಪೋ ವಿತ್ತ ವಪುರ್ವಯಃ ಕುಲೈಃ**
**ಸತಾಂ ಗುಣೈಃ ಷಡ್ಭಿರಸತ್ತಮಾ ಮದೈಃ ।**
**ಸ್ಮೃತೌ ಹತಾಯಾಮಭಿಮಾನ ದುರ್ದೃಶ**
**ಸ್ತಪ್ತಾ ನ ಪಶ್ಯಂತಿ ಹಿ ಧಾಮ ಭೂಯಸಾಂ ॥**

(ಭಾ.೪.೩.೧೭)

ನನು ದಕ್ಷಸ್ತಾವತ್ಪ್ರಜಾಪತಿಪ್ರವರೋ ಬಹುಗುಣಯುಕ್ತ ಇತಿ ಮುನೀನಾಂ ಸಂಮತಂ। ಮಹಾದೇವೋ ದೇವಪ್ರವರ ಇತಿ ಚ। ತದನಯೋರೇವಂವಿಧೇ ಕಲಹೇ ನಿಮಿತ್ತಂ ಸಂಭಾವಯಿತುಮಪಿ ನ ಶಕ್ಯಮಸ್ಮಾಭಿರಲ್ಪಮತಿಭಿರಿತ್ಯತಃ ಸತ್ಯಂ। ದಕ್ಷೋ ಗುಣವಾನಿತಿ ಭವೋ ಮಹೀಯಾನಿತ್ಯಪಿ। ತಥಾಪಿ ಯೇ ಶಾಸ್ತ್ರೇಷೂದಿತಾಃ ಸತಾಂ ಗುಣಾಃ ವಿದ್ಯಾದಯಃ ಷಟ್ ತೇ ಯದಿ ಪುಣ್ಯವಶಾದಸತ್ತಮೇಷು ಪ್ರಾಪ್ತಾಸ್ತದಾ ತ ಏವ ಮದಕಾರಿಣೋ ಭವಂತಿ ಪಯಃಪಾನಮಿವ ಸರ್ಪಾಣಾಂ। ತೈರ್ವಿದ್ಯಾದಿಮದೈಃ ಶಾಸ್ತ್ರಜನ್ಯಾ ಸ್ಮೃತಿಃ 'ಸ್ವೋತ್ತಮಾಃ ಪೂಜ್ಯಾ' ಇತಿ ಸಾ ಪ್ರತಿಬದ್ಧಾ ಭವತಿ। ತದಾನೀಮಹಮೇವ ಪ್ರವರ ಇತ್ಯಭಿಮಾನೋಽವಸರಂ ಲಭತೇ। ತೇನ ಚ ಮಹತ್ಪೂಜಾದೌ ವಿಮುಖಾ ಭವಂತಿ। ಯದ್ಯಪಿ ಮಹತ್ಸು ಸ್ವತೋಽಧಿಕಂ ಗುಣಗಣಂ ಜಾನಂತಿ। ತಥಾಪಿ ನ ತಂ ವಚಸಾ ವದಂತಿ। ನ ಚ ಶ್ಲಾಘಯಂತಿ ಸಭಾಯಾಂ। ಕುತಃ। ತಪ್ತಾಃ। ಯತಃ ವ್ಯಾಪಕಸಮಾವೇಶೇ ವಾ, ತದ್ವಾರ್ತಾಶ್ರವಣೇನ ವಾ, ವ್ಯಾಪ್ಯಾನಾಂ ಅಸತಾಂ ಸಂತಾಪೋ ಭವತೀತಿ ಹಿ ಸುಪ್ರಸಿದ್ಧಂ। ತದೇವಂ ಸತ್ಯಪಿ

**ತಸ್ಮಿನ್ ಗುಣಗಣೇ ಸತಿ ಚ ಮಹಾದೇವೇ ತತೋಽನೇಕಗುಣಾಧಿಕಮಹಿತ್ವೇ ನಿಮಿತ್ತಾಂತರವಶಾದಿದಮಿತ್ಥಮಿತಿ ಭಾವೇನಾಹ ॥ ವಿದ್ಯೇತಿ ॥**



**ರುದ್ರದೇವರು ಸತೀದೇವಿಗೆ ಹೇಳಿದರು—ವಿದ್ಯೆ ತಪಸ್ಸು ಧನಸಂಪತ್ತು ಶರೀರಬಲ ಯೌವನ ಉಚ್ಚಕುಲದಲ್ಲಿ ಜನ್ಮ ಇವೆಲ್ಲವೂ ಸಜ್ಜನರಿಗೆ ಮಾತ್ರ ಒಳ್ಳೆಯದು. ದುರ್ಜನರು ಈ ಆರು ಗುಣಗಳಿಂದ ಅಹಂಕಾರಪಡುತ್ತಾರೆ. ಅವರಲ್ಲಿ ಶಾಸ್ತ್ರಜ್ಞಾನ ಕುರುಡಾಗುತ್ತದೆ. ಶಾಸ್ತ್ರವಚನಗಳ ನೆನಪು ಅಳಿಸಿಹೋಗುತ್ತದೆ. ದುರಭಿಮಾನದಿಂದ ದೃಷ್ಟಿ ದೋಷಪೂರ್ಣವಾಗುತ್ತದೆ. ಮಾತ್ಸರ್ಯದ ಬೇಗೆಯಿಂದ ಮಹಾತ್ಮರ ಮಹಿಮೆಯನ್ನು ಕಾಣಲು ಅವರು ಶಕ್ತರಾಗುವುದಿಲ್ಲ.**

ಯದ್ಯಪಿ ದಕ್ಷಪ್ರಜಾಪತಿಯು ಬಹುಗುಣಶಾಲಿ, ಪ್ರಜಾಪತಿಗಳಲ್ಲೆಲ್ಲ ಉತ್ತಮನು. ಮಹಾದೇವನೂ ದೇವಶ್ರೇಷ್ಠನೇ ಆಗಿರುವಾಗ ಇಬ್ಬರ ನಡುವೆ ಕಲಹ ಉಂಟಾದುದು ದುರೂಹವೇ ಸರಿ. ನಮ್ಮಂತಹ ಅಲ್ಪಮತಿಗಳಿಗೆ ಇದರ ಕಾರಣ ತಿಳಿಯದು. ಏನೋ ಕಾರಣವಿದೆ. ಆದರೂ ಈ ಉದಾಹರಣೆಯಿಂದ ಇಷ್ಟು ಮಾತ್ರ ಹೇಳಬಹುದು. ಯಾವುದೋ ಪೂರ್ವಪುಣ್ಯದಿಂದ ದುಷ್ಟರಿಗೆ ವಿದ್ಯೆ ತಪಸ್ಸು ಮುಂತಾದ ಆರು ಗುಣಗಳು ಲಭಿಸಿದರೆ ಆ ಗುಣಗಳೇ ದುರ್ಜನರಲ್ಲಿ ಅಹಂಕಾರ ಬರಲು ಕಾರಣವಾಗುವುವು. ಹಾವಿಗೆ ಹಾಲೆರೆದಂತಾಗುವುದು. ವಿದ್ಯಾಮದದಿಂದ ಶಾಸ್ತ್ರದಲ್ಲಿ ಪಡೆದ 'ಸ್ವೋತ್ತಮರು ಪೂಜ್ಯರು' ಎನ್ನುವ ಉಪದೇಶದ ಸ್ಮರಣೆ ಅಳಿಸಿಹೋಗುವುದು. ಆಗ ತಾನೇ ದೊಡ್ಡವನೆಂಬ ದುರಭಿಮಾನ. ದೊಡ್ಡವರಲ್ಲಿ ಆದರವಿಲ್ಲ. ಅವರಲ್ಲಿ ತಮಗಿಂತ ಹೆಚ್ಚೇ ಗುಣಗಳಿದ್ದರೂ ಅದು ಇವರಿಗೆ ಗೊತ್ತಿದ್ದರೂ ಅದನ್ನು ಹೊರಗೆ ಆಡಿ ತೋರಿಸರು. ಸಭೆಯಲ್ಲಿ ಅವರ ಪ್ರಶಂಸೆ ಮಾಡಲಾರರು.

ದುಷ್ಟರಿಗೆ ಮಹಾತ್ಮರನ್ನು ಕಂಡರೇ ಮನಸಿನಲ್ಲಿ ಸಂತಾಪ. ಅವರ ಪ್ರಶಂಸೆ ಕಿವಿಗಳಿಗೆ ಬಿದ್ದರೆ ದುರ್ಜನರು ದುಃಖಪಡುವುದು ಪ್ರಸಿದ್ಧವೇ ಇದೆ.

ದಕ್ಷಪ್ರಜಾಪತಿ ದುರ್ಜನನಲ್ಲ. ಮಹಾತ್ಮ. ಆದರೂ ಅವನಿಗೆ ಮಹಾದೇವನ ನಿಂದೆಯಿಂದ ಬಹಳ ಅನರ್ಥ ಉಂಟಾಯಿತು. ಆದ್ದರಿಂದ

ಶ್ರೇಯಃಕಾಂಕ್ಷಿಗಳು ಸರ್ವಥಾ ದೊಡ್ಡವರನ್ನೆಂದಿಗೂ ನಿಂದಿಸಬಾರದೆಂದೂ ಪರರು ನಿಂದಿಸುತ್ತಿದ್ದರೆ ಅದನ್ನು ಕೇಳಬಾರದು, ಆ ಸ್ಥಳವನ್ನೂ ಬಿಟ್ಟು ದೂರ ಹೋಗಬೇಕು ಎಂದೂ ಪಾಠ ಕಲಿಯಬೇಕು.

ನಿಂದೆ ಮಾತು ಕಿವಿಗಳಿಗೆ ಬೀಳುತ್ತಿದ್ದರೂ ಅಲ್ಲೇ ಇರುವಂತಾದರೆ ದೊಡ್ಡವರಿಗೆ ಈ ನಿಂದೆಯಿಂದ ಏನೂ ಹಾನಿ ಇಲ್ಲ. ನಿಂದೆ ಮಾಡುವುದು ನಿಂದಕರಿಗೇ ಅನರ್ಥಕರ ಎಂದು ಅನುಸಂಧಾನ ಮಾಡಬೇಕು. ಹೀಗೆ ಮಾಡುವುದರಿಂದ ನಿಂದಾಶ್ರವಣದಿಂದಾಗುವ ಅನರ್ಥ ತಪ್ಪುತ್ತದೆ.



—೧೩೦—

## ಒಬ್ಬ ಬ್ರಾಹ್ಮಣನಿಗೆ ಮಾಡಿದ ಅವಮಾನ ಬ್ರಾಹ್ಮಣ ಕುಲಕ್ಕೇ ಅವಮಾನ

ನಾಹಂ ವಿಶಂಕೇ ಸುರರಾಜವಜ್ರಾ-
ನ್ನ ತ್ರ್ಯಕ್ಷ ಶೂಲಾನ್ನ ಯಮಸ್ಯ ದಂಡಾತ್ ।
ನಾಗ್ನ್ಯರ್ಕಸೋಮಾನಿಲವಿತ್ತಪಾಸ್ತ್ರಾತ್
ಶಂಕೇ ಭೃಶಂ ಬ್ರಹ್ಮಕುಲಾವಮಾನಾತ್ ॥

(ಭಾ.೫.೧೦.೧೮)

ಇದಮುದಿತಂ ಭವತಿ ಸಾಧುಪ್ರವರಸ್ಯಾಪಿ ದಕ್ಷಪ್ರಜಾಪತೇರ್ಮಹಸ್ನಿಂದಯಾ ಅನರ್ಥದರ್ಶನಾತ್ಸರ್ವಥಾ ಶ್ರೇಯೋರ್ಥಿಭಿರ್ಮಹನ್ನಿಂದಾ ಸ್ವಯಂ ನ ಕಾರ್ಯೈವ । ಪರೇಣ ಕ್ರಿಯಮಾಣಾಯಾಂ ತತೋಽಪಸರ್ಪಣಾದಿಕಂ ತತ್ರೈವ ಸ್ಥಿತ್ವಾ ಮಹತಾಮಕಿಂಚಿತ್ಕರಮಿತ್ಯನುಸಂಧಾನಪೂರ್ವಕಂ ತಸ್ಯಾಸ್ತದನಿಷ್ಟಸಾಧನತ್ವಾನುಸಂಧಾನಂ ವಾ ಕಾರ್ಯಂ । ತೇನ ಚ ಸ್ವಸ್ಯಾನರ್ಥೋ ನ ಭವತೀತಿ ಚ । ಪ್ರಮಾದಾನ್ಮಹದವಜ್ಞಾನಘಟನಾಯಾಮಪಿ ಮಹಾನರ್ಥಪ್ರಾಪ್ತಿರ್ಭವತಿ । ಕಿಮು ಬುದ್ಧಿಪೂರ್ವಕಂ ತತ್ಕೃತಾವಿತ್ಯಾಶಯೇನ ಸಿಂಧುಸೌವೀರದೇಶಾಧಿಪತೇಃ ರಹೂಗಣನಾಮ್ನೋ ರಾಜ್ಞಃ ಶಿಬಿಕಾವಾಹಕೈಃ ಏಕಸ್ಮಿನ್ನ್ಯೂನೇ ಸತಿ ಶಿಬಿಕಾವಾಹಕಪುರುಷಾನ್ವೇಷಣಸಮಯೇ ದೈವವಶಾದ್ ದ್ವಿಜವರ ಉಪಲಬ್ಧಃ । "ಏಷ ಪೀವಾ ವೋಢುಂ ಸಮರ್ಥ" ಇತಿ ತೈರ್ಗೃಹೀತಸ್ತೈಃ ಸಹ ಶಿಬಿಕಾಮುವಾಹ । ತದಾ ತದ್ಗತಿವಿಶೇಷೇಣ ವಿಷಮಗತೌ ಶಿಬಿಕಾಯಾಂ ರಾಜ್ಞಿ ಕುಪಿತೇ "ನ ವಯಂ ನರದೇವ ಪ್ರಮತ್ತಾಃ ಸಾಧ್ವೇವ

**ವಹಾಮಃ। ಅಯಮಧುನೈವ ನಿಯುಕ್ತೋ ನ ದ್ರುತಂ ವ್ರಜತಿ। ನಾನೇನ ಸಹ ವೋಢುಂ ಪಾರಯಾಮಃ। ಸಾಂಸರ್ಗಿಕೋ ದೋಷ ಏವ ನೂನಮೇಕಸ್ಯಾಪಿ ಸಂಸರ್ಗಿಣಾಂ ಭವಿತುಮರ್ಹತೀ''ತಿ ವಾಹಕೈರುತ್ತರೇ ದತ್ತೇ ಜಾತಮನ್ಯುಃ ಅವಿಸ್ಪಷ್ಟಬ್ರಹ್ಮಚಿಹ್ನಂ ನೂತನಂ ಪ್ರತ್ಯುವಾಚ ರಾಜಾ— ''ಅಹೋ! ಕಷ್ಟಂ! ಭ್ರಾತಃ ವ್ಯಕ್ತಮುರು ಶ್ರಾಂತೋಽಸಿ। ದೀರ್ಘಮಧ್ವಾನಮೇಕ ಏವ ಊಹಿತವಾನ್ ಸುಚಿರಂ। ನಾತಿಪೀವಾ ನಾತಿಸಂಹನನಾಂಗಃ ಜರಸೋಪದ್ರುತಃ ಭವಾನ್ಸಖೇ ನೋ ವಾ ಏತೇ ಪರೇ ಸಂಘಟ್ಟಿನ'' ಇತ್ಯೇವಮಾದಿ। ತಥಾಪಿ ತೇನಾನುದಿತೇ ಸತಿ ಪುನರ್ವಿಷಮಗತೌ ಚ ನರದೇವಾಭಿಮಾನೇನ ಬಹ್ವಸಂಬದ್ಧಂ ಅಭಿಭಾಷಮಾಣಂ ತತ ಏವ ತಮಸಿ ಪ್ರಪತಂತಂ ರಾಜಾನಂ ತುಚ್ಛೀಕೃತ್ಯ, ತನ್ಮದನಾಶಕೇ ಉತ್ತರೇ ದತ್ತೇ ಶಿಬಿಕಾತಃ ಅವರುಹ್ಯ, ಶಿರಸಾ ಪಾದಮೂಲೇ ಪ್ರಣತಃ ಕ್ಷಮಾಪಯನ್ನಿಜ್ಞಾಪಯಾಂಚಕ್ರೇ। ತಂ ಪ್ರಕಾರಂ ದರ್ಶಯತಿ॥ ನಾಹಮಿತಿ॥ ಅಹಂ ಸುರರಾಜಾದೇಃ ಅಸ್ತ್ರೇಭ್ಯೋ ನ ಬಿಭೇಮಿ। ಕಿಂ ತು। ಬ್ರಾಹ್ಮಣಾನಾಂ ಕುಲಸ್ಯಾಪ್ಯವಮಾನಾದೇವ ಭೃಶಮತ್ಯಂತಂ ಬಿಭೇಮಿ ॥**



**ರಹೂಗಣರಾಜ ಜಡಭರತನಲ್ಲಿ ಹೇಳಿಕೊಳ್ಳುತ್ತಾನೆ—ನಾನು ದೇವೇಂದ್ರನ ವಜ್ರಾಯುದಕ್ಕೂ ಭಯಪಡುವುದಿಲ್ಲ. ಶಿವನ ಶೂಲಕ್ಕೂ ಭಯಪಡುವುದಿಲ್ಲ. ಯಮನ ದಂಡಕ್ಕಾಗಲಿ ಅಗ್ನಿ ಸೂರ್ಯ ಚಂದ್ರ ವಾಯು ಕುಬೇರರ ಅಸ್ತ್ರಗಳಿಗಾಗಲಿ ಹೆದರುವುದಿಲ್ಲ. ಬ್ರಾಹ್ಮಣ ಕುಲಕ್ಕೆ ನನ್ನಿಂದಾಗಬಹುದಾದ ಅವಮಾನದ ಅಪರಾಧಕ್ಕೆ ಮಾತ್ರ ಬಹಳ ಅಂಜುತ್ತೇನೆ.**

ಗೊತ್ತಿಲ್ಲದೆ ಪ್ರಮಾದದಿಂದ ಜ್ಞಾನಿಗಳಿಗೆ ಅವಮಾನ ಮಾಡಿದರೂ ಮಹಾ ಅನರ್ಥವಿದೆ, ತಿಳಿದು ಮಾಡಿದರೆ ಇನ್ನೇನು ಹೇಳಬೇಕು? ಇದಕ್ಕೆ ಉದಾಹರಣೆ ರಹೂಗಣ ಎಂಬ ಸಿಂಧುಸೌವೀರ ದೇಶದ ರಾಜ ತತ್ವಜ್ಞಾನೋಪದೇಶ ಪಡೆಯುವುದಕ್ಕಾಗಿ ಕಪಿಲದೇವನ ಬಳಿಗೆ ಹೊರಟಿದ್ದ. ಅವನಿಗೆ ಪಲ್ಲಕ್ಕಿ ಹೊರುವವರಲ್ಲಿ ಒಬ್ಬ ಆಳು ಕಡಿಮೆ ಬಿದ್ದಿದ್ದರಿಂದ, ದೈವಾತ್ ಜಡಭರತಮುನಿ ಸಿಕ್ಕಿದನೆಂದು, ಅವನನ್ನು 'ಈತ ತರುಣ, ದಷ್ಟಪುಷ್ಟ ಕಾಯದವನು' ಎನ್ನುತ್ತ ಪಲ್ಲಕ್ಕಿ ಹೊರಲು ನೇಮಿಸಿದ. ಮುನಿ ದಾರಿಯಲ್ಲಿ ಕ್ರಿಮಿ ಕೀಟಗಳು ಕಾಲು ತುಳಿತಕ್ಕೆ ಸಿಕ್ಕಿ ಸಾಯಬಾರದೆಂದು ಮೆಲ್ಲಮೆಲ್ಲನೆ ಹೆಜ್ಜೆ ಹಾಕಿದ್ದರಿಂದ ಪಲ್ಲಕ್ಕಿ ಏರುಪೇರಾಯಿತು.

ರಾಜ ಸಿಟ್ಟಾಗಿ ಬೈಯಲು ತೊಡಗಿದ. ಆಳುಗಳು ಹೇಳಿದರು, ಪ್ರಭು, ನಾವು ಸರಿಯಾಗಿಯೆ ಹೊರುತ್ತಿದ್ದೇವೆ. ಈತ ಹೊಸಬ. ಬೇಗಬೇಗ ನಡೆಯುತ್ತಿಲ್ಲ. ಇವನೊಂದಿಗೆ ನಾವು ಹೊರಲಾರೆವು. ಒಬ್ಬನು ತಪ್ಪು ಮಾಡಿದರೆ ಅವನ ಜೊತೆಗೆ ನಾವೂ ತಪ್ಪಿತಸ್ಥರಾಗುವೆವು' ಎಂದರು.

ರಾಜ ಹೊಸಬನ ಮೇಲೆ ಸಿಟ್ಟಾಗಿ, ಅವನಲ್ಲಿ ಸ್ಪಷ್ಟವಾಗಿ ಬ್ರಾಹ್ಮಣ ಚಿಹ್ನೆ ಯಾವುದೂ ಇಲ್ಲದಿದ್ದುದರಿಂದ ತಿಳಿಯದೆ, ವ್ಯಂಗ್ಯವಾಗಿ ನುಡಿದ, 'ಅಯ್ಯೋ ಪಾಪ, ತುಂಬಾ ಆಯಾಸಪಟ್ಟಿರುವೆ! ಎಷ್ಟು ದೂರ ಒಬ್ಬನೇ ಪಲ್ಲಕ್ಕಿ ಹೊತ್ತು ತಂದಿರುವೆ! ನೀನು ಗಟ್ಟಿಮುಟ್ಟಿನ ಆಳು ಅಲ್ಲ, ಮೈಗೆ ಮುಪ್ಪು ಆವರಿಸಿದೆ. ನಿನ್ನ ಜೊತೆಗಿರುವವರು ಯಾರೂ ಭಾರವನ್ನೆ ಹೊತ್ತಿಲ್ಲ' ಎಂದು ಮುಂತಾಗಿ ನಿಂದಿಸಿದ. ಮುನಿ ಏನೂ ಆಡಲಿಲ್ಲ. ಮತ್ತೆ ಪಲ್ಲಕ್ಕಿ ಏರುಪೇರಾಯಿತು. ಡೋಲಾಯಮಾನವಾಯಿತು. ರಾಜನಿಗೆ ತಾನು ರಾಜನೆಂದು ದುರಭಿಮಾನ. 'ಹೊಡಿಸುವೆನು, ಬಡಿಸುವೆನೆಂ'ದು ಅಸಂಬದ್ಧವಾಗಿ ಮಾತಾಡಿದ. ಮುನಿ ಲೆಕ್ಕಿಸದೆ, ನರಕದಲ್ಲಿ ಈತ ಬೀಳಲು ಹೊರಟಿದ್ದಾನೆ ಎಂದುಕೊಂಡು ಅವನ ಮದವನ್ನು ಇಳಿಸಲು ವಿವೇಕದ ಮಾತುಗಳನ್ನಾಡಿದ. ಆಗ ರಾಜ ಪಲ್ಲಕ್ಕಿಯಿಂದ ಕೆಳಗಿಳಿದು ಮುನಿಗೆ ತಲೆಬಾಗಿ ನಮಿಸಿ ಕ್ಷಮಾಯಾಚನೆ ಮಾಡಿದ. ಆಗ ಅವನು ಹೇಳಿದ ಮಾತು ಇದು. 'ಇಂದ್ರನು ವಜ್ರಾಯುಧವನ್ನು ಎಸೆದರೆ ಒಬ್ಬನ ಪ್ರಾಣ ಹೋದೀತು. ನಾನು ನಿಮಗೆ ಕೆಟ್ಟ ಮಾತನ್ನಾಡಿದರೆ ಬ್ರಾಹ್ಮಣ ಕುಲಕ್ಕೇ ಅವಮಾನವಾದೀತು. ಅದಕ್ಕೇ ನಾನು ಹೆದರುತ್ತೇನೆ' ಎನ್ನುತ್ತಾನೆ.



—೧೩೧—

**ಹಿರಿಯರಲ್ಲಿ ಮಾಡಿದ ಅಪಚಾರ ರುದ್ರನನ್ನೂ ಸುಟ್ಟೀತು**

ನ ವಿಕ್ರಿಯಾ ವಿಶ್ವಸುಹೃತ್‌ಸಖಸ್ಯ
ಸಾಮ್ಯೇನ ವೀತಾಭಿಮತೇಸ್ತವಾಪಿ ।
ಮಹದ್ವಿಮಾನಾತ್ ಸುಕೃತಾದ್ಧಿ ಮಾದೃಗ್
ಧಕ್ಷ್ಯತ್ಯದೂರಾದಪಿ ಶೂಲಪಾಣೇಃ ॥

(ಭಾ.೫.೧೦.೨೬)

ಯದ್ಯಪಿ ಸರ್ವ ಭೂತೇಷು ಸಮತ್ವೇನ ವಿದ್ಯಮಾನೇನ ನಿಮಿತ್ತೇನ ಸರ್ವಸ್ಯಾಪಿ ನಿರ್ನಿಮಿತ್ತಮುಪಕಾರಕೃತಃ ಅತ ಏವ ಸರ್ವಪ್ರಿಯಸ್ಯ ತಥಾ, ಗತಾಭಿಮಾನಸ್ಯ ತವ ಮಯಾ ಕೃತೇನ ಶಿಬಿಕಾವಾಹನಾಸಂಬದ್ಧಭಾಷಣಾದ್ಯ ಸತ್ಕರ್ಮಣಾ ಮನಸಿ ವಿಕಾರೋ ನಾಸ್ತ್ಯೇವ । ತಥಾಪಿ ತನ್ಮಮಾಕಾರ್ಯಮೇವ । ಯತಃ ಶೂಲಪಾಣಿಃ ಉಮಾಪತಿರಪಿ ಸ್ವಕೃತಾನ್ಮಹದ್ವಿಮಾನಾತ್ ಅದೂರಾತ್ ಶೀಘ್ರಮೇವ ಧಕ್ಷ್ಯೇತ । ಕಿಮು ಮಾದೃಗ್ ಅಲ್ಪ ಇತಿ ॥ ೧೩೧ ॥



ರಹೂಗಣ ರಾಜನು ಜಡಭರತನಿಗೆ ಹೇಳುತ್ತಾನೆ—ಯದ್ಯಪಿ ನಿಮ್ಮಂಥ ಜ್ಞಾನಿಗಳು ಎಲ್ಲ ಪ್ರಾಣಿಗಳಲ್ಲಿ ಸಮವಾಗಿ ದಯೆದೋರುವವರು. ಎಲ್ಲ ಪ್ರಾಣಿಗಳಿಗೂ ಅನಿಮಿತ್ತ ಉಪಕಾರಗೈವವರು ಎಲ್ಲರಿಗೂ ಪ್ರಿಯರು. ದೇಹಾಭಿಮಾನ' ರಹಿತರಾದ್ದರಿಂದ ಪಲ್ಲಕ್ಕಿ ಹೊರಿಸುವುದು ಅಸಂಬದ್ಧವಾಗಿ ಬೈಯುವುದು ಮುಂತಾಗಿ ನಾನು ಅಪಚಾರ ಮಾಡಿದರೂ ಅವರು ಮನಸ್ಸಿನಲ್ಲಿ ಏನೂ ವಿಕಾರ ಹೊಂದುವುದಿಲ್ಲ. ಆದರೂ ನಾನು ಮಾಡಿದ್ದು ದೊಡ್ಡ ತಪ್ಪು. ತ್ರಿಶೂಲಧಾರಿ ಶಿವನೂ ಕೂಡ ದೊಡ್ಡವರಲ್ಲಿ ಅಪಚಾರ ಮಾಡಿದರೆ ಬೇಗನೆ ಸುಟ್ಟುಹೋದಾನು, ಅಂದಮೇಲೆ ನನ್ನಂಥವರ ಪಾಡೇನು?

ಇದೇನೂ ಅತಿಶಯೋಕ್ತಿಯಲ್ಲ. ಉತ್ತಮರಲ್ಲಿ ಅಪಚಾರ ಮಾಡಿದರೆ ರುದ್ರನನ್ನೂ ಕೂಡ ಆ ಪಾಪವು ಸುಟ್ಟೀತೆಂ'ದು ಗರುಡ ಪುರಾಣವೂ ಹೇಳಿದೆ—

ಸ್ವತೋ ಮಹದವಜ್ಞಾನಾದ್
ರುದ್ರೋಽಪ್ಯಾತ್ಮಾನಮಾದಹೇತ್ ।

(ಭಾ.ತಾ.೫.೧೦.೨೬)



—೧೩೨—

**'ನಮೋಮಹದ್ಭ್ಯೋ' ಶ್ಲೋಕದ ಅರ್ಥಗಾಂಭೀರ್ಯ**

ನಮೋ ಮಹದ್ಭ್ಯೋಽಸ್ತು ನಮಃ ಶಿಶುಭ್ಯೋ
ನಮೋ ಯುವಭ್ಯೋ ನಮ ಆ ಬಟುಭ್ಯಃ ।

**ಯೇ ಬ್ರಾಹ್ಮಣಾ ಗಾಮವಧೂತಲಿಂಗಾ**
**ಶ್ಚರಂತಿ ತೇಭ್ಯಃ ಶಿವಮಸ್ತು ರಾಜ್ಞಾಂ ॥**

(ಭಾ.೫.೧೩.೨೩)

ಏವಮಾಕ್ಷಿಪ್ಯಾಜ್ಞಾನಕೃತಾದೇವ ಅವಜ್ಞಾನಾತ್ತ್ರಸಕ್ತಸ್ಯ ಮಹತೋಽನರ್ಥಸ್ಯ ನಿವೃತ್ತಿಂ ಪ್ರಾರ್ಥಯತೇ ॥ **ನಮ ಇತಿ** ॥ ತೇಭ್ಯೋ ಬ್ರಾಹ್ಮಣೇಭ್ಯಃ ಸಕಾಶಾತ್ । ಅವಧೂತಂ ವಿಗತಂ ಲಿಂಗಂ ಬ್ರಾಹ್ಮಣಚಿಹ್ನಂ ಏಭ್ಯಸ್ತೇ । ಆಬಟುಭ್ಯಃ ಬಟುಪರ್ಯಂತಂ । ಶಿವಮನರ್ಥನಿವೃತ್ತಿರೂಪಂ । **ಯಥಾಹುಃ**—

''ಆಯುಃ ಶ್ರಿಯಂ ಯಶೋ ಧೈರ್ಯಂ ಲೋಕಾನಾಶಿಷ ಏವ ಚ ।
ಹಂತಿ ಶ್ರೇಯಾಂಸಿ ಸರ್ವಾಣಿ ಪುಂಸೋ ಮಹದತಿಕ್ರಮಃ ॥'' ಇತಿ ।

**ಅತ್ರಾಯಮಾಶಯಃ**— ಏವಂ ಪ್ರಮಾದತೋ ಮಹದವಜ್ಞಾನಪ್ರಾಪ್ತಪಾಪಪರಿಹಾರಚಿಕೀರ್ಷಯಾ ಮಹತಾಮಪಿ ಮಹೀಯಾಂಸಂ ಶ್ರೀನಾರಾಯಣಮಾರಭ್ಯ ಅವಧೂತ ಪರ್ಯಂತಂ ನಮನಮೇಕಮೇವ ಅಸ್ಮಾಭಿಃ ಅನುಷ್ಠೇಯಮಿತಿ ಭಾವೇನ ಮಹದಾದಿಭೇದೇನ ಚತುರ್ವಿಧಂ ಶ್ರೀಹರಿಂ ತಾವನ್ನಮತಿ ॥ **ನಮೋ ಮಹದ್ಭ್ಯ ಇತಿ** ॥ ಪರಿಮಾಣತಃ ಆ ಮಹದ್ಭ್ಯಃ ರೂಪವಿಶೇಷೇಭ್ಯಃ ಆ ನಮೋಽಸ್ತು । ನ ಕೇವಲಂ ನಿರವಧಿಕಮಹತ್ಪರಿಮಾಣೇಭ್ಯಃ ಭಕ್ತ್ಯಾದಿಸಾಹಿತ್ಯೇನ ಸಮ್ಯಙ್ನಮೋಽಸ್ತ್ವಿತಿ । ಕಿಂ ನಾಮ । ತದೀಯಂ ಮಹೀಯೋರೂಪಮಾರಭ್ಯ ಅಣೀಯಃಪರ್ಯಂತಮೇವೇತ್ಯಾಶಯೇನಾಹ ॥ **ಆ ಶಿಶುಭ್ಯ ಇತಿ** ॥ ಶಿಶುಭ್ಯೋಽಪ್ಯಾ ಶಿಶುಪರ್ಯಂತಮಪಿ ನಮೋಽಸ್ತ್ವಿತಿ । ನನ್ವೇವಂ ಮಹೀಯೋರೂಪಮಾರಭ್ಯ ಅಣೀಯಃಪರ್ಯಂತಂ ಗಣನೇ ಅನಂತಪರಿಮಾಣರೂಪಪ್ರಾಪ್ತ್ಯಾ ಅಸ್ಮಾಕಂ ಅಲ್ಪಮತೀನಾಂ ಅಲ್ಪಾಯುಷಾಂ ಚ ನ ತನ್ನಮನಂ ಸುಶಕ್ಯ ಮಿತ್ಯತಃ ಸತ್ಯಂ ಪ್ರತಿವ್ಯಕ್ತಿನಮನೇ ತಥೇತಿ । ಅತ್ರ ತು ಕಯಾಚಿದ್ವಿವಕ್ಷಯಾ ಅನಂತರೂಪಸ್ಯಾಪಿ ಹರೇಃ (ಚತೂರೂಪತ್ವವಂದನಂ ಅನಂತಪರಿಮಾಣಸ್ಯಾಪಿ) ಪರಿಮಾಣಚತುಷ್ಟಯೋಪೇತ ವಿಗ್ರಹತಯಾ ಭವಾದೃಶಾನಾಮಪಿ ಕ್ರೋಡೀಕಾರೇಣ ತನ್ನಮನಂ ಸುಶಕಮಿತ್ಯಭಿಪ್ರಾಯೇಣ ಮಹತ್ತ್ವಾಣುತ್ವ ತನ್ಮಧ್ಯವರ್ತಿ ಯೌವನಾಕಾರಸದೃಶಾಕಾರತ್ವ ವಟುತ್ವಾಕಾರಸದೃಶಾಕಾರತ್ವವಿವಕ್ಷಯಾ ಚತುಷ್ಟಯಮಭಿಪ್ರೇತ್ಯ ಮಹತ ಆರಭ್ಯ ಶಿಶುಪರ್ಯಂತಮಿತ್ಯುಕ್ತಂ ವಿಶದಯನ್ ತನ್ಮಧ್ಯವರ್ತಿನೋ ದರ್ಶಯತಿ ॥ **ನಮೋ ಯುವಭ್ಯೋಽಸ್ತು ನಮೋ ಬಟುಭ್ಯ ಇತಿ** ॥ ಏವಂ ಪರಿಮಾಣಚತುಷ್ಟಯೋಪೇತಾನ್ಯಪಿ ರೂಪಾಣಿ ನ ತ್ರಿತ್ವಾದೌ ಪರ್ಯವಸನ್ನಾನಿ,

ಕಿಂತು ಅಲಂ ಬಹೂನಿ ಸಂತಿ ಇತ್ಯಾಶಯೇನ ಮಹದ್ಭ್ಯ ಇತ್ಯಾದೌ ಸರ್ವತ್ರ ಬಹುವಚನಪ್ರಯೋಗಃ। ತಾನಿ ಚ ನಾಗಂತುಕನಿಮಿತ್ತವಶೇನ ವೃದ್ಧ್ಯಾದಿಮಂತಿ ಕಿಂತು ಏಕಪ್ರಕಾರೇಣೈವ। ಆ ಸಮಂತಾತ್ ಸರ್ವೇಷು ಕಾಲೇಷು ಸರ್ವೇಷು ದೇಶೇಷು ಕೇಷುಚಿನ್ನಿಮಿತ್ತೇಷು ಆಗತೇಷು ಗತೇಷು ವಾ ತಥೈವ ಸಂತೀತ್ಯಾಶಯೇನ ಆ ಮಹದ್ಭ್ಯ ಇತ್ಯಾದ್ಯುಕ್ತಂ। ಅಸ್ತು ಪರಿಮಾಣತೋ ಮಹತ್ತ್ವಾದಿಕಂ ಸದಾತನಂ, ಅವಿಕೃತಂ ಚ। ವಾಸ್ತವೀ ಸ್ಥಿತಿಸ್ತು ತೇಷಾಂ ರೂಪವಿಶೇಷಾಣಾಂ ಕಥಮಿತಿ ಚೇತ್। ಸದಾ ತಾರುಣ್ಯಮೇವೇತಿ ವದಾಮಃ। ಯದಾ ಖಲು ಯದನುಗ್ರಹಪಾತ್ರಾಣಾಂ ರೂಪವಿಶೇಷಾಣಾಂ ದೇವಾನಾಮಪಿ ನಿತ್ಯತರುಣತಾ, ತದಾ ಕಾ ಕಥಂತಾ ಆದಿದೇವಶಿರೋಮಣೇಃ ಹರೇಃ ರೂಪಾಣಾಂ ವಿಷಯೇ। ತದೇತದಭಿಸಂಧಾಯ ಯುವಭ್ಯ ಇತಿ ಸರ್ವಾನ್ ವಿಶೇಷಯಾಮಾಸ॥

**ಅಥವಾ** ಏವಂ ಮಹತಾಂ ಮಹೀಯಾಂಸಂ ಶ್ರೀಹರಿಂ ನತ್ವಾ ಮಹತೋ ದೇವಾನಪಿ ಚತುರ್ವಿಧಾನ್ನಮತಿ। ನಮೋ ಮಹದ್ಭ್ಯ ಇತಿ॥ ವಿಷ್ಣುಬ್ರಹ್ಮರುದ್ರೇಭ್ಯಃ ನಮೋಽಸ್ತು। ತಥಾ ಶಿಶುಭ್ಯೋ ನಮೋಽಸ್ತ್ವಿತ್ಯಾದಿ ಯೋಜನೀಯಂ। ನನು ವಿಷ್ಣುಃ ಪ್ರಾಕ್ಪ್ರಣತಃ। ಸತ್ಯಂ। ದೇವತ್ವೇನಾತ್ರ ಗ್ರಹಣಾತ್। ಅತ ಏವ 'ಯೇಽನ್ಯೇ ವಿಭೀಷಣಹನೂಮದುಪೇಂದ್ರದತ್ತಾಃ ಪಾರ್ಥಾರ್ಷ್ಟಿಷೇಣವಿದುರಶ್ರುತದೇವಮುಖ್ಯಾ' ಇತ್ಯಾದೌ ಭಕ್ತವರ್ಗೇಽಪಿ ಭಗವಾನ್ ಗೃಹೀತಃ।

ನನು ತರ್ಹಿ ಇದಂ ಚಾತುರ್ವಿಧ್ಯಂ ನ ಸಂಭವತ್ಯೇವ। ದೇವಾ ಅಜರಾಮರಾಃ। ನ ಚಾಜರಾಣಾಂ ಮಹತ್ತ್ವಂ ವೃದ್ಧತ್ವಾ ಪರಪರ್ಯಾಯಂ ಸಂಭವತಿ। ನಾಪ್ಯಮರಾಣಾಮುತ್ಪತ್ತ್ಯರ್ಭಕತಾ ಪರಪರ್ಯಾಯಾ ಶಿಶುತಾ। ನ ಚ ತದಭಾವೇ ತದುತ್ತರಾವಸ್ಥಾ ಅಶನಿತ್ವಾ ಪರಪರ್ಯಾಯಾ ವಟುತಾಪಿ। ನಾಪಿ ತಸ್ಯಾಭಾವೇ ತದುತ್ತರಾವಸ್ಥಾರೂಪಾ ಯುವತಾ ಸಂಭಾವಿತಾ। ತದೇವಂ ಮಹತ್ತ್ವ-ಯುವತ್ವ-ವಟುತ್ವ-ಶಿಶುತ್ವಾನಾಮಸಂಭವಾನ್ನೈವಂ ಚಾತುರ್ವಿಧ್ಯಂ ದೇವಾನಾಮಿತಿ ಚೇನ್ನೈವಂ। ದೇವಾನಾಂ ನಿತ್ಯಯುವತ್ವೇಽಪಿ ವಿವಕ್ಷಾವಿಶೇಷೇಣ ಮಹತ್ತ್ವಾದ್ಯುಪಪತ್ತೇಃ। **ತಥಾಹಿ**— ಹರಿವಿರಿಂಚಿಹರಾ ಸ್ತಾವನ್ಮಹತ್ವಪದೇನ ವಿವಕ್ಷಿತಾಃ। ತೇಷಾಂ ಮಹತ್ತ್ವಂ ನಾಮ ಅವಾಂತರಪಿತ್ರಾದಿಸಂಬಂಧ ಸಿದ್ಧಿಶೂನ್ಯತ್ವಂ। ತತ್ರ ಹರೌ ಪಿತ್ರಾದಿಸಂಬಂಧ-ಪ್ರಸಿದ್ಧೇ-ರೇವಾಭಾವೇನ ವಿರಿಂಚೇ ಹರೇ ಚ ತತ್ಸತ್ತ್ವೇಽಪಿ ತತ್ಪಿತ್ರಾದಾವಸಾಧಾರಣತ್ವ

ರೂಪಾವಾಂತರತ್ವಾಭಾವೇನ ವಿಶಿಷ್ಟಾಭಾವ ಸತ್ತ್ವಾತ್। ಹರಿಕಮಲಯೋರ್ಬ್ರಹ್ಮಸರಸ್ವತ್ಯೋರ್ವಾ ಜಗತ್ಪಿತೃತ್ವಮಾತೃತ್ವ ಸತ್ತ್ವೇನಾವಾಂತರಪಿತೃತ್ವಾದ್ಯಭಾವಾತ್। ಇದಮೇವ ಚ ವೃದ್ಧತ್ವಮಿತಿ ಗೀಯತೇ। ಮಹತಾಂ ಮಹೀಯಸಿ ''ಕಶ್ಚಿನ್ಮಹಾನ್ಸ್ಯ ನ ಕಾಮನಿರ್ಜಯಃ ಮಹಾದೇವೇ' ಇತ್ಯಾದೌ। ಅವಾಂತರಪಿತ್ರಾದಿಸಂಬಂಧ ವತ್ತ್ವೇನ ಪ್ರಸಿದ್ಧತ್ವಮೇವ ಹಿ ಶಿಶುತ್ವಂ ವೃದ್ಧತ್ವಪ್ರತಿರೂಪತ್ವಾತ್ ಶೈಶವಸ್ಯ। ತಚ್ಚ ಸ್ಕಂದೇಂದ್ರಾದಾವಸ್ತೀತಿ ತ ಏವ ಅರ್ಭಕಪದಪರ್ಯಾಯಶಿಶುಪದೇನ ವಿವಕ್ಷಿತಾಃ।

ನನ್ವತ್ರ ವೈವಕ್ಷಿಕಮಹತ್ತ್ವಸ್ಯ ಹರಿವಿರಿಂಚಹರೇಷು ತ್ರಿಷ್ವಪಿ ಸತ್ತ್ವೇನ ತೇಷಾಂ ಮಹದ್ಭ್ಯ ಇತ್ಯತ್ರ ಸ್ತುತ್ಯತಾ। ತಥಾ ತಾದೃಶಸ್ಯ ಶಿಶುತ್ವಸ್ಯ ಸ್ಕಂದೇಂದ್ರಾದಿಷು ಸತ್ತ್ವೇನ ತೇಷಾಂ ಶಿಶುಭ್ಯ ಇತ್ಯತ್ರ ಸ್ತುತ್ಯತಾ। ಯುವಭ್ಯ ಇತ್ಯತ್ರ ತಥಾ ವಟುಭ್ಯ ಇತ್ಯತ್ರ ಚ ಕೇಷಾಂ ಸ್ತುತ್ಯತಾ। ಕಿಂಚ ತದ್‌ಯುವತ್ವಂ ವಟುತ್ವಂ ಚೇತಿ ಚೇತ್। ಸ್ಕಂದೇಂದ್ರಾದೀನಾಮೇವೋಭಯತ್ರಾಪಿ ಸ್ತುತ್ಯತೇತಿ ವದಾಮಃ। ಯುವತ್ವಾದಿಕಂ ತು ವೈವಕ್ಷಿಕಂ ನ ವಕ್ತವ್ಯಮೇವ। ನಹಿ ವಿವಕ್ಷಾವಿಶೇಷೇಣ ಕಸ್ಯಚಿತ್ಪದಾರ್ಥಸ್ಯ ವಚನಂ ವ್ಯಸನಿತಯಾ ಕ್ರಿಯತೇ। ಕಿಂ ನಾಮ। ಪ್ರಸಿದ್ಧಸ್ಯಾಸಂಭವೇ, ಸತಿ ಚ ಪ್ರಯೋಜನವಿಶೇಷೇ। ತತ್ರಾಜರಾಮರಾಣಾಂ ದೇವಾನಾಂ ಮಹತ್ತ್ವಶಿಶುತ್ವಯೋರಸಂಭವಶಂಕಯಾ ಸಂಭಾವಯಿತುಂ ವೈವಕ್ಷಿಕಂ ತದುಭಯಮುಕ್ತಂ। ಅಸತಿ ಜರೋಪೇತಶರೀರಸಂಯೋಗೇ, ಅಸತ್ಯಪಿ ನವೀನಶರೀರಸಂಯೋಗೇ, ಉಕ್ತೋಭಯಸಂಭವಾತ್। ಪ್ರಯೋಜನಂ ಚ ಸ್ತುತ್ಯರ್ಥಂ ಪ್ರವೃತ್ತಾನಾಂ ಪದಾನಾಂ ಸ್ತೋತುಃ ಪುರುಷಾರ್ಥಾರ್ಪಣಮೇವ। ಏತಚ್ಚ ಅನುಪದಮೇವ ಸ್ಫುಟೀಭವಿಷ್ಯತಿ। ನ ತ್ವೇವಂ ಯುವತ್ವಾದಿಕೇ ಅಸಂಭವಶಂಕಾಸ್ತಿ। ನಾಪೀತಃ ಪ್ರಯೋಜನಾಲಾಭೇನ ತಲ್ಲಾಭಾಯ ವೈವಕ್ಷಿಕಾ ನುಸರಣಮಿತಿ ಯುಕ್ತಂ। ಮಹತ್ತ್ವಾದಿಜ್ಞಾನಸ್ಯ ಸ್ತುತ್ಯಪ್ರೀತಿಜನಕತಯಾ ತತ್ರ ತಾದೃಶವೈವಕ್ಷಿಕಾನುಸರಣಸ್ಯ ಯುಕ್ತತಾ। ಅತ್ರ ತು ಯುವತ್ವಾದಿಜ್ಞಾನಸ್ಯೈವ ತತ್ಪ್ರೀತಿಸಾಧನತಯಾ ತತ ಏವ ಪ್ರಯೋಜನಲಾಭೇನ ತದರ್ಥಂ ತದನುಸರಣಸ್ಯ ಅನಾವಶ್ಯಕತ್ವಾತ್। ಇದಮೇವ ತಾವದವಶಿಷ್ಯತೇ। ಯತ್ ಶಿಶುತ್ವೇನ ಪ್ರಣತಾನಾಮೇವ ಸ್ಕಂದೇಂದ್ರಾದೀನಾಂ ಪುನರ್ಯುವತ್ವಾದಿನಾ ಪ್ರಣಾಮಃ ಪ್ರಸಜ್ಯತೇ। ತಥಾಚ ಪುನರುಕ್ತಿರಿತಿ। ಏತದಪಿ ನ ದೂಷಣಂ। ಪ್ರಾಪ್ತಾಪತ್ಪರಿಹಾರಾಯ ದೇವಾಃ ಸ್ತೂಯಂತ ಇತಿ ತಾವದವಿವಾದಂ। ಸ್ತುತಿಶ್ಚ ಮಾಹಾತ್ಮ್ಯಪ್ರತಿಪಾದನಮೇವ।

ತೇನೈವ ಪ್ರೀತಿರಿತಿ ಪ್ರಸಿದ್ಧಮೇವ । ತತಃ ಸ್ವಪ್ರಯೋಜನಂ ಸಾಧಯತಾ ಯಥಾ ಸ್ತುತ್ಯಪ್ರೀತಿಃ ತಸ್ಮಿನ್ ಅಧಿಕಾ ಭವೇತ್, ತಥಾ ಕರ್ತವ್ಯಮೇವ ಪ್ರಯೋಜನ-ಲಾಭಪರ್ಯಂತಮಿತಿ । ಸತಿ ಚ ಪ್ರಯೋಜನೇ ತದದೂಷಣತ್ವಾತ್ । ಕಿಂಚ ದೇವಾನಾಂ ರೂಪದಾರಿದ್ರ್ಯಾ ಭಾವೇನ ಸ್ಕಂದೇಂದ್ರಾದೀನಾಮೇವ ವಿಶೇಷ ವಿವಕ್ಷಯಾ ಪುನಃ ಪ್ರಣಾಮಸ್ಯ ಶ್ಲಿಷ್ಟತರತ್ವಾತ್ । ಪರಮೇಶ್ವರಪ್ರೇಮ-ಪಾತ್ರಾಣಾಂ ದೇವಾನಾಂ ವಿಶೇಷತಃ ತತ್ಸಂಪಾದನಾಯ ರೂಪಾಂತರೇ ಅವಸ್ಥಾವಿಶೇಷೇಣೈವ ಅವಸ್ಥಾನೇನ ತಥಾ ಸ್ತವನೇನ ಸ್ತೋತರಿ ತೇಷಾಂ ಪ್ರೀತಿವಿಶೇಷಲಾಭಸದ್ಭಾವಾಚ್ಚೇತಿ ॥ ಛ ॥

ಅಥವಾ ಯಥಾ ಹಿ ಅಧಿಕವಯಸಃ ಮಹಾಂತಃ । ತತೋ ನ್ಯೂನವಯಸಃ ಯುವಾನಃ । ತತೋಽಪಿ ನ್ಯೂನವಯಸೋ ವಟವಃ । ತತೋಽಪಿ ನ್ಯೂನವಯಸಃ ಶಿಶವಃ । ತತ್ರ ಸರ್ವತೋಽಪಿ ನ್ಯೂನಗುಣಾಃ ಶಿಶವಃ । ತತ್ರ ಸರ್ವತೋಽಪಿ ಅಧಿಕಗುಣಾಃ ತ್ರಯೋ ದೇವಾಃ ಯದಾ ಪ್ರಥಮತ್ವೇನ ವಿವಕ್ಷಿತಾಃ, ತದಾ ತತ್ತ್ರಿಕವತ್ ಅಧಿಕಗುಣತ್ವಾಭಾವೇನ, ಅಸ್ಮದಾದಿವತ್ ಅಲ್ಪಗುಣತ್ವಸ್ಯ ಚ ಅಭಾವೇನ, ಮಧ್ಯಮಗುಣತ್ವಾತ್ ಇಂದ್ರಾದಯೋ ಯುವತ್ವೇನ ವಿವಕ್ಷಿತಾಃ । ಯದಾ ತು ತ್ರಿಷ್ವಪಿ ಅಧಿಕಗುಣತಯಾ ವಿಷ್ಣುರೇವ ಮಹತ್ತ್ವೇನ ವಿವಕ್ಷಿತಃ, ತದಾ ತದ್ವತ್ ಅಧಿಕಗುಣತ್ವಾಭಾವೇನ ಅಸ್ಮದಾದಿವತ್ ಅಲ್ಪಗುಣತ್ವಸ್ಯ ಚ ಅಭಾವೇನ ಮಧ್ಯಮಗುಣತ್ವಾತ್ ಬ್ರಹ್ಮಾದಯ ಏವ ಯುವತ್ವೇನ ವಿವಕ್ಷಿತಾಃ । ತತೋಽಪಿ ನ್ಯೂನಗುಣತ್ವೇನ ಅಸ್ಮದಾದಿಭ್ಯಃ ಅಲ್ಪಗುಣೇಭ್ಯಃ ಅಧಿಕಗುಣತ್ವೇನ ಇಂದ್ರಾದಯ ಏವ ಅಶನಿತ್ವಾಪರಪರ್ಯಾಯವಟುತ್ವೇನ ವಿವಕ್ಷಿತಾಃ । ಯದಾ ತು ದ್ವಯೋರಪಿ ಮಧ್ಯೇ ಬ್ರಹ್ಮಣಃ ಅಧಿಕಗುಣತ್ವಂ ವಿವಕ್ಷಿತಂ, ತದಾ ವಿಷ್ಣುವತ್ ಅಧಿಕಗುಣತ್ವಾ-ಭಾವೇನ ಅಸ್ಮದಾದಿವತ್ ಅಲ್ಪಗುಣತ್ವಾಭಾವೇನ ಚ ಮಧ್ಯಮಗುಣತ್ವಾತ್ ಬ್ರಹ್ಮೈವ ಯುವತ್ವೇನ ವಿವಕ್ಷಿತಃ । ತತೋಽಪಿ ನ್ಯೂನಗುಣತ್ವೇನ ಅಸ್ಮದಾದಿಭ್ಯಃ ಅಲ್ಪಗುಣೇಭ್ಯಃ ಅಧಿಕಗುಣತ್ವೇನ ರುದ್ರ ಏವ ವಟುತ್ವೇನ ವಿವಕ್ಷಿತಃ । ತತೋಽಪಿ ನ್ಯೂನಗುಣತ್ವೇನ ಅಸ್ಮದಾದಿಭ್ಯಃ ಅಲ್ಪಗುಣೇಭ್ಯಃ ಅಧಿಕಗುಣತ್ವೇನ ಇಂದ್ರಾದಯ ಏವ ಶಿಶುತ್ವೇನ ವಿವಕ್ಷಿತಾಃ । ತಥಾಚ ಮಹದ್ಭ್ಯೋ ನಾರಾಯಣ ಬ್ರಹ್ಮರುದ್ರೇಭ್ಯೋ ದೇವೇಭ್ಯಃ ನಮೋಽಸ್ತು । ನ ಕೇವಲಂ ಮಹದ್ಭ್ಯ ಏವ ಕಿಂ ನಾಮ । ಮಹತೋ ದೇವಾನ್ ಆರಭ್ಯ ಶಿಶುಪರ್ಯಂತಂ ಇತ್ಯಾಶಯೇನಾಹ ಗ್ರಂಥಕೃತ್ । ಅನೇನ ದೇವಾನಾಂ ಚಾತುರ್ವಿಧ್ಯಂ ವಿಶದೀಕೃತಂ ಭವತಿ । ತಥೋಕ್ತಾವೇವ ಮಧ್ಯಸ್ಥಿತಿಪ್ರಕಾರ ಪರಿಚಿಂತನಾ ವಸರಾತ್ । ತಥಾ ಯುವಭ್ಯ

ಇಂದ್ರಾದಿಭ್ಯೋ ನಮೋಸ್ತು । ಅತ್ರಾಪಿ ಸಮೀಚೀನತಾಂ ಪ್ರಸಿದ್ಧರೂಪಾಂ ಯುವತ್ವೇ ದರ್ಶಯತಿ । **ತಥಾ ಚೋಕ್ತಂ—** ''ಸುಮಂಗಲಃ ಕಶ್ಚನ ಕಾಂಕ್ಷತೇ ಹಿ ಮಾಂ'' ಇತ್ಯಾದೌ ।ತಥಾ ವಟುಭ್ಯಃ ಸ್ಕಂದಾದಿಭ್ಯೋ ನಮೋಽಸ್ತು । ಅತ್ರಾಪಿ ವಟುತ್ವೇ ಸಮೀಚೀನತಾಂ । ತಥಾ ಚೋಕ್ತಂ ಪುರಾಣೇಷು । ತಥಾ ಶಿಶುಭ್ಯಃ ಸ್ಕಂದಾದಿಭ್ಯೋ ನಮೋಽಸ್ತ್ವಿತಿ ಯೋಜನಾ ॥ ಅಸ್ಮಿನ್ ಪಕ್ಷೇ ತು ನ ಕಶ್ಚಿತ್ಕ್ಷುದ್ರೋಪದ್ರವ ಇತಿ ॥ ೮ ॥

ತದೇವಂ ಚಾತುರ್ವಿಧ್ಯೇನ ದೇವೇಶಂ ದೇವಾಂಶ್ಚ ನತ್ವಾ ಸಿದ್ಧರೂಪಾನ್ ಯೋಗಿನೋ ನಮತಿ ॥ **ನಮ ಇತಿ** ॥ ಮಹದ್ಭ್ಯೋ ದತ್ತಕಪಿಲಾದಿಭ್ಯೋ ನಮೋಽಸ್ತು । ನ ಕೇವಲಂ ಮಹದ್ಭ್ಯ ಏವ ಯೋಗಿಭ್ಯಃ ।ಕಿಂತು ಮಹತ ಆರಭ್ಯ ಶಿಶುಪರ್ಯಂತಮಿತ್ಯಾಶಯೇನಾಹ । **ನಮಃ ಶಿಶುಭ್ಯ ಇತಿ** ॥ ಅನೇನ ಯೋಗಿನಾಮಪಿ ಚಾತುರ್ವಿಧ್ಯಂ ಪ್ರಥಯತಿ । ತಥಾ ಯುವಭ್ಯೋ ದುರ್ವಾಸಶುಕಪ್ರಭೃತಿಭ್ಯೋ ನಮೋಽಸ್ತು । ತಥಾ ವಟುಭ್ಯಃ ಸ್ಕಂದಾದಿಭ್ಯಃ ನಮೋಽಸ್ತು । ತಥಾ ಶಿಶುಭ್ಯಃ ಸನಕಾದಿಭ್ಯೋ ನಮೋಽಸ್ತ್ವಿತಿ । ಸುಪ್ರಸಿದ್ಧಾ ಏವಂ ಪ್ರಸಿದ್ಧಲಿಂಗಾ ಅಥವಾನ್ಯೇ ಯೇ ಯೋಗಿನಸ್ತಾನವಧೂತಲಿಂಗಾನ್ ಅಪ್ರಸಿದ್ಧಾನ್ ಯೋಗಿನೋ ನಮತಿ । **ನಮ ಇತಿ** ॥ ಮಹದ್ಭ್ಯಃ ಋಷಿಪ್ರಭೃತಿಭ್ಯಃ । ವಯಸಾ ನ । ಯೇ ಚ ಬ್ರಹ್ಮಸಾಕ್ಷಾತ್ಕಾರವಂತಃ ತತ ಏವ ವಿಗತದೇಹಾಭಿಮಾನಾಃ ತತ ಏವ ವಿಗತವಂದ್ಯತಾಪ್ರಯೋಜಕದಂಡಕ ಮಂಡಲುಪೂರ್ವಕಚಿಹ್ನವಿಶೇಷಾಃ ಅತ ಏವ ಸಾಧಾರಣ್ಯೈಃ ಅನವಧಾರಣೀಯ ಸ್ವರೂಪಾ ಭೂತ್ವಾ ಭಾರತಭುವಿಜಾತ ಜನೋದ್ಧರಣಾಯ ಭೂಮಿಂ ಪ್ರದಕ್ಷಿಣೀ ಕುರ್ವಂತಿ ತಾದೃಶೇಭ್ಯಃ । ವಯಸಾ ಮಹದ್ಭ್ಯೋ ವಲೀಪಲಿತಾದಿಲಕ್ಷಿತೇಭ್ಯೋ ನಮೋಽಸ್ತು । ನ ಕೇವಲಂ ವೃದ್ಧೇಭ್ಯ ಏವ । ಕಿಂ ನಾಮ ವೃದ್ಧಾನಾರಭ್ಯ ಶಿಶುಪರ್ಯಂತಮಪೀತಿ ಸೂಚನಾಯ ಆಙ್ಪ್ರಯೋಗಃ । ತಥಾ ಪ್ರಕೃತಾವಧೂತಸದೃಶೇಭ್ಯೋ ಯುವಭ್ಯೋ ದೃಢಾಂಗೇಭ್ಯೋ ನಮೋಽಸ್ತು । ಅನೇನ ನಾತಿಪೀವೇತ್ಯಾದಿಸ್ವೋಕ್ತದುರುಕ್ತಿಸ್ಮರಣಪೂರ್ವಕಕ್ಷಮಾಪನಂ ಸೂಚಯತಿ । ತಥೈತೇಭ್ಯೋಽಪಿ ವಯಸಾ ನ್ಯೂನೇಭ್ಯೋ ವಟುಭ್ಯೋಽಪಿ ನಮೋಽಸ್ತು । ಕಿಂಬಹುನಾ ಶಿಶುಭ್ಯೋಽಪ್ಯಕೃತ ವಿಶೇಷೇಭ್ಯೋಽಪಿ ನಮೋಽಸ್ತು । ಅನೇನ ''ಶಂಕೇ ಭೃಶಂ ಬ್ರಹ್ಮಕುಲಾ ವಮಾನಾತ್'' ಇತಿ ಸ್ಪಷ್ಟೀಕೃತಂ ಭವತಿ ।

ಕಿಮರ್ಥಮೇವಂ ವಂದನಮಿತ್ಯತಃ ಪ್ರಮಾದತಃ ಪ್ರಾಪ್ತಮಹದವ-

ಜ್ಞಾನಜನಿತಪಾಪಪರಿಹಾರಾರ್ಥಮಿತಿ ಭಾವೇನಾಹ। ತೇಭ್ಯಶ್ಚತುರ್ವಿಧೇಭ್ಯಃ ಸಕಾಶಾದಸ್ಮಾಕಂ ಶಿವಂ ಪಾಪಪ್ರಯುಕ್ತಾನರ್ಥನಿವೃತ್ತಿಲಕ್ಷಣಮಸ್ತ್ವಿತಿ। ಕಿಂ ತದವಜ್ಞಾನೇನಾನಿಷ್ಟಂ, ಯನ್ನಿವೃತ್ತಯೇ ಅಯಮಾಯಾಸ ಇತ್ಯತಃ ನಾಹಂ ನಿಷ್ಕಿಂಚನಃ ಕಿಂ ತ್ವೈಹಿಕಭೋಗಸಾಧನೇಷ್ವಧಿಕ ರಾಜ್ಯಾದಿಸಾಧನೋಪೇತಃ ಪಾರತ್ರಿಕಭೋಗ ಸಾಧನೇಷು ಅಧಿಕಾನ್ನದಾನಾದಿಸಾಧನೋಪೇತಃ ತತಸ್ತತೋ ಮಮ (ಮಹದತಿಕ್ರಮಸ್ಯ) ಮಹದನಿಷ್ಟಭವನಸ್ಯ ನ ವಿಲಂಬ ಇತ್ಯಾಹ॥ **ರಾಜ್ಞಾಮಿತಿ ॥ ಯಥಾಹುಃ—**

''ಆಯುಃ ಶ್ರಿಯಂ ಯಶೋ ಧೈರ್ಯಂ ಲೋಕಾನಾಶಿಷ ಏವ ಚ।
ಹಂತಿ ಶ್ರೇಯಾಂಸಿ ಸರ್ವಾಣಿ ಪುಂಸೋ ಮಹದತಿಕ್ರಮಃ' ಇತಿ।

ಇದಮನೇನ ಸೂಚಿತಂ ಭವತಿ - ನಾರಾಯಣ ಏವ ಸರ್ವೋತ್ತಮಃ ಸರ್ವಗುಣೈಃ। ತದನಂತರಂ ತು ಕಮಲಾ। ತಾವೇವ ಜಗತಃ ಸರ್ವಸ್ಯಾಪಿ ಪಿತರೌ ತದನಂತರಂ ವಿರಿಂಚಿಸ್ತತ್ಪತ್ನೀ ಚ। ಇತೋಽನ್ಯೇ ದೇವಾಸ್ತು ತದ್ಭಕ್ತಾ ಏವ ಮಮ ಬಾಂಧವಾಃ। ಬಾಂಧವತಾ ಚೈಷಾಮೇತದ್‌ದ್ವಾರೈವ। ಕದಾಚಿನ್ನಾರಾಯಣಪುತ್ರತಯಾ ಕದಾಚಿತ್ಪೌತ್ರತಯಾ ಅನ್ಯೇಷಾಂ ಪಿತೃತ್ವಾದಿಕಂ ಜಗತ್ತ್ರಿ ನಾಸ್ತ್ಯೇವ। ವಿಶಿಷ್ಯ ವಿದ್ಯಮಾನಮಪಿ ತದಾಯತ್ತತ್ವಾತ್ ತತ್ರೈವ ಪರ್ಯವಸನ್ನಂ। ತೇ ಚ ಶ್ರೀನಾರಾಯಣಸೇವಾಸಮಾಸಾದಿತಸ್ವಸ್ವಯೋಗ್ಯ ಮಹಿಮೋಪೇತಾಃ ಸರ್ವೇಽಪಿ ಚೈತೇ ಸರ್ವದಾ ಶ್ರೀನಾರಾಯಣ ಪ್ರಸಾದಮೇವ ಪ್ರಾರ್ಥಯಂತಃ ಇತ್ಯೇವಂ ವಿನಿಶ್ಚಯವದ್ಭಿಃ ವೈಷ್ಣವೈಃ ಕೃತಾನ್ಯೇವ ಪ್ರಾಯಶ್ಚಿತ್ತಾನಿ ಪಾಪಪರಿಹರಣಕ್ಷಮಾಣಿ ಭವಂತೀತಿ॥



ರಹೂಗಣರಾಜನು ತಾನು, ಒಬ್ಬ ಜಡಭರತಮುನಿಗೆ ಅಪಚಾರ ಮಾಡಿದ್ದು, ಇಡೀ ಬ್ರಾಹ್ಮಣಜಾತಿಗೇ ಅಪಚಾರವಾದಂತಾಯಿತು. ಹೀಗಾಗಿ ತಾನು ಒಬ್ಬ ರಾಜನು ಬ್ರಾಹ್ಮಣಾವಮಾನ ಮಾಡಿ ಪಾಪಕಟ್ಟಿಕೊಂಡಿದ್ದರಿಂದ ರಾಜರೆಲ್ಲರೂ ಪಾಪಿಗಳಾಗಿ ಅನರ್ಥ ಭಾಗಿಗಳಾಗುವರೆಂದು ಭಯದಿಂದ ಎಲ್ಲ ರಾಜರುಗಳ ಪರವಾಗಿ ರಹೂಗಣರಾಜ ಕ್ಷಮಾಯಾಚನ ಮಾಡುತ್ತ ನಮಸ್ಕರಿಸು ತ್ತಿದ್ದಾನೆ. 'ಶಿವಮಸ್ತು' 'ಎಲ್ಲ ರಾಜರಿಗೂ ಅನಿಷ್ಟನಿವೃತ್ತಿಯಾಗಲಿ' ಎನ್ನುತ್ತಾನೆ.

ಆಯುಷ್ಯ, ಸಂಪತ್ತು ಕೀರ್ತಿ ಪುಣ್ಯ ಸ್ವರ್ಗ ವಿಷಯಸುಖ ಎಲ್ಲವೂ ಮಹಾತ್ಮರ ಸೇವೆಯಿಂದ ಲಭ್ಯವಾಗುತ್ತವೆ. ಪ್ರಮಾದದಿಂದಲಾದರೂ ಅವರು

ಅಪಚಾರ ಮಾಡಿದರೆ ಅವೆಲ್ಲವೂ ನಾಶವಾಗುತ್ತವೆ 'ಹಂತಿ ಸರ್ವಾಣಿ ಶ್ರೇಯಾಂಸಿ'—

ಆಯುಃ ಶ್ರಿಯಂ ಯಶೋ ಧರ್ಮಂ
ಲೋಕಾನಾಶಿಷ ಏವ ಚ ।
ಹಂತಿ ಶ್ರೇಯಾಂಸಿ ಸರ್ವಾಣಿ
ಪುಂಸೋ ಮಹದತಿಕ್ರಮಃ ॥

(ಭಾ.೧೦.೫.೪೬)

**(೧) ಇಲ್ಲಿ ಮಹತೋ ಮಹೀಯ, ಅಣೋರಣೀಯ, ಯುವಕನಂತೆ ಆಕಾರ, ವಟುವಿನಂತೆ ಆಕಾರ ಹೀಗೆ ನಾಲ್ಕು ಬಗೆ ಪರಿಮಾಣದ ಆಕಾರ ಗಳಿಂದಿರುವ ಹರಿಯ ಅನಂತರೂಪಗಳಿಗೆ ರಹೂಗಣರಾಜನು ನಮಿಸುತ್ತಿದ್ದಾನೆ.**

**(೨) ಅತ್ಯಧಿಕ ಗುಣಉಳ್ಳ ಮಹಾತ್ಮರು ನಾರಾಯಣ ಬ್ರಹ್ಮ ರುದ್ರರು, ಅತ್ಯಲ್ಪಗುಣಉಳ್ಳವರು ಮನುಷ್ಯೋತ್ತಮರು, ನಡುವೆ ಬರುವ ಇಂದ್ರಾದಿ ತರುಣರು, ಸ್ಕಂದಾದಿ ವಟುಗಳು–ಎಂದು ನಾಲ್ಕು ಬಗೆಯಾಗಿರುವ ಎಲ್ಲ ದೇವತೆಗಳನ್ನೂ ನಮಿಸುತ್ತಿದ್ದಾನೆ.**

**(೩) ದತ್ತಕಪಿಲಾದಿ ಮಹಾಯೋಗಿಗಳು, ದುರ್ವಾಸ ಶುಕಮುನಿ ಮುಂತಾದ ತರುಣಯೋಗಿಗಳು, ಸ್ಕಂದಾದಿ ವಟುಯೋಗಿಗಳು, ಸನಕಾದಿ ಶಿಶುಯೋಗಿಗಳೆಂದು ನಾಲ್ಕು ಬಗೆಯ ಪ್ರಸಿದ್ಧಯೋಗಿಗಳಿಗೂ ನಮಿಸುತ್ತಿದ್ದಾನೆ.**

**(೪) ಅವಧೂತರಲ್ಲಿಯೂ ಅತಿವೃದ್ಧರು ಯುವಕರು ವಟುಗಳು ಶಿಶುಗಳೆಂದು ನಾಲ್ಕು ಬಗೆಯವರಿರುತ್ತಾರೆ. ಬ್ರಾಹ್ಮಣ ಚಿಹ್ನೆಗಳನ್ನು ಧರಿಸದಿರುವವರೂ ಇರುತ್ತಾರೆ. ಅವರಿಗೂ ನಮಿಸುತ್ತಾನೆ.**

ಪ್ರಮಾದದಿಂದ ಮಹಾತ್ಮರಲ್ಲಿ ಅಪಚಾರ ಮಾಡಿದಾಗ ಉಂಟಾಗುವ ಪಾಪದ ಪರಿಹಾರಕ್ಕೆ ಮಹತೋಮಹೀಯನಾದ ನಾರಾಯಣನಿಂದ ತೊಡಗಿ ಅವಧೂತರ ಪರ್ಯಂತ ಎಲ್ಲ ಜ್ಞಾನಿಗಳಿಗೂ ನಮಸ್ಕಾರ ಮಾಡುವುದೊಂದೇ ಉಪಾಯ ಎನ್ನುತ್ತಾನೆ ರಹೂಗಣರಾಜ.

(೧) ಅನಂತವಾದ ಹರಿರೂಪಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ನಮಿಸು ವುದು ಸರ್ವಥಾ ಅಸಾಧ್ಯವಾದ್ದರಿಂದ ಅವುಗಳ ಪರಿಮಾಣ ದೃಷ್ಟಿಯಿಂದ

ನಾಲ್ಕು ವಿಭಾಗಗಳಾಗಿ ಮಾಡಬಹುದು. ಹೊರತು ಮಹತ್ತು-ಯುವಕ-ವಟು-ಶಿಶು ಎಂದು ನಾಲ್ಕೇ ರೂಪಗಳು ಹರಿಗೆ ಎಂದು ತಿಳಿಯಬಾರದು. ಇದನ್ನು ತಿಳಿಸಲು 'ಮಹದ್‌ಭ್ಯಃ' 'ಯುವಭ್ಯಃ' 'ಮಹದ್‌ರೂಪಗಳಿಗೆ' 'ಯೌವನಾಕಾರದ ರೂಪಗಳಿಗೆ' 'ವಟುಭ್ಯಃ ಶಿಶುಭ್ಯಃ' ವಟುವಿನಾಕಾರದ ರೂಪಗಳಿಗೆ' 'ಶಿಶುವಿನಾಕಾರದ ರೂಪಗಳಿಗೆ' ನಮಸ್ಕಾರ ಎಂದು ಸರ್ವತ್ರ ಬಹುವಚನ ಪ್ರಯೋಗವಿದೆ.

ಅನಂತರೂಪಗಳಿಗೆ ಪ್ರತ್ಯೇಕ ಪ್ರತ್ಯೇಕವಾಗಿ ನಮನಮಾಡುವುದು ಅಲ್ಪಮತಿಗಳಿಗೆ ಸಾಧ್ಯವಿಲ್ಲ. ಅದಕ್ಕೆ ಆಮಹದ್ಭ್ಯೋ 'ಆ ವಟುಭ್ಯಃ' ಮಹದ್‌ರೂಪಗಳಿಂದ ತೊಡಗಿ ವಟುವಿನಾಕಾರದ ರೂಪಗಳವರೆಗೆ ನಾಲ್ಕು ಬಗೆಯ ಎಲ್ಲ ರೂಪಗಳಿಗೆ ನಮನ ಎನ್ನುತ್ತಾನೆ.

'ಆ' ಎಂಬ ಶಬ್ದವನ್ನು 'ಆ ಮಹದ್‌ಭ್ಯೋ' 'ಆ ಶಿಶುಭ್ಯೋ' 'ಆ ಯುವಭ್ಯೋ' ಎಂದು ಕೂಡ ಎಲ್ಲ ಕಡೆ ಸೇರಿಸಿಕೊಳ್ಳಬೇಕು. 'ಆ' ಎಂದರೆ 'ಸಮಂತಾತ್' ಸರ್ವದೇಶ ಸರ್ವಕಾಲಗಳಲ್ಲಿ ಎಂದರ್ಥ. ಬೇರೆಬೇರೆ ನಿಮಿತ್ತ ಗಳು ಬಂದಾಗಲೂ ಹೋದಾಗಲೂ ಹಾಗೇ ಇರುವ ಪರಿಮಾಣಗಳು ಆಕಾರ ಗಳು ಈ ಮಹತ್ವ-ಶಿಶುತ್ವ-ಯುವತ್ವ-ವಟುತ್ವಗಳು. ವಯಸ್ಸು ಮುಂತಾದ ನಿಮಿತ್ತ ಗಳಿಂದ ಬಂದು ಹೋಗುವವುಗಳಲ್ಲ. ಅವುಗಳಿಂದ ವ್ಯಕ್ತವಾಗುವವು ಗಳೂ ಅಲ್ಲ. ಎಲ್ಲವೂ ನಿತ್ಯ . ನಿತ್ಯವ್ಯಕ್ತ ಎಂದೂ 'ಆ' ಶಬ್ದವು ಹೇಳುತ್ತದೆ.

ಮಹದ್‌ರೂಪಗಳಿಂದ ತೊಡಗಿ ಶಿಶುರೂಪಗಳವರೆಗೆ ಎಲ್ಲ ರೂಪ ಗಳೆಂದೂ 'ಆ' ಶಬ್ದವು ಹೇಳುತ್ತದೆ.

'ಯುವಭ್ಯಃ' ಎಂದರೆ ಯೌವನಾವಸ್ಥೆಉಳ್ಳ ಕೆಲವು ರೂಪಗಳಿಗೆ ನಮಸ್ಕಾರ ಎಂದು ಪ್ರತ್ಯೇಕವಾಗಿ ಹೇಳಿದ ಮಾತ್ರಕ್ಕೇ ಮಹದ್‌ರೂಪ ವಟುರೂಪ ಶಿಶುರೂಪಗಳಿಗೆ ಯೌವನಾವಸ್ಥೆ ಇಲ್ಲ' ಎಂದು ಸರ್ವಥಾ ತಿಳಿಯಬಾರದು. ಅವನ ಅನುಗ್ರಹ ಮತ್ತು ಸನ್ನಿಧಾನಗಳಿರುವ ಪ್ರಯುಕ್ತ ಎಲ್ಲ ದೇವತೆಗಳೂ ನಿತ್ಯ ತರುಣರೇ ಆಗಿರುತ್ತಾರೆ ಎಂದಮೇಲೆ ಸರ್ವದೇವೋತ್ತಮ ನಾದ ಅವನು ತಾನು ನಿತ್ಯತರುಣನಲ್ಲ ಎನ್ನಲಾಗದು ತಾನೆ? ಅದರಿಂದ 'ನಮೋ ಯುವಭ್ಯಃ' ಎಂದರೆ 'ಯೌವನಾವಸ್ಥೆಯಲ್ಲಿರುವ ಕೆಲವು ಹರಿರೂಪಗಳಿಗೆ

ನಮಸ್ಕಾರ' ಎಂದು ಪ್ರತ್ಯೇಕ ನಮಸ್ಕಾರ ವಿವಕ್ಷಿತವಲ್ಲ. 'ಯುವಭ್ಯಃ' ಎಂಬುದು ಮಹದ್ಭ್ಯಃ ವಟುಭ್ಯಃ ಶಿಶುಭ್ಯಃ ಎಂದು ಮೂರಕ್ಕೂ ಸಾಮಾನ್ಯ ವಾಗಿ ಅನ್ವಯಿಸುವುದು. 'ಅತಿಮಹತ್ತಾದ ಆಕಾರದ ರೂಪಗಳೂ ಯುವಕ ನಾಕಾರದ ರೂಪಗಳೂ, ಶಿಶುವಿನಾಕಾರದ ರೂಪಗಳೂ ಎಲ್ಲವೂ ನಿತ್ಯಯೌವನ ಭರಿತವೇ ಆಗಿವೆ. ಕೇವಲ ಯೌವನಾಕಾರದ ರೂಪಗಳು ಮಾತ್ರವೇ ಯೌವನಭರಿತವೆಂದಲ್ಲ ಎಂದರ್ಥ.

(೨) ಹೀಗೆ ಎಲ್ಲ ಹರಿರೂಪಗಳಿಗೂ ನಮಿಸಿದ ಬಳಿಕ ಹರಿಯೂ ಸೇರಿದಂತೆ ಎಲ್ಲ ದೇವತೆಗಳಿಗೂ ಇದೇ ಶ್ಲೋಕದಲ್ಲಿ ನಮಿಸುತ್ತಾನೆ ರಹೂಗಣರಾಜ. ಹರಿಯೂ ಎಲ್ಲ ದೇವತೆಗಳೂ ಕೂಡ ಮಹತ್ ಶಿಶು ಯುವ ವಟುಗಳೆಂದು ನಾಲ್ಕು ಬಗೆಯಾಗಿರುತ್ತಾರೆ. 'ನಮೋ ಮಹದ್ಭ್ಯಃ' ಎಂದರೆ ದೇವತೆಗಳಲ್ಲಿ ಬಹಳ ಮಹನೀಯರಾದ ವಿಷ್ಣುಬ್ರಹ್ಮರುದ್ರರಿಗೆ ನಮಸ್ಕಾರ ಎಂದರ್ಥ.

'ನಮೋ ಮಹದ್ಭ್ಯಃ' ಎಂದು ವಿಷ್ಣುವಿಗೆ ನಮಸ್ಕಾರವಾಗಿದೆ ತಾನೆ? ತಿರುಗಿ ಏಕೆ ನಮಸ್ಕಾರ? ಎಂದರೆ ಹಿಂದೆ 'ಮಹತ್ ಪರಿಮಾಣ ಉಳ್ಳವನೆಂ'ದು ಪರದೇವತೆಗೆ ನಮಸ್ಕಾರವಾಗಿದ್ದರೂ ದೇವೋತ್ತಮನೆಂದು ಅವನಿಗೇ ಈಗ ತಿರುಗಿ ನಮಸ್ಕಾರ ಮಾಡುವುದು ಯುಕ್ತವೆ.

ಮುಂದೆ ೧೯ನೇ ಶ್ಲೋಕದಲ್ಲಿ—ಶ್ರೀಹರಿಯನ್ನು ನಂಬಿ ಸಂಸಾರ ಸಾಗರವರನ್ನು ದಾಟಿದವರು ಯಾರೆಂದು ಬ್ರಹ್ಮನು ನಾರದರಿಗೆ ಹೇಳುವಾಗ ಭಕ್ತರಾದ ಸೌಭರಿ ಉದಂಕ ಶಿಬಿ ದೇವಲ ಪಿಪ್ಪಲಾದ ಮುಂತಾದವರ ಸಾಲಿನಲ್ಲಿ

'ಯೇಽನ್ಯೇ ವಿಭೀಷಣ ಹನೂಮದುಪೇಂದ್ರದತ್ತಾಃ'

ಎಂದು ಉಪೇಂದ್ರಮೂರ್ತಿ, ದತ್ತಾತ್ರೇಯರನ್ನೂ ಸೇರಿಸಿದ್ದು, ಹನುಮಂತ ನನ್ನೂ ಸೇರಿಸಿದ್ದು, 'ಶ್ರೀಹರಿಯೂ ಭಕ್ತನಂತೆ ನಡೆದು ಭಕ್ತರಿಗೆ ಭಕ್ತಿಯನ್ನು ಕಲಿಸಿಕೊಡುತ್ತಾನೆ. ಹನುಮಂತನೂ ಮುಕ್ತಪ್ರಾಯನೇ ಆದರು ಭಕ್ತಿಯನ್ನು ಬರಿಬಾಯಿ ಮಾತಿನಿಂದ ಹೇಳದೆ ನಡೆದು ತೋರಿಸುತ್ತಾನೆ' ಎಂಬ ಅಭಿಪ್ರಾಯದಿಂದ ಭಾಗವತದಲ್ಲಿಯೇ ಇದು ಕಂಡುಬರುತ್ತದೆ. ಹಾಗೇ ಇಲ್ಲಿಯೂ ಶ್ರೀಹರಿ ದೇವತೆಗಳಲ್ಲಿ ದೇವತೆಗಳಂತೆಯೇ ನಡೆದುಕೊಳ್ಳುತ್ತಾನೆ. ಒಲಿದರೆ ಆಯುರಾದಿಅಭೀಷ್ಟಗಳನ್ನು ನೀಡುತ್ತಾನೆ, ಮುನಿದರೆ ಅವುಗಳನ್ನು

ನಾಶಪಡಿಸುತ್ತಾನೆ, ಲೋಕಾನುಕರಣ ಮಾಡುತ್ತಾನೆ. ಅದರಿಂದ ದೇವತೆಗಳ ನಡುವೆಯೂ ತಿರುಗಿ ದೇವೋತ್ತಮನಿಗೆ ನಮಸ್ಕಾರ ಮಾಡುವುದು ವ್ಯರ್ಥವಾಗುವುದಿಲ್ಲ.

ಇಲ್ಲಿ ಪ್ರಶ್ನೆ ಬರುತ್ತದೆ—'ದೇವತೆಗಳು ಎಲ್ಲರೂ ಅಮರರು ಮತ್ತು ನಿರ್ಜರರು. ಅಮರರು ನಿರ್ಜರರೆಂದೇ ಅವರಿಗೆ ಹೆಸರಿದೆ. ಅದರಿಂದ ವಾರ್ಧಕ್ಯ ಇಲ್ಲವೆಂದಮೇಲೆ ವೃದ್ಧತ್ವ ರೂಪವಾದ ಮಹತ್ವ ಅವರಲ್ಲಿ ಹೇಗೆ ಕೂಡುವುದು? ಅಮರರೆಂದಮೇಲೆ ಮರಣ ಪುನರ್ಜನ್ಮಗಳಿಲ್ಲದಿರುವಾಗ ಅವರು ಹುಟ್ಟಿ ಶಿಶುವಾಗುವುದೆಂತು? ಶಿಶುಗಳಲ್ಲವೆಂದಮೇಲೆ ಮುಂದಿನ ಅವಸ್ಥೆಯಾದ ವಟುತ್ವವೆಲ್ಲಿಯದು? ವಟುತ್ವವಿಲ್ಲದಿದ್ದರೆ ಅದರ ಮುಂದಿನ ಯುವತ್ವ ಹೇಗೆ ಬಂದೀತು? ಅಂತೂ ದೇವತೆಗಳಲ್ಲಿ ಮಹತ್ವ-ಯುವತ್ವ- ವಟುತ್ವ-ಶಿಶುತ್ವಗಳು ಕೂಡಲಾರವಾದ್ದರಿಂದ ದೇವತೆಗಳು ನಾಲ್ಕು ಬಗೆ ಇರುವುದು ಕೂಡಲಾರದು' ಎಂದು.

ಇಲ್ಲಿ ನಡುವೆ ಒಂದು ಪ್ರಶ್ನೆ—

'ನನು ತರ್ಹೀದಂ ಚಾತುರ್ವಿಧ್ಯಂ ನ ಸಂಭವತ್ಯೇವ। ದೇವಾ ಅಜರಾಮರಾಃ ನ ಚಾಜರಾಣಾಂ ಮಹತ್ತ್ವಂ ವೃದ್ಧತ್ವಾಪರ ಪರ್ಯಾಯಂ ಸಂಭವತಿ। ನಾಪ್ಯಮರಾಣಾಂ ಉತ್ಪತ್ಯರ್ಭಕತಾಪರಪರ್ಯಾಯಾ ಶಿಶುತಾ। ನಚ ತದಬಾವೇ ತದುತ್ತರಾವಸ್ಥಾ ಅಶನಿತ್ವಾಪರ ಪರ್ಯಾಯಾ ವಟುತಾಪಿ। ನಾಪಿ ತಸ್ಯಾಭಾವೇ ತದುತ್ತರಾವಸ್ಥಾರೂಪಾ ಯುವತಾ ಸಂಭಾವಿತಾ..।'

ಎಂದು ಅವಧೂತರು 'ಅಶನಿತ್ವಾಪರಪರ್ಯಾಯಾ ವಟುತಾಪಿ' ಎಂಬಲ್ಲಿ 'ವಟು'ವಿಗೆ ಇನ್ನೊಂದು ಹೆಸರು 'ಅಶನಿ' ಎನ್ನುತ್ತಾರೆ. ಆದರೆ 'ಅಶನಿ' ಎಂದರೆ ಇಂದ್ರನ ವಜ್ರಾಯುಧ, ಸಿಡಿಲು ಮಿಂಚು ಕೂಡ ಅಶನಿ ಎನಿಸುತ್ತದೆ. ವಟು ಎಲ್ಲಿಯೂ 'ಅಶನಿ' ಎನಿಸುವುದಿಲ್ಲ. ಮತ್ತು ಭಾಗವತದಲ್ಲಿ 'ನಮ ಆ ವಟುಭ್ಯಃ' ಎಂದು ಮಾತ್ರ ಹೇಳಿದೆ. ವಟುವನ್ನು ಅಶನಿ ಎಂದು ಎಲ್ಲಿಯೂ ಕರೆದಿಲ್ಲ. ಅಶನಿ ಎಂದು ವಟುವಿಗೆ ಇನ್ನೊಂದು ಹೆಸರೆಂದು ಹೇಳಲು ಇಲ್ಲಿ ಪ್ರಸಕ್ತಿಯೂ ಇಲ್ಲ.

ಈ ಪ್ರಶ್ನೆಗೆ ಹೀಗೆ ಸಮಾಧಾನ— 'ಅಶನಿ' ಎಂಬುದೇ ಇಲ್ಲಿ ಅಪಪಾಠ. 'ಆಶಿನ' ಎಂದಾಗಬೇಕು. 'ಅಶೂ ವ್ಯಾಪ್ತೌ' ಎಂಬ ಧಾತುನಿಷ್ಪನ್ನ ಶಬ್ದ ಇದು

ವೇದದಲ್ಲಿ ಕಂಡುಬರುತ್ತದೆ. 'ವಯಸಿನಿಂದ ವ್ಯಾಪ್ತ, ಅಂದರೆ ವಯೋವೃದ್ಧ' ಎಂದು ಸಾಯಣಭಾಷ್ಯ ಅರ್ಥ ಹೇಳುತ್ತಿದೆ. ಈ ಅರ್ಥ ಸರಿಯಿಲ್ಲ. ಅಶ್ನೋತಿ ವ್ಯಾಪ್ನೋತಿ ಶ್ರೌತಂ ಸ್ಮಾರ್ತಂ ಚ ಕರ್ಮ' ಉಪನೀತನಾದ ವಟು 'ಶ್ರೌತ ಮತ್ತು ಸ್ಮಾರ್ತಕರ್ಮಗಳಲ್ಲಿ ನಿರತನಾಗುತ್ತಾನೆ' ಎಂಬ ಅರ್ಥದಲ್ಲಿ 'ಆಶಿನ' ಎನಿಸುತ್ತಾನೆ ಎನ್ನಬೇಕು.

ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ
ನಮೋ ಯುವಭ್ಯೋ ನಮ ಆಶಿನೇಭ್ಯಃ ।
ಯಜಾಮ ದೇವಾನ್ ಯದಿ ಶಕ್ನವಾಮ
ಮಾ ಜ್ಯಾಯಸಃ ಶಂಸಮಾ ವೃಕ್ಷಿದೇವಾಃ ॥ (ಋಗ್ವೇದ ೧.೨.೨೪)

ಇಲ್ಲಿ ಬರುವ 'ನಮೋ ಅರ್ಭಕೇಭ್ಯೋ' ಎಂಬುದನ್ನು 'ನಮಃ ಶಿಶುಭ್ಯಃ' ಎಂದೂ, 'ನಮ ಆಶಿನೇಭ್ಯಃ' ಎಂಬುದನ್ನು 'ಆ ವಟುಭ್ಯಃ' ಎಂದೂ ಭಾಗವತ ಅನುವಾದ ಮಾಡುತ್ತಿದೆ. ಅದರಿಂದ ಅವಧೂತರು 'ಆಶಿನತ್ವಾಪರ ಪರ್ಯಾಯಾ ವಟುತಾ' ಎನ್ನುತ್ತಿದ್ದಾರೆ. 'ಅಶನಿತ್ವಾಪರಪರ್ಯಾಯಾ ವಟುತಾ' ಎನ್ನುವ ಪಾಠ ಸರಿಯಲ್ಲ. ವೇದೋಕ್ತನಾದ 'ಆಶಿನ'ನೇ ಭಾಗವತದಲ್ಲಿ 'ವಟು' ಎನಿಸಿದ್ದಾನೆ. ಎಂದು ತಿಳಿಸುವ ಉದ್ದೇಶ ಅವಧೂತರದೆಂದು ತಿಳಿಯಬಹುದು.

ಈಗ ಬಂದಿರುವ ಮುಖ್ಯಪ್ರಶ್ನೆಗೆ ಹೀಗೆ ಉತ್ತರ— ಮಹತ್ವ ಯುವತ್ವ ವಟುತ್ವ ಶಿಶುತ್ವಗಳು ದೇವತೆಗಳಲ್ಲಿ ವಯಸಿನಿಂದಲ್ಲ. ವಯಸ್ಸಿನಿಂದ ಅವರ ಶರೀರದಲ್ಲಿ ಯಾವ ವ್ಯತ್ಯಾಸವಿರುವುದಿಲ್ಲ. ನಿತ್ಯತರುಣರೇ ಅವರು, ನಿಜ.

ಸಂಬಂಧದಿಂದ ಮಗ ತಂದೆ ತಾತ ಮುತ್ತಾತ ಎಂದು ನಾಲ್ಕು ಭೇದಗಳನ್ನು ಹೇಳಬಹುದೆ? ಎಂದರೂ ವಿಷ್ಣು ಯಾರಿಗೂ ಮಗನೂ ಅಲ್ಲ, ಅವನಿಗೆ ತಂದೆ ತಾತಂದಿರು ಯಾರೂ ಇರುವುದಿಲ್ಲ. ಬ್ರಹ್ಮರುದ್ರರು ವಿಷ್ಣುವಿಗೆ ಮಗ ಮೊಮ್ಮಗ ನೆಂದು ಪುರಾಣಗಳಲ್ಲಿ ಹೇಳಿದರೂ ಲೋಕದಲ್ಲಿ ಹಾಗೆ ಪ್ರಸಿದ್ಧಿ ಇಲ್ಲ. ಬ್ರಹ್ಮನು ಶಿವನಿಗೆ ಪಿತನೆನಿಸಿದರೂ ಸೃಷ್ಟಿಕರ್ತನಾದ್ದರಿಂದ ಎಲ್ಲರಿಗೂ ಪಿತ, ಹೊರತು ಒಬ್ಬ ವ್ಯಕ್ತಿಗೇ ಸ್ವಂತ ಪಿತನೆನಿಸಿಲ್ಲ. ವಿಷ್ಣು ಪಿತನೆನಿಸಿದರೂ ಅವನೂ ಸೃಷ್ಟಿಕರ್ತ ನಾದ್ದರಿಂದ ಎಲ್ಲರಿಗೂ ಸಾಧಾರಣವಾಗಿ ಪಿತನೆ. ಅಸಾಧಾರಣ ಪಿತನಲ್ಲ. ಹೀಗೆ ತ್ರಿಮೂರ್ತಿಗಳಿಗೆ ತಂದೆತಾಯಿಗಳಿಲ್ಲ.

ಆದರಿಂದ ನಮೋ ಮಹದ್ಭ್ಯೋ ಎಂದು ಅವರಿಗೆ ನಮಸ್ಕಾರ. ಇಂದ್ರಾದಿ ದೇವತೆಗಳಿಗೆ ತಂದೆತಾಯಿಗಳಿದ್ದಾರೆ. ಆದರಿಂದ ಅವರನ್ನು ಶಿಶುಗಳೆಂದು ನಮಸ್ಕರಿಸಿದ್ದಾನೆ ರಾಜ. ಜೊತೆಗೆ ಯುವಾಕಾರ ವಟು ಆಕಾರಗಳನ್ನೂ ವಿವಕ್ಷೆಮಾಡಿ ಅವರಿಗೇ ಎರಡು ಬಾರಿ ನಮಸ್ಕಾರ ಮಾಡುತ್ತಾನೆ. ಹೀಗೆ ವಯಸಿನಿಂದಾಗಲಿ ಸಂಬಂಧದಿಂದಾಗಲಿ ಪಿತೃಗಳೆನಿಸದಿದ್ದರೂ ಗುಣದಿಂದ ವಿಷ್ಣುಬ್ರಹ್ಮರುದ್ರರು ಪಿತೃಗಳೆನಿಸಿದ್ದಾರೆ ಎನ್ನಬಹುದು. ಈ ವಿವಕ್ಷೆ ಯಿಂದ ತ್ರಿಮೂರ್ತಿಗಳಿಗೆ 'ಮಹತ್ವ'ವಿದೆ ಎನ್ನಲಡ್ಡಿಯಿಲ್ಲ. 'ನಮೋ ಮಹದ್‌ಭ್ಯಃ' ಎಂದು ಅವರನ್ನು ಸ್ತುತಿಸಬಹುದು.

ಗುಣದಿಂದ ಕಡಿಮೆ ಎನಿಸಿದವರು ಸ್ಕಂದ ಇಂದ್ರಾದಿಗಳು ಶಿಶುಗಳು. 'ನಮಃ ಶಿಶುಭ್ಯಃ' ಎಂದು ಅವರಿಗೆ ನಮಸ್ಕಾರ.

ಅವರಲ್ಲಿಯೇ ಆಕಾರದಿಂದ ಯುವತ್ವ ವಟುತ್ವಗಳಿರುವುದರಿಂದ, 'ನಮೋ ಯುವಭ್ಯೋ ನಮ ಆವಟುಭ್ಯಃ' ಎಂದೂ ಅವರನ್ನೇ ನಮಿಸಬಹುದು. ಅವರಲ್ಲಿ ಕೇವಲ ಗುಣದಿಂದ ಯುವತ್ವ ವಟುತ್ವ ಗಳನ್ನು ವಿವಕ್ಷೆ ಮಾಡಬೇಕಿಲ್ಲ. ಹೀಗೆ ತ್ರಿಮೂರ್ತಿಗಳಲ್ಲಿ ಮತ್ತು ಸ್ಕಂದೇಂದ್ರಾದಿ ಗಳಲ್ಲಿ ಗುಣದಿಂದ ಮಹತ್ವ ಶಿಶುತ್ವ ವಿವಕ್ಷೆ ಮಾಡುವುದು, ಅಜರಾಮರರಾದ ದೇವತೆಗಳಲ್ಲಿ ವಯಸಿನಿಂದ ಸಂಬಂಧದಿಂದ ಮಹತ್ವ ಶಿಶುತ್ವ ಕೂಡುವುದಿಲ್ಲ ಎಂಬ ಕಾರಣಕ್ಕಾಗಿಯೆ. ಮತ್ತು ಗುಣದಿಂದ ಮಹತ್ವ ಶಿಶುತ್ವಗಳನ್ನು ಹೇಳಿ ಸ್ತುತಿಸಿದರೆ ದೇವತೆಗಳು ಒಲಿದು ಅಭೀಷ್ಟಗಳನ್ನು ಪೂರೈಸುವರು ಎಂಬ ಪ್ರಯೋಜನವೂ ಇದೆ.

ಯುವತ್ವ ವಟುತ್ವಗಳ ವಿಷಯದಲ್ಲಿ ಗುಣ ವಿವಕ್ಷೆ ಮಾಡದಿದ್ದರೂ ಆಕಾರದಿಂದ ಅವುಗಳನ್ನು ಹೇಳಿ ಸ್ತುತಿಸಿದಾಗ ಸ್ಕಂದೇಂದ್ರಾದಿ ದೇವತೆಗಳು ಒಲಿದು ಅಭೀಷ್ಟಗಳನ್ನು ಕೊಟ್ಟೇ ಕೊಡುತ್ತಾರೆ. ಆದರೂ, ಶಿಶುಗಳೆಂದು ಗುಣನಿಮಿತ್ತವಾಗಿ ಸ್ತುತಿಸಿದ ದೇವತೆಗಳನ್ನೇ ಪುನಃ ಆಕಾರದಿಂದ ಯುವಕ ರೆಂದೂ ವಟುಗಳೆಂದೂ ಪುನಃ ಪುನಃ ಸ್ತುತಿಸುವುದು ಪುನರುಕ್ತಿ ಯಾಗುವುದಿಲ್ಲವೆ? ಎಂದರೆ ಈ ಪುನರುಕ್ತಿ ದೋಷವಲ್ಲ ಎನ್ನುತ್ತೇವೆ. ದೊಡ್ಡವರಲ್ಲಿ ಪ್ರಾಮಾದಿಕವಾಗಿ ಮಾಡಿದ ಅಪಚಾರದಿಂದ ಮಹಾ

ಅನರ್ಥಸಂಭವಿಸುವ ಪ್ರಸಂಗದಲ್ಲಿ ದೇವತಾಸ್ತುತಿ ನಮಸ್ಕಾರಗಳು ವಿಹಿತವಾಗಿವೆ. ಅನರ್ಥಪರಿಹಾರವಾಗುವವರೆಗೂ ಮತ್ತೆ ಮತ್ತೇ ಸ್ತುತಿ ನಮಸ್ಕಾರ ಮಾಡುವುದು ಯುಕ್ತವೇ ಆಗುತ್ತದೆ.

ಮತ್ತು ದೇವತೆಗಳಿಗೆ ಅನೇಕಾನೇಕ ರೂಪಗಳಿರುವುದರಿಂದ ಅನೇಕಬಾರಿ ಸ್ತುತಿ ನಮಸ್ಕಾರಗಳನ್ನು ಅರ್ಪಿಸುವುದೂ ಯುಕ್ತವೆನಿಸುತ್ತದೆ. ಪರಮಾತ್ಮನ ವಿಶೇಷ ಅನುಗ್ರಹ ಸಂಪಾದನೆಗಾಗಿ ಈ ದೇವತೆಗಳು ಬೇರೆ ಬೇರೆ ರೂಪಗಳಿಂದ ಬೇರೆಬೇರೆ ಉಪಾಸನೆಗಳನ್ನು ಮಾಡುತ್ತಾರೆ. ಹೆಚ್ಚುಹೆಚ್ಚು ಪರಮಾತ್ಮಾನುಗ್ರಹ ವನ್ನು ಪಡೆದುಕೊಳ್ಳುತ್ತಾರೆ. ಈ ಮಹಿಮೆಗಳ ಅನುಸಂಧಾನದಿಂದ ನಾವು ಮತ್ತೆಮತ್ತೆ ಸ್ತುತಿ ನಮಸ್ಕಾರಗಳನ್ನು ಅರ್ಪಿಸುವುದರಿಂದ ಅವರು ನಮ್ಮಲ್ಲಿ ವಿಶೇಷ ಅನುಗ್ರಹ ಮಾಡುತ್ತಾರೆ.

ಬಹಳ ಹೆಚ್ಚು ವಯಸ್ಸಾಗಿದ್ದರೆ ಮಹತ್ವ, ಅವರಿಗಿಂತ ಚಿಕ್ಕವರಾಗಿದ್ದರೆ ಯುವತ್ವ, ಅವರಿಗಿಂತ ಚಿಕ್ಕವರಾಗಿದ್ದರೆ ವಟುತ್ವ, ಅವರಿಗಿಂತಲೂ ಚಿಕ್ಕವರಾಗಿದ್ದರೆ ಶಿಶುತ್ವ ಲೋಕದಲ್ಲಿ ಕಂಡಿದೆ. ಇದೇರೀತಿ ಎಲ್ಲರಿಗಿಂತ ಹೆಚ್ಚು ಗುಣವಿದ್ದರೆ ಮಹತ್ವ. ಇವರು ತ್ರಿಮೂರ್ತಿಗಳು. ಇವರಿಗಿಂತ ಕಡಿಮೆ ನಮಗಿಂತ ಹೆಚ್ಚು ಗುಣಗಳಿದ್ದರೆ ಯುವತ್ವ. ಇವರು ಇಂದ್ರಾದಿಗಳು ಎನ್ನಬಹುದು.

ತ್ರಿಮೂರ್ತಿಗಳಲ್ಲಿಯೂ ವಿಷ್ಣುವಿನಲ್ಲಿ ಅಧಿಕಗುಣವಿರುವುದರಿಂದ ಮಹತ್ವ. ಅವನಿಗಿಂತ ಕಡಿಮೆ ನಮಗಿಂತ ಹೆಚ್ಚು ಗುಣಗಳಿರುವುದರಿಂದ ಬ್ರಹ್ಮಾದಿಗಳು ಯುವಕರು. ಅವರಿಗಿಂತ ಕಡಿಮೆ. ನಮಗಿಂತ ಹೆಚ್ಚು ಗುಣಉಳ್ಳ ಇಂದ್ರಾದಿಗಳು ಆಶಿನರೆನಿಸುವ ವಟುಗಳು.

ಬ್ರಹ್ಮರುದ್ರರಿಬ್ಬರಲ್ಲಿ ಬ್ರಹ್ಮನು ವಿಷ್ಣುವಿನಂತೆ ಅಧಿಕಗುಣದವನಲ್ಲ. ನಮ್ಮಂತೆ ಅವನು ಅಲ್ಪಗುಣನೂ ಅಲ್ಲ. ಮಧ್ಯಮ ಗುಣದವನು, ಬ್ರಹ್ಮನೇ ಯುವಕ. ಬ್ರಹ್ಮನಿಗಿಂತ ಕಡಿಮೆಗುಣ ನಮಗಿಂತ ಅಧಿಕಗುಣಉಳ್ಳವನು ರುದ್ರನು ವಟು. ಅವನಿಗಿಂತ ಕಡಿಮೆ ಗುಣವಿದ್ದು ಅಲ್ಪಗುಣರಾದ ನಮಗಿಂತ ಅಧಿಕ ಗುಣವಂತರಾದ ಇಂದ್ರಾದಿ ದೇವತೆಗಳೇ ಶಿಶುಗಳು ಎಂದು ವಿವಕ್ಷೆ ಮಾಡಬಹುದು. ಆಗ ಮಹತ್ವಉಳ್ಳ ವಿಷ್ಣುಬ್ರಹ್ಮರುದ್ರರಿಗೆ ನಮಸ್ಕಾರ. ಅವರಿಂದತೊಡಗಿ ಶಿಶುಗಳವರೆಗಿನ ಎಲ್ಲ ದೇವತೆಗಳಿಗೂ ನಮಸ್ಕಾರ ಎಂದು ಶ್ಲೋಕಾರ್ಥ.

(೪) ಇನ್ನು ಯೋಗಿಗಳಿಗೂ ಕ್ರಮವಾಗಿ ನಮಸ್ಕಾರವು ಶ್ಲೋಕದಲ್ಲಿ ಕಾಣುತ್ತದೆ. ಮಹಾಯೋಗಿಗಳಾದ ದತ್ತ ಕಪಿಲ ಮುಂತಾದವರಿಗೆ ನಮಸ್ಕಾರ. ಯೋಗಿ ಗಳಲ್ಲಿಯೂ ನಾಲ್ಕು ಬಗೆಗಳಿರುವುದರಿಂದ ಮಹಾಯೋಗಿಗಳಿಂದ ತೊಡಗಿ ಶಿಶುಯೋಗಿಗಳವರೆಗೂ ನಮಸ್ಕಾರ. ತರುಣಯೋಗಿಗಳಾದ ದುರ್ವಾಸ ಶುಕ ಮುಂತಾದವರಿಗೂ ನಮಸ್ಕಾರ. ವಟುಯೋಗಿಗಳಾದ ಸ್ಕಂದಾದಿಗಳಿಗೂ ನಮಸ್ಕಾರ. ಶಿಶುಯೋಗಿಗಳಾದ ಸನಕಾದಿಗಳಿಗೂ ನಮಸ್ಕಾರ.

(೫) ಇವರೆಲ್ಲ ಈ ಯೋಗಿಗಳ ಚಿಹ್ನೆಗಳುಳ್ಳವರು. ಇನ್ನು ಬೇರೆ, ಚಿಹ್ನೆಗಳಿಲ್ಲ ದವರು ಅವಧೂತಯೋಗಿಗಳೂ ಪ್ರಸಿದ್ಧರಲ್ಲದವರೂ ಇರುತ್ತಾರೆ. ಅವರಿಗೂ ನಮಸ್ಕಾರ.

ಇವರು ಬ್ರಹ್ಮಾಪರೋಕ್ಷ ಜ್ಞಾನಿಗಳಾದ್ದರಿಂದ ದೇಹಾಭಿಮಾನರಹಿತರು. ಅದರಿಂದಲೇ ನೋಡಿದ ಮಾತ್ರಕ್ಕೆ ನಮಸ್ಕಾರ ಯೋಗ್ಯನೆನಿಸಿಕೊಳ್ಳಲು ಬೇಕಾಗುವ ದಂಡ ಕಮಂಡಲು ಮುಂತಾದ ಚಿಹ್ನೆಗಳನ್ನು ಧರಿಸದಿರುವವರು ಸಾಧಾರಣ ಜನರಿಗೆ ಯೋಗಿಗಳೆಂದು ತಿಳಿಯಲಾಗದವರು. ಆದರೆ ಭಾರತ ಭೂಮಿಯಲ್ಲಿ ಜನಿಸಿದ ಜನರ ಉದ್ಧಾರಕ್ಕಾಗಿ ಭೂಮಿಯಲ್ಲೆಲ್ಲ ಸಂಚರಿಸುತ್ತಿರು ವವರು.

ಇವರಲ್ಲಿ ವಯಸಿನಿಂದ ಹಿರಿಯರೆನಿಸಿದ ಮೈಸುಕ್ಕು ನರೆಕೂದಲು ಕೂಡ ಉಳ್ಳ ಮಹಾಯೋಗಿಗಳು ಇರುತ್ತಾರೆ. ಇವರಿಗೆ ನಮಸ್ಕಾರ. ಈ ವೃದ್ಧರಿಂದ ತೊಡಗಿ ಶಿಶು ವಯಸಿನವರವರೆಗೆ ಎಲ್ಲರಿಗೂ ನಮಸ್ಕಾರ. ಈ ಅವಧೂತರಿಗೆ ಸದೃಶರಾದ ದೃಢಕಾಯದ ಯುವಕ ಯೋಗಿಗಳಿಗೂ ನಮಸ್ಕಾರ.

ರಹೂಗಣರಾಜ ಈ ಮಾತಿನಿಂದ ಜಡಭರತನನ್ನು 'ಅಪ್ಪಾ, ನೀನು ದೃಢಕಾಯನಲ್ಲ' ಎಂದು ಮುಂತಾಗಿ ವ್ಯಂಗ್ಯನುಡಿಗಳಿಂದ ನಿಂದಿಸಿದ್ದನ್ನು ನೆನಪಿಗೆ ತಂದುಕೊಳ್ಳುತ್ತಾನೆ. ಕ್ಷಮೆ ಕೇಳುತ್ತಾನೆ.

ಇಂಥ ಯೋಗಿಗಳಿಗಿಂತಲೂ ಕಡಿಮೆ ವಯಸಿನ ವಟುಗಳಿಗೂ ನಮಸ್ಕಾರ. ಇನ್ನೂ ಏನೂ ಸಾಧನೆ ಮಾಡಿಲ್ಲದ ಶಿಶುಗಳಿಗೂ ಕೂಡ ನಮಸ್ಕಾರ ಮಾಡುತ್ತಾನೆ. ಬ್ರಾಹ್ಮಣ ಕುಲಕ್ಕೆ ಅವಮಾನ ಮಾಡಿದರೂ ಅನರ್ಥ ಭಯವಿರುತ್ತದೆ ಎಂದು ಸೂಚಿಸುತ್ತಾನೆ.

ಒಟ್ಟು ತಾತ್ಪರ್ಯ ಇದು—'ಸರ್ವಗುಣಗಳಿಂದಲೂ ಸರ್ವೋತ್ತಮನು ನಾರಾಯಣನೆ. ಬಳಿಕ ಲಕ್ಷ್ಮೀದೇವಿ. ಇವರೀರ್ವರೆ ಜಗತ್ತಿಗೆ ತಂದೆತಾಯಿಗಳು. ಅವರ ಅನಂತರ ಬ್ರಹ್ಮ ಸರಸ್ವತಿಯರು ತಂದೆ ತಾಯಿಗಳು. ಮಿಕ್ಕ ದೇವತೆಗಳು ಎಲ್ಲರೂ ಈ ನಾಲ್ವರ ಭಕ್ತರು. ಮತ್ತು ನನಗೆ ಬಂಧುಗಳು. ನನಗೆ ಅವರ ಬಂಧುತ್ವವು ಈ ನಾಲ್ವರ ದ್ವಾರಾನೆ. ಏಕೆಂದರೆ ಅವರು ಕೆಲವೊಮ್ಮೆ ನಾರಾಯಣನ ಪುತ್ರರಾದಾರು, ಕೆಲವೊಮ್ಮೆ ನಾರಾಯಣನ ಮೊಮ್ಮಗನೂ ಆದಾರು. ಅದು ಅವರು ನಾರಾಯಣನ ಸೇವೆಯಿಂದಲೇ ಸ್ವಯೋಗ್ಯವಾದ ರುದ್ರಾದಿ ಪದವಿಗಳನ್ನು ಪಡೆದವರು. ಮತ್ತೂ ಅವನ ಅನುಗ್ರಹಾಕಾಂಕ್ಷಿಗಳೇ ಆಗಿರುವವರು. ಈ ಜ್ಞಾನವನ್ನು ಸಂಪಾದಿಸಿ ವಿಷ್ಣುವಿನಲ್ಲಿ ಭಕ್ತಿಯಿಂದ ನಮಸ್ಕಾರಾದಿ ರೂಪವಾಗಿ ಪ್ರಾಯಶ್ಚಿತ್ತ ಮಾಡಿಕೊಂಡರೇ ಅದು ಪಾಪಪರಿಹಾರ ಮಾಡಲು ಸಮರ್ಥ ವಾಗುವುದು'.

ಇದನ್ನು 'ನಮೋ ಮಹದ್ಭ್ಯಃ' ಎನ್ನುವ ಈ ಶ್ಲೋಕವು ಸೂಚ್ಯವಾಗಿ ತಿಳಿಸುತ್ತದೆ.



# (೯) ಆತ್ಮಪ್ರಶಂಸಾವರ್ಜನ ಪ್ರಕರಣ

## ಪ್ರಕರಣ ಸಾರಾಂಶ

ಆತ್ಮಪ್ರಶಂಸೆ ಮಹಾಪಾಪ. ಆದರೂ ಪ್ರಾಚೀನ ರಾಜಮಹಾರಾಜರು ಹೊಗಳುಭಟರಿಂದ ತಮ್ಮನ್ನು ಹೊಗಳಿಸಿಕೊಂಡು ಅವರಿಗೆ ಬಹುಮಾನ ವೇತನಗಳನ್ನು ನೀಡುತ್ತಿದ್ದರು. ಆದರೆ ಆದಿರಾಜನಾದ ಪೃಥುಚಕ್ರವರ್ತಿ 'ತನ್ನಿಂದ ಬಹುಮಾನ ವೇತನಗಳನ್ನು ವಪಡೆಯುವುದಕ್ಕೆ ತನ್ನ ಮುಂದೆ ತನ್ನಲ್ಲಿ ಇಲ್ಲದ ಗುಣವನ್ನು ಹೇಳಿ ಮುಖಸ್ತುತಿಯನ್ನು ಹೊಗಳು ಭಟರು ಮಾಡುತ್ತಿದ್ದರೆ ಅದರಿಂದ ಮೋಸಹೋಗುವ ರಾಜನು ಮೂರ್ಖನೆ ಸರಿ' ಎಂದು ಎಲ್ಲ ರಾಜರಿಗೆ ಕಿವಿಮಾತನ್ನು ಹೇಳು ತ್ತಾನೆ.

ವಸ್ತುತಃ ಪುಣ್ಯಶ್ಲೋಕರಾದ ರಾಜರು ಹೊಗಳಿಕೆಗಳನ್ನೆಲ್ಲ ತಮ್ಮೊಳಗಿರುವ ಭಗವಂತನಿಗೇ ಅರ್ಪಿಸುತ್ತಿದ್ದರು.

ನಾರದರು ತಮ್ಮ ಹಿಂದಿನ ಉಪಬರ್ಹಣ ಎಂಬ ಗಂಧರ್ವಜನ್ಮದಲ್ಲಿ ತನ್ನ ಗಂಧರ್ವವಿದ್ಯಾಮದವನ್ನು ಪ್ರಜಾಪತಿಗಳ ಸತ್ರದಲ್ಲಿ ಪ್ರದರ್ಶಿಸಿ ಶಾಪದಿಂದ ದಾಸೀಪುತ್ರನಾಗಿ ಜನಿಸಬೇಕಾಯಿತೆಂದು ಶ್ರೀವ್ಯಾಸರಲ್ಲಿ ಹೇಳಿಕೊಳ್ಳುತ್ತಾರೆ. ಮಹಾತ್ಮರ ನಿಂದೆ ಆತ್ಮಪ್ರಶಂಸೆಗಳನ್ನು ಮಾಡುವ ಹುಚ್ಚು ಮನಸ್ಸನ್ನು ನಿಗ್ರಹಿಸುವುದು ದೊಡ್ಡ ತಪಸ್ಸು, ಅವಶ್ಯ ಅನುಷ್ಠೇಯವಾದ ಭಾಗವತಧರ್ಮವಾಗಿದೆ ಎಂದು ಅವಧೂತರು ಹೇಳುತ್ತಿದ್ದಾರೆ.



–೧೩೩–

**ಇಲ್ಲದ ಗುಣ ಹೇಳಿಕೊಳ್ಳಬಾರದು ಎನ್ನುತ್ತಾನೆ ಪೃಥುಚಕ್ರವರ್ತಿ**

**ಹೇ ಸೂತ ಹೇ ಮಾಗಧ ಸೌಮ್ಯ ಬಂದಿನ್**
**ಲೋಕೇಽಧುನಾಽಸ್ಪಷ್ಟ ಗುಣಸ್ಯ ಮೇ ಸ್ಯಾತ್ ।**

**ಕಿಮಾಶ್ರಯೋ ಸ್ತವ ಏಷ ಯೋಜ್ಯತಾಂ**
**ಮಾ ಮಯ್ಯಭೂವನ್ ವಿತಥಾ ಗಿರೋ ವಃ ।** (ಭಾ.೪.೧೫.೧೯)

**ಯಥಾ ಶ್ರೇಯೋರ್ಥಿಭಿಃ ಮಹನ್ನಿಂದಾ ನ ಕರ್ತವ್ಯಾ ತಥಾ ಆತ್ಮಪ್ರಶಂಸಾಪೀತ್ಯೇತಮರ್ಥಂ ಪ್ರತಿಪಾದಯಿತುಂ ಇದಂ ಪ್ರಕರಣಂ। ತತ್ರಾದೌ ಯದಾ ಪರಕೃತಮಪಿ ಸ್ವಾತ್ಮಪ್ರಶಂಸನಂ ನ ಶ್ರೋತವ್ಯಂ ತದಾ ಕಿಮು ವಕ್ತವ್ಯಂ ಸ್ವಪ್ರಶಂಸಾ ಸ್ವೇನ ನ ಕರ್ತವ್ಯೇತೀತ್ಯೇವಂ ಕೈಮುತ್ಯೇನಾಯಮರ್ಥಃ ಸಿದ್ಧ್ಯತೀತ್ಯಾಶಯೇನ ಸೂತಾದೀನ್ ಪ್ರತಿ ಪೃಥುರಾಜೋಕ್ತಂ ದರ್ಶಯತಿ । ಹೇ ಸೂತೇತಿ ॥ ಹೇ ಸೂತಾದಯಃ ಅಧುನಾ ಲೋಕೇ ಅಪ್ರಕಟಿತಗುಣಸ್ಯ ಮೇ ಏಷ ಸ್ತವಃ ಭವತ್ಕೃತಃ । ಕೋ ಗುಣಃ ಆಶ್ರಯೋ ವಿಷಯೋ ಯಸ್ಯ ಸಃ ಕಿಮಾಶ್ರಯಃ ಸ್ಯಾತ್ । ವೋ ಗಿರಃ ಮಯಿ ವಿತಥಾಃ ಬಾಧಿತವಿಷಯಾಃ ಮಾ ಭೂವನ್ । ಇದಂ ಯೋಜ್ಯತಾಂ ವಿಚಿಂತ್ಯತಾಮಿತಿ। ಇದಮುದಿತಂ ಭವತಿ— ಏತೇ ಸೂತಾದಯೋಽಸ್ಮತ್ಸ್ತವನಂ ಕರ್ತುಂ ಆಗತಾಃ । ಆತ್ಮಸ್ತವನಂ ಚ ನ ಶ್ರೋತವ್ಯಂ । ಅತಃ ಇದಾನೀಂ ತಾವತ್ ಅಸ್ಪಷ್ಟಗುಣತ್ವಂ ನಿಮಿತ್ತಂ ವ್ಯುತ್ಪಾದ್ಯ ಪರಿಹರಾಮಃ ಕಿಮುತ್ತರಕಾಲಚಿಂತಯಾ ಮರ್ತ್ಯಾನಾಮಿತಿ ॥**



**ಪೃಥುರಾಜನು ಸೂತಮಾಗಧ ಬಂದಿಗಳ ಸ್ತುತಿಪಾಠ ತನಗೆ ಬೇಡವೆನ್ನುತ್ತಾನೆ.**

**ಓ ಸೂತ ಮಾಗಧ ಬಂದಿಗಳೆ, ನನ್ನಲ್ಲಿ ನೀವು ಹೇಳುವ ಪರಾಕ್ರಮ ಮುಂತಾದ ಗುಣಗಳು ಇನ್ನೂ ಜಗತ್ತಿನಲ್ಲಿ ಪ್ರಕಟವಾಗಿಲ್ಲ. ಅದಕ್ಕೆ ಮೊದಲೆ ನೀವು ಸ್ತುತಿಸಿದರೆ ಯಾವ ಸ್ತೋತ್ರ ತಾನೆ ನಿಜವಾದೀತು? ನಿಮ್ಮ ಹೊಗಳಿಕೆಗಳು ಸುಳ್ಳಾಗಬಾರದು ತಾನೆ?**

ಹೀಗೆ ಹೇಳಿದ ಆದಿರಾಜ ಪೃಥು ಆತ್ಮಪ್ರಶಂಸೆಯನ್ನು ವರ್ಜನ ಮಾಡುತ್ತಾ ಹೇಳುತ್ತಾನೆ— 'ಈಗಂತೂ ನೀವು ನನ್ನಲ್ಲಿ ಹೇಳುವ ಯಾವ ಗುಣವೂ ಲೋಕದಲ್ಲಿ ಪ್ರಕಟವಾಗಿಲ್ಲ. ಮುಂದೆ ಭವಿಷ್ಯದಲ್ಲಿ ಏನಾಗುವುದೋ ಯಾರಿಗೆ ಗೊತ್ತು? ಅದರಿಂದ ನನ್ನನ್ನು ಹೊಗಳಬೇಡಿರೆನ್ನುತ್ತಾನೆ. 'ಆತ್ಮ ಪ್ರಶಂಸಾ ಮರಣಂ' ಎಂದು ಸ್ಮೃತಿವಚನವಿದೆ.



—೧೩೪—

## ಹೊಗಳಿಕೆ ಸಲ್ಲಬೇಕಾಗಿರುವುದು ರಾಜರೊಳಗಿರುವ ರಾಜರಾಜೇಶ್ವರ ಹರಿಗೆ

**ತಸ್ಮಾತ್ ಪರೋಕ್ಷೇಸ್ಮದುಪಾಶ್ರಿತಾನ್ಯಲಂ**
**ಕರಿಷ್ಯಥ ಸ್ತೋತ್ರಮಪೀಡ್ಯ ವಾಚಃ ।**
**ಸತ್ಯುತ್ತಮಶ್ಲೋಕಗುಣಾನುವಾದೇ**
**ಜುಗುಪ್ಸಿತಂ ನ ಸ್ತವಯಂತಿ ಸಭ್ಯಾಃ ॥**

(ಭಾ.೪.೧೫.೨೦)

ನನ್ವೇವಂ ಸ್ತವನನಿಷೇಧೇ ಪಾಕಾದಿನಾ ಪಾಚಕಾದೀನಾಮಿವ ಕೢಪ್ತವೃತ್ತೀನಾಂ ಅಸ್ಮಾಕಂ ಜೀವನಮೇವ ನ ಸಿಧ್ಯೇದಿತಿ ತನ್ಮನೋಗತಮಾಶಂಕ್ಯಾಹ ॥ **ತಸ್ಮಾದಿತಿ** ॥ ಯಸ್ಮಾತ್ ತೇನ ವಿನಾ ಜೀವನಂ ನ ಸಿಧ್ಯತಿ । ತಸ್ಮಾತ್ ಅಸ್ಮದುಪಾಶ್ರಿತಾನಿ ಅಸ್ಮದ್ವಿಷಯಾಣಿ ಸ್ತೋತ್ರಾಣಿ ಅಲಂ ಯಥೇಚ್ಛಂ ಪರೋಕ್ಷ ಏವ ಕರಿಷ್ಯಥೇತಿ । ನನು ಅಸ್ಮಾಕಂ ಪೂರ್ವೈಃ ರಾಜಭಿಃ ಏವಂ ನಿಯಮಿತಂ। ''ಪ್ರತಿದಿನಂ ಅಮಾತ್ಯಾದಿಗೃಹೇಷು ರಾಜ್ಞಃ ಸ್ತವನಮೇಕಂ । ರಾಜಸಭಾಯಾಂ ತು ದ್ವಿತೀಯಂ । ತದರ್ಥಂ ಕ್ಷೇತ್ರಾದಿಕಮಪಿ ಅನುರೂಪಂ ದತ್ತಮಿತಿ' ಪರಂಪರಾಯಾತಂ ಕಥಂ ಅಪರೋಕ್ಷಮಪಿ ಸ್ತವನಂ ತ್ಯಾಜ್ಯಮಿತ್ಯತಸ್ತತ್ರಾಪಿ ಸಮಾಧಿಮಾಹ । ಅಪಿ ಪ್ರತ್ಯಕ್ಷಮಪಿ । ಈಡ್ಯವಾಚಃ ಈಡ್ಯಾ ಸ್ತುತ್ಯಾಃ ವಾಚೋ ನಾಮಾನಿ ಯಸ್ಯ ತಸ್ಯ ಹರೇಃ ಸ್ತೋತ್ರಂ ಕರಿಷ್ಯಥೇತಿ । ರಾಜ್ಞ ಏವ ಸ್ತವನಂ ಸಮಕ್ಷಂ ಕುತೋ ನ ಕಾರ್ಯಮಿತ್ಯತ ಆಹ ॥ **ಸತೀತಿ** ॥ ಉತ್ತಮಶ್ಲೋಕಸ್ಯ ಹರೇಃ ಗುಣಾನುವಾದೇ ಸತಿ ತಂ ಪರಿತ್ಯಜ್ಯ । ಸಭ್ಯಾಃ ಸಭಾಸು ಸ್ಥಿತಾಃ ಸಭಾಪತಯಃ ಸ್ವಾತ್ಮಾನಂ ನ ಸ್ತವಯಂತಿ । ನ ಸ್ತಾವಯಂತಿ ಸ್ತಾವಕೈಃ । ಯತೋಽತ ಇತಿ ।

''ಪ್ರಭವೋ ಹ್ಯಾತ್ಮನಃ ಸ್ತೋತ್ರಂ 'ಜುಗುಪ್ಸಂತ್ಯಪಿ ವಿಶ್ರುತಾಃ ।
ಹ್ರೀಮಂತಃ ಪರಮೋದಾರಾಃ ಪೌರುಷಂ ವಾ ವಿಗರ್ಹಿತ''ಮಿತಿ ॥



ಪೃಥುರಾಜ ಹೇಳುತ್ತಾನೆ—

ಮುಂದೆ ನಾವು ಸ್ತುತ್ಯವಾದ ಕರ್ಮಗಳನ್ನು ಮಾಡಿದಾಗ ಹೊಗಳಿರಿ. ಆಗ ಹೊಗಳಿದರೆ ಅದು ಸತ್ಯವಾದೀತು. ವಸ್ತುತಃ ನೀವು ನಮ್ಮನ್ನು ಹೊಗಳುವುದೇ

**ಉಚಿತವಲ್ಲ. ಉತ್ತಮವಾದ ಹೊಗಳಿಕೆ ಸಲ್ಲಬೇಕಾಗಿರುವುದು ಶ್ರೀಹರಿಗೆ. ಅವನ ಗುಣಗಳನ್ನು ಹೊಗಳಿದರೇ ಅದು ಪ್ರಶಸ್ತವಾಗುವುದು. ಶಿಷ್ಟರಾದವರು ತಮ್ಮ ತುಚ್ಛಗುಣಗಳನ್ನು ಎಂದೂ ಹೊಗಳಿಕೊಳ್ಳುವುದಿಲ್ಲ.**

ಪಾಕ ಮಾಡುವುದು ಅಡಿಗೆಯವರಿಗೆ ಆವಶ್ಯಕವಾಗಿರುವ ಜೀವನವೃತ್ತಿಯಾಗಿರುವಂತೆ ಹೊಗಳುಭಟರಾದ ನಮಗೆ ಹೊಗಳುವುದು ಜೀವನವೃತ್ತಿ. 'ಅವಿದ್ಯಮಾನಕಥಕಾ ಬಂದಿನಃ ಪರಿಕೀರ್ತಿತಾಃ' ರಾಜನಲ್ಲಿಲ್ಲದ ಭಗವಂತನಲ್ಲೇ ಇರುವ ಗುಣಗಳನ್ನು ಹೊಗಳುವುದೇ ಬಂದಿಗಳ ಕಸುಬು. ಅದಿಲ್ಲದೆ ನಾವು ಬದುಕುವುದು ಹೇಗೆ ಎಂದರೆ ಪೃಥುರಾಜ ಹೇಳುತ್ತಾನೆ— ಆಗಲಿ, ಹೊಗಳಿರಿ, ಆದರೆ ನಮ್ಮೆದುರಿಗೆ ನಮ್ಮನ್ನು ಹೊಗಳಬೇಡಿರಿ. 'ಪರೋಕ್ಷೇ ಏವ' ನಾವಿಲ್ಲದಲ್ಲಿ ಅಮಾತ್ಯಾದಿಗಳ ಬಳಿಯಲ್ಲಿ ಹೊಗಳಿರಿ. ರಾಜಸಭೆಯಲ್ಲಿ ಸಭ್ಯರ ಮುಂದೆ ಹೊಗಳಿರಿ. ನಿಮಗೆ ತಕ್ಕ ವೇತನ ಸಿಗುವುದು.

'ರಾಜರೆದುರಿಗೇ ಪ್ರತ್ಯಕ್ಷವಾಗಿ ಪರಂಪರಾಪ್ರಾಪ್ತವಾದ ಪರಾಕುಗಳನ್ನು ಹೇಗೆ ಹೇಳದಿರಲು ಸಾಧ್ಯ ?' ಎಂದರೆ, 'ಈಡ್ಯವಾಚಃ' ಎಲ್ಲ ಸ್ತೋತ್ರಗಳಿಗೂ ಅರ್ಹನಾದ ಶ್ರೀಹರಿಯ ಸ್ತುತಿಯನ್ನೇ ಮಾಡಿರಿ. ಅದನ್ನು ಬಿಟ್ಟು ನಮ್ಮ ಗುಣಗಳನ್ನು ಹೊಗಳುವುದೇ ಆದರೆ ಎದುರಿಗೆ ಸ್ತುತಿಸಬಾರದು. ಸಭ್ಯರಾದವರು ತಮ್ಮೆದುರಿಗೆ ತಮ್ಮ ಗುಣಗಳನ್ನು ಹೊಗಳಿಸಿಕೊಂಡರೆ ಅವರಿಗೆ ಅದು ಬಹಳ. 'ಜುಗುಪ್ಸಿತ' ಹೇಸಿಗೆ, ನಾಚಿಕೆಗೇಡು!

ಪೃಥುರಾಜ ಹೇಳುತ್ತಾನೆ—

ಪ್ರಭವೋ ಹ್ಯಾತ್ಮನಃ ಸ್ತೋತ್ರಂ ಜುಗುಪ್ಸಂತ್ಯಪಿ ವಿಶ್ರುತಾಃ ।
ಹ್ರೀಮಂತಃ ಪರಮೋದಾರಾಃ ಪೌರುಷಂ ವಾ ವಿಗರ್ಹಿತಂ ॥

(ಭಾ.೪.೧೫.೨೨)

ಆತ್ಮಪ್ರಶಂಸೆ ಮರಣ ತುಲ್ಯವಾದ್ದರಿಂದ 'ಅತ್ಯುತ್ತಮ ಗುಣಗಳಿದ್ದೂ ಹೊಗಳಿಸಿಕೊಳ್ಳಲು ನಾಚುವ ಸ್ವಭಾವದವರು ಸಜ್ಜನರು. ತಾವು ಪ್ರಸಿದ್ಧರೇ ಆಗಿದ್ದರೂ ಅಥವಾ ಪ್ರಸಿದ್ಧಿ ಸಂಪಾದಿಸಲು ಶಕ್ತರಾಗಿದ್ದರೂ ತಮ್ಮನ್ನು ತಾವು ಹೊಗಳಿಸಿಕೊಳ್ಳಲು ಜುಗುಪ್ಸೆ ಪಡುತ್ತಾರೆ. ದುರ್ಬಲರ ಮೇಲೆ ತೋರುವ ನಿಂದಿತವಾದ ಪರಾಕ್ರಮವನ್ನು ಹೊಗಳಿದರೆ ಜುಗುಪ್ಸೆ ಪಡುವಂತೆ'.

—೧೩೫—

**ಮುಂದೆ ಗುಣಗಳನ್ನು ತನ್ನಲ್ಲಿ ಬೆಳೆಸಿಕೊಳ್ಳಬೇಕಾಗಿದೆ ಎನ್ನುತ್ತಾನೆ ಪೃಥುಚಕ್ರವರ್ತಿ**

**ಮಹದ್‌ಗುಣಾನಾತ್ಮನಿ ಕರ್ತುಮಿಚ್ಛನ್**
**ಕಃಸ್ತಾವಕೈಃ ಸ್ತಾವಯತೇಽ ಸತೋಽಪಿ ।**
**ಸ ವೈ ಭವಿಷ್ಯನ್ನಿತಿ ವಿಪ್ರಲಬ್ಧೋ**
**ಜನಾಪಹಾಸಂ ಕುಮತಿರ್ನ ವೇದ ॥**

(ಭಾ.೪.೧೫.೨೧)

**ರಾಜ್ಞಾ ಹ್ಯೇವಂ ಕಾರಯಿತವ್ಯಂ । ಸ್ವೋಪಜೀವಿಭಿಃ ಸೂತಾದಿಭಿಃ ಯದಾ ಸ್ವಸ್ತುತಿಃ ಕಾರ್ಯತಯಾ ಅಭಿಪ್ರೇಯತೇ । ತದಾ ಪರೋಕ್ಷ ಏವ ಸ್ವಸ್ಮಿನ್ ವಿದ್ಯಮಾನಗುಣವಿಷಯಿಣ್ಯೇವ । ಯದಾ ಚ ಪ್ರತ್ಯಕ್ಷಮೇವ ಸ್ತವನಂ ಕಾರ್ಯಮಿತ್ಯುಚ್ಯತೇ ತದಾ ಶ್ರೀಹರಿಸ್ತವನಮೇವೇತಿ । ಏವಂ ಉಕ್ತಸ್ಯ ವೈಪರೀತ್ಯೇನ ಯಃ ಕಾರಯತಿ ಸ ನ ಪ್ರೇಕ್ಷಾವಾನ್ ಇತಿ ಉಪೇಕ್ಷಣೀಯ ಏವ ಮಹತಾಮಿತಿ ಭಾವೇನಾಹ ॥ ಮಹದ್ಗುಣಾನಿತಿ ॥ ಆತ್ಮನಿ ಸ್ವಸ್ಮಿನ್ ಅಸತಃ ಅವಿದ್ಯಮಾನಾನ್ ಅಪಿ ಮಹತಾಂ ಯೋಗ್ಯಾನ್ ಗುಣಾನ್ ಆತ್ಮನಿ ಕರ್ತುಮಿಚ್ಛನ್ ಆತ್ಮನಿಷ್ಠತಯಾ ಜ್ಞಾಪನಕಾಮಃ । ಸ್ತಾವಕೈಃ ಉದರಂಭರಣೈಕರತೈಃ ಪುರುಷೈಃ ಸ್ವಸ್ಮಿನ್ ಅಸತೋ ಗುಣಾನ್ ಕಃ ಸ್ತಾವಯತೇ । ಯಃ ಸ್ತಾವಯತಿ ಸ ಕುಮತಿಃ ವಿಪ್ರಲಬ್ಧಃ ಅಜ್ಞಾನಾಂ ವಂಚಕಃ ಭವಿಷ್ಯನ್ ಭವನ್, ಸ್ತಾವಯತೇ ಸ್ತಾವಯತೀತಿ, ಜನೈಃ ಕ್ರಿಯಮಾಣಂ ಅಪಹಾಸಂ ನ ವೇದೇತಿ ॥**

❖❖❖

ಪೃಥುರಾಜ ಹೇಳುತ್ತಾನೆ—

ಯದ್ಯಪಿ ರಾಜನು ತನ್ನಲ್ಲಿ ಇಂದ್ರಾದಿಲೋಕಪಾಲಕರ ಗುಣಗಳನ್ನು ಮುಂದೆ ಬೆಳೆಸಿಕೊಳ್ಳಬೇಕೆಂದು ಬಯಸಿದರೆ ತಪ್ಪಿಲ್ಲ. ಆದರೂ ಮೊದಲಿಗೇ ತನ್ನಲ್ಲಿ ಇಲ್ಲದ ಆ ಗುಣಗಳನ್ನು ಯಾವ ವಿವೇಕಿ ಸಭ್ಯನು ತಾನೇ ಹೊಗಳಿಸಿಕೊಳ್ಳುತ್ತಾನೆ? ತನ್ನಿಂದ ಬಹುಮಾನ ಪಡೆಯುವುದಕ್ಕೆ ತನ್ನ ಮುಂದೆ ತನ್ನಲ್ಲಿಲ್ಲದ ಗುಣವನ್ನು ಹೇಳಿ ಮುಖಸ್ತುತಿ ಮಾಡಿದರೆ ಅದರಿಂದ ಮೋಸಹೋಗುವ

**ರಾಜನು ಮೂರ್ಖನಾಗುತ್ತಾನೆ. ಜನರು ತನ್ನನ್ನು ಅಪಹಾಸ ಮಾಡುವುದನ್ನು ಆತ ತಿಳಿದುಕೊಳ್ಳುವುದಿಲ್ಲ.**

'ರಾಜಾ ಪ್ರತ್ಯಕ್ಷ ದೇವತಾ' ಎಂಬಂತೆ ಶ್ರೀಹರಿಯ ರಾಜರಾಜೇಶ್ವರ ಮೂರ್ತಿಯ ವಿಶೇಷಾವೇಶ ಪಾತ್ರನಾದವನು ಅವನ ಪ್ರತೀಕ ತಾನೆಂದು ಹಿಂದಿನ ರಾಜ ರೆಲ್ಲರೂ ಹೊಗಳುಭಟರಿಂದ ಹೊಗಳಿಸಿಕೊಂಡರು. ಪುಣ್ಯಶ್ಲೋಕ ರೆನಿಸಿದರು. ಅದನ್ನು ತಿಳಿಯದವನು ತನ್ನನ್ನೇ ಹೊಗಳಿಸಿಕೊಳ್ಳುವವನು ಮೂರ್ಖ' ಎನ್ನುತ್ತಾನೆ ಪೃಥುರಾಜ.



–೧೩೬–

**ನಾರದರು ಪೂರ್ವಜನ್ಮದಲ್ಲಿ ದಾಸೀಪುತ್ರರಾಗಿದ್ದರಂತೆ**

**ಅಹಂ ಪುರಾತೀತಭವೇಽಭವಂ ಮುನೇ**
**ದಾಸ್ಯಾಸ್ತು ಕಸ್ಯಾಶ್ಚನ ವೇದವಾದಿನಾಂ ।**
**ನಿರೂಪಿತೋ ಬಾಲಕ ಏವ ಯೋಗಿನಾಂ**
**ಶುಶ್ರೂಷಣೇ ಪ್ರಾವೃಷಿ ನಿರ್ವಿವಿಕ್ಷತಾಂ ॥**

(ಭಾ.೧.೫.೨೩)

ತದೇವಂ ಮಹತ್ಸೇವಯಾ ತದನುರೂಪಂ ಫಲಂ ತನ್ನಿಂದಯಾ ಚ ತದನುರೂಪಂ ಫಲಂ ಪ್ರಸಿದ್ಧತರಸ್ಯ ನಾರದಸ್ಯ ಮಹಾಮುನೇಃ ದೃಷ್ಟಮಿತಿ ತತ್ಸೇವಾನಿಂದಯೋಃ ಕರಣತ್ಯಜನಯೋಃ ಆದರಜನನಾಯ ದರ್ಶಯಿತುಂ ತದ್ವಾಕ್ಯಮೇವ ಪಠತಿ ॥ **ಅಹಮಿತಿ** ॥ ವ್ಯಾಸಂ ಪ್ರತಿ ನಾರದವಚನಂ । ಹೇ ಮುನೇ ವ್ಯಾಸ । ಅಹಂ ಪುರಾ ಅತೀತೇ ಕಲ್ಪೇ ಪೂರ್ವಬ್ರಹ್ಮಕಲ್ಪೇ ಕಶ್ಚಿದ್ಗಂಧರ್ವೋಽಭವಂ । ತತ್ರ ಕಿಂಚಿತ್ ಮಹದವಜ್ಞಾಯುಕ್ತಶ್ಚ ಅಭವಂ । ತೇನ ಚ ಏತದ್ಬ್ರಹ್ಮಕಲ್ಪೇ ಅತೀತಭವೇ ಏತದ್ದೇಹಾಪೇಕ್ಷಯಾ ಪೂರ್ವಜನ್ಮನಿ ಕಸ್ಯಾಶ್ಚನ ದಾಸ್ಯಾಃ ಸಕಾಶಾತ್ ಅಭವಂ । ಪಿತುರ್ನಿರ್ಧಾರಣಾಭಾವಾದೇವಮುಕ್ತಿಃ । ತತ್ರ ಚ ಮಾತ್ರಾ ಯೋಗಿನಾಂ ಶುಶ್ರೂಷಣಾರ್ಥಂ ಬಾಲಕ ಏವ ನಿರೂಪಿತ ಇತಿ । ಗಂಧರ್ವಸ್ಯಾಪಿ ಕಿಂಚಿನ್ಮಹದವಜ್ಞಾನೇನ ದಾಸೀಪುತ್ರತ್ವಂ । ತಸ್ಮಿನ್ ಶೂದ್ರಜನ್ಮನ್ಯಪಿ ಮಹತ್ಸೇವಾಘಟನೇನ ಬ್ರಹ್ಮಪುತ್ರತ್ವಂ ಪ್ರಾಪ್ತಮಿತಿ ಭಾವಃ । **ಯಥಾಹುಃ—**

''ಅಹಂ ಪುರಾಽಭವಂ ಕಶ್ಚಿತ್ ಗಂಧರ್ವ ಉಪಬರ್ಹಣಃ ।
ನಾಮ್ನಾಽತೀತೇ ಮಹಾಕಲ್ಪೇ ಗಂಧರ್ವಾಣಾಂ ಸುಸಂಮತಃ ।
ರೂಪಪೇಶಲಮಾಧುರ್ಯಸೌಗಂಧ್ಯಪ್ರಿಯದರ್ಶನಃ ।
ಸ್ತ್ರೀಣಾಂ ಪ್ರಿಯತಮೋ ನಿತ್ಯಂ ಮತಸ್ತತ್ಪುರಲಂಪಟಃ ॥

ಏಕದಾ ದೇವಸತ್ರೇ ತು ಗಂಧರ್ವಾಪ್ಸರಸಾಂ ಗಣಾಃ ।
ಉಪಹೂತಾ ವಿಶ್ವಸೃಗ್ಭಿಃ ಹರಿಗಾಥೋಪಗಾಯನೇ ।
ಅಗಾಯಂಸ್ತದ್ವಿದಿತ್ವಾಹಂ ಸ್ತ್ರೀಭಿಃ ಪರಿವೃತೋ ಗತಃ ।
ಜ್ಞಾತ್ವಾ ವಿಶ್ವಸೃಜಸ್ತನ್ಮೇ ಹೇಲನಂ ಶೇಪುರಂಜಸಾ ।
ಯಾಹಿ ತ್ವಂ ಶೂದ್ರತಾಮಾಶು ನಷ್ಟಶ್ರೀಃಕೃತಹೇಲನಃ ।
ತಾವದ್ದಾಸ್ಯಾಮಹಂ ಜಜ್ಞೇ ತತ್ರಾಪಿ ಬ್ರಹ್ಮವಾದಿನಾಂ ।
ಶುಶ್ರೂಷಯಾಽನು ಷಂಗೇಣ ಪ್ರಾಪ್ತೋಽಹಂ ಬ್ರಹ್ಮಪುತ್ರತಾ'' ಮಿತಿ ॥



ನಾರದರು ತಾವು ಪೂರ್ವಜನ್ಮದಲ್ಲಿ ತಮ್ಮ ಅಹಂಕಾರ ಪ್ರದರ್ಶನದಿಂದ ಹೇಗೆ ಹಿರಿಯರಿಗೆ ಅವಮಾನ ಮಾಡಿ ಶಾಪಗ್ರಸ್ತನಾದೆ, ಹಿರಿಯರ ಸೇವೆ ಮಾಡಿ ಹೇಗೆ ಶಾಪಮುಕ್ತನಾದೆನೆಂದು ಶ್ರೀವ್ಯಾಸರಲ್ಲಿ ಹೇಳಿಕೊಳ್ಳುತ್ತಾರೆ—

'ನಾನು ಪುರಾ ಹಿಂದೆ ಪೂರ್ವಬ್ರಹ್ಮಕಲ್ಪದಲ್ಲಿ ಒಬ್ಬ ಗಂಧರ್ವನಾಗಿದ್ದು ಹಿರಿಯರಿಗೆ ಅವಮಾನ ಮಾಡುವ ವ್ಯಕ್ತಿಯಾಗಿದ್ದೆ. ಆದರಿಂದ ಈ ಬ್ರಹ್ಮಕಲ್ಪ ದಲ್ಲಿ ಹಿಂದಿನ ಜನ್ಮದಲ್ಲಿ ದಾಸೀಪುತ್ರನಾಗಿ ಜನಿಸಿದೆನು. ಆಗ ಜ್ಞಾನಿಗಳಾದ ಯತಿಗಳು ಮಳೆಗಾಲದಲ್ಲಿ ಚಾತುರ್ಮಾಸ್ಯ ಸಂಕಲ್ಪಮಾಡಿ ನನ್ನ ತಾಯಿ ಸೇವೆ ಮಾಡುತ್ತಿದ್ದ ಮನೆಯಲ್ಲಿ ಕೂತಿದ್ದಾಗ ಅವರ ಸೇವೆಗೆ ಬಾಲಕನಾದ ನನ್ನನ್ನು ತಾಯಿ ಆದೇಶಿಸಿದಳು. ಆ ಯೋಗಿಗಳಿಗೆ ನಾನು ಸೇವೆ ಮಾಡಿದ್ದರಿಂದ ನಾನು ಮುಂದಿನ ಜನ್ಮದಲ್ಲಿ ಈಗ ಬ್ರಹ್ಮಪುತ್ರನಾಗಿ ಜನಿಸಿದ್ದೇನೆ'.

ನಾರದರು ಹಿಂದಿನ ಬ್ರಹ್ಮಕಲ್ಪದಲ್ಲಿ ಒಬ್ಬ ಗಂಧರ್ವನಾಗಿದ್ದು ದೊಡ್ಡವರಿಗೆ ಅವಮಾನ ಮಾಡಿದ್ದರ ವಿವರ ಭಾಗವತದಲ್ಲಿ ನಾರದರ ಮಾತಿನಿಂದಲೆ ಸ್ಪಷ್ಟವಾಗಿ ತಿಳಿದುಬರುತ್ತದೆ.

ಅಹಂ ಪುರಾಽಭವಂ ಕಶ್ಚಿದ್ ಗಂಧರ್ವ ಉಪಬರ್ಹಣಃ ।
ನಾಮ್ನಾತೀತೇ ಮಹಾಕಲ್ಪೇ ಗಂಧರ್ವಾಣಾಂ ಸುಸಮ್ಮತಃ ।

ರೂಪಪೇಶಲ ಮಾಧುರ್ಯ ಸೌಗಂಧ್ಯಪ್ರಿಯದರ್ಶನಃ ।
ಸ್ತ್ರೀಣಾಂ ಪ್ರಿಯತಮೋ ನಿತ್ಯಂ ಮತಸ್ತತ್ಪುರಲಂಪಟಃ ।
ಏಕದಾ ದೇವಸತ್ರೇ ತು ಗಂಧರ್ವಾಪ್ಸರಸಾಂ ಗಣಾಃ ।
ಉಪಹೂತಾ ವಿಶ್ವಸೃಗ್ಭಿರ್ಹರಿಗಾಥೋಪಗಾಯನೇ ।
ಅಗಾಯಂಸ್ತದ್ ವಿದಿತ್ವಾಹಂ ಸ್ತ್ರೀಭಿಃ ಪರಿವೃತೋ ಗತಃ ।
ಜ್ಞಾತ್ವಾ ವಿಶ್ವಸೃಜಸ್ತನ್ಮೇ ಹೇಲನಂ ಶೇಪುರೋಜಸಾ ।
ಯಾಹಿ ತ್ವಂ ಶೂದ್ರತಾಮಾಶು ನಷ್ಟಶ್ರೀಃಕೃತಹೇಲನಃ ।
ತಾವದ್ದಾಸ್ಯಾಮಹಂ ಜಜ್ಞೇ ತತ್ರಾಪಿ ಬ್ರಹ್ಮವಾದಿನಾಂ ।
ಶುಶ್ರೂಷಯಾನುಷಂಗೇಣ ಪ್ರಾಪ್ತೋಹಂ ಬ್ರಹ್ಮಪುತ್ರತಾಂ ॥

(ಭಾ.೭.೧೬.೬೯-೭೩)

'ನಾನು ಹಿಂದೆ ಕಳೆದ ಬ್ರಹ್ಮಕಲ್ಪದಲ್ಲಿ ಉಪರ್ಬಣನೆಂಬ ಒಬ್ಬ ಗಂಧರ್ವನಾಗಿದ್ದೆ. ಗಂಧರ್ವ ವಿದ್ಯೆಯಲ್ಲಿ ನಿಪುಣನೆಂದು ನನ್ನನ್ನು ಗಂಧರ್ವರು ತುಂಬ ಗೌರವದಿಂದ ಕಾಣುತ್ತಿದ್ದರು. ಸೌಂದರ್ಯ ಸೌಕುಮಾರ್ಯ ಮಾಧುರ್ಯ ಸೌಗಂಧ್ಯಗಳಿಂದಾಗಿ ನನ್ನ ದರ್ಶನ ಎಲ್ಲರಿಗೂ ಪ್ರಿಯವಾಗಿತ್ತು. ಸ್ತ್ರೀಯರಿಗೆ ಸದಾ ಪ್ರಿಯತಮನಾಗಿದ್ದು ಮದಭರಿತನಾಗಿದ್ದು ಅವರ ಅಂಗಸಂಗ ದಲ್ಲಿ ಆಸಕ್ತನಾಗಿದ್ದೆ.

ಒಮ್ಮೆ ದೇವತೆಗಳ ಸತ್ರದಲ್ಲಿ ಶ್ರೀಹರಿಲೀಲೆಗಳ ಗಾನ ಮಾಡುವುದಕ್ಕೆ ಪ್ರಜಾಪತಿಗಳು ಗಂಧರ್ವ ಅಪ್ಸರೆಯರ ಸಮೂಹಗಳನ್ನು ಆಹ್ವಾನಿಸಿದರು. ಅದನ್ನು ತಿಳಿದು ನಾನೂ ಹೋಗಿ ಎಲ್ಲರೆದುರಿಗೆ ಸ್ತ್ರೀಯರೊಂದಿಗೆ ಕುಳಿತು ನನ್ನ ಅಂಗಾಂಗ ಪ್ರದರ್ಶನ ಮಾಡುತ್ತ ಅಶ್ಲೀಲವಾಗಿ ಹಾಡಿದೆ. ಈ ಅಪಚಾರವನ್ನು ಕಂಡು ಪ್ರಜಾಪತಿಗಳು ತಪಃಶಕ್ತಿಯಿಂದ ನನ್ನನ್ನು 'ಎಲ್ಲರಿಗೂ 'ಕೃತಹೇಲನಃ' ಅಪಚಾರ ಮಾಡಿರುವ ನೀನು ನಿನ್ನ ಸೌಂದರ್ಯಾದಿ ಸಂಪತ್ತನ್ನು ಕಳೆದು ಕೊಂಡು ಬೇಗನೆ ಶೂದ್ರಜನ್ಮವನ್ನು ಹೊಂದು' ಎಂದು ಶಪಿಸಿದರು. ಒಡನೆ ನಾನು ಬ್ರಹ್ಮಜ್ಞಾನಿಗಳ ದಾಸಿಯ ಉದರದಲ್ಲಿ ಜನಿಸಿದೆ.

ಆ ಶೂದ್ರಜನ್ಮದಲ್ಲಿ ನಾನು ತಾಯಿಯ ಮತ್ತು ಬ್ರಹ್ಮಜ್ಞಾನಿಗಳ ಸೇವೆ ಯನ್ನು ಭಕ್ತಿಯಿಂದ ಮಾಡಿ ಮುಂದೆ ಬ್ರಹ್ಮಪುತ್ರನಾಗಿ ಈಗ ಜನಿಸಿದ್ದೇನೆ.

ಆದರಿಂದ ಹಿರಿಯರಿಗೆ ಅಪಚಾರ ಮಾಡುವುದು ಪಾಪಕರ. ಹಿರಿಯರ ಸೇವೆ ಪಾಪಪರಿಹಾರಕ. ಅಮೋಘ ಎಂಬುದು ನನಗೆ ಅನುಭವಸಿದ್ಧವಾಗಿದೆ' ಎಂದು.

ಇಲ್ಲಿ ಉಪಬರ್ಹಣಗಂಧರ್ವನು ಹಿರಿಯರ ಮುಂದೆ ಸ್ತ್ರೀಯರೊಡಗೂಡಿ ಹಾಡಿದ್ದೇ ದೊಡ್ಡ ಅಪಚಾರವಾಯಿತೇ? ಸ್ತ್ರೀಯರೊಂದಿಗೇ 'ಪ್ರೀಣಯಾಮೋ ವಾಸುದೇವಂ' ಎಂದು ಭಜನೆ ಮಾಡಿದರೆ ತಪ್ಪಾಗುವುದೆ? ಆ ಹಾಡು ಅಶ್ಲೀಲ ವಾಗುವುದೆ? ಗಂಧರ್ವನಿಗೆ ಪ್ರಜಾಪತಿಗಳು ಶಾಪ ಕೊಡಬೇಕಿತ್ತೆ? ಎಂದು ಪ್ರಶ್ನೆಗಳು ಬರುತ್ತವೆ.

ಆದರೆ ಗಂಧರ್ವನು ಸ್ತ್ರೀಯರೊಂದಿಗೆ ಕೇವಲ ಕುಳಿತು ಭಜನಗೀತೆಗಳನ್ನು ಹಾಡಲಿಲ್ಲ.

'ಸ್ತ್ರೀಣಾಂ ಪ್ರಿಯತಮೋ ನಿತ್ಯಂ ಮತಸ್ತತ್ಪುರಲಂಪಟಃ ।
ಸ್ತ್ರೀಭಿಃ ಪರಿವೃತಃ ಅಗಾಯಂ'

'ಸ್ತ್ರೀಯರಿಗೆ ಪ್ರಿಯತಮನಾಗಿದ್ದು ಮದಭರಿತನಾಗಿ ಅವರ ಅಂಗಸಂಗ ದಲ್ಲಿ ಆಸಕ್ತನಾಗಿದ್ದೇ ಸ್ತ್ರೀಯರಿಂದ ಪರಿವೃತನಾಗಿ ಅಶ್ಲೀಲವಾಗಿ ಹಾಡಿದನೆಂದು ಸ್ಪಷ್ಟ ಹೇಳಿದೆ.

'ತತ್ಪುರಲಂಪಟಃ' ಎಂದರೆ ಶ್ರೀಸತ್ಯಧರ್ಮರು ವ್ಯಾಖ್ಯಾನದಲ್ಲಿ ಹೇಳಿದ್ದಾರೆ—

ತತ್ಪುರಲಂಪಟಃ ತಾಸಾಂ ಪುರಾಣಿ ಅಂಗಾನಿ
ತೇಷು ಲಂಪಟಃ ತದಾಲಿಂಗನಾದ್ಯಾಸಕ್ತಮನಾಃ ॥...
ಪುರಂ ಪುರಿ ಶರೀರೇ ಚೇತಿ ವಿಶ್ವಃ ।
ತದ್ಧೇಲನಂ ಸ್ವಪುರತಸ್ತರುಣೀಭಿಃ ಸಂಭೂಯ ಗಾನರೂಪಂ'

ಸ್ತ್ರೀಯರ ಅಂಗಾಂಗಗಳ ಆಲಿಂಗನ, ಆದಿಪದದಿಂದ 'ಸುಂದರಾಂಗಿ' ಎಂದು ಮುಂತಾಗಿ ಪ್ರಶಂಸನ ಮುಂತಾದವುಗಳನ್ನು ಮಾಡುತ್ತ ಪ್ರಜಾಪತಿ ಗಳೆದುರಲ್ಲಿಯೇ 'ತರುಣಿಭಿಃ ಸಂಭೂಯ' ಸ್ತ್ರೀಯರೊಡಗೂಡಿ ಹಾಡಿದ್ದು, ಅದು ಭಜನೆಯಾಗುವುದಿಲ್ಲ. ಅಶ್ಲೀಲಹಾಡಾಗುತ್ತದೆ. ಅಪಚಾರವಾಗುತ್ತದೆ.

ಹರಿಲೀಲೆಗಳಲ್ಲಿ ಆಸಕ್ತಮನನಾಗಿದ್ದು ಹಾಡಿದ್ದರೆ ಭಜನೆಯಾಗುತ್ತಿತ್ತು. ಆದರೆ ಮದುವೆ ಮುಂತಾದ ಸಮಾರಂಭಗಳಲ್ಲಿ ಸ್ತ್ರೀ ಪುರುಷರು ಸುಂದರಾಂಗ! ಸುಂದರಾಂಗಿ! ಎಂದು ಪರಸ್ಪರ ಆತ್ಮಪ್ರಶಂಸೆ ಮಾಡಿಸಿಕೊಳ್ಳುತ್ತ ಹಾಡುವಂತೆ

ಗಂಧರ್ವನೂ ಹಿರಿಯರ ಮುಂದೆ ಆತ್ಮಪ್ರಶಂಸೆ ಮಾಡಿದ್ದು ಮಾಡಿಸಿಕೊಂಡಿದ್ದು ತಪ್ಪಾಯಿತು. ಆದರಿಂದ ಆತ್ಮಪ್ರಶಂಸಾವರ್ಜನ ಪ್ರಕರಣದಲ್ಲಿ ಈ ಶ್ಲೋಕವನ್ನು ಹೇಳಿದ್ದೂ ಉಚಿತವೇ ಆಗಿದೆ.



–೧೩೭–

**ಮುನಿಸೇವೆಯ ಫಲವಾಗಿ ನಾರದರು ಮುನಿಯಾದರು**

ಇತ್ಥಂ ಶರತ್ಪ್ರಾವೃಷಿಕಾವೃತೂ ಹರೇ
ರ್ವಿಶೃಣ್ವತೋ ಮೇಽನುಸವಂ ಯಶೋಽಮಲಂ ।
ಸಂಕೀರ್ತ್ಯಮಾನಂ ಮುನಿಭಿರ್ಮಹಾತ್ಮಭಿ
ರ್ಭಕ್ತಿಃ ಪ್ರವೃತ್ತಾಽಽತ್ಮರಜಸ್ತಮೋಪಹಾ ॥ (ಭಾ.೧.೫.೨೮)

ಮಾತ್ರಾ ಯೋಗಿನಾಂ ಶುಶ್ರೂಷಣೇ ನಿರೂಪಿತ ಇತ್ಯುಕ್ತಂ। ತತ್ರ ಕಿಯತ್ಕಾಲಂ ಶುಶ್ರೂಷಣಂ ಕೃತಂ । ಕಿಂಚ ತದಾ ಫಲಂ ಲಬ್ಧಂ । ಯೇನೋತ್ತರತ್ರ ಬ್ರಹ್ಮಪುತ್ರತಾ ಲಬ್ಧೇತ್ಯತಃ ಕಿಯದೇವ ಕಾಲಂ ಶುಶ್ರೂಷಣಂ ಕೃತಂ । ತೇನ ಚ ಸಾಕ್ಷಾನ್ಮೋಕ್ಷಸಾಧನಂ ಜ್ಞಾನಮೇವ ಲಬ್ಧಮಿತ್ಯಾಶಯೇನ ಸ್ವವೃತ್ತಂ ನಿಗಮಯತೀತ್ಯಾಹ ॥ ಇತ್ಥಮಿತಿ ॥ ಋತುದ್ವಯೇ ತತ್ರಾಪ್ಯನುಸವಂ ಸವನತ್ರಯೇಽಪಿ । ತತ್ರಾಪಿ ಕ್ಷಣಕಾಲಂ ಅವಿಹಾಯ್ಯೈವ ವಿಶೃಣ್ವತೋ ಮೇ । ರಜಸ್ತಮೋಪಹಾ ರಜಸ್ತಮಃಕಾರ್ಯರಾಗದ್ವೇಷಾದಿ ದೋಷನಿರಸನೀ ಭಕ್ತಿಃ ಪ್ರವೃತ್ತೇತಿ ವಿದಿತ್ವಾ । ಗಮನಸಮಯೇ ಬ್ರಹ್ಮ ಉಪದಿಶ್ಯ ಗತಾಃ । ತತೋಽಹಂ ಏಕದೈವ ತತ್ಸಾಕ್ಷಾತ್ಕೃತ್ಯ ತತ್ಸೇವಾಯಾಮೇವ ಅವಸ್ಥಿತಃ ಕಾಲಾಂತರೇ ಮೃತೋ ಬ್ರಹ್ಮಪುತ್ರೋಽಭವಮಿತಿ । **ಯಥಾಹುಃ—**

"ತಸ್ಯೈವಂ ಮೇಽನುರಕ್ತಸ್ಯ ಪ್ರಶ್ರಿತಸ್ಯ ಹತೈನಸಃ ।
ಶ್ರದ್ದಧಾನಸ್ಯ ಬಾಲಸ್ಯ ದಾಂತಸ್ಯಾನುಚರಸ್ಯ ಚ ॥

ಜ್ಞಾನಂ ಗುಹ್ಯತಮಂ ಯತ್ತತ್ಸಾಕ್ಷಾತ್ ಭಗವತೋದಿತಂ ।
ಅನ್ವವೋಚನ್ ಗಮಿಷ್ಯಂತಃ ಕೃಪಯಾ ದೀನವತ್ಸಲಾಃ ॥

ಯೇನೈವಾಹಂ ಭಗವತೋ ವಾಸುದೇವಸ್ಯ ವೇಧಸಃ ।
ಮಾಯಾನುಭಾವಮವಿದಂ ಯೇನ ಗಚ್ಛಂತಿ ತತ್ಪದ' 'ಮಿತಿ ॥

ತದನೇನ ಪ್ರಕರಣದ್ವಯೇನ ತಪಆಖ್ಯೋ ಭಾಗವತೋ ಧರ್ಮಃ

**ಅಭಿಹಿತೋ ಭವತಿ । ಮನೋ ಹಿ ಸ್ವೋತ್ಕರ್ಷೇ ಪರಾಪಕರ್ಷೇ ಚ ಪ್ರವರ್ತತ ಇತಿ ಸರ್ವಾನುಭವಸಿದ್ಧಂ । ಏತದೇವಾತ್ಮಪ್ರಶಂಸಾ ಪರನಿಂದಾ ಪದಬೋಧ್ಯಂ । ತಾದೃಶವಚನಾದಿಕಂ ತು ತದ್ಧೇತುತಯೈವ ತತ್ಪದಾಭಿಧೇಯಂ । ತಯೋರುಭಯೋರಪ್ಯನರ್ಥಹೇತುತಾ ಪ್ರಮಾಣಸಿದ್ಧಾ । ತತಃ ಶ್ರೇಯೋರ್ಥಿನಾ ತತ್ರೋಭಯತ್ರಾಪಿ ಯಥಾ ಮನೋ ನ ಗಚ್ಛೇತ್ತಥಾ ಕಾರ್ಯಮೇವ । ತನ್ನಿಗ್ರಹಸ್ಯ ಮಾನಸತಪೋರೂಪತ್ವಾತ್ । ತಾದೃಶವಚನಾದಿಕಂ ತು ಸ್ವಕಾರಣನಿವೃತ್ತ್ಯೈವ ನಿವರ್ತತ ಇತಿ ॥**



**ನಾರದರು ಶ್ರೀವ್ಯಾಸರಿಗೆ ತಮ್ಮ ಪೂರ್ವಜನ್ಮವೃತ್ತಾಂತವನ್ನು ಹೇಳುತ್ತಿದ್ದಾರೆ—'ಹೀಗೆ ಮಹಾತ್ಮರಾದ ಯತಿಗಳು ಶರದೃತು ಮತ್ತು ವರ್ಷಋತುಗಳಲ್ಲಿ ಪ್ರತಿದಿನವೂ ಮೂರು ಕಾಲಗಳಲ್ಲಿ ನಡೆಸುತ್ತಿದ್ದ ಭಗವಂತನ ಗುಣಗಾನವನ್ನು ನಾನು ಕ್ಷಣಕಾಲ ಬಿಡದೆ ವಿಶೇಷವಾಗಿ ಶ್ರವಣ ಮಾಡಿದ್ದರಿಂದ ನನ್ನ ಹೃದಯದಲ್ಲಿ ರಜೋಗುಣ ತಮೋಗುಣಕಾರ್ಯ ರಾಗದ್ವೇಷಾದಿಗಳನ್ನು ದೂರಮಾಡುವ ಭಕ್ತಿಭಾವವು ಉದಿಸಿತು.**

ಇದನ್ನು ತಿಳಿದೇ, ಯತಿಗಳು ಚಾತುರ್ಮಾಸ್ಯವನ್ನು ಮುಗಿಸಿ ಹೊರಡುವಾಗ, ಬ್ರಹ್ಮಜ್ಞಾನವನ್ನು ನನಗೆ ಉಪದೇಶಿಸಿ ಹೋದರು. ಬಳಿಕ ನಾನು ಪರಮಾತ್ಮನ ಸಾಕ್ಷಾತ್ಕಾರ ಪಡೆದು, ಮರಣಾನಂತರ ಬ್ರಹ್ಮಪುತ್ರನಾಗಿ ಈಗ ಜನಿಸಿದ್ದೇನೆ.

ಇದೂ ಭಾಗವತದಲ್ಲಿ ಸ್ಪಷ್ಟವಿದೆ—

ತಸ್ಯೈವಂ ಮೇಽನುರಕ್ತಸ್ಯ ಪ್ರಶ್ರಿತಸ್ಯ ಹತೈನಸಃ ।<br>
ಶ್ರದ್ದಧಾನಸ್ಯ ಬಾಲಸ್ಯ ದಾಂತಸ್ಯಾನುಚರಸ್ಯ ಚ ॥<br>
ಜ್ಞಾನಂ ಗುಹ್ಯತಮಂ ಯತ್ತತ್ ಸಾಕ್ಷಾದ್ ಭಗವತೋದಿತಂ ।<br>
ಅನ್ವವೋಚನ್ ಗಮಿಷ್ಯಂತಃ ಕೃಪಯಾ ದೀನವತ್ಸಲಾಃ ।<br>
ಯೇನೈವಾಹಂ ಭಗವತೋ ವಾಸುದೇವಸ್ಯ ವೇಧಸಃ ।<br>
ಮಾಯಾನುಭಾವಮವಿದಂ ಯೇನ ಗಚ್ಛಂತಿ ತತ್ ಪದಂ ॥

(ಭಾ.೧.೫.೨೯,೩೦,೩೧)

'ನಾನು ಆ ಯತಿಗಳಲ್ಲಿ ಅನುರಕ್ತನಾಗಿ ವಿನಯಪೂರ್ವಕವಾಗಿ ಸೇವೆ

ಮಾಡಿದ್ದರಿಂದ ನನ್ನ ಪಾಪಗಳೆಲ್ಲ ದೂರವಾದುವು. ಬಾಲಕನಾದರೂ ಶ್ರದ್ಧೆಯಿಂದ ಶಮದಮಾದಿ ಗುಣಗಳಿಂದ ಭರಿತನಾಗಿ ತ್ರಿಕರಣಗಳಿಂದ ಅವರ ಸೇವೆ ಮಾಡಿದ ನನಗೆ ಆ ಜ್ಞಾನಿಗಳು ಚಾತುರ್ಮಾಸ್ಯವ್ರತ ಮುಗಿಸಿ ಬೇರೆ ಊರಿಗೆ ಹೊರಡುವ ಸಂದರ್ಭದಲ್ಲಿ ಪ್ರೀತಿಯಿಂದ ಇನ್ನೂ ಗೋಪ್ಯವಾದ ಪರಮಾತ್ಮ ತತ್ವಜ್ಞಾನವನ್ನು ಉಪದೇಶಿಸಿದರು. ಆದರಿಂದಲೆ ನಾನು ಸರ್ವ ಜಗತ್‌ಕರ್ತನಾದ ಭಗವಂತನ ಇಚ್ಛಾಸಾಮರ್ಥ್ಯವನ್ನು ಅರಿತೆನು. ಈ ಅರಿವೇ ಪರಮಪದ ಪ್ರಾಪ್ತಿಗೆ ಉಪಾಯ'.

ಮಹನ್ನಿಂದಾವರ್ಜನ ಮತ್ತು ಆತ್ಮಪ್ರಶಂಸಾವರ್ಜನ ಎಂಬ ಈ ಎರಡು ಪ್ರಕರಣಗಳು 'ತಪಸ್ಸು' ಎಂಬ ಭಾಗವತ ಧರ್ಮವನ್ನು ಹೇಳುತ್ತವೆ. ಮನಸು ಯಾವಾಗಲೂ ಸಾಮಾನ್ಯವಾಗಿ ತಾನು ಮೇಲು ಇತರರು ಕೀಳೆಂದೇ ತಿಳಿಯುತ್ತದೆ. ಆದರಿಂದ ತನ್ನ ಪ್ರಶಂಸೆ ಅನ್ಯರ ನಿಂದೆಗಳನ್ನು ಮಾಡುವುದೆ ಅನುಭವದಲ್ಲಿ ಕಂಡಿದೆ. ಇದು ಅನರ್ಥಕಾರಿ ಎಂದು ಶಾಸ್ತ್ರಸಿದ್ಧವಾಗಿದೆ. ಆದರಿಂದ ಆತ್ಮಸ್ತುತಿ ಪರನಿಂದೆಗಳನ್ನು ಮಾಡದಂತೆ ಮನಸ್ಸನ್ನು ನಿಗ್ರಹಿಸಿಕೊಳ್ಳುವುದು ಸಾಧಕನಿಗೆ ಅವಶ್ಯಕರ್ತವ್ಯವಾಗಿದೆ. ಮನೋನಿಗ್ರಹವೇ ತಪಸ್ಸು. ಮನೋನಿಗ್ರಹವಿಲ್ಲದಿರುವುದರಿಂದಲೇ ಮಹಾತ್ಮರ ನಿಂದೆ ಆತ್ಮಪ್ರಶಂಸೆಗಳು ನಡೆಯುತ್ತವೆ. ಮನೋನಿಗ್ರಹ ಮಾಡಿಕೊಂಡರೆ ಅವೆರಡೂ ತಾವೇ ನಿಂತುಹೋಗುತ್ತವೆ. ಇದನ್ನು ಭಾಗವತವು ಹೇಳಿದೆ—

ದಂಡನ್ಯಾಸಃ ಪರಂ ದಾನಂ ಕಾಮತ್ಯಾಗಸ್ತಪಃ ಸ್ಮೃತಂ ॥

(ಭಾ.೧೧.೧೯.೩೭)

ಕಾಮತ್ಯಾಗವೇ ದೊಡ್ಡ ತಪಸ್ಸು. ಕಾಮತ್ಯಾಗವೆಂದರೆ ನಿಷಿದ್ಧಕರ್ಮಗಳಲ್ಲಿ ಮನಸ್ಸು ಪ್ರವೃತ್ತಿ ಮಾಡದಂತೆ ನಿಗ್ರಹಿಸುವುದು. ಉದಾ: ಏಕಾದಶಿಯಂದು ಅನ್ನಭಕ್ಷಣವು ನಿಷಿದ್ಧ. ಅದರಲ್ಲಿ ಮನಸ್ಸು ಪ್ರವೃತ್ತಿ ಮಾಡದಂತೆ ಉಪವಾಸ ಸಂಕಲ್ಪ ಮಾಡುವುದು ದೊಡ್ಡ ತಪಸ್ಸು. ಪ್ರಕೃತದಲ್ಲಿ ಮಹಾತ್ಮರ ನಿಂದೆ ಆತ್ಮಪ್ರಶಂಸೆಗಳು ನಿಷಿದ್ಧವಾಗಿರುವುದರಿಂದ ಅವುಗಳನ್ನು ಮಾಡದಂತೆ ಮನಸ್ಸನ್ನು ನಿಗ್ರಹಿಸಿಕೊಳ್ಳುವುದೂ ದೊಡ್ಡ ತಪಸ್ಸೆ.



# (೧೦) ಇಂದ್ರಿಯಜಯ ಪ್ರಕರಣ

## ಪ್ರಕರಣ ಸಾರಾಂಶ

ಇಂದ್ರಿಯಗಳಲ್ಲಿ ಮನಸ್ಸೆ ಮುಖ್ಯ. ಅದನ್ನು ನಿಗ್ರಹಿಸಬೇಕು. ಸೌಭರಿಮುನಿ ತನಗೆ ಐವತ್ತು ಜನ್ಮಗಳಲ್ಲಿ ಉಣಬೇಕಾಗುವಷ್ಟು ಸುಖಪ್ರಾರಬ್ಧವಿದೆ ಎಂದು ದಿವ್ಯಜ್ಞಾನದಿಂದ ತಿಳಿದು ಒಂದೇ ಜನ್ಮದಲ್ಲಿ ಅವೆಲ್ಲ ಪ್ರಾರಬ್ಧ ಉಣಬೇಕು, ಬೇಗನೆ ಮೋಕ್ಷಕ್ಕೆ ಹೋಗಬೇಕೆಂದು ಸಂಕಲ್ಪಿಸಿದ. ನೀರಿನಲ್ಲಿ ಮೀನುಗಳು ಸುಖವಾಗಿ ಸಂಸಾರ ಮಾಡುವುದನ್ನು ಕಂಡಾಗ ಅವನಿಗೆ ತಾನೂ ಹೀಗೆ ಸುಖಸಂಸಾರ ಮಾಡಬೇಕೆಂದುಕೊಂಡು ಮಾಂಧಾತರಾಜನ ಐವತ್ತು ಕನ್ಯೆಯರನ್ನು ತಾನು ಒಬ್ಬನೆ ಐವತ್ತು ಶರೀರಗಳನ್ನು ಯೋಗಬಲದಿಂದ ಧರಿಸಿ ಮದುವೆಯಾದ. ಐವತ್ತು ರಾಣಿಯರಲ್ಲಿ ಐದು ಸಾವಿರ ಮಕ್ಕಳನ್ನು ಪಡೆದ. ಬಳಿಕ ವಿರಕ್ತನಾಗಿ ವಾನಪ್ರಸ್ಥಾಶ್ರಮ ಕೈಗೊಂಡ. ಹೀಗೆ ಮುನಿ ತನ್ನ ಮನಸ್ಸನ್ನು ನಿಗ್ರಹಿಸಿಕೊಳ್ಳದೆ ಸಂಸಾರ ಸುಖವನ್ನು ಯಥೇಚ್ಛ ಉಂಡು ಪ್ರಾರಬ್ಧವನ್ನು ಕಳೆದುಕೊಂಡ. ಅವನು ಜ್ಞಾನಿ. ಅಜ್ಞಾನಿಗಳಿಗೆ ಹೀಗೆ ಮನೋನಿಗ್ರಹವಿಲ್ಲದೆ ಹೋದರೆ, ಅನರ್ಥವೇ ಉಂಟಾಗುವುದು. ಸಂಸಾರದಲ್ಲಿ ಮುಳುಗಿ ಉದ್ಧಾರವನ್ನೇ ಕಾಣದಂಥ ಪ್ರಸಂಗ ಬರುವುದು.

ಇಂದ್ರಿಯ ಸುಖವು ಎರಡೂ ಕೈ ಉಜ್ಜಿ ನವೆಯನ್ನು ಹೋಗಲಾಡಿಸುವ ಯತ್ನದಂತೆ ತತ್ಕಾಲದಲ್ಲಿ ಹಾಯಾಗಿದ್ದರೂ ಕೊನೆಯಲ್ಲಿ ಬರಿ ದುಃಖವೆ ಎಂದು ಪ್ರಹ್ಲಾದನ ಉಪದೇಶವಿದೆ. ಅದರಿಂದ ಮನೋನಿಗ್ರಹ ಇಂದ್ರಿಯನಿಗ್ರಹಗಳೆರಡೂ ಅವಶ್ಯ ಅನುಷ್ಠೇಯವಾಗಿವೆ. ಮನೋನಿಗ್ರಹವು ತಿತಿಕ್ಷಾ ಎಂಬ ಭಾಗವತ 'ಧರ್ಮ ಇಂದ್ರಿಯನಿಗ್ರಹವು ದಮ ಎಂಬ ಭಾಗವತಧರ್ಮ.



—೧೩೮—

**ಹೆಣ್ಣುಗಂಡು ಮೀನುಗಳನ್ನು ಕಂಡೇ ಸೌಭರಿ ತಪಸನ್ನು ತೊರೆದ**

**ಸಂಗಂ ತ್ಯಜೇತ ಮಿಥುನ ವ್ರಜಿನಾನ್ಮುಮುಕ್ಷುಃ**
**ಸರ್ವಾತ್ಮನಾ ನ ವಿಸೃಜೇತ್ ಬಹಿರಿಂದ್ರಿಯಾಣಿ ।**
**ಏಕಶ್ಚರನ್ ರಹಸಿ ಚಿತ್ತಮನಂತ ಈಶೇ**
**ಯುಂಜೀತ ತದ್ರತಿಷು ಸಾಧುಷು ಚೇತ್ ಪ್ರಸಂಗಃ ॥**

(ಭಾ.೯.೭.೩೨)

ಮಹತ್ಸೇವಾದಿವತ್ ಇಂದ್ರಿಯಜಯೋಽಪ್ಯಾವಶ್ಯಕ ಇತಿ ತತ್ರ ಅವಹಿತೈರ್ಭಾವ್ಯಮಿತಿ ವಕ್ತುಮಿದಂ ಪ್ರಕರಣಂ । ತತ್ರಾದೌ ತಜ್ಜಯೇ ಹೇತುಂ ಸೂಚಯತಿ ॥ **ಸಂಗಮಿತಿ** ॥ ಇಂದ್ರಿಯಾಣಿ ಬಹಿರ್ವಿಷಯೇಷು ಸರ್ವಥಾ ನ ವಿಸೃಜೇದಿತ್ಯನೇನ ವಿಷಯಸನ್ನಿಧಾನವರ್ಜನಂ ತಜ್ಜಯಹೇತುರಿತಿ ಸೂಚಯತಿ । **ಯಥಾಹುಃ—**

''ಅಥಾಪಿ ನೋ ವಿಷಜ್ಜೇತ ಸ್ತ್ರೀಷು ಸ್ತ್ರೈಣೇಷು ಚಾರ್ಥವಿತ್ ।
ವಿಷಯೇಂದ್ರಿಯಸಂಯೋಗಾತ್ ಮನಃ ಕ್ಷುಭ್ಯತಿ ನಾನ್ಯದಾ ॥

ಕೇಶಪ್ರಸಾಧನೋನ್ಮರ್ದಸ್ನಪನಾಭ್ಯಂಜನಾದಿಕಂ ।
ಗುರುಸ್ತ್ರೀಭಿರ್ಯುವತಿಭಿಃ ಕಾರಯೇನ್ನಾತ್ಮನೋ ಯುವಾ ।
ನನ್ವಗ್ನಿಃ ಪ್ರಮದಾ ನಾಮ ಘೃತಕುಂಭಃ ಪುಮಾನ್ಯತಃ ।
ಸುತಾಮಪಿ ರಹೋ ಜಹ್ಯಾದನ್ಯದಾ ಯಾವದರ್ಥಕೃತ್ ॥

ಮಾತ್ರಾ ಸ್ವಸ್ರಾ ದುಹಿತ್ರಾ ವಾ ನ ಚೈಕಾಸನಗೋ ಭವೇತ್ ।
ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ ॥'' ಇತಿ ।

ಚೇತ್ ಯದಿ ತದ್ರತಿಷು ಸಾ ಭಗವದ್ವಿಷಯಿಣೀ ರತಿರ್ಯೇಷಾಂ ತೇಷು ಸಾಧುಷು ಪ್ರಸಂಗೋ ಲಬ್ಧಃ ತದಾ ಕಾರ್ಯ ಏವೇತ್ಯನೇನ ಸರ್ವಕಾರ್ಯ ಸಾಧಕೇನ ಸತ್ಸಮಾಗಮೇನ ಇದಮಪಿ ಭವೇದಿತಿ ಸಾಧಾರಣಂ ಕಾರಣಂ ತು ಸಿದ್ಧಮೇವೇತಿ ಕಿಂ ವಕ್ತವ್ಯಂ ಇತಿ ಸೂಚಿತಂ ಭವತಿ ॥



ಸೌಭರಿಮುನಿ ತಮಗೆ ತಾವೇ ಹೇಳಿಕೊಳ್ಳುತ್ತಾರೆ—

**'ಪ್ರಾಣಿನೋ ಮಿಥುನೀಭೂತಾನ್ ಅಗೃಹಸ್ಥೋऽಗ್ರತಸ್ತ್ಯಜೇತ್'**

**'ಗೃಹಸ್ಥನಲ್ಲದವನು ಕಣ್ಣಮುಂದೆ ಪ್ರಾಣಿಗಳು ಹೆಣ್ಣುಗಂಡು ಕೂಡುವುದನ್ನು ನೋಡಲೂ ಬಾರದು' ಎಂದು ಶ್ರೀಕೃಷ್ಣ ಉದ್ಧವನಿಗೆ ಉಪದೇಶಿಸುತ್ತಾನೆ (ಭಾ.೧೧.೧೭.೩೩). ಆದರಿಂದ ಗೃಹಸ್ಥನಲ್ಲದವನು ಮುಮುಕ್ಷು ಸ್ತ್ರೀಸಂಗ ದರ್ಶನ ಪಾಪವನ್ನು ಸರ್ವಾತ್ಮನಾ ದೂರದಲ್ಲಿರಿಸಬೇಕು. ಅದರ ಸಂಗವನ್ನೇ ತ್ಯಜಿಸಬೇಕು. ಇಂದ್ರಿಯಗಳನ್ನು ಹೊರಗೆ ಹರಿಯಲು ಬಿಡಬಾರದು. ಒಳಗೇ ಸೆಳೆದುಕೊಂಡು ಒಬ್ಬನೆ ಏಕಾಂತದಲ್ಲಿ ತಪಸ್ಸು ಮಾಡುತ್ತ ಸರ್ವೇಶನಾದ ಅನಂತನಲ್ಲಿ ಮನಸ್ಸಿಡಬೇಕು. ತನ್ನ ಜೊತೆಗೆ ಯಾರಾದರೂ ಬೇಕೆನಿಸಿದರೆ ಸಾಧುಗಳಾದ ಹರಿಭಕ್ತರ ಸಂಗವನ್ನೆ ಮಾಡಬೇಕು' ಎಂದು.**

ಸೌಭರಿಮುನಿ ಋಗ್ವೇದಮಂತ್ರ ದ್ರಷ್ಟಾರ. ಮಹಾಯೋಗಿ ಜೀವನ್ಮುಕ್ತ. ಜಲಸ್ತಂಭನವೆಂಬ ಯೋಗಬಲದಿಂದ ಯಮುನೆಯ ಆಳವಾದ ಮಡುವಿನಲ್ಲಿ ಮುಳುಗಿ ಬಹುಕಾಲದಿಂದ ತಪಸ್ಸು ಮಾಡಿದವನು.

ಒಂದುದಿನ ಸೌಭರಿಮುನಿ ನೀರೊಳಗೆ ಒಂದು ದೊಡ್ಡಮೀನು ಅನೇಕ ಹೆಣ್ಣು ಮೀನುಗಳೊಂದಿಗೆ ಕೇಲಿಯಲ್ಲಿ ಆನಂದಿಸುತ್ತಿದ್ದುದನ್ನು ಕೂಡ. ಆಗ ಅವನು ಇನ್ನೂ ಗೃಹಸ್ಥನಾಗಿರಲಿಲ್ಲ. ಇಂಥ ಗೃಹಸ್ಥ ಜೀವನವನ್ನು ತಾನೂ ಐವತ್ತು ಜನ್ಮಗಳಲ್ಲಿ ಅನುಭವಿಸುವ ಪ್ರಾರಬ್ಧ ಉಳ್ಳವನೆಂದು ದಿವ್ಯದೃಷ್ಟಿಯಿಂದ ತಿಳಿದುಕೊಂಡ. ಮಾಂಧಾತರಾಜನಲ್ಲಿ ಅವನ ಐವತ್ತು ಮಂದಿ ಕನ್ಯೆಯರನ್ನು ಬೇಡಿದ. ಅವರೆಲ್ಲರೂ ತನ್ನನ್ನು ವರಿಸುವಂತೆ ಮಾಡಲು ಯೋಗಶಕ್ತಿಯಿಂದ ಸುಂದರ ರಾಜಕುಮಾರ ನಂತೆ ರೂಪತಳೆದ. ಎಲ್ಲರನ್ನೂ ಮದುವೆಯಾಗಿ ಕಾಯವ್ಯೂಹವೆಂಬ ಯೋಗ ಬಲದಿಂದಲೇ ಐವತ್ತು ರೂಪಗಳನ್ನು ತಳೆದು ಐವತ್ತು ಅರಮನೆಗಳಲ್ಲಿ ಸಂಸಾರ ಮಾಡಿದ. ಐವತ್ತು ರಾಣಿಯರಲ್ಲಿ ಐದುಸಾವಿರ ಮಕ್ಕಳನ್ನು ಪಡೆದ.

ಕೊನೆಗೊಂದು ದಿನ ಪ್ರಾರಬ್ಧವೆಲ್ಲ ಉಂಡು ತೀರಿದುದನ್ನು ತಿಳಿದು 'ಇನ್ನು ಸಾಕು ಈ ಗೃಹಸ್ಥ ಜೀವನವೆಂ'ದು ವಾನಪ್ರಸ್ಥವನ್ನು ಕೈಗೊಂಡು ತೀವ್ರ ತಪಸ್ಸಿನಿಂದ ಪರಮಾತ್ಮನಲ್ಲಿ ಸಾಯುಜ್ಯ ಹೊಂದಿದ.

ತಾನು ಸಂಸಾರ ಮಾಡಿದ್ದಕ್ಕೆ ಅವನು ಪಶ್ಚಾತ್ತಾಪಪಟ್ಟನೆಂದು ಭಾಗವತ

ಹೇಳುತ್ತಿದ್ದರೂ, ಅದು, ಜ್ಞಾನಿಯಾದ ತನ್ನಂತೆ ಅಜ್ಞಾನಿಗಳು ಮಾಡಬಾರದು, ಶಿವನು ಹಾಲಾಹಲ ಕುಡಿದನೆಂದು ಬೇರೆಯವರು ಹಾಗೆ ಮಾಡಲು ಬಯಸ ಬಾರದೆಂದು ಎಚ್ಚರಿಸುವ ಅಭಿಪ್ರಾಯದ್ದೆಂದು ತಿಳಿಯಬೇಕು. ಬೇರೆಯವರು ಗೃಹಸ್ಥರಲ್ಲದವರು ಮುಮುಕ್ಷುಗಳು ಸ್ತ್ರೀಯರ ಕಡೆಗೆ ಇಂದ್ರಿಯಗಳನ್ನು ಹೊರಗೆ ಹರಿಯಲು ಬಿಡಲೇಬಾರದು. ಪರಮಾತ್ಮನ ಬಳಿಗೆ, ಒಳಗೇ ಸೆಳೆದುಕೊಳ್ಳಬೇಕೆಂದು ತಿಳಿಸುತ್ತಿದೆ ಭಾಗವತ. ಇದರ ಬಗ್ಗೆ ಭಾಗವತ ಇನ್ನೂ ಹೇಳುತ್ತದೆ—

ಅಥಾಪಿ ನೋ ವಿಷಜ್ಜೇತ ಸ್ತ್ರೀಷು ಸ್ತ್ರೈಣೇಷು ಚಾರ್ಥವಿತ್ ।
ವಿಷಯೇಂದ್ರಿಯ ಸಂಯೋಗಾನ್ಮನಃ ಕ್ಷುಭ್ಯತಿ ನಾನ್ಯದಾ ॥
(ಭಾ.೧೧.೨೬.೨೨)

'ಮೋಕ್ಷಸಾಧನೆಯ ಉದ್ದೇಶದ ಅರಿವುಳ್ಳ ಮನುಷ್ಯನು ಸ್ತ್ರೀಯ ರೊಂದಿಗೂ ಸ್ತ್ರೀಮೋಹವಿರುವವರೊಂದಿಗೂ ಬೆರೆಯಲೇಬಾರದು. ವಿಷಯ ಪದಾರ್ಥ ಸಂಪರ್ಕವಿರುವಾಗ ಮನಸ್ಸು ಕ್ಷೋಭೆಗೊಳ್ಳುತ್ತದೆ. ಅದಿಲ್ಲದಿದ್ದಾಗ ಇಲ್ಲ.'

ಕೇಶಪ್ರಸಾಧನೋನ್ಮರ್ದಸ್ನಪನಾಭ್ಯಂಜನಾದಿಕಂ ।
ಗುರುಸ್ತ್ರೀಭಿರ್ಯುವತಿಭಿಃ ಕಾರಯೇನ್ನಾತ್ಮನೋ ಯುವಾ ॥

ನನ್ವಗ್ನಿಃ ಪ್ರಮದಾ ನಾಮ ಘೃತಕುಂಭಃ ಪುಮಾನ್ಯತಃ ।
ಸುತಾಮಪಿ ರಹೋ ಜಹ್ಯಾತ್ ಅನ್ಯದಾ ಯಾವದರ್ಥಕೃತ್ ॥
(ಭಾ.೭.೧೨.೮,೯)

'ಗುರುಕುಲದಲ್ಲಿ ಸ್ತ್ರೀಯರು ಯುವತಿಯರಾಗಿದ್ದರೆ ಶಿಷ್ಯನು ಅವರಿಂದ ತಲೆಬಾಚುವುದು ಮೈಗೆ ಎಣ್ಣೆ ಎರೆದು ಮಾಲೀಸು ಮಾಡುವುದು ಸ್ನಾನ ಅಭ್ಯಂಜನ ಮುಂತಾದುವನ್ನು ಮಾಡಿಸಿಕೊಳ್ಳಬಾರದು. ಸ್ತ್ರೀಯು ಬೆಂಕಿ, ಪುರುಷನು ತುಪ್ಪದ ಬಿಂದಿಗೆ. ಆದರಿಂದ ಗೃಹಸ್ಥನೂ ಕೂಡ ತನ್ನ ಸ್ವಂತ ಮಗಳ ಜೊತೆಯಲ್ಲಿ ಏಕಾಂತದಲ್ಲಿ ಇರಬಾರದು. ವ್ಯವಹಾರಕಾಲದಲ್ಲಿ ಪುರುಷನು ಸ್ತ್ರೀಯರೊಂದಿಗೆ ಆವಶ್ಯಕವಿದ್ದಷ್ಟು ಕಾಲ ಮಾತ್ರ ಇರಬೇಕು.'

ಮಾತ್ರಾ ಸ್ವಸ್ರಾ ದುಹಿತ್ರಾ ವಾ ನ ಚೈಕಾಸನಗೋ ಭವೇತ್ ।
ಬಲವಾನಿಂದ್ರಿಯ ಗ್ರಾಮೋ ವಿದ್ವಾಂಸಮಪಿ ಕರ್ಷತಿ ॥ (ಭಾ.೯.೧೬.೧೭)

'ತಾಯಿ ತಂಗಿ ಅಥವಾ ಮಗಳೊಡನೆಯೂ ಕೂಡ ಒಂದೇ ಆಸನದಲ್ಲಿ ಕುಳ್ಳಿರಬಾರದು. ಇಂದ್ರಿಯಗಳು ಬಲಿಷ್ಠವಾಗಿರುತ್ತವೆ. ಅವು ವಿದ್ವಾಂಸನನ್ನೂ ಕೂಡ ಸೆಳೆಯಬಲ್ಲುವು.'

ಅದರಿಂದ ಇಂದ್ರಿಯಗಳನ್ನು ಹೊರಗೆ ಹರಿಯಲು ಬಿಡಬಾರದು. ಒಳಗೇ ಪರಮಾತ್ಮನೆಡೆಗೆ ಸೆಳೆದುಕೊಳ್ಳಬೇಕು. ಇದು ಇಂದ್ರಿಯ ಜಯಕ್ಕೆ ವಿಶೇಷಸಾಧನ ವಾಗುವುದು.

ಸಜ್ಜನರ ಸಹವಾಸ ದೊರಕಿತೆಂದರೆ, 'ತದ್ರತಿಷು ಸಾಧುಷು ಚೇತ್ ಪ್ರಸಂಗಃ' ಅದನ್ನು ಬಿಡದೇ ಮಾಡಬೇಕು. ಸಜ್ಜನ ಸಂಗವು ಸಾಮಾನ್ಯವಾಗಿ ಸರ್ವಕಾರ್ಯ ಸಾಧಕ ವಾದ್ದರಿಂದ ಇಂದ್ರಿಯಜಯಕ್ಕೆ ಅದೂ ಸಾಧಕವೇ. ವಿಷಯದಿಂದ ಇಂದ್ರಿಯವನ್ನು ಈಚೆಗೆ ಸೆಳೆದುಕೊಳ್ಳುವುದು ವಿಶೇಷ ಸಾಧಕ.



–೧೩೯–

## ಇಂದ್ರಿಯಗಳನ್ನು ಮೊದಲಿಗೇ ವಿಷಯಗಳಿಂದ ಈಚೆಗೆ ಸೆಳೆಯಬೇಕು

**ಯಥಾಽಽಮಯೋಽಂಗೇ ಸಮುಪೇಕ್ಷಿತೋ ನೃಭಿ**
**ರ್ನ ಶಕ್ಯತೇ ರೂಢಪದಶ್ಚಿಕಿತ್ಸಿತುಂ ।**
**ಯಥೇಂದ್ರಿಯಗ್ರಾಮ ಉಪೇಕ್ಷಿತಸ್ತಥಾ**
**ರಿಪುರ್ಮಹಾನ್ ಲಬ್ಧಬಲೋ ನ ಚಾಲ್ಯತೇ ॥**

(ಭಾ.೧೦.೫.೩೮)

**ಇಂದ್ರಿಯಗ್ರಾಮ ಉಪೇಕ್ಷಿತಶ್ಚೇಜ್ಜೇತುಂ ನ ಶಕ್ಯೋ ಯಥೇತಿ ದೃಷ್ಟಾಂತತಯಾ ಗೃಹೀತತ್ವಾತ್ತದ್ವಿಷಯೇ ಉಪೇಕ್ಷಾ ಸರ್ವಥಾ ನ ಕಾರ್ಯೇತ್ಯಾಹ ॥ ಯಥೇತಿ ॥ ನೃಭಿಃ ಸಮುಪೇಕ್ಷಿತಃ ಆಮಯಃ ಅಂಗೇ ರೂಢಪದಃ ಸನ್ ಚಿಕಿತ್ಸಿತುಂ ಯಥಾ ನ ಶಕ್ಯತೇ । ಯಥಾ ಚ ಇಂದ್ರಿಯಗ್ರಾಮ ಉಪೇಕ್ಷಿತಃ । ಅತ ಏವ ಬಹಿರ್ವಿಸೃಷ್ಟೋ ನಿಗ್ರಹೀತುಂ ನ ಶಕ್ಯತೇ । ತಥಾ ರಿಪುಃ ಮಹಾನ್ । ವಯೋಧಿಕಶ್ಚೇತ್ ನ ಚಾಲ್ಯತೇ ಚಾಲಯಿತುಮಶಕ್ಯೋ ಭವತಿ ।**

**ಕುತಃ । ಲಬ್ಧಂ ಪ್ರಾಪ್ತಂ ಬಲಂ ಯೇನ ಸಃ । ವಯಆಧಿಕ್ಯೇನ ಪ್ರಾಪ್ತಬಲತ್ವಾತ್ । ಅತೋ ಬಾಲ್ಯ ಏವ ವೈರಿವಧಃ ಕಾರ್ಯ ಇತಿ ಭಾವಃ ।।**



**ಕಂಸನು ಮಂತ್ರಿಗಳೊಡನೆ ಸಮಾಲೋಚನೆ ಮಾಡಿ ವಿಷ್ಣುವಿಗೆ ಬಲ ನೀಡುವ ಬ್ರಾಹ್ಮಣರನ್ನು ಗೋವುಗಳನ್ನು ಯಜ್ಞಗಳನ್ನು ನಾಶಮಾಡಲು ತೀರ್ಮಾನಿಸಿದ. ಮಂತ್ರಿಗಳು ಹೇಳಿದರು— ಶರೀರದಲ್ಲಿ ರೋಗ ಕಂಡು ಬಂದಾಗ ಅಲಕ್ಷ್ಯ ಮಾಡಿದರೆ ಅದು ಮುಂದೆ ಉಲ್ಬಣಗೊಂಡು ಚಿಕಿತ್ಸೆಗೆ ಅಸಾಧ್ಯವಾಗುವುದು. ಇಂದ್ರಿಯಗಳನ್ನು ಉದಾಸೀನ ಮಾಡಿಬಿಟ್ಟರೆ ಅವು ಮುಂದೆ ಹತೋಟಿಗೆ ಸಿಗಲಾರವು. ಅದರಿಂದ ಶತ್ರುವಾದ ವಿಷ್ಣುವನ್ನು ಶಿಶುವೆಂದು ಅಲಕ್ಷ್ಯಮಾಡಿ ಬಿಡಬಾರದು. ಬಿಟ್ಟರೆ ಆತ ಬಲಿಷ್ಠನಾಗಿ ಬೆಳೆದ ಮೇಲೆ ಅವನನ್ನು ಅಲ್ಲಾಡಿಸಲಾಗದು. ಅದಕ್ಕೆ ಈಗಲೆ ಅವನಿಗೆ ಬಲನೀಡುವ ಗೋಬ್ರಾಹ್ಮಣಯಜ್ಞಗಳನ್ನು ನಾಶಪಡಿಸಬೇಕು'.**

ಇಂದ್ರಿಯಗಳನ್ನು ಮೊದಲಿಗೇ ವಿಷಯಗಳಿಂದ ಈಚೆಗೆ ಸೆಳೆಯಬೇಕು. ಹೊರತು ಉಪೇಕ್ಷೆ ಮಾಡಿಬಿಡಬಾರದು ಎಂದು ಇಲ್ಲಿ ಹೇಳಿದೆ.



—೧೪೦—

**ಇಂದ್ರಿಯಜಯವಿಲ್ಲದೆ ಮೋಕ್ಷಸಾಧನೆ ಸಾಧ್ಯವಾಗದು**

**ಮೌನವ್ರತಶ್ರುತ ತಪೋಽಧ್ಯಯನಸ್ವಧರ್ಮ**
**ವ್ಯಾಖ್ಯಾರಹೋಜಪ ಸಮಾಧಯ ಆಪವರ್ಗ್ಯಾಃ ।**
**ಪ್ರಾಯಃ ಪರಂ ಪುರುಷ ತೇ ತ್ವಜಿತೇಂದ್ರಿಯಾಣಾಂ**
**ವಾರ್ತಾ ಭವಂತ್ಯುತ ನ ವಾಽತ್ರ ತು ಡಾಂಭಿಕಾನಾಂ ।।**

(ಭಾ.೭.೯.೪೬)

ಇಂದ್ರಿಯಜಯಾಭಾವೇ ಸರ್ವಂ ಮೋಕ್ಷಸಾಧನಂ ಸ್ವಸ್ವಫಲಾಯ ನಾಲಮಿತ್ಯತೋಽಪಿ ಸ ಆವಶ್ಯಕ ಇತ್ಯಾಹ ।। **ಮೌನೇತಿ** ।। ಪುರುಷ ಹೇ ಹರೇ । ಮೌನಾದಯಃ ಆಪವರ್ಗ್ಯಾಃ ಅಪವರ್ಗಸಾಧನತಯಾ ಶ್ರುತಿಪ್ರಸಿದ್ಧಾಃ ಭವಂತಿ । ಭವಂತೋಽಪಿ ಪ್ರಾಯೇಣೈವ ಭವಂತೀತಿ ಮನ್ಯಾಮಹೇ । ಮೌನಾದೀನಾಂ

ಅಪವರ್ಗನಿಷ್ಪಾದಕತ್ವಂ ಪ್ರಾಯಿಕಮಿತ್ಯೇತತ್ ಕುತಃ। ಯತಸ್ತ ಏವ ಅಪವರ್ಗಸಾಧನತಯಾ ಪ್ರಸಿದ್ಧಾ ಏವ ಮೌನಾದಯಃ। ಅಜಿತೇಂದ್ರಿಯೈಃ ಅತ ಏವ ದಾಂಭಿಕೈಃ ನೃಭಿಃ ಕೃತಾಃ। ಅತ್ರಾಪಿ ಲೌಕಿಕಾರ್ಥೇಽಪಿ ಪರಂ ಕೇವಲಂ ಉದರಪೂರ್ತಿರ್ಯಥಾ ಸ್ಯಾತ್ತಥಾ ವಾರ್ತಾಃ ಔಪಯಿಕಾಃ ಭವಂತಿ। ಉತ ಪಕ್ಷಾಂತರೇ ನ ವೇತಿ ತತ ಇತಿ ॥



ಪ್ರಹ್ಲಾದನು ಶ್ರೀನರಸಿಂಹನಲ್ಲಿ ಹೇಳಿಕೊಳ್ಳುತ್ತಾನೆ—ಮೌನ ವ್ರತಾನುಷ್ಠಾನ ಶಾಸ್ತ್ರಶ್ರವಣ ತಪಸ್ಸು ಅಧ್ಯಯನ ವರ್ಣಾಶ್ರಮಧರ್ಮ ಪ್ರವಚನ ಏಕಾಂತವಾಸ ಜಪ ಧ್ಯಾನ ಇವೆಲ್ಲವೂ ಮೋಕ್ಷಸಾಧನವೇ ಆಗಿದ್ದರೂ ಇಂದ್ರಿಯ ಜಯವಿಲ್ಲದ ಡಾಂಭಿಕರಿಗೆ ಬರಿ ಜೀವನೋಪಾಯವಾಗಿ ಬಿಡುತ್ತದೆ. ಅಥವಾ ಅದೂ ಅಲ್ಲ, ಡಂಭವೆಂದು ಜನರಿಗೆ ತಿಳಿದು ಹೋದರೆ ಅದು ಜೀವನೋಪಾಯವೂ ಆಗಲಾರದು. ಇಂದ್ರಿಯ ಜಯವಿಲ್ಲದಿದ್ದರೆ ಮೌನ ವ್ರತಾದಿ ಮೋಕ್ಷಸಾಧನಗಳು ಯಾವುವೂ ತಮ್ಮತಮ್ಮ ಫಲ ಕೊಡಲು ಸಮರ್ಥವಾಗಲಾರವು. ಅದರಿಂದ ಇಂದ್ರಿಯ ಜಯವು ಅತ್ಯಂತ ಆವಶ್ಯಕ.



—೧೪೧—

**ಇಂದ್ರಿಯಗಳನ್ನು ತಣಿಸುವುದು ಕಜ್ಜಿ ತುರಿಸಿಕೊಂಡಂತೆ**

ಯನ್ಮೈಥುನಾದಿಗೃಹಮೇಧಿಸುಖಂ ಹಿ ತುಚ್ಛಂ
ಕಂಡೂಯನೇನ ಕರಯೋರಿವ ದುಃಖದುಃಖಂ।
ತೃಪ್ಯಂತಿ ದೇಹಕೃಪಣಾ ಬಹು ದುಃಖಭಾಜಃ
ಕಂಡೂತಿವನ್ಮನಸಿಜಂ ವಿಷಹೇತ ಧೀರಃ ॥

(ಭಾ.೭.೯.೪೫)

ಅಸ್ತ್ವೇವಂ ಇಂದ್ರಿಯಜಯ ಆವಶ್ಯಕಃ। ತಜ್ಜಯಸಾಧನಂ ಕಿಮಿತ್ಯತ ಇದಮೇವೇತ್ಯಾಹ ॥ ಯದಿತಿ ॥ ಯದ್ಯೈಹಿಕಸುಖಲುಬ್ಧಾಃ ಪಶುಪ್ರಾಯಾಃ ತ ಏವ ಕರಯೋಃ ಕಂಡೂಯನೇನ ಜನ್ಯಂ ಸುಖಮಿವ ತುಚ್ಛಂ ದುಃಖದುಃಖಂ ಬಹುದುಃಖಪ್ರದಂ ಚ ಮೈಥುನಾದಿ ಸ್ತ್ರೀಸಂಭೋಗಾಲಾಪಾದಿಹೇತುಕಂ

**ಯದ್ಗೃಹಸ್ಥಾನಾಂ ಸುಖಂ। ತಲ್ಲಬ್ಧ್ವಾ ಬಹುದುಃಖಭಾಜೋ ಭೂತ್ವಾಪಿ ತೃಪ್ಯಂತಿ ಕೃತಕೃತ್ಯಾ ಭವಂತಿ। ಧೀರಸ್ತು ಕಂಡೂತಿವತ್ ಕಂಡೂತಿಮಿವ ಸ್ವಮನಸಿ ಉದ್ಗತಂ ಕಾಮಂ ವಿಷಹೇತ ತದ್ವೇಗಂ ಸಹೇತ॥ ಇದಮುದಿತಂ ಭವತಿ— ಯಥಾ ಹಿ ಕಶ್ಚನ ಪುರುಷಃ ಕರಯೋಃ ಕಂಡೂತಿಜನನೇ ಸತಿ ಕರಾಭ್ಯಾಂ ಘರ್ಷಯತಿ। ತೇನ ತುಚ್ಛಸುಖಂ ಆದೌ ಆಪ್ನೋತಿ। ತತೋ ಮಹದ್ದುಖಂ। ಅನ್ಯಸ್ತ್ವಲ್ಪಂ ಸುಖಂ ದುಃಖಂ ತು ಮಹದಿತಿ ಮತ್ವಾ ಕಂಡೂತಿಮೇವ ಸಹತೇ। ತಸ್ಯ ಮಹದ್ದುಃಖಂ ನಾಸ್ತ್ಯೇವ। ತಥಾ ಕರಯೋಃ ಕಂಡೂತಿರಿವ ಮನಸಿ ಕಾಮೋದ್ರೇಕೋ ಭವತಿ। ತಮೇವಾಲ್ಪಸುಖಸಾಧನಂ ಮಹದ್ದುಃಖಸಾಧನಂ ಅನುಸಂಧಾಯ ಸಹೇತ। ನ ತು ಮೈಥುನಾದೌ ಪ್ರಯತೇತ। ಏವಮಭ್ಯಾಸೇ ಸತಿ ಕ್ರಮಾದಿಂದ್ರಿಯಜಯೋ ಭವತೀತಿ। ಅನೇನ ತಿತಿಕ್ಷಾಖ್ಯೋ ಭಾಗವತೋ ಧರ್ಮಃ ಪ್ರದರ್ಶಿತೋ ಭವತಿ ॥**



**ಪ್ರಹ್ಲಾದನು ಶ್ರೀನರಸಿಂಹನಲ್ಲಿ ಹೇಳಿಕೊಳ್ಳುತ್ತಾನೆ—ಗೃಹಸ್ಥರು ಸಂಪಾದಿಸುವ ಲೈಂಗಿಕ ಸುಖಭೋಗವು ಅಲ್ಪಮಾತ್ರವೇ ಅಲ್ಲ. ಅದರಿಂದ ದೇಹ ಪೋಷಣೆಯ ಶ್ರಮದಿಂದ ಹೆಚ್ಚಿನ ದುಃಖವೇ ಉಂಟಾಗುವುದು. ಆದರೂ ಆ ಸುಖ ಉಣ್ಣುವುದರಿಂದಲೇ ತಾವು ಕೃತಕೃತ್ಯರಾದೆವೆಂದುಕೊಳ್ಳುವರು. ಎರಡೂ ಕೈಗಳನ್ನು ಉಜ್ಜಿ ನವೆಯನ್ನು ಹೋಗಲಾಡಿಸಲು ಯತ್ನಿಸಿದಾಗ ಆ ಯತ್ನದಿಂದ ಇನ್ನೂ ಹೆಚ್ಚಿನ ದುಃಖ ಉಂಟಾಗುತ್ತದೆ. ನವೆಯನ್ನು ಸಹಿಸಿಕೊಳ್ಳ ಬೇಕು. ಬಾರದಂತೇ ಮಾಡಿಕೊಳ್ಳಬೇಕು. ಹಾಗೇ ಬುದ್ದಿವಂತನು ನವೆಯಂತೆ ಕಾಮತೀಟೆಯನ್ನು ಪ್ರಯತ್ನದಿಂದ ಹತ್ತಿಕ್ಕಿಕೊಳ್ಳಬೇಕು. ತೀರಿಸಿಕೊಳ್ಳಲು ಯತ್ನಿಸ ಬಾರದು. ಆಗಲೇ ಅದು ಅಭ್ಯಾಸವಾದಾಗ ಇಂದ್ರಿಯನಿಗ್ರಹ ಸಾಧ್ಯವಾಗು ವುದು.**

ಹೀಗೆ ಇಲ್ಲಿ ತಿತಿಕ್ಷಾ ಎಂಬ ಭಾಗವತಧರ್ಮವವನ್ನು ತೋರಿಸಿದಂತಾಯಿತು.

ಸತ್ಯಂ ದಯಾ ತಪಃ ಶೌಚಂ ತಿತಿಕ್ಷೇಜ್ಯಾ ಶಮೋ ದಮಃ ॥

(ಭಾ.೭.೧೨.೮)

ಎಂದು ನಾರದರು ಧರ್ಮರಾಜನಿಗೆ ತಿತಿಕ್ಷೆಯೂ ಒಂದು ಭಾಗವತಧರ್ಮ ಎಂದಿದ್ದಾರೆ. ತಿತಿಕ್ಷೆ ಎಂದರೆ ದುಃಖೋದ್ವೇಗವನ್ನು ಸಹಿಸಿಕೊಳ್ಳುವುದು. 'ತಿತಿಕ್ಷಾ

ದುಃಖಸಂಮರ್ಷಃ' (ಭಾ.೧೧.೧೯.೩೬) ಎಂದು. ಯದ್ಯಪಿ ದುಃಖಸಹನೆಯೇ ತಿತಿಕ್ಷೆ ಎಂದು ಶ್ರೀಕೃಷ್ಣ ಉದ್ಧವನಿಗೆ ಹೇಳುತ್ತಾನೆ. ಈ ದುಃಖ ಸಹನೆಗಿಂತ ಉದ್ವೇಗದ ಸಹನೆಯೇ ಮುಖ್ಯವೆನ್ನಲಾಗದು. ಆದರೂ ದುಃಖಸಹನೆ ಮಾಡಬಲ್ಲವರಿಗೆ ತಜ್ಜನ್ಯ ಉದ್ವೇಗದ ಸಹನೆ ಸುಲಭವೆ ಇರುತ್ತದೆ. ಈ ಅಭಿಪ್ರಾಯದಿಂದ 'ದುಃಖಸಂಮರ್ಷ' ಎಂದಿದ್ದಾನೆ ಭಗವಂತ. ದುಃಖ ಬಂದಾಗ ಉದ್ವೇಗ ಪಡದಿರುವುದು ಎಂದರ್ಥ. ಸುಧೀಂದ್ರತೀರ್ಥರ ವ್ಯಾಖ್ಯಾನದಲ್ಲಿ 'ಪ್ರಾಪ್ತೇ ದುಃಖೇ ಅನುದ್ವೇಗಃ' ಎಂದೇ ಹೇಳಿದ್ದಾರೆ.



—೧೪೨—

**ಕಾಮಾತುರವಾದ ನನ್ನ ಮನ ನಿನ್ನನರಿಯಲಾರದೆನ್ನುತ್ತಾನೆ ಪ್ರಹ್ಲಾದ**

**ನೈತನ್ಮನಸ್ತವ ಕಥಾಸು ವಿಕುಂಠನಾಥ**
**ಸಂಪ್ರೀಯತೇ ದುರಿತ ದುಷ್ಟಮಸಾಧು ತೀವ್ರಂ ।**
**ಕಾಮಾತುರಂ ಹರ್ಷಶೋಕಭಯೈಷಣಾರ್ತಂ**
**ತಸ್ಮಿನ್ ಕಥಂ ತವ ಗತಿಂ ವಿಮೃಶಾಮಿ ದೀನಃ ॥**

(ಭಾ.೭.೯.೩೯)

ಏವಂ ಸರ್ವೇಷ್ವಪಿ ಇಂದ್ರಿಯೇಷು ಶ್ರೇಷ್ಠಂ ಮನ ಇತರೇಷಾಂ ತದಧೀನಪ್ರವೃತ್ತಿತ್ವಾತ್ ಅತೋ ಮಹಾಮಲ್ಲಭಂಗನ್ಯಾಯೇನ ತದೇವಾದೌ ಜೇತವ್ಯಮಿತ್ಯಾಶಯೇನ ತಸ್ಯ ಶ್ರೈಷ್ಠ್ಯೋಪಪಾದಕಂ ಸ್ವಭಾವವಿಶೇಷಂ ಕಥಯತಿ ॥ **ನೈತದಿತಿ** ॥ ನ ಸಂಪ್ರೀಯತೇ ಔತ್ಸುಕ್ಯಯುಕ್ತಂ ನ ಭವತಿ । ಕುತಃ ದುರಿತದುಷ್ಟಂ ಪಾಪೇನ ಪ್ರತಿಬದ್ಧಂ । ಅಸಾಧು ದುಷ್ಟಸ್ವಭಾವಂ । ತೀವ್ರಂ ಚಂಚಲಂ । ಕಾಮಾತುರಂ ಕಾಮೋತ್ಸುಕಂ । ಹರ್ಷಶೋಕಭಯೈಃ ಈಷಣಾಭಿಃ ದಾರಪುತ್ರವಿತ್ತಚಿಂತಾಭಿಶ್ಚ ಆರ್ತಂ ದೀನಂ । ಮಾಸ್ತು ತವ ಮನೋ ಮತ್ಕಥಾಸು ಪ್ರೀತಿಯುಕ್ತಂ ತ್ವಂ ತು ತಾವತ್ತ್ವರ್ತಸ್ವೇತ್ಯತ ಆಹ ॥ **ತಸ್ಮಿನ್ನಿತಿ** ॥ ಮನಸಿ ತಸ್ಮಿನ್ ತಾದೃಶೇ ದೀನೇ ಸತಿ ಅಹಮಪಿ ದೀನೋಽಭವಂ । ಸತ್ಯೇವಂ ತವ ಗತಿಂ ಕಥಂ ವಿಮೃಶಾಮೀತಿ ॥



**ಪ್ರಹ್ಲಾದನು ಶ್ರೀನರಸಿಂಹನಲ್ಲಿ ಹೇಳಿಕೊಳ್ಳುತ್ತಾನೆ. ಹೇ ವೈಕುಂಠನಾಥ! ಈ ನನ್ನ ಮನಸು ನಿನ್ನ ಕಥಾಶ್ರವಣದಲ್ಲಿ ಸುಖ ಕಾಣುತ್ತಿಲ್ಲ. ಅದು ಪಾಪಕಲುಷಿತ ವಾಗಿ ಕೆಟ್ಟಿದೆ. ಬಲುವೇಗದಿಂದ ವಿಷಯಸುಖದ ಕಡೆಗೆ ಧಾವಿಸುತ್ತಿದೆ. ಹರ್ಷ ಶೋಕ ಭಯ ಹೆಂಡತಿ ಮಕ್ಕಳು ಮನೆ ಮುಂತಾದವುಗಳ ಬಯಕೆಗಳಿಂದ ಬಳಲುತ್ತಿದೆ. ಇಂಥ ಮನಸಿನಲ್ಲಿ ನಿನ್ನ ಲೀಲೆಗಳ ಬಗ್ಗೆ ನಾನೇನು ವಿಚಾರ ಮಾಡಬಲ್ಲೆ?**

ಇಲ್ಲಿ ಪ್ರಹ್ಲಾದನು ಆತ್ಮಶೋಧನೆ ಮಾಡಿಕೊಳ್ಳುತ್ತಿದ್ದಾನೆ ಎಂದರೆ, ತಪ್ಪಾಗುವುದು. 'ಇಂದು ನನಗೆ ಗೋವಿಂದ' ಹಾಡಿನಲ್ಲಿ ರಾಯರೂ ಕೂಡ,

ಧಾರುಣಿಯೊಳು ಬಲು ಭಾರಜೀವನನಾಗಿ
ದಾರಿತಪ್ಪಿ ನಡೆದೆ ಸೇರಿದೆ ಕುಜನರ...

ಎನ್ನುತ್ತಾರೆ! ಇದು ತಮ್ಮ ಆತ್ಮಶೋಧನೆಯಲ್ಲ. ಸಾಧಕರಾದ ಸಜ್ಜನರ ಆತ್ಮಗಳ ಶೋಧನೆ. ಮುಂದೆ ಇಲ್ಲಿಯೇ ೧೭೩ನೇ ಶ್ಲೋಕದಲ್ಲಿ ಹಾಗೇ ಹೇಳುತ್ತಾನೆ ಪ್ರಹ್ಲಾದ—

'ನೈವೋದ್ವಿಜೇ ಭವದುರತ್ಯಯ ವೈತರಣ್ಯಾಃ'

'ನಿನ್ನ ಲೀಲಾಶ್ರವಣದ ಅಮೃತಪಾನದಿಂದ ನನ್ನ ಮನ ಸದಾ ಅಮಲೇರಿ ದಂತೆ ಕುಣಿಯುತ್ತಿದೆ. ಅದರ ಸವಿಯನ್ನು ಕಂಡರಿಯದ ಮೂಢಜನರು ವಿಷಯಾಸಕ್ತಿಯಿಂದ ಬಳಲುವುದನ್ನು ನೋಡಿ ನಾನು ಶೋಕಿಸುತ್ತೇನೆ' ಎನ್ನುತ್ತಾನೆ. ದಾಸಸಾಹಿತ್ಯದಲ್ಲಿ ಕಂಡುಬರುವ ದಾಸರ 'ಆತ್ಮಶೋಧನೆ'ಗಳು ಈ ಬಗೆಯವೆಂದು ತಿಳಿಯಬೇಕು.

ಇಂದ್ರಿಯಗಳಲ್ಲೆಲ್ಲ ಮನಸ್ಸೇ ಬಲಿಷ್ಠ. ಬೇರೆ ಇಂದ್ರಿಯಗಳೆಲ್ಲವೂ ಮನಸಿನ ಅಧೀನವಾಗಿರುತ್ತವೆ. ಮಲ್ಲಯುದ್ಧದಲ್ಲಿ ಮಹಾಮಲ್ಲನು ಸೋತು ಬಿದ್ದರೆ ಉಳಿದವರು ತಾವೇ ಪಲಾಯನ ಮಾಡುತ್ತಾರೆ. ಹಾಗೇ ಮನಸ್ಸನ್ನು ನಿಗ್ರಹಿಸಿದರೇ ಬೇರೆ ಎಲ್ಲ ಇಂದ್ರಿಯಗಳೂ ಸುಲಭವಾಗಿ ವಶಕ್ಕೆ ಬರುವುವು. ಮನಸ್ಸು ಏಕೆ ಬಲಿಷ್ಠವೆಂಬುದನ್ನು ಈ ಶ್ಲೋಕದಲ್ಲಿ ಪ್ರಹ್ಲಾದನು ಹೇಳಿದ್ದಾನೆ. ತೀವ್ರ ಕಾಮಾತುರವಾಗಿದೆ, ಹರ್ಷ ಶೋಕ ಭಯ, ಏಷಣಾತ್ರಯಗಳಿಂದ ಭರಿತವಾಗಿದೆ. ಪ್ರಾಚೀನ ದುಷ್ಕರ್ಮಗಳ ಬಲದಿಂದ ಉದ್ಧಟ ಅವಿನೀತವಾಗಿದೆ.

ಅದಕ್ಕೆ ಸಜ್ಜನಸಂಗಬೇಕು. ಗುರುಹಿರಿಯರ ಅನುಗ್ರಹ ಮಾರ್ಗದರ್ಶನ ಬಲದಿಂದ ಪ್ರಯತ್ನಪಟ್ಟು ಅದನ್ನು ವಶಕ್ಕೆ ತಂದುಕೊಳ್ಳಬೇಕು ಎನ್ನುತ್ತಾನೆ ಪ್ರಹ್ಲಾದ. ಇಲ್ಲಿ 'ಈಷಣಾಭಿಃ' ಎಂದು ಪಾಠತಪ್ಪು. 'ಇಷು ಇಚ್ಛಾಯಾಂ' ಧಾತು ಲ್ಯುಡಂತ ಶಬ್ದವು 'ಏಷಣಾ' ಎಂದಾಗುತ್ತದೆ. 'ಈಷಣಾ' ಎಂದಲ್ಲ. ಅದರಿಂದ 'ಏಷಣಾಭಿಃ' ಎಂದು ತಿದ್ದಿಕೊಳ್ಳಬೇಕು.



—೧೪೩—

**ಇಂದ್ರಿಯನಿಗ್ರಹವಿಲ್ಲದೆ ಸಾಧನಾನುಷ್ಠಾನವಿಲ್ಲ**

**ದಾನಂ ಸ್ವಧರ್ಮೋ ನಿಯಮೋ ಯಮಶ್ಚ**
**ಶ್ರುತಾನಿ ಕರ್ಮಾಣಿ ಚ ಸದ್ವ್ರತಾನಿ ।**
**ಸರ್ವೇ ಮನೋನಿಗ್ರಹಲಕ್ಷಣಾಂತಾಃ**
**ಪರೋ ಹಿ ಯೋಗೋ ಮನಸಃ ಸಮಾಧಿಃ ॥**

(ಭಾ.೧೧.೨೩.೪೬)

ಮನೋಜಯೇ ಆದರಜನನಾಯ ತಂ ಸ್ತೌತಿ ॥ ದಾನಮಿತಿ ॥ ದಾನಾದಯಃ ಸರ್ವೇ ಯೋಗಾಃ ಉಪಾಯಾಃ ಮನೋನಿಗ್ರಹಲಕ್ಷಣೋ ಯ ಉಪಾಯಃ ಸ ಏವ ಅಂತಃ ಫಲರೂಪೋ ಯೇಷಾಂ ತೇ । ಯತ ಏವಂ ಸರ್ವೇ ಮನೋನಿಗ್ರಹಾರ್ಥಾಃ ತತಃ ಮನಸಃ ಸಮಾಧಿಃ ನಿಗ್ರಹ ಏವ ಪರೋ ಯೋಗೋ ಯೋಗೇಷು ಪರ ಇತಿ ॥ ಯಥಾಹುಃ—

''ತಸ್ಮಾತ್ಸರ್ವಾತ್ಮನಾ ತಾತ ನಿಗೃಹಾಣ ಮನೋ ಧಿಯಾ ।
ಮಯ್ಯಾವೇಶಿತಯಾ ಯುಕ್ತ ಏತಾವಾನ್ಯೋಗಸಂಗ್ರಹಃ' ಇತಿ ॥



ಭಿಕ್ಷುಗೀತೆಯಲ್ಲಿ ಭಿಕ್ಷು ಹೇಳಿಕೊಳ್ಳುತ್ತಾನೆ— ದಾನ, ವರ್ಣಾಶ್ರಮ ಧರ್ಮ, ಹನ್ನೆರಡು ನಿಯಮಗಳು ಹನ್ನೆರಡು ಯಮಗಳು ಶಾಸ್ತ್ರಶ್ರವಣ, ನಿಷ್ಕಾಮಕರ್ಮಗಳು ಒಳ್ಳೆಯ ವ್ರತಗಳು. ಇವೆಲ್ಲವೂ ಮನೋನಿಗ್ರಹಕ್ಕೆ ಆವಶ್ಯವಾದ ಸಾಧನಗಳು. ಅವುಗಳಿಂದ ಮನಸ್ಸನ್ನು ನಿಗ್ರಹಿಸಿ ಶ್ರೀಹರಿಯಲ್ಲಿ ಸ್ಥಿರವಾಗಿ ನಿಲ್ಲಿಸುವುದೇ ಶ್ರೇಷ್ಠ ಮೋಕ್ಷಸಾಧನ. ಜ್ಞಾನಸಾಧನವಾಗಿದೆ.

ತಸ್ಮಾತ್ ಸರ್ವಾತ್ಮನಾ ತಾತ ನಿಗೃಹಾಣ ಮನೋ ಧಿಯಾ ।
ಮಯ್ಯಾವೇಶಿತಯಾ ಯುಕ್ತ ಏತಾವಾನ್ ಯೋಗಸಂಗ್ರಹಃ ॥

(ಭಾ.೧೧.೨೩.೫೧)

'ಆದರಿಂದ ಉದ್ಧವ, ಮೋಕ್ಷಸಾಧನವನ್ನು ಸಂಗ್ರಹವಾಗಿ ಒಂದು ಮಾತಿನಲ್ಲಿ ನಿನಗೆ ಹೇಳಬೇಕೆಂದರೆ ಅದು ಇಷ್ಟು—ಧ್ಯಾನಯೋಗದಿಂದ ನನ್ನಲ್ಲಿ ಸ್ಥಿರವಾಗಿ ನಿಲ್ಲುವ ಬುದ್ಧಿಯಿಂದ ನಿನ್ನ ಮನಸ್ಸನ್ನು ನೀನು ಪೂರ್ತಿಯಾಗಿ ವಶಕ್ಕೆ ತಂದುಕೊಳ್ಳಬೇಕು, ಎಂದು ಶ್ರೀಕೃಷ್ಣನು ಉಪದೇಶಿಸುತ್ತಾನೆ.



–೧೪೪–

**ಇಂದ್ರಿಯನಿಗ್ರಹವಿದ್ದರೆ ವ್ರತಗಳಿಂದೇನಾಗಬೇಕು?**
**ಅದಿಲ್ಲದಿದ್ದರೆ ಅವುಗಳಿಂದೇನಾದೀತು?**

**ಸಮಾಹಿತಂ ಯಸ್ಯಮನಃ ಪ್ರಶಾಂತಂ**
**ದಾನಾದಿಭಿಃ ಕಿಂ ವದ ತಸ್ಯಕೃತ್ಯಂ ।**
**ಅಸಂಯತಂ ಯಸ್ಯ ಮನೋ ವಿನಶ್ಯೇತ್**
**ದಾನಾದಿಭಿಶ್ಚೇದಪರಂ ಕಿಮೇಭಿಃ ॥**

(ಭಾ.೧೧.೨೩.೪೭)

ಸರ್ವೇ ಮನೋನಿಗ್ರಹಲಕ್ಷಣಾಂತಾ ಇತ್ಯುಕ್ತಮೇವ ವಿಶದಯತಿ ॥ **ಸಮಾಹಿತಮಿತಿ** ॥ ಯಸ್ಯ ಮನಃ ಸಮಾಹಿತಂ ಸ್ವಾಧೀನಂ। ಅತ ಏವ ಪ್ರಶಾಂತಂ। ತಸ್ಯ ಪುರುಷಸ್ಯ ದಾನಾದಿಭಿಃ ಕಿಂ ಸಾಧ್ಯಂ ವದ। ಮನಃಸಮಾಧಾನಸ್ಯೈವ ದಾನಾದಿಸಾಧ್ಯತ್ವಾತ್ ತಸ್ಯ ಚ ಸಿದ್ಧತ್ವಾನ್ನ ಕಿಮಪಿ ಪ್ರಯೋಜನಮಿತಿ। ಯಸ್ಯ ಚ ಪುಂಸೋ ಮನಃ ದಾನಾದಿಭಿಃ ಅಸಂಯತಂ ಅನಿಯತಂ ಅಸ್ವಾಧೀನಂ ಸತ್ । ಚೇತ್ ಯದಿ ವಿನಶ್ಯೇತ್ ವಿಷಯಲಗ್ನತಯಾ। ತರ್ಹಿ ಏಭಿಃ ದಾನಾದಿಭಿಃ। ಅಪರಂ ಮನೋನಿಗ್ರಹಾದತಿರಿಕ್ತಂ।ಕಿಂ ಫಲಂ ಸಾಧ್ಯಂ ಮುಖ್ಯಮಸ್ತಿ। ಅನೇನ ದಾನಾದಿಭಿರ್ಮನೋನಿಗ್ರಹಾಭಾವೇ ತೇಷಾಂ ನಿಷ್ಫಲತ್ವಕಥನೇನ ತದೇವ ಮುಖ್ಯಂ ಫಲಮಿತಿ ವಿಶದೀಕೃತಮಿತಿ ಜ್ಞೇಯಂ ॥



**ಭಿಕ್ಷು ಹೇಳುವ ಇನ್ನೊಂದು ಮಾತು—ಯಾರಿಗೆ ಮನಸ್ಸು ವಶಕ್ಕೆ ಬಂದು ಪರಮಾತ್ಮನಲ್ಲಿ ಸ್ಥಿರವಾಗಿ ನಿಲ್ಲುವುದೋ ಪ್ರಸನ್ನವಾಗಿರುವುದೋ ಅವನಿಗೆ ದಾನಾದಿ ಕರ್ಮಗಳಿಂದ ಏನು ಸಾಧಿಸಬೇಕಾಗಿರುತ್ತದೆ? ಹೇಳು. ಯಾರಿಗೆ ಮನಸ್ಸು ವಶಕ್ಕೆ ಬಾರದೆ ವಿಷಯಾಸಕ್ತವಾಗಿ ಕೆಟ್ಟು ಹೋಗಿರುವುದೋ ಅವನಿಗಾದರೂ ದಾನಾದಿಕರ್ಮಗಳಿಂದ ಸಾಧಿಸಲಾಗುವುದೇನಿದೆ?**

ಆದರಿಂದ ದಾನಾದಿಗಳನ್ನು ಮಾಡಿದರೂ ಮನೋನಿಗ್ರಹವಾಗಿಲ್ಲ ಎಂದರೆ, ಆ ದಾನಾದಿ ನಿಷ್ಫಲ. ದಾನಾದಿಗಳಿಗೆ ಮನೋನಿಗ್ರಹಸಾಧನೆಯೇ ಮುಖ್ಯ ಫಲವೆಂದಂತಾಯಿತು.



—೧೪೫—

**ಮನಸು ಸ್ವಾಧೀನವಿದ್ದರೂ ವಿಷಯಸಂಗದಿಂದ ದೂರವಿರಲೇಬೇಕು**

**ತಥಾಽಪಿ ಸಂಗಃ ಪರಿವರ್ಜನೀಯೋ**
**ಗುಣೇಷು ಮಾಯಾರಚಿತೇಷು ತಾವತ್ ।**
**ಮದ್‌ಭಕ್ತಿಯೋಗೇನ ದೃಢೇನ ಯಾವದ್**
**ರಜೋ ನಿರಸ್ಯೇತ ತಮಃಕಷಾಯಂ ॥**

(ಭಾ.೧೧.೨೮.೨೮)

**ಕದಾಚಿತ್ ಮನಃ ಸ್ವಾಧೀನಮಿವ ಗೃಹೇ ಸ್ಥಿತಸ್ಯ ವಾ ತತೋ ವಿರಕ್ತಸ್ಯ ವಾ ದೃಶ್ಯತೇ । ನ ಚ ತಾವತಾ ಸಂತೋಷ್ಟವ್ಯಂ । ಯತಃ ಪುನಃ ವಿಷಯೇಷು ಪ್ರಸಕ್ತಂ ಭವತ್ ಪುರುಷಂ ವ್ಯಥಯತಿ । ತತಃ ಸ್ವಾಧೀನಮನಸಾಽಪಿ ಪುರುಷೇಣ ವಿಷಯಸನ್ನಿಧಾನಂ ವರ್ಜನೀಯಮೇವೇತಿ ಯದಾ ತದಾ ಕಿಂ ವಾಚ್ಯಂ ಅಜಿತಮನಸೇತ್ಯಾಶಯೇನಾಹ ॥ ತಥಾಽಪೀತಿ ॥ ಯದ್ಯಪಿ ಮನಃ ಕದಾಚಿತ್ ಸ್ವಾಧೀನಂ ಭವತಿ । ತಥಾಪಿ ಯಾವದ್‌ದೃಢೇನ ಭಗವದ್ಭಕ್ತಿಯೋಗೇನ । ತಮಃಕಷಾಯಂ ತಮೋನಿಮಿತ್ತದುಃಖಪ್ರದಂ ರಜಃ ರಜೋಗುಣಕಾರ್ಯಂ ರಾಗಾದಿಕಂ ನಿರಸ್ಯೇತ । ತಾವತ್ ಗುಣೇಷು ಸಂಗಃ ಪರಿವರ್ಜನೀಯ ಏವೇತಿ ॥**



ಶ್ರೀಕೃಷ್ಣ ಉದ್ಧವನಿಗೆ ಉಪದೇಶಿಸುತ್ತಾನೆ—ಸಾಧಕನು ನನ್ನಿಚ್ಛೆಯಿಂದ

**ಪ್ರಕೃತಿಯಿಂದಾಗಿರುವ ವಿಷಯಪದಾರ್ಥಗಳಲ್ಲಿ ಆಸಕ್ತಿಯನ್ನು ಬಿಡಬೇಕು. ಬಿಡುವುದರಿಂದ ನನಗೇನೂ ಆಗಬೇಕಿಲ್ಲ. ಆದರೂ ಅದಕ್ಕೆ ನಾನು ಒಲಿಯುತ್ತೇನೆ. ಅವನು ನನ್ನಲ್ಲಿ ಇರಿಸುವ ದೃಢವಾದ ಭಕ್ತಿಯಿಂದ ಯೋಗದಿಂದ ತನ್ನಲ್ಲಿ ರಜಸ್ತಮೋಗುಣಜನ್ಯವಾದ ಪಾಪತಾಪನಿರಸನವಾಗುವವರೆಗೂ, ಮೋಕ್ಷ ಸಿಗುವವರೆಗೂ ವಿಷಯವೈರಾಗ್ಯವನ್ನು ಅಭ್ಯಾಸ ಮಾಡುತ್ತಲೆ ಇರಬೇಕು. ಮೋಕ್ಷದಲ್ಲಿ ಅದು ಬೇಕಾಗಿಲ್ಲ.**

ಕೆಲವೊಮ್ಮೆ ಮನಸ್ಸು ಸ್ವಾಧೀನವಾಗಿದ್ದಂತೆ ಮನೆಯಲ್ಲಿ ಇರುವ ಧೀರ ಗೃಹಸ್ಥನಿಗೂ ತೋರೀತು ಮನೆಬಿಟ್ಟು ಹೋಗಿರುವ ವಿರಕ್ತ ಸನ್ಯಾಸಿಗೂ ತೋರೀತು. ಆದರೆ ಅಷ್ಟು ಮಾತ್ರದಿಂದ ತೃಪ್ತನಾಗಬಾರದು. ವಿಷಯ ವೈರಾಗ್ಯದ ಅಭ್ಯಾಸವನ್ನು ಕೈಬಿಡಬಾರದು. ಏಕೆಂದರೆ ಮನಸ್ಸು ರಜೋಗುಣದಿಂದ ತಿರುಗಿ ವಿಷಯಗಳಲ್ಲಿ ಆಸಕ್ತವಾಗಿ ತಮೋಗುಣದಿಂದ ಸಾಧಕನನ್ನು ಪೀಡಿಸುವ ಸಂಭವವಿದೆ. ಅದರಿಂದ ಮನಸ್ಸು ಸ್ವಾಧೀನವೆ ಇದ್ದರೂ ವಿಷಯಗಳನ್ನು ದೂರವಿರಿಸಲೆಬೇಕು ಎಂದ ಮೇಲೆ ಮನಸ್ಸು ಸ್ವಾಧೀನವಿಲ್ಲದವನು ವಿಷಯಗಳಿಂದ ದೂರವಿರಬೇಕೆಂದು ಬೇರೇನು ಹೇಳಬೇಕು.



—೧೪೬—

**ವಿಷಯಾಸಕ್ತರ ಸಂಗದಲ್ಲಿ ಮನಸು ಹುಚ್ಚೆದ್ದು ಕುಣಿದೀತು !**

**ಯಥಾಽಽಮಯೋಽಸಾಧು ಚಿಕಿತ್ಸಿತೋ ನೃಣಾಂ**
**ಪುನಃಪುನಃ ಸಂತುದತಿ ಪ್ರರೋಹನ್ ।**
**ಏವಂ ಮನೋಽಪಕ್ವಕಷಾಯಕರ್ಮ**
**ಕುಯೋಗಿನಂ ವಿಧ್ಯತಿ ಸರ್ವಸಂಗಂ ॥** (ಭಾ.೧೧.೨೮.೨೯)

**ವಿಪಕ್ಷೇ ಬಾಧಕಂ ಸದೃಷ್ಟಾಂತಮಾಹ । ಯಥೇತಿ । ಅಸಾಧು ಅಸಮ್ಯಕ್ ಚಿಕಿತ್ಸಿತಃ ಆಮಯಃ । ಪುನಃ ಪುನಃ ಪ್ರರೋಹಣಂ ಕುರ್ವನ್ । ನೃಣಾಂ ನೄನ್ ಸಂತುದತಿ ದುಃಖಯತಿ । ಏವಂ ತಥಾ । ಅಪಕ್ವಂ ನಿಃಶೇಷತಯಾ ಅಪರಿತ್ಯಕ್ತಂ । ಕಷಾಯಕರ್ಮ ಪಾಪಂ ಕರ್ಮ ಯೇನ ತಾದೃಶಂ ಮನಃ । ಸರ್ವಃ ಸರ್ವವಿಷಯ ಸಂಬಂಧೀ ಸಂಗೋ ಯಸ್ಯ ತಾದೃಶಂ । ಕುಯೋಗಿನಂ ಅದೃಢಯೋಗವಂತಂ ।**

**ವಿಧ್ಯತಿ ಬಾಧತ ಏವೇತಿ ಯತಃ। ಅತಃ ಸಂಗಃ ಪರಿವರ್ಜನೀಯ ಇತಿ ಭಾವಃ। ಅನೇನ ಇಂದ್ರಿಯಜಯಾಖ್ಯೋ ದಮಾಽಪರಪರ್ಯಾಯೋ ಭಾಗವತೋ ಧರ್ಮಃ ಪ್ರತಿಪಾದಿತೋ ಭವತಿ ॥**



**ಉದ್ಧವನಿಗೆ ಶ್ರೀಕೃಷ್ಣನ ಉಪದೇಶ—ರೋಗವನ್ನು ಪೂರ್ತಿಯಾಗಿ ಔಷಧದಿಂದ ಗುಣಪಡಿಸದಿದ್ದರೆ ಅದು ಪುನಃ ಎದ್ದು ಕಾಣಿಸಿಕೊಂಡು ಮನುಷ್ಯನನ್ನು ಪೀಡಿಸುವುದು. ಹಾಗೇ ಮನಸ್ಸಿನಲ್ಲಿರುವ ರಾಗಾದಿದೋಷಗಳನ್ನೂ ದುಷ್ಕರ್ಮಗಳನ್ನೂ ಪೂರ್ತಿ ನಾಶಪಡಿಸದೇ ವಿಷಯಗಳನ್ನು ಸೇವಿಸಲು ತೊಡಗಿದರೆ, ಮನಸ್ಸು ಎಲ್ಲ ದುರ್ವಿಷಯಗಳಲ್ಲಿ ಆಸಕ್ತವಾಗಿ ಯೋಗಾಭ್ಯಾಸದಲ್ಲಿ ಇನ್ನೂ ಪೂರ್ತಿಯಶಸ್ಸನ್ನು ಕಾಣದಿರುವ ಆ ದುರ್ಬಲ ಯೋಗಿಯನ್ನು ಪೀಡಿಸುತ್ತದೆ. ಅದರಿಂದಲೇ ವಿಷಯಾಸಕ್ತರಾದ ದುರ್ಜನರ ಸಂಗವನ್ನು ಮೊದಲಿಗೆ ಬಿಡಬೇಕು. ಇಂದ್ರಿಯ ನಿಗ್ರಹವನ್ನು ಸಾಧಿಸಿಕೊಳ್ಳಬೇಕು. ಇಂದ್ರಿಯಜಯವೇ ದಮವೆಂಬ ಭಾಗವತಧರ್ಮ.**

'ಶಮೋ ಮನ್ನಿಷ್ಠತಾ ಬುದ್ಧೇರ್ದಮ ಇಂದ್ರಿಯಸಂಯಮಃ'

(ಭಾ.೧೧.೧೯.೩೬)

ಎಂದು ಭಾಗವತವು 'ದಮ'ವೆಂದರೇನೆಂದು ಹೇಳಿದೆ. ಇಂದ್ರಿಯ ಜಯ ಉಳ್ಳವನೇ ಬ್ರಹ್ಮೋಪದೇಶಕ್ಕೆ ಯೋಗ್ಯನೆನಿಸುತ್ತಾನೆ.



# (೧೧) ಬ್ರಹ್ಮೋಪದೇಶ ಪ್ರಕರಣ

## ಪ್ರಕರಣ ಸಾರಾಂಶ

ಪರಬ್ರಹ್ಮ ನಾರಾಯಣನು ಸ್ವತಂತ್ರ, ಸರ್ವಕರ್ತ. ಜ್ಞಾನಾನಂದಾದಿ ಸಕಲಕಲ್ಯಾಣಗುಣಮಯ ಸುಂದರ ಶರೀರಿ. ಬ್ರಹ್ಮಾದಿ ದೇವತೆಗಳೂ ಅವನನ್ನು ಸ್ವತಃ ತಿಳಿಯರು. ಅವನೇ ಅವರಿಗೆ ತಿಳಿಸಬೇಕು. ಅವರ ಅನುಗ್ರಹದಿಂದ ನಮಗೂ ನಿಯತ ಗುರುಗಳು ಲಭಿಸಿದಾಗ ನಮ್ಮ ಯೋಗ್ಯತಾನುಸಾರ ಜ್ಞಾನಲಾಭವಾಗುವುದು. ಗುರುಗಳೂ ಕೂಡ ಅವರ ಯೋಗ್ಯತಾನುಸಾರವೆ ಅವನ ಬಗ್ಗೆ ಹೇಳುತ್ತಾರೆ. ಹಕ್ಕಿ ಆಗಸದಲ್ಲಿ ತನಗೆ ಶಕ್ತಿ ಇದ್ದಷ್ಟೇ ಮೇಲೇರುತ್ತದೆ. ತಾನೆ? ಅವನಲ್ಲಿ ಅನಂತಗುಣಗಳಿದ್ದರೂ ಒಂದು ಲೇಶವಾದರೂ ದೋಷವಿಲ್ಲ. ಬೇರೆ ದೇವತೆಗಳಲ್ಲಿ ಹಾಗಿಲ್ಲ. ಅವರಲ್ಲಿ ದೋಷಗಳೂ ಇರುತ್ತವೆ. ಸ್ವಯಂವರದಲ್ಲಿ ಮಹಾಲಕ್ಷ್ಮಿ ಎಲ್ಲ ದೇವತೆಗಳಲ್ಲಿ ದೋಷಗಳಿರುವುದನ್ನೂ ಶ್ರೀಹರಿಯಲ್ಲಿ ಯಾವುದೇ ದೋಷವಿಲ್ಲದಿರುವುದನ್ನೂ ಚೆನ್ನಾಗಿ ಪರೀಕ್ಷಿಸಿ ನೋಡಿ ಅವನಿಗೆ ಸ್ವಯಂವರ ಮಾಲೆಯನ್ನರ್ಪಿಸಿ ಅವನನ್ನು ಮದುವೆಯಾದಳೆಂದು ಅಷ್ಟಮ ಸ್ಕಂಧದಲ್ಲಿ ಉಕ್ತವಾಗಿದೆ.



—೧೪೭—

### ಸಾಧಕನಿಗೆ ಭಗವಂತನು ಜಗಜ್ಜನ್ಮಾದಿಕಾರಣನೆಂದು ಗುರು ಉಪದೇಶಬೇಕು

ಓಂ ಜನ್ಮಾದ್ಯಸ್ಯ ಯತೋಽನ್ವಯಾದಿತರತ
ಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಯ ಆದಿಕವಯೇ
ಮುಹ್ಯಂತಿ ಯಂ ಸೂರಯಃ ।
ತೇಜೋವಾರಿಮೃದಾಂ ಯಥಾ ವಿನಿಮಯೋ
ಯತ್ರ ತ್ರಿಸರ್ಗೋ ಮೃಷಾ

**ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ**
**ಸತ್ಯಂ ಪರಂ ಧೀಮಹಿ ॥**

(ಭಾ.೧.೧.೧)

**ಆಪಾತತಃ ಪುರಾಣಾದಿಶಾಸ್ತ್ರೇಣ ಪಿತ್ರಾದಿಹಿತೈಷಿವಾಕ್ಯೇನ ವಾ ಪ್ರಬಲತರ ಜನ್ಮಾಂತರಸಂಸ್ಕಾರೇಣ ವಾ ಸಾಮಾನ್ಯತಃ ಸಂಕ್ಷಿಪ್ಯಾವಗತಶಾಸ್ತ್ರಮುಖ್ಯಾರ್ಥ ಸ್ಯಾಂತರೇವ ಜಾತವೈರಾಗ್ಯಸ್ಯ ಸತ್ಸಂಗವಶಾದೀಷದ್ವ್ಯಕ್ತವಿರಾಗಸ್ಯ ಮಹತ್ಸೇವಾ ಸಮಾಸಾದಿತ ತದೀಯಾನುಗ್ರಹಪಾತ್ರಸ್ಯ ಮಹನ್ನಿಂದಾಮಾತ್ಮಸ್ತುತಿಂ ಚಾಕುರ್ವತೋ ಜಿತೇಂದ್ರಿಯಸ್ಯಾಧಿಕಾರಿಣೋ ಗುರುಭಿಃ ಕ್ರಿಯಮಾಣಮುಪ ದೇಶಪ್ರಕಾರಂ ದರ್ಶಯತಿ ॥ ಜನ್ಮಾದ್ಯಸ್ಯ ಯತ ಇತಿ ॥ ಯತೋಽಸ್ಯ ಜಗತೋ ಜನ್ಮಾದಿ। ಯಶ್ಚಾರ್ಥೇಷ್ವಭಿಜ್ಞಃ। ಯಶ್ಚ ಸ್ವರಾಟ್। ಯಶ್ಚ ಬ್ರಹ್ಮ ವೇದಂ ಆದಿಕವಯೇ ಚತುರ್ಮುಖಾಯ ಹೃದಾ ಸ್ನೇಹೇನ ತೇನೇ ವಿಸ್ತಾರಿತವಾನ್। ಯಂ ಪ್ರತಿ ಸೂರಯೋ ಮುಹ್ಯಂತಿ। ತೇಜೋವಾರಿಮೃದಾಂ ವಿನಿಮಯೋ ಯಥಾ ತಥಾ ತ್ರಿಸರ್ಗೋ ಯತ್ರ ಮೃಷಾ। ತಂ ಸ್ವೇನ ಧಾಮ್ನಾ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹೀತಿ। ಅನೇನ ಜಗಜ್ಜನ್ಮಾದಿಕಾರಣತ್ವಂ ಬ್ರಹ್ಮಣೋ ಲಕ್ಷಣಮಿತ್ಯುಪದೇಶಪ್ರಕಾರಂ ಸೂಚಯತಿ ॥**



ಪುರಾಣಭಾರತಾದಿಗಳನ್ನು ಸ್ವಲ್ಪ ಕೇಳಿ ತಂದೆ ತಾಯಿ ಮುಂತಾದ ಹಿರಿಯರ ಮಾತಿನಿಂದಾಗಲಿ ಜನ್ಮಾಂತರ ಸಂಸ್ಕಾರದಿಂದಾಗಲಿ ಶಾಸ್ತ್ರಮುಖ್ಯ ಪ್ರತಿಪಾದ್ಯನು ಶ್ರೀಹರಿಯೇ ಎಂದು ಸಾಮಾನ್ಯವಾಗಿ ಸಂಕ್ಷೇಪವಾಗಿ ತಿಳಿದಿರ ಬೇಕು. ಒಳಗೆ ವೈರಾಗ್ಯ ಉದಿಸಿದ್ದು ಸಜ್ಜನರ ಒಡನಾಟದಿಂದ ಸ್ವಲ್ಪವಾದರೂ ಅದು ವ್ಯಕ್ತವಾಗಿರಬೇಕು. ಗುರುಹಿರಿಯರ ಸೇವೆಯಿಂದ ಅವರ ಅನುಗ್ರಹಕ್ಕೆ ಪಾತ್ರ ನಾಗಿರಬೇಕು. ಹಿರಿಯರ ನಿಂದೆಯನ್ನೂ ಆತ್ಮಪ್ರಶಂಸೆಯನ್ನೂ ಮಾಡದಿರ ಬೇಕು. ಜಿತೇಂದ್ರಿಯನಾಗಿರಬೇಕು. ಇಂಥ ಶಿಷ್ಯನಿಗೆ ಗುರು ಬ್ರಹ್ಮೋಪದೇಶ ಮಾಡುತ್ತಾನೆ.

ಮೊದಲಿಗೆ ಪರಬ್ರಹ್ಮ ನಾರಾಯಣನ ಸೃಷ್ಟ್ಯಾದ್ಯಷ್ಟಕರ್ತೃತ್ವರೂಪ ಲಕ್ಷಣವನ್ನು ಉಪದೇಶಿಸಬೇಕು ಎಂದು ಮುಂತಾಗಿ ಈ ಭಾಗವತದ ಆದ್ಯಮಂಗಳಾಚರಣೆಯಲ್ಲಿ ಶ್ರೀಬಾದರಾಯಣರು ಹೇಳುತ್ತಿದ್ದಾರೆ—

ಸ್ವತಂತ್ರನಾದ ಭಗವಾನ್ ವಾಸುದೇವನೆ ಜಗತ್ತಿಗೆ ಸೃಷ್ಟ್ಯಾದಿ ಅಷ್ಟಕರ್ತ. ಇದು ಶಾಸ್ತ್ರಸಿದ್ಧವಾದ ಪ್ರಮೇಯ. ಮತ್ತು ಅದು ಯುಕ್ತಿಯುಕ್ತವೂ ಆಗಿದೆ. ತಂದೆ ಇಲ್ಲದೆ ಮಗು ಹುಟ್ಟಲಾರದು ತಾನೆ? ಎಂದು. ಅವನು ಸರ್ವಜ್ಞ. ಅದರಿಂದಲೆ ಸರ್ವಶಕ್ತ. ಚತುರ್ಮುಖನಿಗೂ ಜನ್ಮವಿತ್ತು ಅವನಿಗೆ ಪ್ರೀತಿ ಯಿಂದ ಸಾಂಗವಾಗಿ ಸಕಲ ವೇದಗಳನ್ನು ಉಪದೇಶ ನೀಡಿದನು. ಅವನ ಅನುಗ್ರಹವಿಲ್ಲದೆ ಜ್ಞಾನಿಗಳೂ ಕೂಡ ಯಾರೂ ಅವನನ್ನು ಅರಿಯಲಾರರು. ತನಗೆ ಯಾವ ಪ್ರಯೋಜನವೂ ಇಲ್ಲದೆ, ಭಕ್ತರಿಗಾಗಿ ಪ್ರಪಂಚವನ್ನು ಸೃಜಿಸುತ್ತಾನೆ. ತನ್ನ ಮೂಲರೂಪದಿಂದ ಅವತಾರರೂಪಗಳನ್ನು, ಒಂದು ದೀಪದಿಂದ ಅನೇಕ ದೀಪಗಳನ್ನು ಹೊರಗೆ ತರುವಂತೆ ಅಭಿವ್ಯಕ್ತಿ ಮಾಡುತ್ತಾನೆ. ನೀರಿನಲ್ಲಿ ಸೂರ್ಯನಿಂದ ಪ್ರತಿಬಿಂಬ ಮೂಡುವಂತೆ ಹರಿಯಿಂದ ಅವನ ಪ್ರತಿಬಿಂಬಭೂತರಾದ ಜೀವರು ಜಡಶರೀರಯುಕ್ತರಾಗಿ ಜನಿಸುತ್ತಾರೆ. ಮಣ್ಣಿಂದ ಮಡಿಕೆಯಾಗುವಂತೆ ಪ್ರಕೃತಿಯಿಂದ ಜಡಪ್ರಪಂಚವು ಅವನಿಂದಲೇ ಹುಟ್ಟುತ್ತದೆ. ಈ ಎಲ್ಲಾ ಸೃಷ್ಟಿಗಳೂ ಪಾರಮಾರ್ಥಿಕವೇ ಹೊರತು ಕೇವಲ ಮಾಯೆಯಲ್ಲ. ಸ್ವಸಾಮರ್ಥ್ಯದಿಂದಲೇ ಅವನು ಸತ್ಯವಾದ ಪ್ರಪಂಚವನ್ನು ನಿರ್ಮಿಸುತ್ತಾನೆ. ಅದರಿಂದ ಅವನಿಗೆ ಏನೂ ಪ್ರಯೋಜನವಿಲ್ಲದ್ದರಿಂದಲೆ 'ಮೃಷಾ' 'ಮಿಥ್ಯಾ' ಎನಿಸುತ್ತದೆ. ಸದಾ ಅನಾದಿ ಅನಂತಕಾಲಗಳಲ್ಲಿಯೂ ಅವನು ದೋಷರಹಿತ. ನಿರವಧಿಕ ಜ್ಞಾನಾನಂದಮಯ ಮಂಗಳಸ್ವರೂಪ. ಗುಣಪೂರ್ಣ. ಜೀವಜಡಭಿನ್ನ. ಸರ್ವೋತ್ತಮ. ಅಂಥ ಶ್ರೀವಾಸುದೇವನನ್ನೇ ಸಾಧಕನು ಉಪಾಸನೆ ಮಾಡಬೇಕು.



–೧೪೮–

## ಭಗವಂತನ ಬಗ್ಗೆ ಅನೇಕ ವಾದ ವಿವಾದಗಳಿದ್ದರೂ ಅವನು ಅವೆಲ್ಲಕ್ಕೂ ಅತೀತ

ಯದ್ದರ್ಶನಂ ನಿಗಮ ಆತ್ಮ ರಹಃಪ್ರಕಾಶಂ
ಮುಹ್ಯಂತಿ ಯತ್ರ ಕವಯೋಽಜಪರಾ ಯತಂತಃ ।
ತಂ ಸರ್ವವಾದವಿಷಯಪ್ರತಿರೂಪಶೀಲಂ
ವಂದಾಮಹೇ ಪುರುಷಮಾತ್ಮನಿಗೂಢಬೋಧಂ ॥ (ಭಾ.೧೨.೭.೪೯)

ನನ್ವವಗತಮೇತತ್ಸಾಮಾನ್ಯತೋ ಯದಸ್ಯ ಜಗತೋ ಜನ್ಮಾದಿಕಾರಣಂ ತದ್ಬ್ರಹ್ಮ। ತತ್ರ ಚ ವೇದೋ ಮಾನಮಿತಿ। ವಿಶೇಷತೋ ಬ್ರಹ್ಮಾವಗತಿಸ್ತು ಕುತಃ ಸ್ಯಾತ್। ನ ಚ ವೇದಾತ್ ''ಯತೋ ವಾ'' ಇತ್ಯಾದಿತಃ। ತತ್ರಾಪಿ ಸಾಮಾನ್ಯತ ಏವಾಭಿಧಾನಾತ್। ವೇದವಿಶೇಷಾತ್ತು ಭವೇತ್। ಅತ ಏವ ಹೃದಾ ಬ್ರಹ್ಮ ವೇದಂ ಆದಿಕವಯೇ ವಿಸ್ತೃತ್ಯೋಪದಿದೇಶೇತ್ಯುಕ್ತಂ। ತಥಾಪಿ ಬ್ರಹ್ಮಾದೀನಾಂ ಪರಮಸ್ನೇಹಪಾತ್ರಾಣಾಂ ಯಥಾ ಪರವಸ್ತುಸ್ಥಿತಿಃ ತಥೈವ ತದಿಯತ್ತಾವಗತಿಃ ಕೇಷಾಂಚಿದೇವ ಸ್ಯಾತ್ ನಾಸ್ಮಾಕಂ। ನ ಚ ತೇಷಾಮಪಿ ತದಿಯತ್ತಾನಿರ್ಣಯಾ ಭಾವಃ। ಅತ ಏವ ಮುಹ್ಯಂತಿ ಯಂ ಸೂರಯ ಇತ್ಯುಕ್ತಮಿತಿ ಮಂತವ್ಯಂ। ಬ್ರಹ್ಮಾದಯ ಇತ್ಯವಿಶೇಷಿತತ್ವೇನ ಸೂರಿಪದೇನ ತದತಿರಿಕ್ತಾನಾಂ ಗ್ರಹಣಸಂಭವಾತ್। ಜಗಜನ್ಮಾದಿಕಾರಣಂ ಚ ವಸ್ತು ಕಥಂ ಪ್ರತಿಪತ್ತವ್ಯಂ। ಕಿಮೇಕಮಿತಿ ಕಿಂ ವಾನೇಕಮಿತಿ। ಆದ್ಯೇ ವಿರುದ್ಧಸ್ವಭಾವತ್ವಾದನು ಪಪತ್ತಿಃ।ಸಾತ್ವಿಕಾದೇವ ಪಾಲನಂ ರಾಜಸಾದೇವ ಸರ್ಜನಂ ತಾಮಸಾದೇವ ವಿಲಾಪನಮಿತಿ ವಿರುದ್ಧಸ್ವಭಾವಾ ಹಿ ತೇ। ದ್ವಿತೀಯೇ ವಾ ಪರಸ್ಪರಕಲಹ ಪ್ರಸಂಗೇನ ಜಗಜ್ಜನ್ಮಾದ್ಯನುಪಪತ್ತ್ಯಾ ತತ್ಕಾರಣತ್ವಾನುಪಪತ್ತಿರೇವೇತ್ಯತ ಆಹ॥ **ಯದ್ದರ್ಶನಮಿತಿ॥** ಯಸ್ಯಪ್ರದರ್ಶಕಂ ಯಸ್ಯಾಜ್ಞಾರೂಪಂ ವಾ। ನಿಗಮೋ ವೇದಾದಿಶಾಸ್ತ್ರಂ। ಪರಮಾತ್ಮನೋ ರಹಸ್ಯಸ್ಯಾಪಿ ಯೋಗ್ಯಸ್ಯ ರಹಃಏಕಾಂತೇನೈವ ಅಸ್ಪಷ್ಟವಚನವೃತ್ತ್ಯೈವ ಪ್ರಕಾಶಕಂ ಭವತಿ। ಅನೇನ ವಿಶೇಷತೋಽವಗತಿಃ ಕುತ ಇತ್ಯಸ್ಯೋತ್ತರಮುದಿತಂ ಭವತಿ। ಯತ್ರ ಚ। ಅಜೋ ಬ್ರಹ್ಮಾ ಸ ಏವ ಪರೋಽನ್ತಿಮೋ ಯೇಷಾಂ ತೇ ಕವಯಃ। ಯತಂತೋಽಪಿ ಮುಹ್ಯಂತೀತ್ಯನೇನ ಬ್ರಹ್ಮಾದೀನಾಂ ಪರಮಪ್ರೀತಿಪಾತ್ರಾಣಾಮಪಿ ಇಯತ್ತಾನಿರ್ಣಯೋ ನಾಸ್ತೀತ್ಯುಕ್ತ್ಯಾ ಅಸ್ಮಾಕಮೇವ ನಾಸ್ತೀತಿ ನ ಭ್ರಮಿತವ್ಯಮಿತಿ ದ್ವಿತೀಯಶಂಕಾ ಪರಿಹೃತಾ ಭವತಿ। ತತ್ತದ್ಯೋಗ್ಯತಾಮನುಸೃತ್ಯ ವಿಶೇಷತೋಽವಗತಿಸ್ತು ಬ್ರಹ್ಮಾದೀನಾಮಿವ ಅನ್ಯೇಷಾಮಪಿ ಭವೇದೇವ ಕಾಲೇ ಗುರುವಿಶೇಷಲಾಭೇ ಇತಿ ತಂ ಪುರುಷಂ ವಂದಾಮಹೇ ಇತ್ಯನ್ವಯಃ। ಯದಪ್ಯುಕ್ತಂ ಕಥಂ ಪ್ರತಿಪತ್ತ ವ್ಯಮಿತಿ ತತ್ರೋತ್ತರಂ ಏಕಮಿತಿ। ನನೂಕ್ತಂ ವಿರುದ್ಧಸ್ವಭಾವತ್ವಾದನುಪಪತ್ತಿರಿತಿ ತತ್ರಾಹ॥ **ಸರ್ವವಾದವಿಷಯಪ್ರತಿರೂಪಶೀಲಮಿತಿ॥** ಸರ್ವೇಷಾಂ ವಾದಾನಾಂ ಸಾತ್ತ್ವಿಕಾದೇವ ಪಾಲನಂ ರಾಜಸಾದೇವ ಸರ್ಜನಂ ತಾಮಸಾದೇವ ವಿಲಾಪನಮಿತ್ಯೇವಮಾದೀನಾಂ ವಿಷಯಭೂತಂ ಪ್ರತಿರೂಪಂ ಶೀಲಂ ಆಚರಣಮೇವ ಯಸ್ಯ ತಮಿತಿ। ಯತ್ಸರ್ವವಾದವಿಷಯಭೂತಂ ಪಾಲನಾದಿಕ ಮಾಚರಣಂ ಸತ್ವಾದಿಗುಣಸಧ್ರೀಚೀನಂ। ತದೇವ ವಿರುದ್ಧಂ ಅತ ಏವ

**ಭಿನ್ನಕಾಲೀನಂ ನ ತು ತದ್ವಸ್ತು ವಿರುದ್ಧಸ್ವಭಾವಮಿತಿ । ಸತ್ತ್ವಾದಿಗುಣಾನಾಮೇವ ಪಾಲನಾದಿರೂಪವಿರುದ್ಧಕಾರ್ಯಕಾರಿತಯಾ ತದುಪಾದಾನಪೂರ್ವಕಂ ಜಗತ್ಪಾಲನಾದಿಕರ್ತಾಪಿ ವಿರುದ್ಧಶೀಲ ಇತಿ ಭಾವಃ । ಕಸ್ತರ್ಹಿ ತತ್ಸ್ವಭಾವಃ ಇತ್ಯತ ಉಕ್ತಂ ಆತ್ಮನಿಗೂಢಬೋಧಮಿತಿ । ಬೋಧಪದಂ ಅನ್ಯೋಽಪಲಕ್ಷಕಂ । ಆತ್ಮಾ ಸ್ವಭಾವಭೂತೋ ನಿತರಾಂ ಗೂಹಿತೋ ಬೋಧಾದಿರ್ಯಸ್ಯ ತಮಿತಿ । ಜ್ಞಾನಾನಂದಾದಿಸ್ವಭಾವಮಿತ್ಯರ್ಥಃ । ಇದಮುದಿತಂ ಭವತಿ— ಜ್ಞಾನಾನಂದಾದಿ ಸ್ವಭಾವಂ ಬ್ರಹ್ಮ ಸತ್ತ್ವಾದಿಗುಣಮುಪಾದಾಯ ಸಾತ್ತ್ವಿಕಾದಿರಿತ್ಯುಚ್ಯತೇ । ನ ತು ಸಾತ್ತ್ವಿಕಾದಿಕಂ ತತ್ಸ್ವಭಾವ ಇತಿ । ಅತೋ ನ ತದನುಪಪತ್ತಿರಿತಿ । ವಕ್ಷ್ಯತೇ ಚೈತದನುಪದಮೇವೇತಿ ॥**



**ಮಾರ್ಕಂಡೇಯಮುನಿ ನರನಾರಾಯಣರನ್ನು ನಮಿಸುತ್ತಾರೆ— ಪರಮಾತ್ಮ ತತ್ವವನ್ನು ಬಹ್ವರ್ಥಗರ್ಭಿತವಾಗಿ ಪ್ರಕಾಶಗೊಳಿಸಬಲ್ಲ ಜ್ಞಾನವು ತತ್ವನಿರ್ಣಾಯಕವಾದ ವೇದದಲ್ಲಿ ಮಾತ್ರ ಲಭ್ಯವಾಗಿದೆ. ಬ್ರಹ್ಮಾದಿಗಳು ಜ್ಞಾನಿಗಳು ವಿಷ್ಣುವಿಗೆ ಪರಮಪ್ರಿಯರು ಅವರಂತೆ ನಾವು ಉಪಾಸನೆಗೆ ಯತ್ನಿಸುತ್ತಿದ್ದರೂ ಯಾರೂಕೂಡ ಪರಮಾತ್ಮ ತತ್ವರಹಸ್ಯವಿಷಯದಲ್ಲಿ 'ಇದಮಿತ್ಥಂ' ಎಂದು ತಿಳಿಯಲೂ ಉಪದೇಶಿಸಲೂ ಕೂಡ ಶಕ್ತರಾಗುತ್ತಿಲ್ಲ. ಎಲ್ಲ ವಾದವಿವಾದ ಗೋಚರ ಪರಸ್ಪರ ವಿಲಕ್ಷಣವಾದ ವ್ಯಾಪಾರದವನು ಅವನು. ಜ್ಞಾನಾನಂದಾದಿ ಕಲ್ಯಾಣ ಗುಣಗಳೇ ಅವನ ನಿಜವಾದ ನಿಗೂಢ ಸ್ವಭಾವವಾಗಿವೆ.**

'ಜನ್ಮಾದ್ಯಸ್ಯ ಯತೋಽನ್ವಯಾದ್' ಎಂಬ ಶ್ಲೋಕದಲ್ಲಿ ಜಗಜ್ಜನ್ಮಾದಿ ಕಾರಣವಾದ ವಸ್ತುವನ್ನು ಭಾಗವತವು ಹೇಳಿದಾಗ ಅದರ ಮೇಲೆ ಅನೇಕ ಜಿಜ್ಞಾಸೆಗಳು ಉಂಟಾಗುತ್ತವೆ. ಆ ವಸ್ತು ಒಂದೆಯೊ ಅನೇಕವೊ? ಒಂದೇ ಎಂದರೆ, ಸೃಷ್ಟಿ ಲಯಾದಿ ವಿರುದ್ಧ ಕಾರ್ಯಗಳು ಒಂದು ವಸ್ತುವಿನಿಂದ ಹೇಗೆ ಉಂಟಾಗುವುವು? ಸಾತ್ವಿಕದಿಂದ ಪಾಲನೆ, ರಾಜಸದಿಂದ ಸೃಷ್ಟಿ, ತಾಮಸದಿಂದ ಲಯ ಎಂದು ಬೇರೆ ಬೇರೆ ವಸ್ತುಗಳಿಂದಲೇ ಬೇರೆಬೇರೆ ಕಾರ್ಯಗಳು ಶಕ್ಯತಾನೆ? ಆ ವಸ್ತು ಅನೇಕವೆಂದರೆ ವಿರುದ್ಧಕಾರ್ಯಕಾರಿಯಾದ ಅನೇಕ ವಸ್ತುಗಳಿದ್ದರೆ ಅವುಗಳಲ್ಲಿ ಪರಸ್ಪರ ಕಲಹ ಅನಿವಾರ್ಯವಾಗುವುದು.

ಈ ಪ್ರಶ್ನೆಗೆ ನಾವು ಜನ್ಮಾದಿಕಾರಣ ವಸ್ತುವಿರುವುದು ಒಂದೆ.

ಶ್ರೀವಾಸುದೇವನೊಬ್ಬನೆ ಜನ್ಮಾದಿಸರ್ವಕರ್ತ ಎಂದು ಉತ್ತರ ನೀಡಬೇಕು. ಒಬ್ಬನಿಂದಲೇ ವಿರುದ್ಧಕಾರ್ಯಗಳು ಹೇಗೆ ಎಂದರೆ, ಅವನೊಬ್ಬನಿಂದಲೇ ಸತ್ವ ರಜ ತಮ ರೂಪ ಅನೇಕ ಗುಣಗಳಿಂದ ಪಾಲನ ಸೃಷ್ಟಿ ಲಯಗಳೆಂಬ ವಿರುದ್ಧ ಅನೇಕಕಾರ್ಯಗಳು, ಬೇರೆಬೇರೆ ಕಾಲಗಳಲ್ಲಿ ಉಂಟಾಗಬಹುದು ಎಂದು ಉತ್ತರ.

ಈ ವಿರುದ್ಧ ಗುಣಗಳೂ ಅವನ ಸ್ವರೂಪಭೂತವಲ್ಲ. ಪ್ರಕೃತಿಯ ಗುಣಗಳು. ಅವುಗಳನ್ನು ಉಪಾದಾನವಾಗಿ ಬಳಸಿಕೊಂಡು ಬೇರೆಬೇರೆ ಕಾಲ ಗಳಲ್ಲಿ ಬೇರೆಬೇರೆ ಕಾರ್ಯ ಮಾಡುವಲ್ಲಿ ಅನುಪಪತ್ತಿ ಏನಿಲ್ಲ.

ಅವನ ನಿಜವಾದ ಸ್ವಭಾವಭೂತಗುಣ ಏನೆಂದರೆ ಅದು ಜ್ಞಾನಾನಂದಾದಿ ಕಲ್ಯಾಣಗುಣ. ಬ್ರಹ್ಮಾದಿಗಳೂ ಕೂಡ ಶ್ರೀವಾಸುದೇವ ತತ್ವವನ್ನು ವಿಶೇಷವಾಗಿ ಪೂರ್ಣವಾಗಿ ಇದಮಿತ್ಥಂ ಎಂದು ತಿಳಿಯಲಾರರು ನಿಜ. ಆದರೂ ಅವರವರ ಯೋಗ್ಯತಾನುಸಾರ ಅವರೂ ತಿಳಿಯಬಲ್ಲರು. ಅವರ ಅನುಗ್ರಹದಿಂದ ನಮಗೂ ಕೂಡ ನಿಯತಗುರುಗಳು ಲಭಿಸಿದಾಗ ನಮ್ಮ ಯೋಗ್ಯತಾನುಸಾರ ನಮಗೂ ಜ್ಞಾನಲಾಭ ಉಂಟು.



–೧೪೯–

**ಒಬ್ಬನೆ ಭಗವಂತ, ಬೇರೆಬೇರೆ ನಾಮಗಳಿಂದ ಭಕ್ತರು ಆರಾಧಿಸುತ್ತಿದ್ದಾರೆ**

**ತ್ವಾಂ ಬ್ರಹ್ಮ ಕೇಚಿದವಯಂತ್ಯುತ ಧರ್ಮಮೇಕೇ**
**ಏಕೇ ಪರಂ ಸದಸತೋಃ ಪುರುಷಂ ಪರೇಶಂ ।**
**ಅನ್ಯೇ ವದಂತಿ ನವಶಕ್ತಿಯುತಂ ಪರಂ ತ್ವಾಂ**
**ಕೇಚಿನ್ಮಹಾಪುರುಷಮವ್ಯಯಮಾತ್ಮತಂತ್ರಂ ॥**

(ಭಾ.೮.೧೧.೮)

ನನು ಜಗತ್ಕಾರಣಮೇಕಮೇವ ಪ್ರತಿಪತ್ತವ್ಯಮಿತ್ಯಭಿಹಿತಂ ತತ್ರ ಚ ನಾಸ್ಮಾಕಂ ಮನಃ ಸ್ಥೈರ್ಯಮವಲಂಬತೇ । ಯತಃ ಕೇಚಿಜ್ಜಗತ್ಕಾರಣಂ ಬ್ರಹ್ಮೇತಿ ವದಂತಿ ವೇದಾಂತಿವ್ಯಪದೇಶಾಃ । ಪುನಃ ಕೇಚಿನ್ನಾದಮೇವ । **ಯಥಾಹುಃ**—

''ಸಮಾಹಿತಾತ್ಮನೋ ಬ್ರಹ್ಮನ್ಬ್ರಹ್ಮಣಃ ಪರಮೇಷ್ಠಿನಃ ।
ಹೃದ್ಯಾಕಾಶಾದ ಭೂನ್ನಾದೋ ವೃತ್ತಿರೋಧಾದ್ವಿಭಾವ್ಯತೇ ॥

ಯದುಪಾಸನಯಾ ಬ್ರಹ್ಮನ್ಯೋಗಿನೋ ಮಲಮಾತ್ಮನಃ ।
ದ್ರವ್ಯಕ್ರಿಯಾಕಾರಕಾಖ್ಯಂ ಧೂತ್ವಾ ಯಾಂತ್ಯಪುನರ್ಭವಮಿ''ತಿ ॥

ಏಕೇ ಪುನಃ ಮೀಮಾಂಸಕಾಭಿಮತಾಃ ಧರ್ಮಂ ಪುನರೇಕೇ ಪುರುಷಂ ಸದಸತೋಃ ಪರಂ ಪುಂಸವರ್ೋತ್ತಮತ್ವಾಭಿಮಾನಿನಃ । ಅನ್ಯೇ ತ್ವನ್ಯಂ ನವಭಿಃ ಶಕ್ತಿಭಿರ್ಯುತಂ ಪಾಂಚರಾತ್ರಿಕಾಃ । ಪುನಃ ಕೇಚಿದ್ಯೋಗಿನೋ ಮಹಾಪುರುಷಮಿತಿ । ಇತ್ಯತ ಏಕಮೇವ ವಸ್ತು ತೈಸ್ತೈಸ್ತಥಾ ತಥಾ ಭಾಷ್ಯತೇ ನ ವಸ್ತುನಿ ಭೇದ ಇತ್ಯಾಶಯವಾನಾಹ ॥ **ತ್ವಾಮಿತಿ** ॥ ಅವಯಂತಿ ಜಾನಂತಿ । ವದಂತಿ ಚ ತೇನ ನಾಮ್ನಾ । ಉತ ಮತಾಂತರೇ । **ಯಥಾಹುಃ**—

''ತ್ವಾಂ ಯೋಗಿನೋ ಯಜಂತ್ಯದ್ಧಾ ಮಹಾಪುರುಷಮೀಶ್ವರಂ ।
ಸಾಧ್ಯಾತ್ಮಂ ಸಾಧಿಭೂತಂ ಚ ಸಾಧಿದೈವಂ ಚ ಸಾಧವಃ ॥

ಅನ್ಯೇ ತು ಸಂಸ್ಕೃತಾತ್ಮಾನೋ ವಿಧಿನಾ ವಿಹಿತೇನ ವೈ ।
ಯಜಂತಿ ತನ್ಮಯಾಸ್ತ್ವಾಂ ವೈ ಬಹುಮೂರ್ತ್ಯೇಕ ಮೂರ್ತಿಕಂ ॥

ತ್ವಾಮೇವಾನ್ಯೇ ಶಿವೋಕ್ತೇನ ಮಾರ್ಗೇಣ ಶಿವರೂಪಿಣಂ ।
ಬಹ್ವಾಚಾರ್ಯವಿಭೇದೇನ ಭಗವಂತಮುಪಾಸತೇ ॥

ಸರ್ವ ಏವ ಯಜಂತಿ ತ್ವಾಂ ಸರ್ವದೇವಮಹೇಶ್ವರಂ ।
ಯೇಽಪ್ಯನ್ಯದೇವತಾ ಭಕ್ತಾ ಯದ್ಯಪ್ಯನ್ಯಧಿಯಃ ಪ್ರಭೋ ॥

ಯಥಾದ್ರಿಪ್ರಭವಾ ನದ್ಯಃ ಪರ್ಜನ್ಯಾಪೂರಿತಾ ವಿಭೋ ।
ವಿಶಂತಿ ಸರ್ವತಃ ಸಿಂಧುಂ ತದ್ವತ್ತ್ವಾಂ ಗತಯೋಽನ್ತತಃ' ॥ ಇತಿ ॥



ದೇವತೆಗಳಿಗೆ ಅಮೃತವನ್ನುಣಿಸಿದ ಶ್ರೀಹರಿಯ ಮುಂದೆ ಶಿವನು ನುಡಿದ. ವೇದಾಂತಿಗಳು ನಿನ್ನನ್ನು 'ಬ್ರಹ್ಮ' ಎಂದು ತಿಳಿಯುತ್ತಾರೆ. ಸ್ಮೃತಿಕಾರರು 'ಧರ್ಮ' ಎನ್ನುತ್ತಾರೆ. ಪೌರಾಣಿಕರು ಕಾರ್ಯಕಾರಣಗಳಿಂದ ಬೇರೆಯಾದ ಪರಮೇಶ್ವರ ಪರಮಪುರುಷ ಎಂದು. ಪಾಂಚರಾತ್ರಿಕರು ವಿಮಲಾದಿ ನವಶಕ್ತಿಯುತನಾದ ಪರಮಾತ್ಮ ಎಂದು. ಏಕಾಂತಭಕ್ತರು ಮಹಾಪುರುಷ ಅವ್ಯಯ ಸ್ವತಂತ್ರ ಎಂದು ತಿಳಿಯುತ್ತಾರೆ.

'ಜನ್ಮಾದ್ಯಸ್ಯಯತಃ' ಎಂದು ಭಾಗವತವು ಸಾಮಾನ್ಯವಾಗಿ ಹೇಳಿದ ಜಗತ್‌ಕಾರಣಕ್ಕೆ ವೇದವೇ ಪ್ರಮಾಣ, ಆದರೆ,

ಯತೋ ವಾ ಇಮಾನಿ ಭೂತಾನಿ ಜಾಯಂತೇ
ತದ್ ವಿಜಿಜ್ಞಾಸಸ್ವ ತದ್ ಬ್ರಹ್ಮ'

ಸೃಷ್ಟಿ ಸ್ಥಿತಿ ಸಂಹಾರ ನಿಯಮನ ಜ್ಞಾನ ಅಜ್ಞಾನ ಬಂಧ ಮೋಕ್ಷ ಎಂದು. ಜಗತ್ತಿಗೆ ಎಂಟು ಕಾರ್ಯಗಳನ್ನು ಮಾಡುವವನು ಬ್ರಹ್ಮ ಎಂದು ಸಾಮಾನ್ಯ ವಾಗಿಯೇ ವೇದವು ಹೇಳುತ್ತದೆ. ವಿಶೇಷವಾಗಿ ಆ ಬ್ರಹ್ಮ ಏಕವೊ ಅನೇಕವೊ ಎಂಬುದು ಸ್ಪಷ್ಟವಾಗಿಲ್ಲ. ಏಕವೆಂದೇ ಒಪ್ಪಿದರೂ ಅದನ್ನು ವೇದಾಂತಿಗಳು ಬ್ರಹ್ಮ ಎನ್ನುತ್ತಾರೆ. ನಾದವೇ ಜಗತ್ಕಾರಣ ಎನ್ನುತ್ತಾರೆ ಕೆಲವರು—

ಸಮಾಹಿತಾತ್ಮನೋ ಬ್ರಹ್ಮನ್ ಬ್ರಹ್ಮಣಃ ಪರಮೇಷ್ಠಿನಃ ।
ಹೃದಾಕಾಶಾದಭೂನ್ನಾದೋ ವೃತ್ತಿರೋಧಾದ್ ವಿಭಾವ್ಯತೇ ।
ಯದುಪಾಸನಯಾ ಬ್ರಹ್ಮನ್ ಯೋಗಿನೋ ಮಲಮಾತ್ಮನಃ ।
ದ್ರವ್ಯಕ್ರಿಯಾ ಕಾರಕಾಖ್ಯಂ ಧೂತ್ವಾ ಯಾಂತ್ಯಪುನರ್ಭವಂ ॥

(ಭಾ.೧೨.೬.೨,೩)

'ಹಿಂದೆ ಚತುರ್ಮುಖ ಬ್ರಹ್ಮದೇವರು ಮನಸಿನಲ್ಲಿ ಧ್ಯಾನ ಮಾಡುತ್ತಿದ್ದಾಗ ಅವರ ಹೃದಯಾಕಾಶದಿಂದ ಒಂದು ಧ್ವನಿ ಹೊರಟಿತು. 'ವೃತ್ತಿರೋಧ'ದಿಂದ ಅಂದರೆ ಇಂದ್ರಿಯವ್ಯಾಪಾರ ನಿರೋಧರೂಪ ಪ್ರತ್ಯಾಹಾರದಿಂದ ಮತ್ತು ಪ್ರಾಣವ್ಯಾಪಾರನಿರೋಧರೂಪ ಪ್ರಾಣಾಯಾಮದಿಂದ ಯೋಗಿಗಳು ಈ ಧ್ವನಿಯನ್ನು ಕಂಡುಕೊಳ್ಳುತ್ತಾರೆ—

'ಆ ಧ್ವನಿಯ ಉಪಾಸನೆಯಿಂದ ಯೋಗಿಗಳು 'ದ್ರವ್ಯ' ದೇಹ, 'ಕ್ರಿಯಾ' ಕರ್ಮೇಂದ್ರಿಯ, 'ಕಾರಕ'ಜ್ಞಾನೇಂದ್ರಿಯಗಳಿಂದಾಗುವ 'ಆತ್ಮಮಲ'ವನ್ನು ಮನೋಮಲವನ್ನು ತೊಳೆದುಕೊಂಡು ಮೋಕ್ಷವನ್ನು ಪಡೆಯುತ್ತಾರೆ'.

ಹೀಗೆ ಬ್ರಹ್ಮದೇವರು ಹುಟ್ಟಿಸಿದ ಘಂಟಾನಾದ ಸದೃಶವಾದ ಓಂಕಾರ ಧ್ವನಿಯು ಯೋಗಿಗಳಿಗೆ ಮೋಕ್ಷ ಸ್ವರ್ಗ ಮುಂತಾದ ಸಕಲ ಪುರುಷಾರ್ಥಕಾರಣ ವಾಯಿತೆಂದು ಭಾಗವತ ಹೇಳುತ್ತಿದೆ.

ಮೀಮಾಂಸಕರು 'ಅಥಾತೋ ಧರ್ಮಜಿಜ್ಞಾಸಾ' ಎನ್ನುತ್ತ ಧರ್ಮವೇ ಜಗತ್ಕಾರಣ ಎನ್ನುತ್ತಾರೆ.

ಪೌರಾಣಿಕರು ಪರೇಶನಾದ ನಿನ್ನನ್ನು ಕಾರ್ಯಕಾರಣ ವಿಲಕ್ಷಣನಾದ ಪರಮಪುರುಷನೆಂದು ಹೇಳುವರು.

ಅಕ್ರೂರಕೃತ ವಿಷ್ಣುಸ್ತುತಿ—

ತ್ವಾಂ ಯೋಗಿನೋ ಯಜಂತ್ಯದ್ಧಾ ಮಹಾಪುರುಷಮೀಶ್ವರಂ ।
ಸಾಧ್ಯಾತ್ಮಂ ಸಾಧಿಭೂತಂ ಚ ಸಾಧಿದೈವಂ ಚ ಸಾಧವಃ ॥

(ಭಾ.೧೦.೩೮.೫)

'ಸಾಧ್ಯಾತ್ಮ' ಅಧಿಕಶ್ರೇಷ್ಠವಾದ ಜೀವಾತ್ಮನಿಷ್ಠ ಭಗವದ್ರೂಪಯುಕ್ತನೂ 'ಸಾಧಿಭೂತ' ಅಧಿಕಶ್ರೇಷ್ಠ ಪಂಚಭೂತನಿಷ್ಠರೂಪಯುಕ್ತನೂ 'ಸಾಧಿದೈವ' ಅಧಿಕಶ್ರೇಷ್ಠ ಬ್ರಹ್ಮಾದಿ ದೇವಾಂತರ್ಗತರೂಪಯುಕ್ತನೂ ಆಗಿರುವ ಮಹಾ ಪುರುಷ ಜಗದೀಶ್ವರನಾದ ನಿನ್ನನ್ನು ಜ್ಞಾನಯೋಗಿಗಳು ಆರಾಧಿಸುತ್ತಾರೆ.

ಅನ್ಯೇತು ಸಂಸ್ಕೃತಾತ್ಮಾನೋ ವಿಧಿನಾ ವಿಹಿತೇನ ವೈ ।
ಯಜಂತಿ ತನ್ಮಯಾಸ್ತ್ವಾಂ ವೈ ಬಹುಮೂರ್ತ್ಯೇಕಮೂರ್ತಿಕಂ ॥

ಇನ್ನು ಕೆಲವರು ಪಂಚರಾತ್ರ ವಿಧಿಯಿಂದ, ತಾಪ ಪುಂಡ್ರ ನಾಮ ಮಂತ್ರ ಯಾಗ ಎಂದು ಪಂಚಸಂಸ್ಕಾರಯುಕ್ತವಾದ ಶರೀರ ಮನಸ್ಸುಗಳಿಂದ ನವನಾರೀ ಕುಂಜರದಂತೆ ಬಹುಮೂರ್ತಿ ರೂಪವಾದ ಏಕಮೂರ್ತಿಉಳ್ಳ ನಿನ್ನನ್ನು ಆರಾಧಿಸುತ್ತಾರೆ ಎಂದು ಅಕ್ರೂರನು ಸ್ತುತಿಸುತ್ತಾನೆ. (ಭಾ.೧೦.೩೮.೮)

'ತ್ವಾಮೇವಾನ್ಯೇ ಶಿವೋಕ್ತೇನ ಮಾರ್ಗೇಣ ಶಿವರೂಪಿಣಂ ।
ಬಹ್ವಾಚಾರ್ಯ ವಿಭೇದೇನ ಭಗವನ್ ಸಮುಪಾಸತೇ ॥'

'ಭಗವಂತನೆ, ಕೆಲವರು ಶೈವಾಗಮ ವಿಧಾನದಿಂದ ಶಿವದಧೀಚಾದಿ ಅನೇಕ ಆಚಾರ್ಯರ ಉಪದೇಶದಿಂದ ಶಿವಾಂತರ್ಗತನಾದ ನಿನ್ನನ್ನೇ ಉಪಾಸನೆ ಮಾಡುತ್ತಾರೆ'.

'ಸರ್ವಏವ ಯಜಂತಿ ತ್ವಾಂ ಸರ್ವದೇವ ಮಹೇಶ್ವರಂ ।
ಯೇಽಪ್ಯನ್ಯದೇವತಾ ಭಕ್ತಾ ಯದ್ಯಪ್ಯನ್ಯ ಧಿಯಃ ಪ್ರಭೋ ॥'

'ಪ್ರಭು, ಅನ್ಯ ದೇವತಾರಾಧಕರೂ ವಸ್ತುತಃ ಸರ್ವದೇವ ಪ್ರಭುವಾದ ನಿನ್ನನ್ನೇ ಆರಾಧಿಸುತ್ತಾರೆ. ಅನ್ಯದೇವತೆಗಳೇ ಆರಾಧ್ಯರೆಂದು ತಪ್ಪಾಗಿ ಭಾವಿಸುತ್ತಾರೆ. ವಸ್ತುತಃ ಸರ್ವಯಜ್ಞಭೋಕ್ತನು ನೀನೆ'.

ಯಥಾದ್ರಿಪ್ರಭವಾ ನದ್ಯಃ ಪರ್ಜನ್ಯಾಪೂರಿತಾ ವಿಭೋ ।
ವಿಶಂತಿ ಸರ್ವತಃ ಸಿಂಧುಂ ತದ್ವತ್ತ್ವಾಂ ಗತಯೋಽಂತತಃ ॥

'ಆಕಾಶಾತ್ ಪತಿತಂ ತೋಯಂ ಯಥಾ ಗಚ್ಛತಿ ಸಾಗರಂ' ಎಂಬಂತೆ ಎಲ್ಲ ಆರಾಧನೆಗಳೂ ಎಲ್ಲ ಶಾಸ್ತ್ರವಚನಗಳೂ ಎಲ್ಲ ದೇವತಾನಾಮಗಳೂ ನಿನಗೇ ಸಲ್ಲುತ್ತವೆ' ಎಂದು ಅಕ್ರೂರನು ಸ್ತುತಿಸುತ್ತಾನೆ. (ಭಾ.೧೦.೪೦.೯,೧೦,೧೧)

ಜಗಜ್ಜನ್ಮಾದಿಕಾರಣನು ಶ್ರೀಹರಿಯೊಬ್ಬನೆ. ಎಲ್ಲರೂ ತಮತಮಗೆ ತೋರಿದಂತೆ ಬೇರೆಬೇರೆ ರೀತಿಯಿಂದ ಆರಾಧನೆ ಮಾಡುತ್ತಾರೆ.



–೧೫೦–

## ಒಂದೊಂದು ರೂಪದಿಂದ ಒಂದೊಂದು ಕಾರ್ಯ ಮಾಡುತ್ತಾನೆ ಭಗವಂತ

**ಹಿರಣ್ಯಗರ್ಭತ್ವಮುಪೇತ್ಯ ಮೂಲೇ**
**ಸೃಜಸ್ಯಶೇಷಂ ಭುವನಂ ಸ ಏವ ।**
**ನಾರಾಯಣಾತ್ಮನ್ ಪರಿಪಾಸಿ ಭೂಯೋ**
**ಜಹಾರ ಚಾಂತೇ ಭಗವನ್ ಶಿವಾತ್ಮನಾ ॥**

(ಭಾ.೧೦.೫೩.೧೫)

**ಯದ್ಯೇಕಮೇವ ವಸ್ತು ಜಗಜ್ಜನ್ಮಾದಿಕಾರಣಂ ತರ್ಹಿ ಹಿರಣ್ಯಗರ್ಭಃ ಸ್ರಷ್ಟಾ ನಾರಾಯಣಃ ಪಾತಾ ಶಿವಃ ಸಂಹರ್ತೇತಿ ವಿಶಿಷ್ಯ ಕಥನಂ ಕಥಮಿತ್ಯತೋ ರೂಪವಿಶೇಷವಿವಕ್ಷಯೇತಿ ಭಾವೇನಾಹ ॥ ಹಿರಣ್ಯಗರ್ಭತ್ವಮಿತಿ ॥ ಹೇ ಭಗವನ್ । ಮೂಲೇ ಆದೌ । ಹಿರಣ್ಯಗರ್ಭನಾಮಕಂ ರೂಪಂ ಗೃಹೀತ್ವಾ, ತಂ ನಿಮಿತ್ತೀಕೃತ್ಯ ಅಶೇಷಮಪಿ ಭುವನಂ ಯಃ ಸೃಜಸಿ । ಸ ಏವ ನಾರಾಯಣಾಖ್ಯೇನ ರೂಪೇಣ ಪುನಃ ಪುನಃ ಪ್ರಾಪ್ತೋಪದ್ರವಂ ಪರಿಹೃತ್ಯ ಅನ್ನಾದಿದಾನೇನ ಚ ಮಧ್ಯೇ ಪಾಲಯಸಿ । ಸ ಏವ ಶಿವಾಖ್ಯೇನ ರೂಪೇಣ ತಂ ದ್ವಾರೀಕೃತ್ಯ ಅಂತೇ ಜಹಾರ ಸಂಹರಸಿ ಚ ॥**



ಗೋಮಂತಪರ್ವತದಲ್ಲಿ ಗರುಡನು ಶ್ರೀಕೃಷ್ಣನನ್ನು ಸ್ತುತಿಸುತ್ತಾನೆ— 'ಸೃಷ್ಟಿಯ ಆದಿಯಲ್ಲಿ ನೀನು ಬ್ರಹ್ಮಾಂತರ್ಗತನಾಗಿ ಪರಮ ಮುಖ್ಯವಾಗಿ ಬ್ರಹ್ಮನ ನಾಮಗಳನ್ನು ಧರಿಸಿ ಸಮಸ್ತ ಜಗತ್ತನ್ನು ಸೃಜಿಸುವಿ. ನಾರಾಯಣನಾಗಿ ಪಾಲನ ಮಾಡುವಿ. ರುದ್ರಾಂತರ್ಗತನಾಗಿ ಪರಮ ಮುಖ್ಯವಾಗಿ ರುದ್ರನಾಮ ಗಳನ್ನು ಧರಿಸಿ ಕೊನೆಯಲ್ಲಿ ಸಂಹಾರವನ್ನೂ ಮಾಡುವಿ'.



—೧೫೧—

**ಒಂದೊಂದು ರೂಪದಿಂದ ಒಂದೊಂದು**
**ಬಗೆಯ ಆರಾಧನೆ ಸ್ವೀಕರಿಸುತ್ತಾನೆ ಭಗವಂತ**

ಯಶ್ಚಿಂತ್ಯತೇ ಪ್ರಯತ ಪಾಣಿಭಿರಧ್ವರಾಗ್ನೌ
ತ್ರಯ್ಯಾ ನಿರುಕ್ತವಿಧಿನಾ ಸ್ವಹವಿರ್ಗೃಹೀತ್ವಾ ।
ಅಧ್ಯಾತ್ಮಯೋಗ ಉತ ಯೋಗಿಭಿರಾತ್ಮಮಾಯಾ
ಜಿಜ್ಞಾಸುಭಿಃ ಪರಮ ಭಾಗವತೈಃ ಪರೀಷ್ಟಃ ॥ (ಭಾ.೧೧.೬.೧೧)

ನನು ಯೋಗಿನಸ್ತಾವದ್ವಿವಿಧಾಃ। ಕರ್ಮಯೋಗಿನೋ ಜ್ಞಾನಯೋಗಿ ನಶ್ಚೇತಿ। ತತ್ರಾದ್ಯೈರ್ಯಜ್ಞಾದಿಕರ್ಮಣ್ಯಗ್ನಾವಧಿಷ್ಠಾನಭೂತೇ ''ಚತ್ವಾರಿ ಶೃಂಗೇ' ತ್ಯಾದಿಮಂತ್ರೋದಿತೋ ದೇವತಾವಿಶೇಷಶ್ಚಿಂತ್ಯತೇ। ದ್ವಿತೀಯೈಸ್ತು ಜ್ಞಾನಯಜ್ಞಾಖ್ಯೇ ಕರ್ಮಣಿ ಬಾಹ್ಯೇ ಮಾನಸೇ ವಾ ಪ್ರತಿಮಾದಾವಧಿಷ್ಠಾನೇ ''ಚತುರ್ಭುಜ''ಮಿತ್ಯಾದ್ಯುದಿತೋಽಪರ ಇತಿ ಕಥಮೇಕಮೇವ ಪ್ರತಿಪತ್ತವ್ಯ-ಮಿತ್ಯತಃ ಪೂರ್ವೋಕ್ತಂ ಮಾ ವಿಸ್ಮಾರ್ಷೀರಿತ್ಯಾಹ ॥ ಯಶ್ಚಿಂತ್ಯತ ಇತಿ ॥ ತ್ರಯ್ಯಾ ಶ್ರುತ್ಯಾ। ನಿರುಕ್ತೇನ ವಿಧಿನಾ। ಸ್ವಹವಿರ್ಗೃಹೀತ್ವಾ। ಪ್ರಯತಪಾಣಿಭಿಃ ಯತ್ನೇನೋದ್ಧೃತಹಸ್ತೈರ್ಯಾಜಕೈಃ। ಅಧ್ವರಾಗ್ನೌ ಸಂಸ್ಕೃತೇ ವಹ್ನೌ। ''ಚತ್ವಾರಿ ಶೃಂಗೇ'' ತ್ಯಾದಿವೇದೋಕ್ತಪ್ರಕಾರೇಣ ಯಶ್ಚಿಂತ್ಯತೇ। ಯೋಗಿಭಿರುತ ಯೋಗಿಭಿಶ್ಚ। ಅಧ್ಯಾತ್ಮಯೋಗೇ ಜ್ಞಾನಯಜ್ಞೇ। ಯಃ ಪರೀಷ್ಟಃ ಸಮ್ಯಕ್ಪೂಜಿತಃ। ತಸ್ಯ ತವೇತಿ ಪೂರ್ವೇಣಾನ್ವಯಃ। ಉಭಯಯೋಗಿಭಿರಪ್ಯೇಕ ಏವ ಧ್ಯೇಯಃ ಪೂಜ್ಯಶ್ಚೇತಿ ಭಾವಃ। **ಯಥಾಹುಃ—**

''ತ್ರಯ್ಯಾ ಚ ವಿದ್ಯಯಾ ಕೇಚಿತ್ತ್ವಾಂ ವೈ ವೈತಾನಿಕಾ ದ್ವಿಜಾಃ।
ಯಜಂತೇ ವಿತತೈರ್ಯಜ್ಞೈರ್ನಾನಾಭೂತಾಮರಾಖ್ಯಯಾ ॥

**ಏಕೇ ತ್ವಖಿಲಕರ್ಮಾಣಿ ಸಂನ್ಯಸ್ಯೋಪಶಮಂ ಗತಾಃ ।**
**ಜ್ಞಾನಿನೋ ಜ್ಞಾನಯಜ್ಞೇನ ಯಜಂತಿ ಜ್ಞಾನವಿಗ್ರಹಮಿ''ತಿ ॥**



**ಕೃಷ್ಣನನ್ನು 'ಪರಂಧಾಮಕ್ಕೆ ಹಿಂತಿರುಗೆಂ'ದು ದೇವತೆಗಳು ಪ್ರಾರ್ಥಿಸುತ್ತಾರೆ— 'ಮೂರು ವೇದಗಳಲ್ಲಿ ಹೇಳಿದ ವಿಧಾನದಿಂದ ಯಜ್ಞಮಾಡುವ ಕರ್ಮಯೋಗಿ ಭಕ್ತರು ನಿನಗೆ ಹವಿಸ್ಸನ್ನು ಪ್ರಯತ್ನಪೂರ್ವಕವಾಗಿ ಕೈಯಲ್ಲಿ ಹಿಡಿದು ಅಗ್ನಿಯಲ್ಲಿ ನಿನ್ನನ್ನು ಧ್ಯಾನಿಸುತ್ತಾರೆ. ಮತ್ತು ನಿನ್ನ ಬಂಧಕಶಕ್ತಿಯನ್ನು ಅರಿಯಲು ಬಯಸುವ ಪರಮಭಾಗವತರಾದ ಜ್ಞಾನಯೋಗಿಗಳು ಕೂಡ ಧ್ಯಾನಕಾಲದಲ್ಲಿ ಹೃದಯದಲ್ಲಿ ವ್ಯಕ್ತವಾಗುವ ನಿನ್ನ ಪಾದವನ್ನೇ ಚಿಂತಿಸುತ್ತಾರೆ. ಪೂಜಿಸುತ್ತಾರೆ. ಜ್ಞಾನಯೋಗಿ ಗಳಿರಲಿ ಕರ್ಮಯೋಗಿಗಳಿರಲಿ ಇಬ್ಬರೂ ಧ್ಯಾನಿಸುವುದು ಒಬ್ಬ ಹರಿಯನ್ನೇ, ನಿನ್ನನ್ನೆ.**

ತ್ರಯ್ಯಾ ಚ ವಿದ್ಯಯಾ ಕೇಚಿತ್ ತ್ವಾಂ ವೈ ವೈತಾನಿಕಾ ದ್ವಿಜಾಃ ।
ಯಜಂತೇ ವಿತತೈರ್ಯಜ್ಞೈರ್ನಾನಾರೂಪಾಮರಾಖ್ಯಯಾ ॥
ಏಕೇ ತ್ವಖಿಲಕರ್ಮಾಣಿ ಸನ್ಯಸ್ಯೋಪಶಮಂ ಗತಾಃ ।
ಜ್ಞಾನಿನೋ ಜ್ಞಾನಯಜ್ಞೇನ ಯಜಂತಿ ಜ್ಞಾನವಿಗ್ರಹಂ ॥

(ಭಾ.೧೦.೩೮.೬,೭)

'ಕರ್ಮಯೋಗಿಗಳಾದ ಯಾಜ್ಞಿಕರು ಕೆಲವು ದ್ವಿಜರು ಮೂರು ವೇದಗಳಿಂದ ವಿಸ್ತಾರವಾದ ಯಜ್ಞಗಳಿಂದ ನಾನಾರೂಪಿಗಳಾದ ದೇವತೆಗಳ ನಾಮಗಳಿಂದ ನಿನ್ನನ್ನೇ ಆರಾಧಿಸುತ್ತಾರೆ.

ಏಕಾಂತಭಕ್ತರಾದ ನಿವೃತ್ತಕರ್ಮನಿರತರಾದ ಇನ್ನು ಕೆಲವು ಜ್ಞಾನಿಗಳು ಎಲ್ಲ ಕಾಮ್ಯಕರ್ಮಗಳನ್ನು ತೊರೆದು ವೈದಿಕ ಲೌಕಿಕ ಕರ್ಮಗಳೆಲ್ಲವನ್ನೂ ನಿನಗೆ ಅರ್ಪಿಸಿ 'ಉಪ-ಶಮ' ಅಂದರೆ, 'ಸರ್ವೋತ್ತಮನಾದ ನಿನ್ನಲ್ಲಿ ನಿಷ್ಠೆ'ಯನ್ನು ಹೊಂದಿ ಜ್ಞಾನಯಜ್ಞದಿಂದ ಜ್ಞಾನಶರೀರಿಯಾದ ನಿನ್ನನ್ನು ಆರಾಧಿಸುವರು.

ಕರ್ಮಯೋಗಿಗಳಾದ ಯಾಜ್ಞಿಕರು ಅಗ್ನಿರೂಪದ ಅಧಿಷ್ಠಾನದಲ್ಲಿ—

'ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ
ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ'

'ನಾಲ್ಕು ಕೊಂಬುಗಳು ಮೂರು ಕಾಲುಗಳು ಎರಡು ತಲೆಗಳು ಏಳು ಕೈಗಳುಳ್ಳ ಅಗ್ನಿದೇವನನ್ನು ಚಿಂತಿಸುತ್ತಾರೆ.

ಜ್ಞಾನಯಜ್ಞದಲ್ಲಿ ಬಾಹ್ಯಪ್ರತಿಮೆಯಲ್ಲಿ ಅಥವಾ ಮಾನಸ ಪ್ರತಿಮೆಯಲ್ಲಿ—

ಚತುರ್ಭುಜಂ ರೋಚಮಾನಂ ವೈಜಯಂತ್ಯಾ ಚ ಮಾಲಯಾ
ಚಾರುಪ್ರಸನ್ನವದನಂ ಸ್ಫುರನ್ಮಕರ ಕುಂಡಲಂ ॥

'ಚತುರ್ಭುಜಗಳಿಂದ ವೈಜಯಂತೀಮಾಲೆಗಳಿಂದ ಶೋಭಿಸುವ ಸುಂದರ ನಗುಮೊಗದವನು. ಹೊಳೆವ ಮಕರಕುಂಡಲಧಾರಿ ಇಂಥ ಶ್ರೀಕೃಷ್ಣನನ್ನು ಮುಚುಕುಂದ ಮಹಾರಾಜ ಕಂಡನು' ಎಂದು ಭಾಗವತದಲ್ಲಿ ಹೇಳಿದ ಆಕಾರದ ದೇವನನ್ನು ಜ್ಞಾನಯೋಗಿಗಳು ಚಿಂತಿಸುತ್ತಾರೆ.

ಈ ಆಕಾರಗಳು ಬೇರೆಬೇರೆಯಾಗಿವೆ ಎಂದಮೇಲೆ ಜ್ಞಾನಕರ್ಮಯೋಗಿಗಳು ಚಿಂತಿಸುವ ದೇವತೆಗಳೂ ಬೇರೆಬೇರೆ ತಾನೆ? ಎಂದರೆ, ಈ ಪ್ರಶ್ನೆಗೆ ಹಿಂದೆ ಹೇಳಿದಂತೇ ಸಮಾಧಾನವನ್ನು ಹೇಳಬೇಕು—

'ಬ್ರಹ್ಮಶಿವರೊಳಗಿರುವ ವಿಷ್ಣುರೂಪಗಳ ಆಕಾರಗಳಲ್ಲಿ ಭೇದ ಕಂಡುಬಂದರೂ ಆ ವಿಷ್ಣುರೂಪಗಳಲ್ಲಿ ಭೇದವಿಲ್ಲ. ಹಾಗೇ ಅಗ್ನ್ಯಂತರ್ಗತ ಪ್ರತಿಮಾಂತರ್ಗತ ವಿಷ್ಣುರೂಪಗಳಲ್ಲಿಯೂ ಆಕಾರ ಬೇರೆಬೇರೆ ಇದ್ದರೂ ಆ ರೂಪಗಳಲ್ಲಿ ಭೇದವಿಲ್ಲ. ಅದರಿಂದ ಜನ್ಮಾದಿಕಾರಣವು ಏಕಮಾತ್ರವೇ ಹೊರತು ಅನೇಕವಲ್ಲ. ಅವನು ಶ್ರೀಹರಿಯೆ ಹೊರತು ಬೇರಾರೂ ಅಲ್ಲ.



—೧೫೨—

**ಒಂದೊಂದು ರೂಪ ಒಂದೊಂದು ಬಗೆ ಮೋಹ ಹುಟ್ಟಿಸುತ್ತಾನೆ**

**ಯಚ್ಛಕ್ತಯೋ ವದತಾಂ ವಾದಿನಾಂ ವೈ**
**ವಿವಾದ ಸಂವಾದ ಭುವೋ ಭವಂತಿ ।**
**ಕುರ್ವಂತಿ ತೇಷಾಂ ಮುಹುರಾತ್ಮಮೋಹಂ**
**ತಸ್ಮೈ ನಮೋಽನಂತಗುಣಾಯ ಭೂಮ್ನೇ ॥** (ಭಾ.೬.೪.೩೧)

ನನು ಕ್ವಚಿಚ್ಛಕ್ತಿರಪಿ ಜಗತ್ಕಾರಣಮಿತ್ಯುಚ್ಯತೇ। ಅನ್ಯತ್ರ ಶೂನ್ಯಂ। ಅಪರತ್ರಾಸದಿತ್ಯಾದಿ । ನ ಚ ಪೂರ್ವತ್ರೇವ ಅತ್ರ ಸಮಾಧಾನಂ ವಕ್ತುಂ ಯುಕ್ತಂ। ವಿರುದ್ಧಧರ್ಮತ್ವಾತ್। ಕಸ್ಯಚಿತ್ಸ್ತ್ರೀತ್ವಾತ್। ಅನ್ಯಸ್ಯ ನಿರಾಕಾರತ್ವಾತ್। ಅಪರಸ್ಯಾವಸ್ತುತ್ವಾದಿತ್ಯೇವ ಪುನಃಪುನರ್ಮನೋ ಮುಹ್ಯತ್ಯೇವೇತ್ಯತ ಆಹ। **ಯಚ್ಛಕ್ತಯ ಇತಿ** ॥ ಯಸ್ಯೈ ್ಯಕಸ್ಯ ಶಕ್ತಯ ಏವ। ವದತಾಂ ತತ್ತ್ವನಿರ್ಣಯಾಯ ವಾದಂ ಕುರ್ವತಾಂ ವಾದ್ಯಭಿಮತಾನಾಂ ಮಧ್ಯೇ। ವಿವಾದಸಂವಾದಭುವಃ। ಕೇಷಾಂಚಿದ್ವಿವಾದಸ್ಯ ಕೇಷಾಂಚಿತ್ಸಂವಾದಸ್ಯ ಚ ಭುವೋ ವಿಷಯಾ ಭವಂತಿ। ಕಿಂಚ ಯಸ್ಯ ಶಕ್ತಯಸ್ತೇಷಾಂ ವಾದಿನಾಂ। ಮುಹುಃ ಆತ್ಮವಿಷಯೇ ಮೋಹಂ ಅನ್ಯಥಾ ಮತಿಂ ಚ। ಕುರ್ವಂತಿ ಉತ್ಪಾದಯಂತಿ। ತಸ್ಮೈ ತಾದೃಶಶಕ್ತಿಮತೇ ಅತ ಏವ ಅನಂತಗುಣಪೂರ್ಣಾಯ ನಮ ಇತಿ ॥

**ಇದಮುದಿತಂ ಭವತಿ**— ಜಗತ್ಕಾರಣಂ ವಸ್ತ್ವೇಕಮೇವ। ತಸ್ಯ ಚ ವಿಚಿತ್ರಾಃ ಶಕ್ತಯಃ ಸಂತಿ। ತತ್ರೈಕಯಾ ಕೈಶ್ಚಿನ್ನೃಭಿಃ ಸ್ತ್ರೀಲಿಂಗೈರೇವ ಶಬ್ದೈಃ ಶಬ್ದ್ಯತೇ। ಅನ್ಯಯಾ ಚ ಅನ್ಯೈರ್ನೃಭಿಃ ನಪುಂಸಕ ಲಿಂಗೈಃ ಶೂನ್ಯಾದಿಪದೈಃ ಪಠ್ಯತೇ। ಪರಯಾ ಚ ಪರೈರವಸ್ತುಬೋಧಕೈಃ ಅಲೀಕಾದಿಭಿರಭಿಧಾನೈಃ ಅಭಿಧೀಯತೇ। ಅಪರಾಭಿಶ್ಚ ಶಕ್ತಿಭಿಸ್ತಾಸು ತಾಸು ಸ್ವಶಕ್ತಿಷು ಕೇಷಾಂಚಿದ್ವಾದಿನಾಂ ಜಗತ್ಕಾರಣತ್ವನಿಶ್ಚಯಃ ಸಮುತ್ಪಾದ್ಯತೇ। ಅನ್ಯಾಭಿಶ್ಚ ಅನ್ಯೇಷಾಂ ತದ್ವೈಪರೀತ್ಯೇನ। ಏವಮೇವ ಅನಾದೌ ಸಂಸಾರೇ ಪುನಃ ಪುನಃ ಸಂಸರತಾಂ ಪುಂಸಾಂ ಆತ್ಮತತ್ತ್ವವಿಷಯೇ ಮೋಹ ಉತ್ಪದ್ಯತ ಏವ। ಯಾವದಯಂ ಪುಮಾನ್ ನಿಷ್ಕಾಪಟ್ಯೇನ ಮನಸಾ ಸ್ವಚರಣಶರಣಮನುಸರತಿ। ಅತೋ ಭವದ್ಭಿಃ ಶ್ರೀಹರಿಚರಣಾನುಸರಣಮೇವ ಕಾರ್ಯಂ। ತೇನೈವ ಮನೋಮೋಹನಿವೃತ್ತಿಃ। ಏತದೇವಾಭಿಸಂಧಾಯ ತಸ್ಮೈ ನಮ ಇತ್ಯುಕ್ತಮಿತಿ ॥



ದಕ್ಷ ಪ್ರಜಾಪತಿಯು ಗೈದ ಹಂಸಗುಹ್ಯ ಸ್ತೋತ್ರ—'ಪರಮಾತ್ಮನ ಸ್ವರೂಪ ಸಾಮರ್ಥ್ಯಗಳು ತತ್ವನಿರ್ಣಯ ಮಾಡಲೆಂದು ವಾದಿಸುವವರಲ್ಲಿ ಕೆಲವರಿಗೆ ಒಪ್ಪಿಗೆಯಾಗುತ್ತದೆ, ಕೆಲವರಿಗೆ ಆಗುವುದಿಲ್ಲ. ಬಗೆಬಗೆಯ ಅಜ್ಞಾನ ಮಿಥ್ಯಾ ಜ್ಞಾನಗಳನ್ನು ಉಂಟುಮಾಡಿ ಗೊಂದಲವನ್ನುಂಟು ಮಾಡುತ್ತವೆ. ಏಕೆಂದರೆ ಅವನ ಗುಣಗಳು ಪ್ರತಿಯೊಂದೂ ಅನಂತ. ಹೀಗಾಗಿ ಗುಣಗಳನ್ನು ಒಪ್ಪುವ ವರಿಗೂ ಯಾವುದೇ ಗುಣವನ್ನು ಪೂರ್ತಿತಿಳಿಯಲಾಗುವುದಿಲ್ಲ. ಒಪ್ಪದವರಿಗೂ

**ಯಾವಗುಣವೂ ತಿಳಿಯುವುದಿಲ್ಲ. ಅಂಥ ಗುಣಪೂರ್ಣ ಸರ್ವಶಕ್ತನಾದ ಶ್ರೀಹರಿಗೆ ನಮೋನಮಃ'**

ಜಗತ್ಕಾರಣವನ್ನು ಶಾಸ್ತ್ರಗಳಲ್ಲಿ ಕೆಲವು ಕಡೆ ಶಕ್ತಿ ಎಂದು ಕರೆದಿದೆ. ಕೆಲವೆಡೆ ಶೂನ್ಯ ಎಂದಿದೆ. ಇನ್ನು ಕೆಲವೆಡೆ ಅಸತ್ ಎಂದೂ ಹೇಳಿದ್ದುಂಟು. ಜಗತ್ಕಾರಣವು ಬ್ರಹ್ಮ ಎಂದೂ ರುದ್ರ ಎಂದೂ ಹೇಳಿದರೆ ಬ್ರಹ್ಮನಲ್ಲಿರುವ ವಿಷ್ಣುರೂಪವು ಜಗತ್ಕಾರಣ ರುದ್ರನಲ್ಲಿರುವ ವಿಷ್ಣುವಿನ ರುದ್ರರೂಪವೂ ಜಗತ್ಕಾರಣವೆಂದು ಹೇಳಿ ಜಗತ್ಕಾರಣ ಒಂದೇ ಎಂಬುದನ್ನು ಸಮರ್ಥನ ಮಾಡಲು ಶಕ್ಯವಿದೆ. ಹಾಗೆ ಶಕ್ತಿಯಲ್ಲಿ ಶೂನ್ಯದಲ್ಲಿ ಅಸತ್ತಿನಲ್ಲಿರುವ ವಿಷ್ಣುರೂಪಗಳಿಗೆ ಜಗತ್ಕಾರಣತ್ವವನ್ನು ಅಂಗೀಕರಿಸಿ ಜಗತ್ಕಾರಣ ಒಂದೇ ಎಂಬುದನ್ನು ಸಮರ್ಥಿಸಲಾಗುವುದಿಲ್ಲ. ಶಕ್ತಿ-ಶೂನ್ಯ-ಅಸತ್ತುಗಳು ಪರಸ್ಪರ ವಿರುದ್ಧ ಗುಣಉಳ್ಳವುಗಳು. ಶಕ್ತಿಯು ಸ್ತ್ರೀ, ಶೂನ್ಯವು ನಿರಾಕಾರ, ಅಸತ್ ವಸ್ತುವೇ ಅಲ್ಲ. ಜಗತ್ಕಾರಣವು ಪರಮಪುರುಷ, ಚಿನ್ಮಯಾಕಾರ, ಪರವಸ್ತುವಾಗಿದೆ. ಆದರಿಂದ ಅದು ಏಕಮಾತ್ರವಾಗಿರಲು ಶಕ್ಯವಿಲ್ಲ ಎಂಬ ಪ್ರಶ್ನೆಗೆ ಸಮಾಧಾನವಾಗಿ ದಕ್ಷಪ್ರಜಾಪತಿ ಹೇಳುತ್ತಾನೆ.

'ಜಗತ್ಕಾರಣ, ಹರಿಯೊಬ್ಬನೆ ಅವನಲ್ಲಿ ವಿಚಿತ್ರಶಕ್ತಿಗಳಿವೆ. ಆ ಶಕ್ತಿಗಳು ವಾದಿಗಳಲ್ಲಿ ಮೋಹ ಗೊಂದಲ ಉಂಟುಮಾಡುವುವು. ಕೆಲವರು ಒಂದು ಶಕ್ತಿಯಿಂದ 'ಶಕ್ತಿ' 'ಪ್ರಕೃತಿ' ಎಂದು ಮುಂತಾಗಿ ಸ್ತ್ರೀಲಿಂಗ ಶಬ್ದಗಳಿಂದಲೇ ಜಗತ್ಕಾರಣವನ್ನು ಕರೆಯುತ್ತಾರೆ. ಹಾಗೂ ವಾದ ಮಾಡುತ್ತಾರೆ. ಇನ್ನೊಂದು ಶಕ್ತಿಯಿಂದ ಇನ್ನು ಕೆಲವರು 'ಬ್ರಹ್ಮ' 'ಶೂನ್ಯ' ಎಂದು ಮುಂತಾಗಿ ನಪುಂಸಕ ಶಬ್ದಗಳಿಂದ ಜಗತ್ಕಾರಣವನ್ನು ಕರೆಯುವರು ಹಾಗೇ ವಾದ ಮಾಡುವರು. ಇನ್ನೊಂದು ಶಕ್ತಿಯಿಂದ ಪ್ರೇರಿತರಾಗಿ ಮತ್ತೆ ಕೆಲವರು ಅಸತ್ ಅಭಾವ ಮುಂತಾದ ಅಸದ್ ವಾಚಕ ಶಬ್ದಗಳಿಂದ ಜಗತ್ಕಾರಣವನ್ನು ಕರೆಯುವರು ಹಾಗೇ ವಾದ ಮಾಡುವರು. ಹೀಗೆ ಅನಾದಿಕಾಲದಿಂದಲೂ ಬೇರೆಬೇರೆ ವಾದಗಳು ಹುಟ್ಟಿ ಬರುವುದರಿಂದ ಜಗತ್ಕಾರಣ ಪರಮಾತ್ಮ ತತ್ವವಿಷಯದಲ್ಲಿ ವಾದಿಗಳಲ್ಲಿ ಗೊಂದಲವೇ ಉಂಟಾಗುವುದು. ಯಾವಾಗ ಸಾಧಕನು ತನ್ನ ಮನೋಮಲವನ್ನು ನೀಗಿಕೊಂಡು 'ನಮೋನಮಃ' ಎಂದು ಹರಿಚರಣವನ್ನೇ ಶರಣು ಹೊಂದುವನೋ ಆಗ ಮನಸಿನ ಮೋಹಗೊಂದಲವೆಲ್ಲವೂ ಪರಿಹಾರ

ವಾಗುವುದು ಎನ್ನುತ್ತ 'ತಸ್ಮೈ ನಮೋನಮಃ' ಎಂದು ದಕ್ಷಪ್ರಜಾಪತಿ ವಂದಿಸುತ್ತಾನೆ.



–೧೫೩–

**ಹರಿಯ ಎಲ್ಲ ರೂಪ ಗುಣಗಳನ್ನು ಹೇಳುವುದು ಅಶಕ್ಯ .**
**ಯಥಾಶಕ್ತಿ ತಿಳಿದಷ್ಟೇ ಹೇಳಬಹುದು.**

**ಅಹಂ ಹಿ ಪೃಷ್ಟೋಽಸ್ಯ ಗುಣಾನ್ ಭವದ್ಭಿ**
**ರಾಚಕ್ಷ ಆತ್ಮಾವಗಮೋಽತ್ರ ಯಾವಾನ್ ।**
**ನಭಃ ಪತಂತ್ಯಾತ್ಮಸಮಂ ಪತತ್ರಿಣ**
**ಸ್ತಥಾ ಸಮಂ ವಿಷ್ಣುಗತಿಂ ವಿಪಶ್ಚಿತಃ ॥**

(ಭಾ.೧.೧೮.೨೩)

ಏವಂ ಯತ್ತಿದ್ಧಯೇ ಜಗಜ್ಜನ್ಮಾದಿಕಾರಣತ್ವಂ ಬ್ರಹ್ಮಣೋ ಲಕ್ಷಣಮಭಿಹಿತಂ ತತ್ಸಕಲಗುಣಪೂರ್ಣತ್ವಮೇವ ಲಕ್ಷಣಂ ಜ್ಞೇಯಂ। ತದೇವ ಪರಪದೇನೋಕ್ತಮಿತ್ಯಭಿಪ್ರೇತ್ಯಾಹ ॥ **ಅಹಮಿತಿ** ॥ ಶೌನಕಾದೀನ್ಪ್ರತಿ ಸೂತವಚನ ಮೇತತ್। ಅಸ್ಯ ಹರೇರ್ಗುಣಾನ್ವಕ್ತುಂ ಭವದ್ಭಿಃ ಪೃಷ್ಟೋಽಹಂ। ಅತ್ರ ಹರಿಗುಣೇಷು, ಯಾವಾನ್, ಆತ್ಮಾವಗಮಃ ಆತ್ಮನೋ ಮಮ ಅವಗಮಃ ಜ್ಞಾನಂ ತಾವದೇವ ಆಚಕ್ಷೇ ವ್ಯಾಕರಿಷ್ಯೇ। ಅಶಕ್ಯೇಽರ್ಥೇ ಯಥಾಶಕ್ತಿ ಪ್ರವೃತ್ತಿಮತ್ತ್ವಂ ಪ್ರಸಿದ್ಧಮಿತಿ ಹಿಶಬ್ದೇನಾಹ। ತವೈವ ಯಾವದ್ಗುಣಕಥನೇ ಶಕ್ತಿರ್ನಾಸ್ತಿ ವಿಪಶ್ಚಿತಃ ಅನ್ಯೇ ತು ಬ್ರೂಯುರೇವೇತಿ ಮುನಿಮನೋಗತಾಮಾಶಂಕಾಂ ಹಿಶಬ್ದಾರ್ಥಂ ವ್ಯಂಜಯನ್ನೇವಾಪನುದತಿ। **ನಭ ಇತಿ** ॥ ಯಥಾ ಪತತ್ರಿಣಃ। ಆತ್ಮಸಮಮೇವ। ನಭಃ ಪತಂತಿ। ತಥಾ ವಿಪಶ್ಚಿತಃ ಜ್ಞಾನಿನೋಽಪಿ। ಹರೇರ್ಗತಿಂ। ಸಮಂ ಆತ್ಮಸಮಮೇವ। ವ್ಯಾಚಕ್ಷತೇ। ತತ್ರ ಹರೌ ಇತೋಽಧಿಕಗುಣಾಭಾವಾದೇವ ಉಪರಮ್ಯತೇ ಇತ್ಯೇವ ಕಿಂ ನ ಸ್ಯಾದಿತ್ಯತ ಉಕ್ತಂ **ವಿಷ್ಣುಗತಿಮಿತಿ** ॥ ವಿಷ್ಣೋಃ ವ್ಯಾಪ್ತಸ್ಯ ದೇಶತಃ ಕಾಲತಃ ಗುಣತಶ್ಚೇತಿ ತ್ರಿವಿಧವ್ಯಾಪ್ತಿಮತೋ ಗತಿಮಿತ್ಯರ್ಥಃ। ಅತ ಏವ ವ್ಯಾಪ್ತಸ್ಯಾಕಾಶಸ್ಯೈವ ದೃಷ್ಟಾಂತೀಕರಣಮಿತಿ ॥

ಸೂತರು ಹೇಳುತ್ತಾರೆ—ಗುಣಪೂರ್ಣನಾದ ವಿಷ್ಣುವಿನ ಮಹಿಮೆಯನ್ನು ನೀವು ಕೇಳಲು ಬಯಸಿರುವಿರಿ. ಆದರೆ ನಾನು ನನಗೆ ತಿಳಿದಷ್ಟು ಹೇಳುತ್ತೇನೆ.

**ಯಾರೂ ಅವನ ಬಗ್ಗೆ ಪೂರ್ತಿ ಹೇಳಲು ಶಕ್ತರಲ್ಲ. ತಮಗೆ ತಿಳಿದಷ್ಟೇ ಹೇಳುತ್ತಾರೆ. ಹಕ್ಕಿಗಳು ಅನಂತವಾದ ಆಗಸದಲ್ಲಿ ತಮಗೆ ಶಕ್ತಿ ಇದ್ದಷ್ಟೇ ಮೇಲೇರಬಲ್ಲವು ತಾನೆ?**

'ಓಂ ಜನ್ಮಾದ್ಯಸ್ಯಯತಃ ಓಂ' ಎಂದು ಬ್ರಹ್ಮಸೂತ್ರದಲ್ಲಿ ಶ್ರೀಹರಿ ಜಗಜ್ಜನ್ಮಾದಿಕಾರಣನಾಗಬೇಕಾದರೆ ಸಕಲಗುಣಪೂರ್ಣನೇ ಆಗಿರಬೇಕೆಂದು ಜಗಜ್ಜನ್ಮಾದಿಕಾರಣತ್ವವೆಂಬ ಲಕ್ಷಣವನ್ನು ಅವನಿಗೆ ಹೇಳಿದ್ದು ಸಕಲಗುಣ ಪೂರ್ಣತ್ವವೆಂಬ ಅವನ ಲಕ್ಷಣ ಸಮರ್ಥನೆಗಾಗಿ. ಬ್ರಹ್ಮಶಬ್ದದಿಂದಲೇ ಈ ಸಕಲಗುಣಪೂರ್ಣತ್ವವು ಬ್ರಹ್ಮಲಕ್ಷಣವೆಂದು ತಿಳಿಯುತ್ತದೆ. ಭಾಗವತ ಮಂಗಳ ಶ್ಲೋಕದಲ್ಲಿ 'ಸತ್ಯಂ ಪರಂ ಧೀಮಹಿ' ಎಂದು 'ಪರ' ಶಬ್ದದಿಂದ ಈ ಸಕಲಗುಣ ಪೂರ್ಣತ್ವವೆಂಬ ಲಕ್ಷಣ ಉಕ್ತವಾಗಿದೆ. ಸೂತರು ಶೌನಕರಿಗೆ ಹೇಳುತ್ತಾರೆ— 'ಸಕಲಗುಣಪೂರ್ಣತ್ವವೆಂಬ ಲಕ್ಷಣವನ್ನು ಪೂರ್ತಿ ಹೇಳಲು ಅಲ್ಪಜ್ಞ ಅಲ್ಪಶಕ್ತ ನಾದ ನಾನು ಶಕ್ತನಲ್ಲ. ರಮಾಬ್ರಹ್ಮಾದಿಗಳೂ ಯಾರೂ ಶಕ್ತರಲ್ಲ. ಅಶಕ್ಯವಾದ ಈ ಕಾರ್ಯದಲ್ಲಿ ನಾವು ಯಥಾಶಕ್ತಿ ಪ್ರವೃತ್ತಿ ಮಾತ್ರವನ್ನು ಮಾಡಬಲ್ಲೆವು.

'ವಿಷ್ಣು ಗತಿ' 'ವಿಷ್ಣು' ಎಂದರೆ ವ್ಯಾಪ್ತ, ದೇಶ ಕಾಲ ಗುಣಗಳಲ್ಲಿ ಇಷ್ಟೇ ಎಂದು ಪರಿಮಿತಿ ಇಲ್ಲದವನು, ಆಕಾಶವು ದೇಶ ಕಾಲಗಳಲ್ಲಿ ಪರಿಮಿತಿ ಶೂನ್ಯವಾಗಿರುವಂತೆ. ಆಕಾಶದಲ್ಲಿ ಹಕ್ಕಿ ಎಲ್ಲ ಪ್ರದೇಶಗಳಲ್ಲಿ ಹಾರಲಾರದು. ಆದರೆ ಹಾರಲು ಯತ್ನ ಮಾಡದಿರುವುದಿಲ್ಲ. ಯಥಾಶಕ್ತಿ ಹಾರುತ್ತದೆ. ಹಾಗೇ ನಾನೂ ಹರಿಗುಣಗಳನ್ನು ಪೂರ್ತಿಯಾಗಿ ನಿಮಗೆ ತಿಳಿಸಲಾರೆ. ಸ್ವಲ್ಪ ಶಕ್ತಿ ಇದ್ದಷ್ಟು ತಿಳಿಸುತ್ತೇನೆ ಎನ್ನುತ್ತಾರೆ.



—೧೫೪—

**ಭಗವಂತನ ಗುಣಗಳಿಗೆ ಎಲ್ಲೆಯೇ ಇಲ್ಲ**

**ನಾಂತಂ ವಿದಾಮ್ಯಹಮಮೀ ಮುನಯಃ ಪ್ರಜೇಶಾ**
**ಮಾಯಾಬಲಸ್ಯ ಪುರುಷಸ್ಯ ಕುತಃ ಪರೇ ಯೇ ।**
**ಗಾಯನ್ ಗುಣಾನ್ ದಶಶತಾನನ ಆದಿದೇವಃ**
**ಶೇಷೋऽಧುನಾऽಪಿ ಸಮವಸ್ಯತಿ ನಾಸ್ಯ ಪಾರಂ ॥** (ಭಾ.೨.೭.೪೧)

**ಯದಾ ಸಾಕ್ಷಾಚ್ಚತುರ್ಮುಖೇನಾಪ್ಯಗಣ್ಯತ್ವಂ ವಿಷ್ಣುಗುಣಾನಾಂ ಕಿಮು ತದಾನ್ಯಸ್ಯೇತಿ ॥ ಏತಮರ್ಥಂ ಪ್ರತಿಪಾದಯತ್ತದ್ವಚನಮೇವ ಪಠತಿ ॥ ನಾಂತಮಿತಿ । ಪುರುಷಸ್ಯ ಯನ್ಮಾಯಾಬಲಂ ಸ್ವರೂಪಸಾಮರ್ಥ್ಯಂ ತಸ್ಯ । ಅಂತಂ ಪರಂ ಪಾರಂ । ಅಹಂ ನ ವಿದಾಮೀತಿ ಯದಾ ತದಾ ಮೋಕ್ಷಾಧಿಕಾರಿವರ್ಗಾಧಿಪತಿರ್ದಶಶತಾನನಃ ಸಹಸ್ರವದನೋಽಪಿ ಶೇಷಃ । ಅಧುನಾಪಿ । ಅಸ್ಯ ಗುಣಾನ್ಗಾಯನ್ ಗುಣಾನಾಂ ಪಾರಂ । ನ ಸಮವಸ್ಯತಿ ನ ಜಾನಾತೀತಿ ಕಿಮು ವಕ್ತವ್ಯಂ । ಅನೇನ ಮಾಯಾಬಲಸ್ಯೇತ್ಯುಕ್ತಬಲಶಬ್ದಾರ್ಥ ಉಕ್ತೋ ಭವತಿ । ಯದಾ ಚ ಶೇಷಸ್ಯೇದೃಶೀ ದಶಾ ತದಾ ಮುನಯೋಽಪ್ಯಮೀ ಕರ್ದಮಾದ್ಯಾಃ । ಪ್ರಜಾಪತಯೋಽಪಿ ಮರೀಚ್ಯಾದ್ಯಾಃ । ನ ವಿದುರಿತಿ ಕಿಂ ವಾಚ್ಯಂ । ಯದಾ ತು ಮನ್ವಾದೀನಾಮಿಯಮವಸ್ಥಾ । ಏಭ್ಯಃ ಪರೇ ಅನ್ಯೇಽಧಿಕಾರಿಣಃ ನ ವಿದುರಿತಿ ಕುತಃ । ಕಿಂ ವಕ್ತವ್ಯಮಿತಿ । ಅತ್ರ ವೇದ್ಮೀತಿ ವಕ್ತವ್ಯೇ ವಿದಾಮೀತಿ ವಿಕರಣವ್ಯತ್ಯಯಂ, ಕಿಮ್ವಿತಿ ವಕ್ತವ್ಯೇ ಕುತ ಇತಿ ತಸೇಃ ಪ್ರಯೋಗಂ ಚ ಕುರ್ವತಾ ಅಸ್ಯ ವೇದತುಲ್ಯತ್ವಮಸೂಚೀತಿ ಜ್ಞೇಯಂ ॥**



ಬ್ರಹ್ಮದೇವರು ನಾರದರಿಗೆ ಹೇಳುತ್ತಾರೆ—

**'ಭಗವಂತನ ಇಚ್ಛಾಸಾಮರ್ಥ್ಯಕ್ಕೆ ಎಲ್ಲೆಯನ್ನು ನಾನು ಕಂಡಿಲ್ಲ. ಈ ಮುನಿಗಳಾಗಲಿ ಪ್ರಜಾಪತಿಗಳಾಗಲಿ ಕಂಡಿಲ್ಲ. ಇನ್ನು ಬೇರೆಯವರ ಬಗ್ಗೆ ನಾನೇನು ಹೇಳಲಿ, ಸಾವಿರಮುಖಗಳುಳ್ಳ ಜೀವಾಭಿಮಾನಿ ಶೇಷದೇವನೂ ಕೂಡ ಅವನ ಗುಣಗಾನ ಮಾಡಿ ಅವುಗಳಿಗೆ ಕೊನೆ ಎಲ್ಲಿ ಎಂದು ಇನ್ನೂ ಕಂಡಿಲ್ಲ!'**

ಸಾಕ್ಷಾತ್ ಚತುರ್ಮುಖಬ್ರಹ್ಮದೇವರಿಗೇ ತಮಗೆ ವಿಷ್ಣುಗುಣಗಳ ಎಲ್ಲೆಯನ್ನು ಕಾಣಲಾಗಲಿಲ್ಲವೆಂದಮೇಲೆ ಇನ್ನುಳಿದವರ ಪಾಡೇನು? ಮೋಕ್ಷಾಧಿಕಾರಿ ವರ್ಗಕ್ಕೇ ಅಧಿಪತಿಯಾದ ಸಾವಿರ ಹೆಡೆಗಳುಳ್ಳ ಶೇಷನೇ ಇಂದಿಗೂ ಕೂಡ ಹರಿಗುಣಗಳನ್ನು ಕೊಂಡಾಡಿ ಪಾರಗಾಣದಿರುವನೆಂದ ಮೇಲೆ ಇನ್ನುಳಿದವರ ಪಾಡೇನು? ಕರ್ದಮಾದಿ ಮುನಿಗಳು ಮರೀಚ್ಯಾದಿ ಪ್ರಜಾಪತಿಗಳು—ಇಂಥ ಮೋಕ್ಷಾಧಿಕಾರಿಗಳೇ ಹರಿಗುಣಗಳನ್ನು ಎಲ್ಲವನ್ನೂ ತಿಳಿದಿಲ್ಲವೆಂದರೆ ಬೇರೆ ಮೋಕ್ಷಾಧಿಕಾರಿಗಳ ಪಾಡೇನು? ಎಂದು ಬ್ರಹ್ಮದೇವರೇ ಹೇಳುತ್ತಿದ್ದಾರೆ.

'ನಾಂತಂ ವಿದಾಮಿ' ಎಂದು ಮತ್ತು 'ಕುತಃ ಪರೇ ಯೇ' ಎಂದು ವೈದಿಕ ಪ್ರಯೋಗ. 'ನಾಂತಂ ವೇದ್ಮಿ' ಎಂದು 'ಕಿಮು ಪರೇ ಯೇ' ಎಂದು ಹೇಳಬೇಕಾಗಿತ್ತು. ಭಾಗವತಗ್ರಂಥ ವೇದತುಲ್ಯವೆಂದು ಸೂಚಿಸುವುದಕ್ಕಾಗಿ ಅಲ್ಲಲ್ಲಿ ಹೀಗೆ ವೈದಿಕ ಪ್ರಯೋಗ ಮಾಡಿದ್ದಾರೆ.



—೧೫೫—

**ಭಗವಂತನನ್ನು ತಮ್ಮ ಯೋಗ್ಯತಾನುಸಾರ ಸ್ವಲ್ಪವೇ ತಿಳಿಯಬಹುದು**

**ನಾಹಂ ನ ಯೂಯಂ ಬತ ತದ್ಗತಿಂ ವಿದು**
**ರ್ನ ವಾಮದೇವಃ ಕಿಮುತಾಪರೇ ಸುರಾಃ ।**
**ಯನ್ಮಾಯಯಾ ಮೋಹಿತಬುದ್ಧಯಸ್ತ್ವಿದಂ**
**ವಿನಿರ್ಮಿತಂ ಸ್ವಾತ್ಮಸಮಂ ವಿಚಕ್ಷ್ಮಹೇ ॥**

(ಭಾ.೨.೬.೩೬)

ಸನ್ನಿತರೇಷಾಂ ಕಥಾ ಯಥಾತಥಂ । ಚತುರ್ಮುಖಸ್ತಾವಚ್ಚತುರ್ದಶಭುವನಕರ್ತಾ ಪರವಸ್ತುನೋಽನ್ತಂ ವೇತ್ತುಮಲಂ ಸಮರ್ಥಃ । ತಥಾ ತಾವತಾಂ ಲೋಕಾನಾಂ ನಾಶಕರ್ತಾ ವಾಮದೇವೋಽಪಿ । ಏವಮೇವ ಪ್ರತಿಸೃಷ್ಟಿಕರ್ತಾರೋ ದೇವರ್ಷಿರಾಜರ್ಷಿಪ್ರವರಾ ನಾರದವಿಶ್ವಾಮಿತ್ರಾದಯೋಽಪೀತಿ ತಟಸ್ಥಮನೋಗತಾಮಾಶಂಕಾಂ ತದ್ವಚನೋದಾಹರಣೇನ ಪರಿಹರತಿ ॥ ನಾಹಮಿತಿ ॥ ತುರ್ವಿಶೇಷೇ । ಯೇನ ಮಯೇದಂ ಚತುರ್ದಶಭುವನಾತ್ಮಕಂ ಜಗದೇವ ನಿರ್ಮಿತಂ । ಇದಂ ಜಗದೇವ ಯೇನ । ವಿ ವಿರುದ್ಧತಯಾ । ಕೃತಂ । ನಾಶಿತಮಿತಿ ಯಾವತ್ । ತು ಏತಾದೃಕ್ ಮಹಾಮಹಿಮಾ ರೂಪವಿಶೇಷವಾನಪಿ ಮಹಾದೇವಃ । ತಥಾ ತು ವಿಶೇಷವಂತಃ ಪ್ರತಿಸೃಷ್ಟ್ಯಾದಿಕರ್ತಾರೋ ದೇವರ್ಷಿರಾಜರ್ಷಿಬ್ರಹ್ಮರ್ಷಿಪ್ರವರಾ ಯೂಯಂ ಚೇತಿ ಸರ್ವೇ । ತದ್ಗತಿಂ ತಸ್ಯ ಹರೇರ್ಗತಿಂ ಮಹಿಮೇಯತ್ತಾಂ । ನ ವಿದುಃ । ಬತೇತ್ಯಾಸ್ವಾದನೇ । ಸರ್ವಾನುಭವಸಿದ್ಧಮೇತದಿತಿ । ಇತಿ ಯದಾ ತದಾ ಇತೋಽನ್ಯೇ ಸುರಾ ನ ವಿದುರಿತಿ ಕೈಮುತ್ಯೇನ ಸಿದ್ಧಂ । ಕುತೋ ನ ವಿದುರಿತ್ಯತೋ ಮೂಲಕಾರಣಮಾಹ ॥ ಯನ್ಮಾಯಯೇತಿ ॥ ಯಸ್ಯೇಚ್ಛಯಾ ಮೋಹಿತಾ ಬುದ್ಧಯೋ ಯೇಷಾಮಿತ್ಯರ್ಥಃ । ತರ್ಹಿ ಮಾಂ ಪ್ರತಿ ತ್ವಯೋದಿತಮಪಿ

**ಕಿಯದೇವ ಕಿಮಿತಿ ನಾರದಮನೋಗತಾಮಾಶಂಕಾಮಂಗೀಕಾರೇಣ ಪರಿಹರತಿ ॥ ಸ್ವಾತ್ಮಸಮಮಿತಿ ॥ ವಯಂ ಸರ್ವೇಽಪ್ಯಾತ್ಮಸಮಂ ಆತ್ಮಯೋಗ್ಯಮೇವ। ವಿಚಕ್ಷ್ಮಹೇ ಆಚಕ್ಷ್ಮಹೇ ಚೇತಿ। ಅನೇನ ತೇಷಾಂ ಯನ್ಮಹಿಮಾನ-ಮವಲಂಬ್ಯಾಶಂಕಿತಂ ತನ್ಮಹಿಮಾನುವಾದಪೂರ್ವಕಮೇವ ಸ್ವಾತ್ಮನಾಂ ಭಗವನ್ಮಹಿಮವರ್ಣನಾಶಕ್ತಿಕಥನೇನ ತನ್ಮೂಲವಿಘಟನೇನ ತೇಷಾಂ ಶಂಕಾ ನಿರಸ್ತೇತಿ ಜ್ಞೇಯಂ ॥**



**ಬ್ರಹ್ಮದೇವರು ನಾರದರಿಗೆ ಹೇಳುತ್ತಾರೆ—'ನಾನಾಗಲಿ ನೀನಾಗಲಿ ಶಿವನಾಗಲಿ ಹರಿಯನ್ನು ಪೂರ್ತಿ ತಿಳಿಯಲಾರೆವು ಎಂದಮೇಲೆ ಬೇರೆ ದೇವತೆಗಳೇನು ತಿಳಿಯಬಲ್ಲರು? ಅವನ ಮಾಯೆಯಿಂದ ಬುದ್ಧಿಗೆ ಮಂಕು ಕವಿದರೆ ನಾವೇನು ಮಾಡಬಲ್ಲೆವು? ಅವನ ಅನುಗ್ರಹದಿಂದಲೇ ನಾವು ನಮ್ಮ ಯೋಗ್ಯತಾನುಸಾರ ಸ್ವಲ್ಪಮಾತ್ರ ಅವನನ್ನು ತಿಳಿಯುವೆವು, ಹೇಳುವೆವು.**

ಚತುರ್ಮುಖನು ಹದಿನಾಲ್ಕು ಲೋಕಗಳನ್ನು ಸೃಜಿಸುವವನು. ಶಿವನೂ ಆ ಹದಿನಾಲ್ಕು ಲೋಕಗಳನ್ನು ನಾಶಮಾಡುವವನು.

ನಾರದಮಹರ್ಷಿಗಳು ಬ್ರಹ್ಮಸೃಷ್ಟಿಗೆ ಪ್ರತಿಸೃಷ್ಟಿ ಮಾಡಬಲ್ಲವರು. 'ಕಾಮ್ಯಯಜ್ಞಗಳಲ್ಲಿ ಪಶುವಧೆ ಮಾಡಿದರೆ ಆ ಪಶುಗಳು ಪರಲೋಕದಲ್ಲಿ ನಿನಗೆ ಅದೇರೀತಿ ಹಿಂಸೆ ಮಾಡುತ್ತವೆ' ಎಂಬುದಕ್ಕೆ ಪ್ರತ್ಯಕ್ಷ ನಿದರ್ಶನವಾಗಿ ಯೋಗ ಬಲದಿಂದ ಪ್ರಾಚೀನಬರ್ಹಿರಾಜನಿಗೆ ಅವನು ವಧಿಸಿದ್ದ ಸಹಸ್ರಾರು ಪಶುಗಳನ್ನು ಪುನಃ ಸೃಜಿಸಿ, 'ನೋಡಿ, ಅವು ನಿನ್ನ ಹಿಂಸಾಚಾರವನ್ನು ನೆನೆಯುತ್ತ, ನೀನು ಮೃತನಾದಾಗ ಪರಲೋಕದಲ್ಲಿ ನಿನ್ನನ್ನು ಹಿಂಸಿಸುತ್ತವೆ' ಎಂದರು.

ವಿಶ್ವಾಮಿತ್ರಮುನಿ 'ಅನ್ಯಮಿಂದ್ರಂ ಕರಿಷ್ಯಾಮಿ' ಎನ್ನುತ್ತ ತ್ರಿಶಂಕುವಿಗೆ ಬೇರೆ ಒಂದು ಸ್ವರ್ಗವನ್ನು ನಿರ್ಮಿಸಿಕೊಟ್ಟವರು.

ಹೀಗೆ ನಾರದರಂಥ ಬ್ರಹ್ಮರ್ಷಿಗಳು, ವಿಶ್ವಾಮಿತ್ರರಂಥ ರಾಜರ್ಷಿಗಳು ಎಲ್ಲರೂ ಸೃಷ್ಟಿಗೆ ಪ್ರತಿಸೃಷ್ಟಿ ಮಾಡಬಲ್ಲವರು ಇವರೂ ಹರಿಯನ್ನು ತಿಳಿಯಲಾರರೆ? ಎಂದು ಲೌಕಿಕರು ಕೇಳಿದರೆ ಅವರಿಗೆ ಚತುರ್ಮುಖ ಬ್ರಹ್ಮದೇವರು ತಾನೆ ಹೇಳುತ್ತಾರೆ—

'ನೀವು ಹೇಳುವ ಮಹಿಮೆಗಳುಳ್ಳ ನಾನಾಗಲಿ ಶಿವನಾಗಲಿ ನಾರದ ವಿಶ್ವಾಮಿತ್ರರಂಥ ಬೇರೆ ಋಷಿಗಳಾಗಲಿ ಯಾರೂ ಹರಿಯನ್ನು ತಿಳಿಯಲಾರರು' ಎಂದು.

'ಹದಿನಾಲ್ಕು ಲೋಕಗಳನ್ನು ಸೃಜಿಸಬಲ್ಲ ನನ್ನ ಸಾಮರ್ಥ್ಯವೂ ಕೂಡ ಹರಿಯ ಒಂದುಗುಣವನ್ನು ಪೂರ್ತಿ ತಿಳಿಯುವಲ್ಲಿ ಯಶಸ್ವಿಯಾಗಲಾರದು' ಎನ್ನುತ್ತಾರೆ.



—೧೫೬—

**ಹರಿಯ ದಯಾಪಾತ್ರರೇ ದೇಹಾದ್ಯಭಿಮಾನ ತೊರೆದು ಮುಕ್ತರಾಗುತ್ತಾರೆ**

**ಯೇಷಾಂ ಸ ಏವ ಭಗವಾನ್ ದಯಯೇದನಂತಃ**
**ಸರ್ವಾತ್ಮನಾಽಽಶ್ರಿತಪದೋ ಯದಿ ನಿರ್ವ್ಯಲೀಕಂ ।**
**ತೇ ವೈ ವಿದಂತ್ಯತಿತರಂತಿ ಚ ದೇವಮಾಯಾಂ**
**ನೈಷಾಂ ಮಮಾಹಮಿತಿ ಧೀಃ ಶ್ವಸೃಗಾಲಭಕ್ಷ್ಯೇ ॥**

(ಭಾ.೨.೭.೪೨)

ನನು ಮುಮುಕ್ಷುಭಿರ್ಜಿಜ್ಞಾಸ್ಯಂ ಬ್ರಹ್ಮ ನಿರ್ಗುಣಮೇವ। ಸಗುಣಜಿಜ್ಞಾಸಯಾ ಗುಣನಿವೃತ್ತಿರೂಪಮೋಕ್ಷಾಯೋಗಾದಿತ್ಯತ ಆಸ್ತಾಂ ತಾವನ್ನಿರ್ಗುಣತ್ವವಿಚಾರಃ ಮಾಯಾನಿವರ್ತಕಸ್ತು ಭಗವಾನೇವ। ಅತಃ ಸ ಏವ ಮುಮುಕ್ಷುಭಿರ್ಜಿಜ್ಞಾಸ್ಯಂ ಬ್ರಹ್ಮೇತಿ ಭಾವೇನ ಮಾಯಾನಿವರ್ತಕತ್ವಂ ದರ್ಶಯತಿ ॥ ಯೇಷಾಮಿತಿ ॥ ಯದಿ ಭಕ್ತೇನ ನಿರ್ವ್ಯಲೀಕಂ ನಿಷ್ಕಪಟತಯಾ। ಸರ್ವಪ್ರಕಾರೇಣ ಆಶ್ರಿತಚರಣೋ ಭವೇತ್ ತರ್ಹ್ಯೇವ ಸ ಭಗವಾನನಂತಃ ತಸ್ಮಿನ್ ದಯಾಂ ಕುರ್ಯಾತ್। ಕಿಂ ತತಃ। ಯೇಷಾಂ ದಯಯೇತ್ ತ ಏವ ದೇವಮಾಯಾಂ ಮಹಿಮಾನಂ ವಿದಂತಿ ಜಾನಂತಿ। ತತಶ್ಚ ಕಿಂ ? ಸಂಸಾರಮತಿತರಂತಿ ಚ। ಸಂಸಾರಮತಿತರಂತೀತಿ ಕಥಂ ಜ್ಞೇಯಮಿತ್ಯತಸ್ತಜ್ಜ್ಞಾಪಕಂ ದರ್ಶಯತಿ ॥ ನೇತಿ। ಏಷಾಂ ತೀರ್ಣಸಂಸಾರಾಣಾಂ ಸತಾಂ ಪುರುಷಾಣಾಂ। ಶ್ವಸೃಗಾಲಾದಿಭಿಸ್ತತ್ಸದೃಶೈರ್ದಾರಾದಿಭಿರ್ವಾ ಭಕ್ಷಿತುಂ ಯೋಗ್ಯೇ ದೇಹೇ। ವಿತ್ತಾದೌ ವಾ। ಅಹಮಿತಿ ಮಮೇತಿ ವಾ ಬುದ್ಧಿರ್ನ ಭವತಿ। ಅಹಂ ಮಮೇತ್ಯಭಿಮಾನಾಭಾವ ಏವ ಜ್ಞಾಪಕ ಇತಿ ಭಾವಃ ॥



**ಬ್ರಹ್ಮದೇವರು ನಾರದರಿಗೆ ಹೇಳುತ್ತಾರೆ—'ಪಾರ್ಥಿವ ಶರೀರ ಮೃತವಾದಾಗ ನಾಯಿ ನರಿಗಳಿಗೇ ತಿನ್ನಲು ಯೋಗ್ಯ. ಅಂಥ ಶರೀರದಲ್ಲಿ ನಾನು ನನ್ನದೆಂದು ಅಭಿಮಾನ ಯಾರಿಗೆ ಇರುವುದಿಲ್ಲವೋ ಯಾರು ನಿಷ್ಕಪಟ ಬುದ್ಧಿಯಿಂದ ಕಾಮ್ಯಫಲದಾಸೆ ಇಲ್ಲದೆ ತ್ರಿಕರಣಗಳಲ್ಲಿ ಹರಿಯ ಪಾದವನ್ನೇ ಆಶ್ರಯಿಸಿರುವರೋ ಅವರಲ್ಲಿಯೇ ಭಗವಾನ್ ಹರಿ ಅನುಗ್ರಹ ಮಾಡುತ್ತಾನೆ. ಅವನು ಯಾರಿಗೆ ಅನುಗ್ರಹ ಮಾಡುವನೋ ಅವನು ಮಾತ್ರ ಆ ದೇವನ ಮಹಿಮೆಯನ್ನು ತಿಳಿಯುತ್ತಾನೆ. ಸಂಸಾರವನ್ನು ದಾಟುತ್ತಾನೆ.**

ಹರಿಯ ಗುಣಗಳನ್ನೇಕೆ ತಿಳಿಯಬೇಕು? ಮುಮುಕ್ಷುಗಳು ತಿಳಿಯ ಬೇಕಾದುದು ನಿರ್ಗುಣ ಬ್ರಹ್ಮವನ್ನು. ಸಗುಣಬ್ರಹ್ಮವನ್ನು ತಿಳಿದರೆ ಗುಣನಿವೃತ್ತಿ ರೂಪವಾದ ಸಂಸಾರಮೋಕ್ಷ ಹೇಗೆ ಲಭ್ಯವಾದೀತು ಎಂದು ಕೇಳಿದರೆ ಬ್ರಹ್ಮದೇವರು ಹೇಳುತ್ತಾರೆ—'ಈ ನಿರ್ಗುಣದ ಬಗ್ಗೆ ವಿಚಾರಬೇಡ. ಗುಣನಿವೃತ್ತಿ ಮಾಡುವವನು ಹರಿಯೊಬ್ಬನೆ. ಏಕೆಂದರೆ ಯಾರು ಗುಣನಿವೃತ್ತಿ ಹೊಂದಿ ಜೀವನ್ಮುಕ್ತರಾಗಿರುವರೊ ಅವರಿಗೆ ನಾಯಿನರಿಗಳಿಗೆ ಆಹಾರವಾಗಬಲ್ಲ ಈ ಪಾರ್ಥಿವ ಶರೀರದಲ್ಲಿ ನಾನು ನನ್ನದೆಂಬ ಅಭಿಮಾನವಿರುವುದಿಲ್ಲ. ಅಭಿಮಾನವಿಲ್ಲದಿರುವುದೇ ಹರಿಯೆ ಮೋಕ್ಷದಾಯಕ ಎನ್ನುವಲ್ಲಿ ಸಾಕ್ಷಿ. ಏಕೆಂದರೆ ಅಭಿಮಾನವಿಲ್ಲದಿರುವವರ ಮೇಲೇ ಹರಿ ದಯೆ ಮಾಡುತ್ತಾನೆ. ಅವರನ್ನೇ ಸಂಸಾರದಿಂದ ಪಾರು ಮಾಡುತ್ತಾನೆ!



—೧೫೭—

## ಹರಿಯನುಗ್ರಹದಿಂದ ಮುಕ್ತರಾದವರು ಬ್ರಹ್ಮಾದಿಗಳು

**ವೇದಾಹಮಂಗ ಪರಮಸ್ಯ ಹಿ ಯೋಗಮಾಯಾಂ**
**ಯೂಯಂ ಭವಶ್ಚ ಭಗವಾನ್ ಅಥ ದೈತ್ಯವರ್ಯಃ ।**
**ಪತ್ನೀ ಮನೋಃ ಸ ಚ ಮನುಸ್ತದಪತ್ಯ ಭೂತಾಃ**
**ಪ್ರಾಚೀನಬರ್ಹಿ ಋಭುರಂಗ ಉತ ಧ್ರುವಶ್ಚ ॥**

(ಭಾ.೨.೭.೪೩)

**ತೀರ್ಣಸಂಸಾರಾ ಅಪಿ ಸಂತೀತ್ಯಾಹ ॥ ವೇದೇತಿ ॥ ಅಂಗೇತಿ । ನಾರದಂ**

**ಪ್ರತಿ ಬ್ರಹ್ಮಸಂಬೋಧನಂ । ಅಹಂ ಯೋಗಮಾಯಾಂ ಸ್ವಾಭಾವಿಕಂ ಮಹತ್ತ್ವಂ । ಯಥಾಯೋಗ್ಯಂ ವೇದ । ತೇನ ತೀರ್ಣಶ್ಚ ಸಂಸಾರಃ । ಏವಮನ್ಯತ್ರಾಪಿ ಯೋಜ್ಯಂ ॥**



ಬ್ರಹ್ಮದೇವರು ನಾರದರಿಗೆ ಹೇಳುತ್ತಾರೆ—ಆ ಪರಮಪುರುಷನ ಸ್ವರೂಪಸಾಮರ್ಥ್ಯವನ್ನು ನಾನು ಸ್ವಲ್ಪಮಟ್ಟಿಗೆ ತಿಳಿದಿದ್ದೇನೆ. ಭಗವಾನ್ ಶಿವ ತಿಳಿದಿದ್ದಾನೆ. ನೀವೂ ಮುನಿಗಳೂ ತಿಳಿದಿರುವಿರಿ. ಪ್ರಹ್ಲಾದ ಸ್ವಾಯಂಭುವ ಮನು, ಅವನ ಪತ್ನಿ ಶತರೂಪಾದೇವಿ, ಅವರ ಮಕ್ಕಳು ಮೊಮ್ಮಕ್ಕಳು ಪ್ರಾಚೀನ ಬರ್ಹಿರಾಜ ಋಭು ಅಂಗರಾಜ ಧ್ರುವ ಇವರೆಲ್ಲರೂ ತಿಳಿದಿದ್ದಾರೆ. ಇವರೆಲ್ಲರೂ ಹರಿಯ ಅನುಗ್ರಹದಿಂದ ಮುಕ್ತರಾದವರು.



—೧೫೮—

**ಹರಿಯನುಗ್ರಹದಿಂದ ಮುಕ್ತರಾದವರು ರಾಜರ್ಷಿಗಳು**

ಇಕ್ಷ್ವಾಕುರೈಲ ಮುಚುಕುಂದ ವಿದೇಹಗಾಧಿ
ರಘ್ವಂಬರೀಷ ಸಗರಾ ಗಯ ನಾಹುಷಾದ್ಯಾಃ ।
ಮಾಂಧಾತ್ರಲರ್ಕ ಶತಧನ್ವನ ರಂತಿದೇವ
ದೇವವ್ರತಾ ಬಲಿರಮೂರ್ತರಯೋ ದಿಲೀಪಃ ॥ (ಭಾ.೨.೭.೪೪)

**ಐಲಃ ಇಲಾಯಾಃ ಪುತ್ರಃ ಪುರೂರವಾಃ । ನಾಹುಷೋ ಯಯಾತಿಃ ॥**



ಇಕ್ಷ್ವಾಕು ಐಲಪುರೂರವ ಮುಚುಕುಂದ ವಿದೇಹಜನಕ ಗಾಧಿರಾಜ ರಘು ಅಂಬರೀಷ ಸಗರ ಗಯ ನಾಹುಷಯಯಾತಿ ಮಾಂಧಾತ ಅಲರ್ಕ ಶತಧನ್ವ ರಂತಿದೇವ ದೇವವ್ರತ ಭೀಷ್ಮ ಬಲಿ ಅಮೂರ್ತರಯ ದಿಲೀಪ ಇವರೆಲ್ಲರೂ ಹರಿಯನ್ನು ತಿಳಿದಿದ್ದಾರೆ. ಮುಕ್ತರಾಗಿದ್ದಾರೆ ಎಂದೂ ಬ್ರಹ್ಮದೇವರು ನಾರದರಿಗೆ ಹೇಳುತ್ತಾರೆ.



—೧೫೯—

## ಹರಿಯನುಗ್ರಹದಿಂದ ಮುಕ್ತರು ಬ್ರಹ್ಮರ್ಷಿಗಳು ಮುಂತಾದವರು

ಸೌಭರ್ಯುದಂಕ ಶಿಬಿ ದೇವಲ ಪಿಪ್ಪಲಾದಾಃ
ಸಾರಸ್ವತೋದ್ಧವ ಪರಾಶರ ಭೂರಿಷೇಣಾಃ ।
ಯೇಽನ್ಯೇ ವಿಭೀಷಣ ಹನೂಮದುಪೇಂದ್ರದತ್ತಃ
ಪಾರ್ಥಾರ್ಷ್ಟಿಷೇಣ ವಿದುರ ಶ್ರುತದೇವಮುಖ್ಯಾಃ ॥

(ಭಾ.೨.೭.೪೫)

ಭಕ್ತವರ್ಗೇಽಪಿ ಸ್ವಯಂ ನಿವಿಷ್ಟೋ ಭಕ್ತವದೇವ ಕರೋತಿ ಅಹೋ ವಿಡಂಬನಂ ವಿಭೂಮ್ನ ಇತಿ ದ್ಯೋತಯಿತುಂ ದತ್ತೋಪೇಂದ್ರಯೋಸ್ತತ್ಕೋಟಿ ನಿವೇಶನಮಿತಿ ಜ್ಞೇಯಂ । ಏತೇನ ಹನೂಮಾನಪಿ ವ್ಯಾಖ್ಯಾತಃ ॥



ಸೌಭರಿ ಉದಂಕ ಶಿಬಿ ದೇವಲ ಪಿಪ್ಪಲಾದ ಸಾರಸ್ವತ ಉದ್ಧವ ಪರಾಶರ ಭೂರಿಷೇಣ ವಿಭೀಷಣ ಹನುಮಂತ ಉಪೇಂದ್ರ ದತ್ತಾತ್ರೇಯ ಪಾರ್ಥ ಆರ್ಷ್ಟಿಷೇಣ ವಿದುರ ಶ್ರುತದೇವ ಮುಂತಾದವರೂ ಕೂಡ ಹರಿಯನ್ನು ಬಲ್ಲವರು ಎಂದು ಬ್ರಹ್ಮದೇವರು ನಾರದರಿಗೆ ಹೇಳುತ್ತಾರೆ.

ಇಲ್ಲಿ ಉಪೇಂದ್ರ ದತ್ತಾತ್ರೇಯರನ್ನು ಅವರು ಭಗವನ್ಮೂರ್ತಿಗಳೇ ಆಗಿದ್ದರೂ ಭಕ್ತರ ಸಾಲಿನಲ್ಲಿ ಬ್ರಹ್ಮದೇವರು ಹೇಳುತ್ತಿದ್ದಾರೆ. 'ಅಹೋ ವಿಭೂಮ್ನಃ ಚರಿತಂ ವಿಡಂಬನಂ' ಭಗವಂತನ ಲೀಲೆ ಲೋಕಾನುಕರಣೆ ಎಷ್ಟು ಮೋಹಕ? ಎಂದು ತಿಳಿಸುವುದು ಇದರ ಉದ್ದೇಶ. ಹಾಗೇ ಮುಕ್ತಪ್ರಾಯನಾದ ತನ್ನನ್ನು 'ವೇದಾಹಮಂಗ' ಎನ್ನುತ್ತ ಸಾಧಕ ಭಕ್ತರ ಸಾಲಿಗೆ ಸೇರಿಸಿದ್ದು, ಹನೂಮಂತನನ್ನು ಜೊತೆ ಸೇರಿಸಿಕೊಂಡಿದ್ದು ಭಕ್ತಿ ಎಂದರೆ ಹೀಗೆ ಇರಬೇಕೆಂದು ಬರಿ ಬಾಯಿಮಾತಿನಿಂದ ಹೇಳದೇ ನಡೆದು ತೋರಿಸಿದವರೆಂದು ತಿಳಿಸುವುದಕ್ಕಾಗಿ.



—೧೬೦—

**ವೇದಾಧಿಕಾರವಿಲ್ಲದವರಿಗೂ ಜ್ಞಾನದಿಂದ ಮುಕ್ತಿ**
**ಎಂದಮೇಲೆ ವೇದಾಧಿಕಾರಿಗಳಿಗೇನು ಹೇಳಬೇಕು?**

ತೇ ವೈವಿದಂತ್ಯತಿತರಂತಿ ಚ ದೇವಮಾಯಾಂ
ಸ್ತ್ರೀಶೂದ್ರ ಹೂಣ ಶಬರಾ ಅಪಿ ಪಾಪಜೀವಾಃ ।
ಯದ್ಯದ್ಭುತಕ್ರಮ ಪರಾಯಣ ಶೀಲ ಶಿಕ್ಷಾ
ಸ್ತಿರ್ಯಗ್ ಜನಾ ಅಪಿ ಕಿಮು ಶ್ರುತ ಧಾರಣಾ ಯೇ ॥

(ಭಾ.೨.೭.೪೬)

ಆದರಜನನಾಯ ಕೇವಲಂ ವೇದಾದಿಶಾಸ್ತ್ರಯೋಗ್ಯತಾರಹಿತಾನಾಂ ಸಂಸಾರತರಣಂ ದೃಷ್ಟಮಿತಿ ದರ್ಶಯತಿ ॥ ತೇ ವಾ ಇತಿ ॥ ಅದ್ಭುತಪರಾಕ್ರಮೋ ಹರಿಸ್ತತ್ಪರಾಯಣಾಸ್ತಚ್ಛೀಲಾ ಸ್ತಚ್ಛಿಕ್ಷಾಶ್ಚ । ಯದಿ ತರ್ಹಿ । ಸ್ತ್ರ್ಯಾದಯಃ ಪಾಪಜೀವಾ ಅಪಿ । ತಥಾ ತಿರ್ಯಗ್ಜನಾ ಅಪಿ । ಯೇ । ತೇಽಪಿ ಯಥಾಯೋಗ್ಯಂ ದೇವಮಾಯಾಂ ವಿದಂತಿ । ಅತಿತರಂತಿ ಚ ಸಂಸಾರಂ । ಸತಿ ಚೈವಂ । ಶ್ರುತಧಾರಣಾಃ ಶಾಸ್ತ್ರಶ್ರವಣಯೋಗ್ಯಾಃ । ತೇ ವಿದಂತಿ ಅತಿತರಂತಿ ಚೇತಿ ಕಿಮು ವಕ್ತವ್ಯಮಿತಿ ॥

❖❖❖

ಬ್ರಹ್ಮದೇವರು ನಾರದರಿಗೆ ಹೇಳುತ್ತಾರೆ—ಪಾಪದಿಂದ ಹೀನಜನ್ಮ ಪಡೆದಿರುವ ಸ್ತ್ರೀಯರು, ಶೂದ್ರರು, ಹೂಣ ಶಬರ ಮುಂತಾದವರು ಜರಿತಾರಿ ಮುಂತಾದ ಪಕ್ಷಿಗಳೂ ಕೂಡ ಭಗವಂತನನ್ನು ಆಶ್ರಯಿಸುವ ಸ್ವಭಾವ ಅಭ್ಯಾಸಗಳಿದ್ದರೆ ಭಗವಂತನನ್ನು ತಿಳಿದು ಸಂಸಾರವನ್ನು ದಾಟಬಲ್ಲರೆಂದಮೇಲೆ ಶಾಸ್ತ್ರ ಶ್ರವಣ ಮನನಾದಿಗಳನ್ನು ಮಾಡುವವರ ಬಗ್ಗೆ ಏನು ಹೇಳಬೇಕು?

ಯದ್ಯಪಿ ಸ್ತ್ರೀಶೂದ್ರಾದಿಗಳು ಶಾಸ್ತ್ರದ ಮೂಲಕ ಜ್ಞಾನಸಂಪಾದನೆಗೆ ಸಾಮರ್ಥ್ಯ ಅಧಿಕಾರಗಳಿಲ್ಲದವರು ಹೇಗೆ ಶಾಸ್ತ್ರಶ್ರವಣಾದಿ ಅಭ್ಯಾಸ ಮಾಡಬಲ್ಲರು? ಹೇಗೆ ಜ್ಞಾನಸಂಪಾದಿಸಿ ಮುಕ್ತಿಭಾಗಿಗಳಾದಾರು? ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಭಾಗವತವು ಇಲ್ಲಿ 'ಪಾಪಜೀವಾಃ' ಎಂಬ ಶಬ್ದದಿಂದ ಸಮಾಧಾನ ನೀಡುತ್ತಿದೆ.

ಪಾಪಜೀವರೆಂದರೆ ಸ್ವಭಾವದಿಂದ ಪಾಪಿಗಳಾದ ಜೀವರಲ್ಲ. ಸ್ವಭಾವದಿಂದಲೇ ಪಾಪಜೀವರಾಗಿದ್ದರೆ ಅವರು ಎಂದೂ ಅದ್ಭುತಕ್ರಮ ಪರಾಯಣಶೀಲ ಶಿಕ್ಷರಾಗುವುದಿಲ್ಲ. ವಿಷ್ಣುಭಕ್ತರ ಶೀಲವನ್ನು ಅಭ್ಯಾಸ ಮಾಡಿದರೆ ಸಾಲದು. ಶೀಲ ಉಳ್ಳವರಾಗಿರಬೇಕು. ಶೀಲ ಉಳ್ಳವರಾಗಿದ್ದು ವಿಷ್ಣುಭಕ್ತಿಯನ್ನು ಸ್ವಾಭಾವಿಕವಾಗಿ ಹೊಂದಿರುವವರಾಗಿರಬೇಕು. ಮತ್ತು ಆ ವಿಷ್ಣುಭಕ್ತಿಯನ್ನು ಶ್ರವಣಾದಿಗಳ ಮೂಲಕ ಅಭ್ಯಾಸವನ್ನು ಮಾಡಿರಬೇಕು. ಸ್ವಾಭಾವಿಕ ಪಾಪ ಜೀವರು ಹೀಗೆ ಎಂದೂ ಅದ್ಭುತಕ್ರಮ ಪರಾಯಣಶೀಲಶಿಕ್ಷರಾಗಿರುವುದಿಲ್ಲ. ಅದರಿಂದ 'ಪಾಪಜೀವ'ರೆಂದರೆ, ಇಲ್ಲಿ ಮುಕ್ತಿಯೋಗ್ಯರಾದ ದೇವಋಷಿ ಮನುಷ್ಯರೇ ಶಾಪಾದಿ ಕಾರಣಾಂತರದಿಂದ ಪಾಪನಿಮಿತ್ತವಾಗಿ ಭೂಮಿಯಲ್ಲಿ ಸ್ತ್ರೀ ಶೂದ್ರ ಪಶುಪಕ್ಷಿಯೋನಿಗಳಲ್ಲಿ ಜನಿಸಿದ್ದರೆ ಅವರನ್ನು ಪಾಪಜೀವ ರೆಂದಿದ್ದಾರೆ. ಅವರು ಯದ್ಯಪಿ ಶೀಲಸ್ವಭಾವಸಿದ್ಧ ಭಕ್ತಿಉಳ್ಳವರೇ ಆದರೂ ಶಾಸ್ತ್ರಶ್ರವಣಾದಿ ಅಭ್ಯಾಸದಿಂದ ಭಕ್ತಿಸಂಪಾದನೆ ಮಾಡಲು ಅಧಿಕಾರವಿಲ್ಲದವರು ಹೇಗೆ ಅಭ್ಯಾಸ ಮಾಡಬೇಕೆಂಬ ಪ್ರಶ್ನೆ ಬಂದೇ ಬರುತ್ತದೆ.

ಇದಕ್ಕೆ ಸಮಾಧಾನ, ಸ್ತ್ರೀಶೂದ್ರಾದಿಗಳಿಗೆ ಆಯಾಯಾ ಜನ್ಮಗಳಲ್ಲಿ ಶಾಸ್ತ್ರಾಭ್ಯಾಸಾಧಿಕಾರವಿಲ್ಲದಿದ್ದರೂ ಪೂರ್ವಜನ್ಮದಲ್ಲಿಯೆ ವಿದುರಾದಿ ಶೂದ್ರರಂತೆ ಅಭ್ಯಾಸ ಮಾಡಿರುತ್ತಾರೆ. ಮತ್ತು ಈ ಜನ್ಮದಲ್ಲಿಯೂ ಅವರು ಬ್ರಹ್ಮಜ್ಞಾನಾಧಿಕಾರಿಗಳಾಗಲು ಅಡ್ಡಿಇಲ್ಲ. ಏಕೆಂದರೆ ಅವರು ಭಕ್ತಿಉಳ್ಳವರೇ ಆಗಿದ್ದರೆ ವಿಷ್ಣುನಾಮಗಳ ಜ್ಞಾನ–ಅಭ್ಯಾಸಗಳಲ್ಲಿ ಅವರಿಗೆ ಅಧಿಕಾರವಿದ್ದೇ ಇದೆ. ಸ್ತ್ರೀಯರೂ ಬ್ರಾಹ್ಮಣಾಭಾಸರೂ ಶೂದ್ರಾದಿಗಳೂ ಪಂಚರಾತ್ರಾದಿಗ್ರಂಥಗಳಿಂದ ನಾಮಜ್ಞಾನ ಅಧ್ಯಯನಮಾಡಿ ಬ್ರಹ್ಮಜ್ಞಾನ ಸಂಪಾದಿಸಿ ಮುಕ್ತಿಹೊಂದಲು ಅವಕಾಶವಿದ್ದೇ ಇದೆ. ಆದರೆ ಅವರು ಗ್ರಂಥವನ್ನು ಆದ್ಯಂತ ಪಠಿಸದೆ ಅದಕ್ಕೆ ಯೋಗ್ಯ ಅಧಿಕಾರಿಗಳಾದ ಶ್ರೋತ್ರಿಗಳನ್ನು ಮುಂದಿಟ್ಟುಕೊಂಡು ಕೆಲವು ಭಾಗಗಳನ್ನು ಅಧ್ಯಯನ ಮಾಡಬಹುದು. ಬ್ರಾಹ್ಮಣ ಸ್ತ್ರೀಯರಿಗೆ ಗ್ರಂಥಪಠನೆಗೂ ಅವಕಾಶ ಉಂಟು.

ಪೂರ್ವಜನ್ಮದಲ್ಲಿ ಹೀಗೆ ಶಾಸ್ತ್ರಾಭ್ಯಾಸ ಮಾಡಿದವರಿಗೂ ಕೂಡ ಜ್ಞಾನಾಧಿಕಾರವಿದೆ ಎಂದಮೇಲೆ, ಈ ಜನ್ಮದಲ್ಲಿ ಶಾಸ್ತ್ರಾಭ್ಯಾಸ ಮಾಡುವವರಿಗೆ ಇನ್ನೇನು

ಹೇಳಬೇಕೆಂದು ಕೈಮುತ್ಯನ್ಯಾಯ, 'ಕಿಮುತ' 'ಇನ್ನೇನು' ಎನ್ನುವ ನ್ಯಾಯವನ್ನು ಭಾಗವತ ತಿಳಿಸುತ್ತಿದೆ.



—೧೬೧—

**ಹರಿಯನ್ನೇ ಲಕ್ಷ್ಮಿ ವರಿಸಿದ್ದರಿಂದ ಹರಿಗೆ ಎಣೆಯಾರುಂಟು**

**ಏತಾವತಾಲಂ ನನು ಸೂಚಿತೇನ**
**ಗುಣೈರಸಾಮ್ಯೇಽನತಿಶಾಯನೇಽಸ್ಯ ।**
**ಹಿತ್ವೇತರಾನ್ ಪ್ರಾರ್ಥಯತೋ ವಿಭೂತಿ**
**ರ್ಯಸ್ಯಾಂಘ್ರಿರೇಣುಂ ಜುಷತೇಽನಭೀಪ್ಸೋಃ ॥**

(ಭಾ.೧.೧೮.೨೦)

**ಯತಃ ಸಕಲಜಗಜ್ಜನ್ಮಾದಿಹೇತುಃ ತತ ಏವ ನಿಖಿಲಗುಣಗಣೋ ಗುಣನಿವರ್ತಕಶ್ಚ ಭಗವಾನಿತಿ ಸ ಏವ ಮುಮುಕ್ಷುಭಿರ್ಜಿಜ್ಞಾಸ್ಯ ಇತ್ಯುದಿತಂ। ತತ್ರ ಯದಿ ಇತೋಽನ್ಯೋಽಪೀದೃಶಃ ತರ್ಹ್ಯಯಮೇವೇತ್ಯವಧಾರಣಾನುಪಪತ್ತಿಃ। ಯದಿ ವಾ ಇತೋಽಧಿಕಃ ತರ್ಹಿ ಜಿಜ್ಞಾಸ್ಯ ಇತ್ಯಸ್ಯೈವಾನುಪಪತ್ತಿರಿತ್ಯತ ಆಸ್ತಾಂ ತಾವತ್ಸಾಧಕಾಂತರಗವೇಷಣಾಯಾಸಃ ಏತಾವತೈವ ಜ್ಞಾಪಕೇನ ಸದೃಶಾಧಿಕರಹಿತತ್ವಂ ಸಿದ್ಧಮಿತ್ಯಾಹ ॥ ಏತಾವತೇತಿ ॥ ವಿಭೂತಿರ್ಮಹಾಲಕ್ಷ್ಮೀಃ। ಪ್ರಾರ್ಥಯತೋಽಪೀತರಾನ್ಹಿತ್ವಾ। ಅನಭೀಪ್ಸೋರಪಿ ಯಸ್ಯಾಧಿರೇಣುಂ ಜುಷತ ಇತಿ ಯತ್। ಏತಾವತೈವ ಸೂಚಿತೇನ ಸೂಚನೇನ ಜ್ಞಾಪಕೇನ। ಅಸ್ಯ ಹರೇರ್ಗುಣೈರಸಾಮ್ಯೇ ಗುಣೈಃ ಸಮರಹಿತತ್ವೇ। ಅನತಿಶಾಯನೇ ಅಧಿಕರಹಿತತ್ವೇ ಚಾಲಂ। ಸಾಧಕಾಂತರಾಪೇಕ್ಷಾ ನಾಸ್ತೀತಿ ಭಾವಃ। ನನು ನಿಶ್ಚಿತಮೇತತ್ ॥**



ಶ್ರೀಹರಿಗೆ ಗುಣದಲ್ಲಿ ಸಮರಿಲ್ಲ, ಹೆಚ್ಚಿನವರೂ ಇಲ್ಲ ಎನ್ನಲು ಇಷ್ಟು ಹೇಳಿದರೆ ಸಾಕು—'ಮಹಾಲಕ್ಷ್ಮಿ ಅಂದು ಸಮುದ್ರಮಥನದಿಂದ ಉದಿಸಿ ಬಂದವಳು ಆಗ ತನ್ನ ಅನುಗ್ರಾಹಾಕಾಂಕ್ಷಿಗಳಾಗಿ ಸ್ವಯಂವರ ಸಭೆಯಲ್ಲಿ ನೆರೆದಿದ್ದ ಬ್ರಹ್ಮಾದಿಗಳೆಲ್ಲರನ್ನೂ ಬಿಟ್ಟು ತನ್ನನ್ನು ಬಯಸದಿರುವ ಸ್ವರಮಣನಾದ

**ಶ್ರೀಹರಿಯ ಪಾದಧೂಳಿಯ ಸೇವೆಗೇ ನಿಂತುಬಿಟ್ಟಳು' ಎಂದು ಸೂತರು ಶೌನಕಾದಿಗಳಿಗೆ ಹೇಳಿದರು.**

ಜಗಜ್ಜನ್ಮಾದಿಕಾರಣನು ಸುಗುಣನೆ ನಿರ್ಗುಣನೆ ಎಂದು ಕೇಳುವವರಿಗೆ ಅದರ ವಿಚಾರಬೇಡ, ಕಲ್ಯಾಣಗುಣಪೂರ್ಣನಾದರೂ ಶ್ರೀಹರಿ ಪ್ರಕೃತಿಯ ಗುಣರಹಿತನಾಗಿದ್ದು ನಿರ್ಗುಣನೂ ಆಗಿದ್ದಾನೆ. ಆದರಿಂದ ಜೀವರನ್ನು ಬಂಧಿಸುವ ಪ್ರಕೃತಿಯ ಗುಣಗಳಿಗೆ ನಿವರ್ತಕ, ಮೋಕ್ಷದಾಯಕನೂ ಆಗಿದ್ದಾನೆ ಎನ್ನಲು ಬ್ರಹ್ಮರುದ್ರಾದಿ ಸಮಸ್ತ ಭಕ್ತ ಸಮೂಹವು ಶ್ರೀಹರಿಯ ಅನುಗ್ರಹದಿಂದ ಜೀವನ್ಮುಕ್ತಿಭಾಗಿಗಳಾಗಿರುವುದೇ ಸಾಕ್ಷಿ ಎಂದು ಹೇಳಿದ್ದಾಯಿತು.

ಜನ್ಮಾದಿಹೇತುವಾದ್ದರಿಂದಲೇ ಶ್ರೀಹರಿ ಕಲ್ಯಾಣಗುಣಪೂರ್ಣ, ಅದರಿಂದಲೇ ಭಕ್ತರ ಬಂಧಕ ಗುಣಗಳಿಗೆ ನಿವರ್ತಕನೆಂದೂ ಮುಮುಕ್ಷುಗಳು ಅವನನ್ನೇ ಶಾಸ್ತ್ರಾಭ್ಯಾಸದ ಮೂಲಕ ತಿಳಿಯಬೇಕೆಂದೂ ಹೇಳಿದ್ದಾಯಿತು.

ಈಗ ಪ್ರಶ್ನೆ, ಶ್ರೀಹರಿಯಂತೆ ಸಕಲ ಕಲ್ಯಾಣಗುಣಪೂರ್ಣ ಇನ್ನೊಬ್ಬನೂ ಇರುವುದಾದರೆ ಹರಿಯನ್ನೇ ಶಾಸ್ತ್ರದಿಂದ ತಿಳಿಯಬೇಕು ಏಕೆ? ಹರಿಯನ್ನೂ ಮೀರಿಸಿರುವವನು ಇನ್ನೊಬ್ಬನಿರುವುದಾದರೆ ಹರಿಯನ್ನು ಭಜಿಸಬೇಕು ಏಕೆ? ಈ ಪ್ರಶ್ನೆಗಳಿಗೆ ಸಮಾಧಾನ ನೀಡುವ ಪ್ರಯಾಸಬೇಕಿಲ್ಲ. ಶ್ರೀಮಹಾಲಕ್ಷ್ಮಿ ಬೇರೆ ಎಲ್ಲ ದೇವತೆಗಳನ್ನು ಬಿಟ್ಟು ಹರಿಯನ್ನೇ ಸ್ವಯಂವರದಲ್ಲಿ ವರಿಸಿದಳೆಂಬ ಒಂದು ನಿದರ್ಶನವೇ ಸಾಕು. ಶ್ರೀಹರಿಯೇ ಸಕಲಕಲ್ಯಾಣಗುಣಾಕರ, ನಿರ್ದೋಷ, ಭಕ್ತಾನುಗ್ರಹಕಾರಿ, ಮೋಕ್ಷದಾಯಕ ಎಂದು ಇದರಿಂದಲೇ ಸಿದ್ಧವಾಗುವುದು ಎಂದು ಭಾಗವತ ಹೇಳುತ್ತಿದೆ.



—೧೬೨—

**ದುರ್ವಾಸ, ಶುಕ್ರ ಬೃಹಸ್ಪತಿ ರುದ್ರರು ಯಾರೂ ಹರಿಗೆ ಸಮರಲ್ಲ**

**ನೂನಂ ತಪೋ ಯಸ್ಯ ನ ಮನ್ಯುನಿರ್ಜಯೋ**
**ಜ್ಞಾನಂ ಕ್ವಚಿತ್ ತಸ್ಯ ನ ಸಂಗವರ್ಜಿತಂ**
**ಕಶ್ಚಿನ್ಮಹಾಂಸ್ತಸ್ಯ ನ ಕಾಮನಿರ್ಜಯಃ**
**ಸ ಈಶ್ವರಃ ಕಿಂ ಪರತೋ ವ್ಯಪಾಶ್ರಯಃ ॥** (ಭಾ.೮.೮.೧೯)

ಸತ್ಯಮೇತತ್ । ಲಕ್ಷ್ಮೀಸ್ತಾವತ್ಸರ್ವಮಾನ್ಯಾ । ಸಾ ಚ ಪ್ರಾರ್ಥಯತೋಽಪೀತರಾನ್ಪರಿತ್ಯಜ್ಯ ಅನಭೀಪ್ಸೋರಸ್ಯ ಚರಣೌ ಯದ್ಯಾಶ್ರಿತಾ ತದೈತಸ್ಯ ಸಮೋ ನಾಸ್ತಿ । ತಥಾ ಅಧಿಕೋಽಪಿ ನಾಸ್ತೀತಿ ಸಿಧ್ಯತೀತಿ । ಯದಿ ಚ ಕಶ್ಚನ ಏತೇನ ಸಮಃ ಸ್ಯಾತ್ತದಾ ತತ್ಪರಿತ್ಯಾಗೇನ ಏತಸ್ಯ ಚರಣಾನುಸರಣಾನುಪಪತ್ತಿಃ । ಅಧಿಕಸ್ಯ ಸತ್ತ್ವೇ ತು ಏತತ್ಸ್ವೀಕರಣಸ್ಯೈವಾನುಪಪತ್ತಿಃ । ಏತದೇವ ಕಥಂ । ಅನಾದಿತ ಏವ ಹರಿಃ ಲಕ್ಷ್ಮ್ಯಾಃ ಪತಿಃ । ಲಕ್ಷ್ಮೀಸ್ತಸ್ಯ ಭಾರ್ಯೇತಿ ಚಾಗೋಪಾಲಾನಾಂ ಪ್ರಸಿದ್ಧಿಃ । ಸತಿ ಚೈವಂ ಸ್ವಯಂವರಾದಾವಿವ ಅನ್ಯಾನ್ಪರಿತ್ಯಜ್ಯ ಏತತ್ಪಾಣಿಮೇವ ಜಗ್ರಾಹೇತಿ ಕಥಂ ವಕ್ತುಂ ಶಕ್ಯಂ । ಅತ ಏತನ್ನ ಹೃದಯಂಗಮಮಿತ್ಯತಃ ಸತ್ಯಂ । ಅನಾದಿತೋ ಭರ್ತೃಭಾರ್ಯಾಭಾವ ಇತಿ । ತಥಾಪಿ ಕಾರಣವಿಶೇಷೇಣ ಕಾಲವಿಶೇಷೇ ಸಮುದ್ರೋದ್ಭೂತಯಾ ಲಕ್ಷ್ಮ್ಯಾ ನೂತನಸ್ತ್ರೀವ ವಿಡಂಬನಂ ಕುರ್ವಂತ್ಯಾ ಏವಂ ಕೃತಮಿತಿ ಭಾವೇನ ತಯಾ ಕೃತಮನ್ಯೇಷು ದೋಷೋದ್ಭಾವನಂ ತಾವದ್ದರ್ಶಯತಿ । ನೂನಮಿತಿ ॥ ಯಸ್ಯ ತಪೋಽಸ್ತಿ ತಸ್ಯ ಮನ್ಯುನಿರ್ಜಯೋ ನೂನಂ ನಿಶ್ಚಯೇನ ನಾಸ್ತಿ । ಅನೇನ ತಾಪಸೋ ದುರ್ವಾಸಾದಿಃ ಪ್ರತಿಷಿದ್ಧಃ । ಸ ಹಿ ಅಂಬರೀಷೇ ರಾಜ್ಞಿ ಕ್ರೋಧಂ ಕೃತ್ವಾ ಸುಬಹುಪ್ರಸಿದ್ಧಿಮಾನಿತಿ ಹಿ ಪ್ರಸಿದ್ಧಂ। ಕ್ವಚಿತ್ಪುರುಷೇ, ಜ್ಞಾನಮಸ್ತಿ । ತಸ್ಯ ತದಪಿ ಸಂಗೇನ ವಿಷಯಸಂಗೇನ ವರ್ಜಿತಂ ರಹಿತಂ ನೂನಂ ನ ಭವತಿ। ಅನೇನ ಶುಕ್ರಬೃಹಸ್ಪತೀ। ತೌ ದೇವದೈತ್ಯಪುರೋಹಿತೌ ಮಂತ್ರಿಸದೃಶಾವಿತಿ ಹಿ ಪ್ರಸಿದ್ಧಂ । ಕಶ್ಚಿನ್ಮಹಾನಸ್ತಿ । ತಸ್ಯ ನೂನಂ ಕಾಮಜಯೋ ನಾಸ್ತಿ। ಅನೇನ ಬ್ರಹ್ಮಾ। ಸ ಹಿ ಸ್ವದುಹಿತರಮೇವ ಕಾಮಯಾಮಾಸೇತಿ ಪ್ರಸಿದ್ಧಂ । ಯಶ್ಚ ವ್ಯಪಗತಃ ಆಶ್ರಯೋ ಯಸ್ಯ ತಾದೃಶೋ ಭೂತ್ವಾ। ಪರತಃ ಪರೇಣ ಸಾಶ್ರಯೋ ಭವೇತ್। ಸ ಈಶ್ವರಃ ಕಿಂ। ಈಶ್ವರಪದವಾಚ್ಯೋ ನ ಭವೇದೇವ। ನೂನಮಿತ್ಯನೇನ ಭಸ್ಮಾಸುರಭಯಾತ್ಪಲಾಯಿತೋ ಮಹಾದೇವೋ ಬಟುರೂಪಿಣಾ ಹರಿಣಾ ರಕ್ಷಿತ ಇತಿ ಲೋಕಪ್ರಸಿದ್ಧಿಂ ಸೂಚಯತಿ । ಅನೇನೇಶ್ವರೋ ವಾರಿತಃ ॥



ಶುಕಮುನಿ ಹೇಳುತ್ತಾರೆ—ನಿಜ, ಲಕ್ಷ್ಮಿ ಯಾರಿಗೆ ಬೇಡ, ಎಲ್ಲರೂ ಅವಳ ಅನುಗ್ರಹವನ್ನೇ ಬಯಸುವವರೆ. ಅಂಥವಳು ತನ್ನನ್ನು ಬಯಸುವ ಎಲ್ಲ ಇತರರನ್ನು ಬಿಟ್ಟು, ಸ್ವರಮಣನಾದ್ದರಿಂದ ತನ್ನನ್ನು ತನ್ನ ಸುಖಕ್ಕಾಗಿ ಬಯಸದೆ, ಭಕ್ತಳೆಂಬ ಕಾರಣಕ್ಕಾಗಿ ಅವರನ್ನು ಪ್ರೀತಿಸುವ ಹರಿಯನ್ನೇ ಬಯಸಿ ಭಕ್ತಿಯಿಂದ ಅವನ ಪಾದಧೂಳಿ ಸೇವೆಯ ಭಾಗ್ಯವನ್ನು ಪಡೆದಳು.

ಆದರೆ ಇದು ನಿಜವಾದರೆ ಶ್ರೀಹರಿಗೆ ಸಮರಿಲ್ಲ ಉತ್ತಮರೂ ಸರ್ವಥಾ ಇಲ್ಲ. ಎಂದು ಸಿದ್ಧವಾಯಿತು. ಒಂದುವೇಳೆ ಒಬ್ಬನು ಸಮ ಅಥವಾ ಉತ್ತಮನಿದ್ದರೆ ಅವನನ್ನು ಬಿಟ್ಟು ಇವನ ಚರಣಸೇವೆಯನ್ನು ಲಕ್ಷ್ಮಿ ಏಕೆ ಮಾಡಬೇಕು. ಮತ್ತು ಅವನ ಸೇವೆ ಮಾಡುವ ಭಾಗ್ಯವನ್ನು ಹೊಸದಾಗಿ ಏಕೆ ಪಡೆಯಬೇಕು? ಅನಾದಿಕಾಲದಿಂದಲೂ ಲಕ್ಷ್ಮಿ ನಾರಾಯಣನ ಅರ್ಧಾಂಗಿ. ಇದು ಆ ಬಾಲಗೋಪಾಲಿಕೆಯರಿಗೆಲ್ಲ ಗೊತ್ತು. ಹೀಗಿದ್ದರೂ ಸ್ವಯಂವರದಲ್ಲಿ ತನಗೆ ಯೋಗ್ಯನಾದ ಪತಿಯನ್ನು ಆರಿಸಿಕೊಳ್ಳುವಳೆಂದರೆ ನಮಗೆ ಇದು ಸರಿಯೆನಿಸದು ಎಂದು ನಾವು ಹೇಳಿಕೊಂಡರೆ ಶುಕಮುನಿ ಉತ್ತರ ನೀಡುತ್ತಾರೆ—

ಇದು ಲಕ್ಷ್ಮಿಯ ಒಂದು ಅವತಾರ. ಸಮುದ್ರರಾಜನ ಮಗಳಾಗಿ ಅವತರಿಸಿದ ಲಕ್ಷ್ಮಿ ಕ್ಷತ್ರಿಯ ರಾಜರ ಸಂಪ್ರದಾಯದಂತೆ ಸ್ವಯಂವರದಲ್ಲಿ ಓರ್ವ ಪತಿಯನ್ನು ಆರಿಸಿಕೊಳ್ಳಬೇಕಾಗಿತ್ತು. ಲೋಕವಿಡಂಬನೆ ಮಾಡಬೇಕಿತ್ತು. ಅದಕ್ಕೆ ತನ್ನ ಅನುಗ್ರಹಾಕಾಂಕ್ಷಿಗಳಾದ, ತನ್ನ ಮಕ್ಕಳೇ ಆದ ಬ್ರಹ್ಮಾದಿ ಸಕಲ ದೇವತೆಗಳಲ್ಲಿ ಅವರು ಸದ್ಗುಣಮೂರ್ತಿಗಳೆ ಆದರೂ ಒಂದಲ್ಲ ಒಂದು ದೋಷವನ್ನು ಹೇಳಿ ಅವರನ್ನು ಬಿಟ್ಟು ಯಾವುದೇ ದೋಷವನ್ನು ಹೇಳಲಾಗದ ನಿರ್ದೋಷಗುಣಪೂರ್ಣ ಸರ್ವೋತ್ತಮದೇವನಾದ ಹರಿಯನ್ನೇ ಹೊಸದಾಗಿ ಪತಿಯೆಂದು ಆರಿಸಿಕೊಳ್ಳುವ ನಟನೆ ಮಾಡಿದಳು.

ಶ್ರೀಹರಿಯೂ ಭಕ್ತರ ಸಂತೋಷಕ್ಕಾಗಿ ಹೊಸ ಕಲ್ಯಾಣೋತ್ಸವ ಮಾಡಿಸಿಕೊಳ್ಳಲು ಬಯಸಿದ್ದಾನೆ. ಅಜ್ಞ ಜನರಿಗೆ ಇದರಿಂದ ಹರಿಯ ನಿರ್ದೋಷಗುಣಪೂರ್ಣತ್ವ ಸರ್ವೋತ್ತಮತ್ವಜ್ಞಾನ ಲಾಭವಾಗುವುದು ಲಕ್ಷ್ಮೀನಾರಾಯಣರಿಬ್ಬರಿಗೂ ಬೇಕಾಗಿತ್ತು. ಆದರಿಂದ ಲಕ್ಷ್ಮಿ ಇತರರಲ್ಲಿ ಹೀಗೆ ದೋಷಗಳನ್ನು ಹೇಳುತ್ತಾಳೆ.

**ದುರ್ವಾಸರು ಮುಂತಾದ ಮಹಾತಪಸ್ವಿಗಳಲ್ಲಿ ತಪಸ್ಸು ನಿಶ್ಚಿತವಾಗಿ ಇದೆ. ಆದರೆ ಅವರು ಕೋಪವನ್ನು ಬಿಡಲಿಲ್ಲ. ದುರ್ವಾಸರಿಗೆ ಅಂಬರೀಷ ರಾಜನಲ್ಲಿ ಅವನು ತಮ್ಮನ್ನು ಬಿಟ್ಟು ಮೊದಲಿಗೆ ತಾನೇ ಆಹಾರವನ್ನು ಸ್ವೀಕರಿಸಿದನೆಂದು ಕೋಪ. ಶುಕ್ರಾಚಾರ್ಯರು ಬೃಹಸ್ಪತ್ಯಾಚಾರ್ಯರು ಗುರುಗಳು, ಜ್ಞಾನ**

ಅವರಲ್ಲಿ ಇದೆ. ಆದರೆ, ಗುರುದಕ್ಷಿಣೆಯ ಅಭಿಲಾಷೆಯನ್ನು ಬಿಡಲಿಲ್ಲ. ಬ್ರಹ್ಮದೇವರು ಬ್ರಹ್ಮಾಂಡಕ್ಕೆ ಮೂಲವಾದ ಮಹತ್ತತ್ವಕ್ಕೆ ಅಭಿಮಾನಿಗಳಾಗಿದ್ದರೂ ಮಹಾನ್ ಎನಿಸಿದರೂ ದುರ್ಜನಮೋಹನಕ್ಕಾಗಿ ಮಗಳನ್ನೇ ಮೋಹಿಸುವ ಅಲ್ಪತನ ತೋರಿದರು. ಈಶ್ವರನು ಹೆಸರಿಗೆ 'ಈಶ್ವರ' ಸರ್ವಶಕ್ತನೆ. ಆದರೆ ಭಸ್ಮಾಸುರನು ಬೆನ್ನಟ್ಟಿಬಂದಾಗ ವಟುರೂಪಿ ಹರಿಯನ್ನು ಆಶ್ರಯಿಸಿ ಅಪಾಯದಿಂದ ಪಾರಾದ. ಇಂಥವನು ನಿಜವಾಗಿ ಈಶ್ವರನೆ? ಅಲ್ಲ.



–೧೬೩–

**ಯಮ ಬಲಿ ಸೂರ್ಯಚಂದ್ರರು ಯಾರೂ ತ್ರಿಗುಣ ಬಂಧರಹಿತರಲ್ಲ**

**ಧರ್ಮಃ ಕ್ವಚಿತ್ ತಸ್ಯ ನ ಭೂತ ಸೌಹೃದಂ**
**ತ್ಯಾಗಃ ಕ್ವಚಿತ್ ತಚ್ಚ ನ ಮುಕ್ತಿಕಾರಣಂ ।**
**ವೀರ್ಯಂ ಚ ಪುಂಸೋಽಸ್ಯಜ ವೇಗನಿಷ್ಕೃತಂ**
**ನ ಹಿ ದ್ವಿತೀಯೋ ಗುಣಸಂಗವರ್ಜಿತಃ ॥**

(ಭಾ.೮.೮.೨೦)

ಕ್ವಚಿತ್ಪುಂಸಿ ಧರ್ಮೋಽಸ್ತಿ । ತಸ್ಯ ಭೂತೇಷು ದಯೈವ ನಾಸ್ತಿ ನೂನಂ । ಅನೇನ ಯಮಃ । ಭೂತಾನಾಂ ಯಮಃ ಶಾಸ್ತೇತಿ ಪ್ರಸಿದ್ಧಂ । ಕ್ವಚಿತ್ಪುರುಷೇಷು ತ್ಯಾಗೋ ವರ್ತತೇ । ತದಪಿ ನ ಮುಕ್ತಿಪ್ರಾಪಕಂ । ತೇಷಾಂ ಮುಕ್ತಿದಾನ-ಸಾಮರ್ಥ್ಯಾಭಾವಾತ್ । ಅಪೇಕ್ಷಿತಾದಾನಸ್ಯ ತ್ಯಾಗಿದೋಷತ್ವಾತ್ । ಅನೇನ ಚ ದೈತ್ಯೇಂದ್ರಾ ಬಲ್ಯಾದಯಃ । ಮುಕ್ತಿದಾನಸಾಮರ್ಥ್ಯಂ ಚ ಅನ್ಯತ್ರ ನಾಸ್ತೀತಿ ನಿರ್ಣೀತಮಿತಿ ನೂನಮಿತ್ಯನೇನಾಹ । ಕಸ್ಯಚಿತ್ಪುಂಸೋ ವೀರ್ಯಂ ತೇಜಸ್ವಿತ್ವ-ಲಕ್ಷಣಮತಿವೇಗಿತ್ವಲಕ್ಷಣಂ ವಾಽಸ್ತಿ । ತದಪ್ಯಜವೇಗೇನ ಕಾಲಚಕ್ರವೇಗೇನ ಜಿತಮೇವ । ಅನೇನ ಸೂರ್ಯಚಂದ್ರವಾಯವಃ । ತೇ ಹಿ ಕ್ಷಣಮಾತ್ರ-ಮೇಕತ್ರಾವಸ್ಥಾನರಹಿತಾ ಇತಿ ಪ್ರಸಿದ್ಧಮಿತಿ ನೂನಮಿತ್ಯನೇನ ಸೂಚಯತಿ ॥



ಒಬ್ಬನಲ್ಲಿ ಧರ್ಮನಿಷ್ಠೆ ಇದೆ. ಧರ್ಮರಾಜನೆಂದೇ ಯಮನು ಪ್ರಸಿದ್ಧನಾಗಿದ್ದಾನೆ. ಆದರೆ ಅವನಲ್ಲಿ ಭೂತದಯೆ ಇಲ್ಲ. 'ಶಾಸ್ತಾ' ನರಕದಲ್ಲಿ

ಭಯಂಕರ ಶಿಕ್ಷೆ ಕೊಡುವವನು ಯಮ ಎಂಬುದು ಪ್ರಸಿದ್ಧ. 'ತ್ಯಾಗ' ಅಂದರೆ ದಾನ ಮಾಡುತ್ತಾರೆ. ಬಲಿಚಕ್ರವರ್ತಿ ಮುಂತಾದವರು. ಆದರೆ ಅದು ಮುಕ್ತಿಗೆ ಕಾರಣವಲ್ಲ. ವಾಮನನಿಗೆ ಬಲಿ ಮೂರು ಹೆಜ್ಜೆ ಭೂಮಿ ವಾಗ್ದಾನ ಮಾಡಿದರೂ ಕೊಡಲಾಗದೆ ಅದರಿಂದ ಅವನು ಮುಕ್ತಿಭಾಗಿಯಾಗಲಿಲ್ಲ. ಇತರರಿಗೆ ಮುಕ್ತಿನೀಡುವ ಸಾಮರ್ಥ್ಯವೂ ಅವನಲ್ಲಿಲ್ಲ. ಸೂರ್ಯಚಂದ್ರ ವಾಯುಗಳಲ್ಲಿ ಅತಿವೇಗದಿಂದ ಸಂಚರಿಸುವ ಸಾಮರ್ಥ್ಯವಿದೆ. ಆದರೆ ಕಾಲಚಕ್ರವೇಗಕ್ಕೆ ಅವರು ಸೋಲುತ್ತಾರೆ. ಒಂದುಕ್ಷಣವೂ ನಿಂತಲ್ಲಿ ನಿಂದಿರಲಾರರು. ಶ್ರೀಹರಿಯೊಬ್ಬನನ್ನು ಬಿಟ್ಟರೆ ಎರಡನೆಯವನು ತ್ರಿಗುಣಬಂಧರೂಪ ಸಂಸಾರಕ್ಕೆ ಒಳಗಾಗದವನೆ ಇಲ್ಲ. ಹೀಗೆ ಲಕ್ಷ್ಮಿ ಇತರರಲ್ಲಿ ದೋಷಗಳನ್ನು ಹೇಳುತ್ತಾಳೆ.



—೧೬೪—

**ಶೇಷಾದಿಸರ್ಪಗಳು, ರಾಜರು, ಮಾರ್ಕಂಡೇಯಾದಿ ಮುನಿಗಳು, ದೇವೇಂದ್ರ ಇವರಾರೂ ಹರಿಗೆ ಸಮಾನರಲ್ಲ**

ಕ್ವಚಿಚ್ಚಿರಾಯುರ್ನಚ ಶೀಲಮಂಗಲಂ
ಕ್ವಚಿತ್ತದಪ್ಯಸ್ತಿ ನ ವೇದ್ಯಮಾಯುಷಃ ।
ಯತ್ರೋಭಯಂ ಕುತ್ರಚ ಸೋಽಪ್ಯಮಂಗಲಃ
ಸುಮಂಗಲಃ ಕಶ್ಚನ ಕಾಂಕ್ಷತೇ ಹಿ ಮಾಂ ॥

(ಭಾ.೮.೮.೨೧)

ಕ್ವಚಿತ್ಪುಂಸಿ ಚಿರಮಾಯುರಸ್ತಿ । ತಸ್ಮಿಂಶ್ಚ ಮಂಗಲಂ ತಚ್ಛೀಲಂ ಚ ತನ್ನಾಸ್ತಿ ನೂನಂ । ಅನೇನ ಶೇಷಾದಿಃ । ಉಗ್ರತ್ವಂ ತಜ್ಜಾತಿಸ್ವಭಾವಸಿದ್ಧಮಿತಿ । ಕಿಂ ತತ್ರ ಗಮಕಗವೇಷಣೇನೇತಿ ಹಿಶಬ್ದೇನಾಹ । ಕ್ವಚಿತ್ಪುರುಷೇಷು ತತ್, ಸಾಧುಸ್ವಭಾವೋಽಸ್ತಿ । ತತ್ರ ಪುರುಷೇಷು ಆಯುಷೋ ವಿಷಯೇ ವೇದ್ಯಂ ವಿಚಾರ್ಯಂ ನಾಸ್ತ್ಯೇವ । ಅಲ್ಪಾಯುಷ್ಟ್ವಮೇವ ನೂನಮಿತಿ । ಅನೇನ ಚ ರಾಜಾನಃ । ರೈವತೋ ರಾಜಾ ಸ್ವಪುತ್ರ್ಯಾ ವರಾನ್ಮನಸಾ ಸಂಭಾವ್ಯ ಬ್ರಹ್ಮಾಣಂ ಪ್ರಷ್ಟುಕಾಮಃ ಸತ್ಯಲೋಕಂ ಗತಃ । ತಂ ಪೃಷ್ಟ್ವಾ ಯದಾ ಭುವನಮಾಗತಃ ತನ್ಮಧ್ಯ ಏವ ವಿವಕ್ಷಿತಾಃ ಸರ್ವ ಏವ ರಾಜಪ್ರವರಾಃ ಪರಲೋಕಂ ಗತಾ ಇತಿ ।

ತಥಾ ಮುಚುಕುಂದೋ ದೇವೈಃ ಸ್ವಾತ್ಮರಕ್ಷಣಾಯ ಯಾಚಿತೋ ದೈತ್ಯೈಃ ಸಹ ಬಹುಕಾಲಂ ಯುದ್ಧಂ ಕೃತ್ವಾ, ತದ್ರಕ್ಷಾಂ ವಿಧಾಯ, ಆಗಮನಸಮಯೇ ದಾರಾಪತ್ಯಾಮಾತ್ಯಾದೀನ್ ಲೋಕಾಂತರಂ ಗತಾನ್ವೀಕ್ಷ್ಯ, ದೇವೇಭ್ಯೋ ವರಂ ಗೃಹೀತ್ವಾ ನಿದ್ರಿತ ಇತಿ ಚ ಪ್ರಸಿದ್ಧಮಿತಿ । ಕುತ್ರ ಚ ಕ್ವಚಿದೇಕಸ್ಮಿನ್ನೇವ ಯತ್ರ ಪುಂಸಿ ಚಿರಾಯುಃ ಸಾಧುಸ್ವಭಾವತ್ವಂ ಚೇತ್ಯುಭಯಮಪ್ಯಸ್ತಿ । ಈದೃಶೋಽಪ್ಯ-ಮಂಗಲೋ ನೂನಂ । ಅನೇನ ಮಾರ್ಕಂಡೇಯೋ ಮುನಿವರಃ । ಸ ಹಿ ಜಟಿಲತ್ವಾದಿನಾ ನ ಮನೋಜ್ಞ ಇತಿ ಪ್ರಸಿದ್ಧಃ । ಸುಮಂಗಲಃ ಅತ್ಯಂತಮಂಗಲಃ ಕಶ್ಚಿನ್ನಾಸ್ತಿ । ಸ ತು ಮಾಂ ಕಾಂಕ್ಷತೇ । ಆಕಾಂಕ್ಷಾಲಕ್ಷಣದೋಷವಾನ್ನೂನಂ । ಅನೇನ ಇಂದ್ರಃ । ಸ ತು ಛದ್ಮನಾ ಗೌತಮದಯಿತಾಂ ಕಾಮಯಾಮಾಸೇತಿ ಪ್ರಸಿದ್ಧಂ ಹೀತ್ಯನೇನ ಜ್ಞಾಪಯತಿ । ಹಿ ಯಸ್ಮಾದೇವಂ ದೇವಮುನಿದೈತೇಯ-ರಾಜಪ್ರವರಾಃ ಸರ್ವೇಽಪಿ ದೋಷೋಪೇತಾಃ ತಸ್ಮಾತ್ಕಾರಣಾತ್ ಹರೇರ್ದ್ವಿತೀಯೋಽನ್ಯೋ ಗುಣಸಂಗವರ್ಜಿತೋ ದೋಷಾಸ್ಪೃಷ್ಟೋ ನೇತಿ ತಾವತ್ಸಿದ್ಧಮಿತಿ ॥



ಕೆಲವರು ಶೇಷ ತಕ್ಷಕ ಮುಂತಾದವರು ಚಿರಾಯುಗಳೆ. ಆದರೆ ಅವರು ಸರ್ಪಜಾತಿ ಸ್ವಭಾವದಿಂದ ಉಗ್ರರಾಗಿರುತ್ತಾರೆ, ಮಂಗಲ ಆಕಾರ ಉಳ್ಳವರಲ್ಲ. ಕೆಲವರಲ್ಲಿ ಸಾಧುಸ್ವಭಾವ ಮಂಗಳ ಆಕಾರಗಳೂ ಇವೆ. ಆದರೆ ಅವರ ಆಯುಷ್ಯದ ವಿಷಯದಲ್ಲಿ ವಿಶೇಷವಾಗಿ ಗಮನಿಸಬೇಕಾದುದು ಏನಿಲ್ಲ. ಪುಣ್ಯಶ್ಲೋಕರಾದ ರಾಜರುಗಳು ಇದಕ್ಕೆ ಉದಾಹರಣೆ. ಕೃತಯುಗದಲ್ಲಿದ್ದ ರಾಜಾ ರೈವತನು ತನ್ನ ಮಗಳಾದ ರೇವತಿಗೆ ವರರನ್ನು ಆಲೋಚಿಸಿ ನಿಶ್ಚಯಿಸಿ ತಿಳಿಯಲು ಸತ್ಯಲೋಕದ ಬ್ರಹ್ಮಸಭೆಯಲ್ಲಿ ಕ್ಷಣಕಾಲ ಕುಳಿತು ಬ್ರಹ್ಮನಲ್ಲಿ ವಿಚಾರಿಸಿದಾಗ ಅವರು ಹೇಳಿದರು ನೀನು ಆಲೋಚಿಸಿದ ರಾಜರು ಭೂಮಿಯಲ್ಲಿ ಯಾರೂ ಈಗ ಇಲ್ಲ. ಕೃಷ್ಣನ ಅಣ್ಣನಾದ ಬಲರಾಮನಿಗೆ ನಿನ್ನ ಮಗಳನ್ನು ಕೊಡು ಎಂದರು. ಮುಚುಕುಂದ ಮಹಾರಾಜನೂ ದೇವತೆಗಳ ಅಪೇಕ್ಷೆಯಂತೆ ಸ್ವರ್ಗದಲ್ಲಿ ದಾನವರೊಂದಿಗೆ ಹೋರಾಡಿ ದೇವತೆಗಳಿಗೆ ರಕ್ಷಣೆ ನೀಡಿದನು. ಅವನು ಹಿಂದಿರುಗಿ ಬರುವುದರೊಳಗೆ ಅವನ ಹೆಂಡತಿ ಮಕ್ಕಳು ಮುಂತಾದವರೆಲ್ಲರೂ ಲೋಕಾಂತರಗಳಿಗೆ ಹೊರಟು ಹೋಗಿದ್ದರು. ಅದರಿಂದ

ಅವನು ದೇವತೆಗಳಲ್ಲಿ ಕೇವಲ ನಿದ್ರೆಯ ವರವನ್ನು ಪಡೆದು ನಿದ್ರಿಸಿದನು. ಹೀಗೆ ರಾಜರು ಅಲ್ಪಾಯುಗಳು. ಮಾರ್ಕಂಡೇಯರಂಥ ಕೆಲವು ಮುನಿಗಳು ದೀರ್ಘಾಯು ಸಾಧುಸ್ವಭಾವವೆರಡೂ ಉಳ್ಳವರಾದರೂ ಮಂಗಳವೇಷ ಧರಿಸರು. ಜಟಾಧಾರಿಗಳಾಗಿರುವರು. ಅತ್ಯಂತ ಮಂಗಳಸ್ವಭಾವ ಆಕಾರ ವೇಷಗಳುಳ್ಳವನು ದೇವೇಂದ್ರನು ಕೂಡ ಯಾವಾಗಲೂ ನನ್ನ ಅನುಗ್ರಹವನ್ನು ಬಯಸುತ್ತಾನೆ.



–೧೬೫–

## ಕನ್ಯೆ ಮಹಾಲಕ್ಷ್ಮಿ ಎಲ್ಲರನ್ನೂ ಬಿಟ್ಟು ಹರಿಗೇ ವರಮಾಲೆ ಹಾಕಿದಳು

ಏವಂ ವಿಮೃಶ್ಯಾವ್ಯಭಿಚಾರಿಸದ್ಗುಣಂ
ಪದಂ ನಿಜೈಕಾಶ್ರಯಿ ಸದ್ಗುಣಾಶ್ರಯಂ ।
ವವ್ರೇ ಪರಂ ಸರ್ವಗುಣೈರಪೇಕ್ಷಿತಂ
ರಮಾ ಮುಕುಂದಂ ನಿರಪೇಕ್ಷಮೀಪ್ಸಿತಂ ॥

(ಭಾ.೮.೮.೨೨)

ಕಿಮೇತದ್ದೋಷವಿಮರ್ಶನೇನೇತ್ಯತಃ ತತ್ಪ್ರಯೋಜನಂ ದರ್ಶಯತಿ ॥ ಏವಮಿತಿ ॥ ಅವ್ಯಭಿಚಾರಿಸದ್ಗುಣಂ ಅವ್ಯಭಿಚಾರಿಣಃ ಕದಾಪ್ಯನಪಗತಾಃ ಸಂತಃ ದೋಷಾಸಮಾನಾಧಿಕರಣಾಃ ಗುಣಾಃ ಯಸ್ಮಿನ್ ತಾದೃಶಂ। ನಿಜಶ್ಚಾಸೌ ಮುಖ್ಯಶ್ಚಾಸಾವಾಶ್ರಯಶ್ಚ ಸ ಏಷಾಮಸ್ತೀತಿ ತೇ, ಸಂತೋ ಗುಣಾ ಯೇಷಾಂ ತೇ, ನಿಜೈಕಾಶ್ರಯಿಣಶ್ಚ ತೇ ಸದ್ಗುಣಾಶ್ಚ ಭಕ್ತಾಃ ತೇಷಾಂ ಆಶ್ರಯಭೂತಂ ಪದಂ ವಸ್ತು ವಿಮೃಶ್ಯ । ಏವಂ ವಿಮರ್ಶನೇ ಕೃತೇ ಸತಿ ಯಥಾ ಮನಸೇಪ್ಸಿತಂ ತಥೈವ ವಿದ್ಯಮಾನಂ ಮುಕುಂದಂ ಮುಕ್ತಿಪ್ರದಂ ಅತ ಏವ ಪರಂ ಸರ್ವೋತ್ತಮಂ ಹರಿಮೇವ ಸ್ವೀಕೃತವತೀತಿ। ರಮಯಾ ಸ್ವೀಕಾರ್ಯೇ ವಸ್ತುನಿ ತ್ರಯ ಮಪೇಕ್ಷಿತಂ। ಸಕಲಗುಣಪೂರ್ಣತ್ವಂ ನಿರ್ದೋಷತ್ವಂ ಭಕ್ತಾನುಕಂಪಿತ್ವಮಿತಿ। ತತ್ರ ಪ್ರಥಮಂ ತಾವದಸ್ತೀತ್ಯಾಹ॥ ಸರ್ವೇತಿ॥ ಸರ್ವೈರ್ಗುಣೈರ್ವಿದ್ಯ-ಮಾನೈರ್ನಿಮಿತ್ತೈ ್ಯೋರ್ಗಿಭಿ ರಪೇಕ್ಷಿತಮಿತಿ। ದ್ವಿತೀಯಮಪ್ಯಸ್ತೀತ್ಯಾಹ। ನಿರಪೇಕ್ಷಮಿತಿ ॥ ಕಾಮುಕತ್ವೋಪಲಕ್ಷಿತಸರ್ವದೋಷರಹಿತಮಿತ್ಯರ್ಥಃ। ದೋಷೇಷು ತಸ್ಯೈವ ಶ್ರೇಷ್ಠತಯಾ ಕಂಠತೋ ಗ್ರಹಣಂ। ತೃತೀಯಮಪಿ

**ವಿಜಯತ ಇತ್ಯಾಹ ॥ ಮುಕುಂದಮಿತಿ ॥ ತದಭಾವೇ ಮಹಾಪುರುಷಾರ್ಥ-ದಾನಾಯೋಗಾದಿತಿ ಭಾವಃ ॥**



**ಮಹಾಲಕ್ಷ್ಮಿ ಹೀಗೆ ದೇವತೆಗಳನ್ನು ವಿಮರ್ಶೆ ಮಾಡಿ, 'ಅವ್ಯಭಿಚಾರಿ' ಗುಣಗಳಲ್ಲಿ ಒಂದಿದ್ದರೆ ಇನ್ನೊಂದಿಲ್ಲ ಎಂಬ ವ್ಯಭಿಚಾರ, ಒಂದುಗುಣವಿದ್ದರೆ ಜೊತೆಗೆ ದೋಷವೂ ಇರುತ್ತದೆ ಎನ್ನುವ ವ್ಯಭಿಚಾರವೆರಡೂ ಇಲ್ಲದಿರುವ ಎಂದಿಗೂ ಬಿಡದ ಕಡಿಮೆಯೂ ಆಗದ 'ಸದ್ಗುಣ' ಸ್ವರೂಪಭೂತ ಸದ್ಗುಣಗಳ ನಿಧಿಯು ಶ್ರೀಹರಿ.**

**'ನಿಜೈಕಾಶ್ರಯಿ' ತನ್ನೊಬ್ಬನನ್ನೆ ಮುಖ್ಯ ಆಶ್ರಯನೆಂದು ನಂಬಿದ ಸದ್ಗುಣ'. ಸದ್ಗುಣಉಳ್ಳ ಭಕ್ತರಿಗೆ ಮೋಕ್ಷದಲ್ಲಿ ನಿತ್ಯ ಆಶ್ರಯವಾದವನೂ ಶ್ರೀಹರಿಯೆ. 'ಸರ್ವಗುಣೈರಪೇಕ್ಷಿತಂ' ಎಲ್ಲ ಗುಣವಿರುವುದರಿಂದ ಯೋಗಿಗಳಿಗೆ ಇಷ್ಟದೇವತೆ ಯಾಗಿರುವವರು ಶ್ರೀಹರಿ. 'ಈಪ್ಸಿತಂ' ತಾನು ಮನಸಿನಿಂದ ತನ್ನ ಪತಿ ಹೇಗಿರಬೇಕೆಂದು ಬಯಸಿದಳೊ ಹಾಗೇ ಇರುವವನು ಶ್ರೀಹರಿ. 'ಮುಕುಂದಂ' ಮುಕ್ತಿದಾಯಕನು ಶ್ರೀಹರಿಯೆ. ಆದರಿಂದಲೇ ಅವನು ಭಕ್ತಾಭೀಷ್ಟದಾಯಕ. 'ಪರಂ' ಸರ್ವೋತ್ತಮನು ಹರಿಯೆ. 'ನಿರಪೇಕ್ಷ' ಸ್ವರಮಣನಾದ್ದರಿಂದ ಅನ್ಯಾಪೇಕ್ಷೆ ಇರದವನೂ ಅವನೊಬ್ಬನೆ ಎಂದು ನಿಶ್ಚೈಸಿ ಹರಿಯೇ ತನಗೆ ಪತಿ ಎಂದು 'ವವ್ರೇ' ವರಿಸಿದಳು.**

'ಅವ್ಯಭಿಚಾರಿ ಸದ್ಗುಣಂ' ಎಂದು ಬ್ರಹ್ಮಸೂತ್ರ ಪ್ರಥಮ ದ್ವಿತೀಯಾಧ್ಯಾಯೋಕ್ತವಾದ ನಿರ್ದೋಷಗುಣಪೂರ್ಣತ್ವ ಉಕ್ತವಾಗಿದೆ. 'ಸರ್ವಗುಣೈರಪೇಕ್ಷಿತಂ' ಎಂದು ಜ್ಞೇಯತ್ವರೂಪ ತೃತೀಯಾಧ್ಯಾಯೋಕ್ತ ಮಹಿಮೆ ಉಕ್ತವಾಗಿದೆ. 'ನಿಜೈಕಾಶ್ರಯ ಸದ್ಗುಣಾಶ್ರಯಂ ಮುಕುಂದಂ' ಎಂದು ಗಮ್ಯತ್ವರೂಪ ಚತುರ್ಥಾಧ್ಯಾಯೋಕ್ತಪ್ರಮೇಯ ಸಿದ್ಧವಾಯಿತು. 'ಏವಂ ವಿಮೃಶ್ಯ' ಎಂದು 'ಪತ್ಯುರಸಾಮಂಜಸ್ಯಾತ್' ಎಂಬ ಬ್ರಹ್ಮಸೂತ್ರ ಸೂಚಿತವಾದ ಪ್ರಮೇಯವೂ ಸಿದ್ಧವಾಯಿತು.

ಯದ್ಯಪಿ 'ದುರ್ಜನರ ದೋಷವನ್ನು ನೋಡಿ ಹೇಳದಿರಬಾರದು, ಸಜ್ಜನರಲ್ಲಿ ದೋಷವನ್ನು ನೋಡಿದರೂ ಹೇಳಬಾರದು'.

'ಮಹತ್ಸು ಗುಣಸಾರೇಷು ದೋಷಾನ್ವೇಷಣ ಧೀರ್ಮುಧಾ' ಜ್ಞಾನಭಕ್ತಿ ವೈರಾಗ್ಯಾದಿ ಮಹಾಗುಣಗಳಿಂದ ತುಂಬಿಕೊಂಡಿರುವ ಬ್ರಹ್ಮಾದಿದೇವತೆಗಳಲ್ಲಿ ಅಲ್ಪವಾದ ಒಂದೆರಡು ದೋಷಗಳನ್ನು ಹುಡುಕಿ ಎತ್ತಿ ಹೇಳಿದರೆ ಅದು ವ್ಯರ್ಥವಾಗುವುದು ಮಾತ್ರವಲ್ಲ ನರಕಾದ್ಯನರ್ಥಕರವೂ ಆಗುವುದು' ಎಂದು ಯುಕ್ತಿಮಲ್ಲಿಕೆಯಲ್ಲಿ ರಾಜರು ಹೇಳಿದ್ದುಂಟು. ಆದರೆ, ಅವರೇ ಸರಸಭಾರತಿಯಲ್ಲಿ ಹೇಳುತ್ತಾರೆ—

'ವಿಷ್ಣೋರುತ್ಕರ್ಷಸಿದ್ಧ್ಯರ್ಥಂ ಸ್ವಸ್ವದೋಷಾನುವರ್ಣನೀಂ ।
ರಮಾಮಮಾನಯನ್ ಕಿಂ ನ ಸರ್ವೇ ದೇವಾಃ ಸ್ವಯಂವರೇ?'

'ಕ್ಷೀರಸಮುದ್ರದಿಂದ ಉದಿಸಿದ ಮಹಾಲಕ್ಷ್ಮಿಯು ಹರಿಸರ್ವೋತ್ತಮತ್ವ ನಿರ್ದೋಷಗುಣಪೂರ್ಣತ್ವಾದಿ ಮಹಿಮೆಗಳ ಸಿದ್ಧಿಗಾಗಿ, ದೇವತೆಗಳಲ್ಲಿ ದೋಷ ಗಳನ್ನು ವರ್ಣಿಸಿದಾಗ ದೇವತೆಗಳೇ ಅದನ್ನು ಸಂತೋಷದಿಂದ ಒಪ್ಪಿಕೊಂಡಿಲ್ಲ ವೇನು?' ಎಂದು. ಮತ್ತು,

'ಕಿಂತು ಪತ್ಯುರಸಾಮಂಜಸ್ಯಾದಿತ್ಯಾಹ ಹಿ ಸೂತ್ರಕೃತ್'

ಸೂತ್ರಕಾರರಾದ ಬಾದರಾಯಣರೂ 'ಪತ್ಯುರಸಾಮಂಜಸ್ಯಾತ್' ಜನ್ಮಾದಿ ಕರ್ತೃತ್ವವೆಂಬ ವಿಷ್ಣುಲಕ್ಷಣ ಶಿವನಲ್ಲಿಯೂ ಇದೆ ಎಂದೇಕೆ ಹೇಳಬಾರದೆನ್ನುವ ಪ್ರಶ್ನೆಗೆ ಸಮಾಧಾನವಾಗಿ 'ಶಿವನು ದೋಷಉಳ್ಳವನು ಜನ್ಮಾದಿಕರ್ತನಾಗಲಾರ' ಎಂದು ಈ ಸೂತ್ರದಲ್ಲಿ ಹೇಳಿದ್ದಾರೆ. ಇದು ಉಪಲಕ್ಷಣ. ಬೇರೆ ಯಾವ ದೇವತೆಗಳೂ ನಿರ್ದೋಷರಲ್ಲ ಎಂದು ಬಾದರಾಯಣರಿಗೆ ಸಮ್ಮತ.



—೧೬೬—

**ಹರಿಯ ಉರದಲ್ಲಿ ಅರಮನೆ ಮಾಡಿ ಮೆರೆದಳು ಜಗದಂಬೆ**

**ಸ್ವಸ್ಯಾಃಸ್ತ್ರಿಯಸ್ತ್ರಿಜಗತೋ ಜನಕೋ ಜನನ್ಯಾ**
**ವಕ್ಷೋ ನಿವಾಸಮಕರೋತ್ ಪರಮಂ ವಿಭೂತೇಃ ।**
**ಶ್ರೀಃ ಸ್ವಾಃಪ್ರಜಾಃ ಸಕರುಣೇನ ನಿರೀಕ್ಷಣೇನ**
**ಯತ್ರ ಸ್ಥಿತೈಧಯತ ಸಾಧಿಪತೀಂಸ್ತ್ರಿಲೋಕಾನ್ ॥**

**(ಭಾ.೮.೮.೨೫)**

**ತದೇವಂ ವಿಮರ್ಶಪೂರ್ವಕಂ ಇತರಪ್ರಹಾಣೇನ ಹರಿಚರಣಶರಣಮೇವ ಪ್ರಾಪ್ತಯಾ ದೇವ್ಯಾ ರಮಯಾ ತಸ್ಮಿಂಸ್ತಾರ್ತೀಯೋ ಗುಣಃ ತತ್ಕ್ಷಣಾದೇವ ಅನುಭೂತ ಇತ್ಯಾಶಯೇನಾಹ ॥ ಸ್ವಸ್ಯಾ ಇತಿ ॥ ಹರಿಃ ಲಕ್ಷ್ಮ್ಯಾಃ ಸ್ವವಕ್ಷ ಏವ ಸರ್ವೋತ್ತಮಂ ಸ್ಥಾನಮಕರೋತ್ ದತ್ತವಾನ್ । ಕಿಮಿದಾನೀಮೇವ ಭಾರ್ಯಾಭರ್ತೃಭಾವ ಆಸೀದಿತ್ಯತೋ ವಾಹ । ಸ್ವಸ್ಯಾ ಇತಿ । ಸ್ವಸ್ಯಾಃ ಸ್ತ್ರಿಯೋಽಪಿ ಕಾರಣವಿಶೇಷೇಣ ವಿಭೂತೇಃ ಸಮುದ್ರಾದುದ್ಭೂತಾಯಾ ಇತ್ಯರ್ಥಃ । ಅನೇನ ಪ್ರಾಕ್ ಪ್ರಾಪ್ತಶಂಕಾ ಪರಿಹೃತೇತಿ ಜ್ಞೇಯಂ । ಕಿಮರ್ಥಮಿಯಂ ಪ್ರಾದುರ್ಭೂತೇತ್ಯತ ಉಕ್ತಂ ತ್ರಿಜಗತೋ ಜನನ್ಯಾ ಇತಿ । ಪುತ್ರಸಂರಕ್ಷಣಂ ವಿಶೇಷತಃ ಕರ್ತುಮಿತಿ । ಕಿಂ ಸ್ವಬುದ್ಧ್ಯೈವ । ನ । ಪತ್ಯುರಾಜ್ಞಯೇತ್ಯಾಶಯೇನಾಹ ॥ ತ್ರಿಜಗತೋ ಜನಕ ಇತಿ ॥ ತತ್ಕಿಂ ವಿಶೇಷತಃ ಪುತ್ರರಕ್ಷಣಮಿತ್ಯತಃ ತದ್ವಕ್ತುಂ ಸ್ಥಾನಂ ವಿಶಿನಷ್ಟಿ ॥ ಯತ್ರೇತಿ ॥ ಯತ್ರ ಸ್ಥಿತಾ ಶ್ರೀಃ ದಯಾಸಹಿತಾವಲೋಕನೇನೈವ ಅಧಿಪತಿಭಿಃ ಸಹಿತಾನ್ ತ್ರಿಸ್ಥಾನಗತಾನಪಿ ಸ್ವಾಃ ಪ್ರಜಾಃ ಭೂತಾನಿ ಐಧಯತ ಅವರ್ಧಯತ್ । ಅಪೇಕ್ಷಿತಾರ್ಥಾನ್ ಪೂರಯಾಮಾಸ ತದಿತಿ । ಅನೇನ ದೇವ್ಯಾ ಅಪಿ ತದ್ಯೋಗ್ಯಪತ್ನೀತ್ವಮಸ್ತೀತಿ ಸೂಚಿತಂ । ತಥಾಹಿ । ತ್ರಿಜಗತೋ ಜನನ್ಯಾ ಇತ್ಯನೇನ ಯಥಾಯೋಗ್ಯಂ ಗುಣಪೂರ್ಣತ್ವಂ । ಯತ್ರ ಸ್ಥಿತಾಪೀತ್ಯನೇನ ಅಹಂಕಾರೋಪಲಕ್ಷಿತ-ಸರ್ವದೋಷರಹಿತತ್ವಂ । ಐಧಯತೇತ್ಯನೇನ ಭಕ್ತಾನುಕಂಪಿತ್ವಂ ಚೇತಿ ಧರ್ಮತ್ರಯಮಪಿ ಲಬ್ಧಂ ದೇವ್ಯಾಂ ತತ್ಕಲ್ಪತ್ವಾತ್ತಸ್ಯಾ ಇತಿ ॥**



**ಶುಕಮುನಿ ಹೇಳುತ್ತಾರೆ. ಮೂರುಲೋಕದ ತಂದೆ ಅಜಿತನಾಮಕ ಪರಮಾತ್ಮನು ಮೂಲೋಕದ ತಾಯಿಯಾದ ಅನಾದಿಕಾಲದಿಂದ ತನ್ನ ಪತ್ನಿಯೇ ಆದ ಶ್ರೀದೇವಿಗೆ ತನ್ನ ಎದೆಯಲ್ಲಿ 'ಪರಮಂ ನಿವಾಸಂ' ಸರ್ವೋತ್ತಮವಾದ ಅರಮನೆ ಮಾಡಿಕೊಟ್ಟನು. ಮಕ್ಕಳ ರಕ್ಷಣೆಗೆ ತಂದೆಯ ಕಟಾಕ್ಷದಿಂದ ಆಜ್ಞಪ್ತಳಾದ ಆ ತಾಯಿ ಪತಿಯ ವಕ್ಷಃಸ್ಥಳದಲ್ಲಿ ಬಂದು ನೆಲೆಸಿ ಮೂಲೋಕಗಳನ್ನೂ ಲೋಕಪಾಲಕರನ್ನೂ ಕರುಣಾಕಟಾಕ್ಷದಿಂದ ನೋಡಿ ಎಲ್ಲರಿಗೂ ಮೋಕ್ಷಾದಿ ಸಕಲ ಅಭೀಷ್ಟಗಳನ್ನು ನೀಡಿ ಸಲಹಿದಳು.**

ಶ್ರೀರ್ಯತ್‌ಕಟಾಕ್ಷ ಬಲವತ್ಯಜಿತಂ ನಮಾಮಿ

ಇಲ್ಲಿ 'ತ್ರಿಜಗತೋ ಜನನ್ಯಾಃ' 'ಮೂಲೋಕದ ತಾಯಿ' ಎಂಬುದರಿಂದ

ತಂದೆ ಅಜಿತನಂತೆ ತಾಯಿ ಶ್ರೀದೇವಿಯೂ ದೇಶಕಾಲಗುಣಸಮವ್ಯಾಪ್ತಳು ಗುಣದಲ್ಲಿ ಕಿಂಚಿದೂನಳು, ಯಥಾಯೋಗ್ಯಗುಣಪೂರ್ಣಳು ಎಂದು 'ಯತ್ರ ಸ್ಥಿತಾ' ಪರಮಾತ್ಮನೆದೆಯಲ್ಲಿ ನೆಲೆಸಿ ಅವನಿಗೆ ಅಧೀನಳಾಗಿ ಅಹಂಕಾರಾದಿ ಸಕಲ ದೋಷರಹಿತಳೇ ಆಗಿರುವಳೆಂದು 'ಐಧಯತ' ಭಕ್ತರಿಗೆ ಸಕಲಾಭೀಷ್ಟನೀಡಿ ಸಲಹಿದಳೆಂದೂ ಹೇಳಿದ್ದರಿಂದ ಆ ಪತಿಗೆ ಈ ಪತ್ನಿ ಅನುರೂಪಳೆಂದು ಸೂಚಿತವಾಗಿದೆ.



—೧೬೭—

**ಭಕ್ತವತ್ಸಲನೆಂದರೆ ಹರಿಯೆ**

**ಶ್ರಿಯಮನುಚರತೀಂ ತದರ್ಥಿನಶ್ಚ**
**ದ್ವಿಪದಪತೀನ್ ವಿಬುಧಾಂಶ್ಚ ಯಃ ಸ್ವಪೂರ್ಣಃ ।**
**ನ ಭಜತಿ ನಿಜಭೃತ್ಯವರ್ಗತಂತ್ರಃ**
**ಕಥಮಮುಮುದ್‌ವಿಸೃಜೇತ್ ಪುಮಾನ್ ಕೃತಜ್ಞಃ ॥**

(ಭಾ.೪.೩೧.೨೩)

''ಜನನ್ಯಾ ವಕ್ಷೋ ನಿವಾಸಮಕರೋದಿ'' ತ್ಯುಕ್ತೇಽಪಿ ತಸ್ಯ ತಯಾ ಪ್ರಯೋಜನಮಸ್ತೀತಿ ನ 'ಮಂತವ್ಯಮಿತ್ಯಾಶಯೇನಾಹ । **ಶ್ರಿಯಮಿತಿ ॥** ಸ್ವಸೇವಾಂ ಕುರ್ವಂತೀಮಪಿ ಶ್ರಿಯಂ, ತಾಂ ಶ್ರಿಯಮರ್ಥಯಂತೀತಿ ತಾನ್ನೃಪತೀನ್ ವಿಬುಧಾಂಶ್ಚ ಯೋ ನ ಭಜತಿ ತೈಃ ಕಿಮಪಿ ಪ್ರಯೋಜನಂ ನಾನುಸಂಧತ್ತೇ । ಕುತಃ, ಸ್ವರೂಪಾನಂದೇನ ಪೂರ್ಣತ್ವಾದಿತ್ಯಾಶಯೇನೋಕ್ತಂ **ಸ್ವಪೂರ್ಣ ಇತಿ ॥** ಯದಾ ರಮಾದೀನಾಮೀದೃಶೀ ದಶಾ ತದಾ ಅಲ್ಪಭಕ್ತಾನಾಂ ಕಾ ಗತಿರಿತ್ಯತಸ್ತತ್ಸ್ವಭಾವಂ ಕಥಯತಿ ॥ **ನಿಜಭೃತ್ಯೇತಿ ॥** ಯ ಈದೃಶೋಽಪಿ ನಿಜಾ ಯೇ ಭೃತ್ಯಾ ಭಕ್ತಾಃ ತೇಷಾಂ ವರ್ಗಃ ಸಮೂಹಃ ತಸ್ಯ ತಂತ್ರಃ ಅಧೀನ ಇತಿ । ಅಲ್ಪಭಕ್ತಾನಾಂ ಕೇವಲಂ ಸುಲಭ ಇತಿ ಭಾವಃ । ಅಮುಂ ಈದೃಕ್ ಕೃಪಾಲುತ್ವಗುಣಂ । ಕೃತಂ ಜಾನಾತೀತಿ ಕೃತಜ್ಞಃ ತತ್ಕೃತೋಪಕೃತಿವೇತ್ತಾ ಪುಮಾನ್ । ಕಥಂ ವಿಸೃಜೇತ್ । ಏಷ ಏವ ಮುಮುಕ್ಷುಭಿರ್ಜಿಜ್ಞಾಸ್ಯ ಇತಿ ॥



ನಾರದರು ಪ್ರಚೇತಸರಿಗೆ ಹೇಳಿದರು—ಶ್ರೀಹರಿ ಸ್ವಯಂ ಪರಿಪೂರ್ಣ. ಭಕ್ತರಿಂದ ಅವನಿಗೇನೂ ಲಾಭವಾಗಬೇಕಿಲ್ಲ. ತನ್ನನ್ನು ನಿರಂತರ ಸೇವಿಸುವ ಲಕ್ಷ್ಮಿಯನ್ನಾಗಲಿ, ಲಕ್ಷ್ಮಿಯ ಅನುಗ್ರಹವನ್ನು ಸದಾ ಬಯಸುವ ದೇವತೆಗಳನ್ನಾಗಲಿ ರಾಜರನ್ನಾಗಲಿ ಭಕ್ತರೆಂದೇ ಹರಿ ಸ್ವೀಕರಿಸುತ್ತಾನೆ. ತನ್ನ ಸುಖಕ್ಕಾಗಿ ಅಲ್ಲ. ಆದರೂ ಭಕ್ತರಿಗೆ ವಶನಾಗುತ್ತಾನೆ. ಅಷ್ಟು ಭಕ್ತವತ್ಸಲನಾಗಿರುವ ಪ್ರಭುವನ್ನು ಕೃತಜ್ಞನಾದವನು ಹೇಗೆ ಬಿಟ್ಟಿರುತ್ತಾನೆ? ಹೀಗಾಗಿ ಮುಮುಕ್ಷುಗಳಿಗೆ ಹರಿಯೇ ಆರಾಧ್ಯನಾಗಿದ್ದಾನೆ.



—೧೬೮—

**ಕೃಷ್ಣನೇ ಆರಾಧ್ಯನೆನ್ನುತ್ತಾಳೆ ದೇವಕಿ**

ರೂಪಂ ಯತ್ತತ್ ಪ್ರಾಹುರವ್ಯಕ್ತಮಾದ್ಯಂ
ಬ್ರಹ್ಮಜ್ಯೋತಿರ್ನಿರ್ಗುಣಂ ನಿರ್ವಿಕಾರಂ ।
ಸತ್ತಾಮಾತ್ರಂ ನಿರ್ವಿಶೇಷಂ ನಿರೀಹಂ
ಸ ತ್ವಂ ಸಾಕ್ಷಾದ್ ವಿಷ್ಣುರಧ್ಯಾತ್ಮ ದೀಪಂ ॥

(ಭಾ.೧೦.೪.೨೫)

ನನು ಮುಮುಕ್ಷುಭಿರ್ಜಿಜ್ಞಾಸ್ಯಂ ಬ್ರಹ್ಮ ನಿರ್ಗುಣಮೇವ। ಸಗುಣಜಿಜ್ಞಾಸಯಾ ಗುಣನಿವೃತ್ತಿರೂಪಮೋಕ್ಷಾಯೋಗಾದಿತಿ ಚೇತ್ । ಕಿಮಿದಂ ನಿರ್ಗುಣತ್ವಂ। ಗುಣಮಾತ್ರರಾಹಿತ್ಯಂ ಚೇತ್ತರ್ಹಿ ನ ತಸ್ಯ ಜಿಜ್ಞಾಸ್ಯತಾ। ತಾದೃಶವಸ್ತೂಪಾಸನಾಲಭ್ಯಸ್ಯ ಆನಂದಾದಿ ಸಕಲಶುಭಗುಣರಾಹಿತ್ಯರೂಪಸ್ಯ ಫಲಸ್ಯ ಉಪಾಸಕಪುರುಷಾರ್ಥ್ಯತ್ವಾಯೋಗಾತ್। ಸತ್ವಂ ರಜಸ್ತಮ ಇತಿ ಪ್ರಕೃತೇರ್ಗುಣಾಃ ತೈರಬದ್ಧತ್ವಂ ಚೇತ್ ಅನುಜ್ಞಯಾ ವರ್ತಾಮಹೇ । ಈದೃಶಂ ನಿರ್ಗುಣಂ ಬ್ರಹ್ಮ ತು ವಿಷ್ಣುರೇವೇತಿ ಯುಕ್ತಂ ತಸ್ಯೈವ ಜಿಜ್ಞಾಸ್ಯತ್ವಮಿತ್ಯಾಶಯೇನಾಹ ॥ **ರೂಪಮಿತಿ** ॥ ''ಅವ್ಯಕ್ತಮಚಲಂ ಶಾಂತ''ಮಿತ್ಯಾದ್ಯಾಃ ಶ್ರುತಯೋ ಯತ್ತತ್ತ್ವಂ ಸ್ವಾನುಗ್ರಹಮಂತರೇಣ ಅಜ್ಞೇಯತ್ವೇನ ನಿಮಿತ್ತೇನ ಅವ್ಯಕ್ತಾದಿಪದವಾಚ್ಯಂ ಪ್ರಾಹುಃ। ತಥಾ ''ಸದೇವ ಸೌಮ್ಯೇದಮಗ್ರ ಆಸೀದಿ''ತ್ಯಾದಿಕಾಃ ಪ್ರಲಯಕಾಲಸ್ಥಿತತ್ವೇನ ನಿಮಿತ್ತೇನ ಆದ್ಯಾದಿಪದವೇದ್ಯಂ ಆಹುಃ। ತಥಾ ''ಯತೋ ವಾ'' ಇತಿ ಪ್ರಭೃತಯಃ ನಿರವಧಿಕಾನಂತಾನವದ್ಯಕಲ್ಯಾಣ-

ಗುಣತ್ವೇನ ನಿಮಿತ್ತೇನ ಬ್ರಹ್ಮಾದಿಶಬ್ದಶಬ್ದಿತಂ ವದಂತಿ। ತಥಾ ''ಪರಂಜ್ಯೋತಿರುಪಸಂಪದ್ಯೇ''ತಿಪೂರ್ವಕಾಃ ಜ್ಞಾನರೂಪತ್ವೇನ ನಿಮಿತ್ತೇನ ಜ್ಯೋತಿರಾದಿಪದವೇದ್ಯಮಾವೇದಯಂತಿ। ತಥಾ ''ಕೇವಲೋ ನಿರ್ಗುಣಶ್ಚೇ''ತ್ಯೇವಂಜಾತೀಯಕಾಃ ಕಾಲತ್ರಯೇಽಪಿ ಕಾಲಿತಗುಣತ್ರಯತಯಾ ಜಡಮಿಶ್ರಿತದೇಹ ರಹಿತತತ್ವರೂಪಯಾ ನಿಮಿತ್ತಭೂತಯಾ ನಿರ್ಗುಣಾದಿನಾಮ-ಗಣೈರ್ಭಣಂತಿ। ''ನಿರ್ವಿಕಾರೋಽಕ್ಷರಃ ಶುದ್ಧ' ಇತ್ಯೇವಮಾದ್ಯಾಃ ಪರಿಣಾಮಾದಿವಿಕಾರರಹಿತತಯಾ ನಿಮಿತ್ತಭೂತಯಾ ನಿರ್ವಿಕಾರಾ ದಿಪದಪ್ರಭೇದ್ಯೈಃ ಪ್ರತಿಪಾದಯಂತಿ। ತಥಾ ''ಅಥ ಕಸ್ಮಾದುಚ್ಯತೇ ಸತ್ತೇತಿ ನಂದತಿ ನಂದಯತಿ ಚೇತೀ'ತ್ಯೇವಮಾದ್ಯಾಃ ಸಾಂತತ್ವಸಾತಿಶಯತ್ವಾದಿ-ಸರ್ವದೋಷರಹಿತಾನಂದಾದಿಸರ್ವಗುಣಾತ್ಮಕದೇಹತ್ವೇನ ನಿಮಿತ್ತೇನ, ''ನಾಮ್ನೈಕದೇಶೇನ ಗೃಹೀತೇಽಪಿ ನಾಮ್ನೋಚ್ಚಾರಿತೇನ ಯಾದೃಶ ಗ್ರಹಣಂ ಭವತಿ ತಾದೃಶಮೇವ ಗ್ರಹಣಂ ಭವತ್ಯೇವ ಶಬ್ದಸ್ವಾಭಾವ್ಯಾದಿತ್ಯಭಿಸಂಧಾಯ ಕ್ವಚಿದ್ಬಲ ಇತಿ ಕುತ್ರಚಿದ್‌ಬಲಭದ್ರ ಇತ್ಯಾದಿವತ್' ಕ್ವಚಿತ್ಸತ್ತೇತಿ ಕುತ್ರಚಿತ್ಸತ್ತಾ-ಮಾತ್ರಮಿತ್ಯೇವಂಜಾತೀಯೈಃ ಶಬ್ದೈಃ ಗ್ರಾಹಯಂತಿ। ತಥಾ ''ನಿರ್ವಿಶೇಷೋಽಕ್ಷರ' ಇತ್ಯೇವಂಜಾತೀಯಕಾಃ ಸಮಾಧಿಕರಹಿತತಯಾ ಸರ್ವೋತ್ತಮತ್ವೇನ ನಿಮಿತ್ತೇನ ನಿರ್ವಿಶೇಷಾದಿಪದವಿಶೇಷವಿಷಯಂ ಪ್ರಶಂಸಂತಿ। ತಥಾ ''ಆಪ್ತಕಾಮಸ್ಯ ಕಾ ಸ್ಪೃಹೇ'' ತ್ಯೇವಮಾದಿಕಾಃ ಪ್ರಾಪ್ತಸಮಸ್ತಪ್ರಾಪ್ತವ್ಯತಯಾ ನಿಮಿತ್ತಭೂತಯಾ ನಿರೀಹಾದಿನಾಮಭಿ-ರ್ನಿದರ್ಶಯಂತಿ। ತಥಾ ''ಆತ್ಮಾನಮೇವ ಲೋಕಮುಪಾಸೀತ'' ''ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತ'' ಇತ್ಯಾದ್ಯಾಃ ಆತ್ಮಾನಂ ಜೀವಮಧಿ ಷ್ಠಾಯ ತಸ್ಮೈ ಸ್ವಸ್ವರೂಪಂ ತತ್ಸ್ವರೂಪಂ ಚ ಪ್ರಕಾಶಯಂತೀತಿ ತತ್ಪದಪ್ರವೃತ್ತಿಪ್ರದರ್ಶನಪರೇಣ ಅಧ್ಯಾತ್ಮದೀಪಪದೇನ ಆತ್ಮಾದಿಪದಾನ್ಯು-ಪಲಕ್ಷ್ಯಂತೇ। ತಥಾ ಅಂಗಪ್ರತ್ಯಂಗಶೋ ವ್ಯಾಪ್ಯ ಪ್ರಕಾಶಕತ್ವನಿಮಿತ್ತೇನ ಆತ್ಮಾದಿಪದಪ್ರತಿಪಾದ್ಯಂ ಹೃದ್ಯಾರೋಹಯಂತಿ। ಉಪಲಕ್ಷಣಮೇತತ್। ''ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹು' ರಿತ್ಯೇವಮಾದ್ಯಾಃ ಅಶೇಷೈರಪಿ ಪ್ರವೃತ್ತಿನಿಮಿತ್ತವಿಶೇಷೈಃ ನಿಮಿತ್ತಭೂತೈರಶೇಷೈರಪಿ ನಾಮವಿಶೇಷೈಃ ವಿಶೇಷತಃ ಸಂಜ್ಞಿತಂ ಯತ್ತತ್ತ್ವಂ ಪ್ರಾಹುಸ್ತದೇವ ಯಸ್ಯ ತವ ರೂಪಂ ತತ್ತ್ವವಿದಃ ಪ್ರಾಹುಃ ಸ ಏವ ತ್ವಮಸಿ। ವಿಶಿಷ್ಯ ಜ್ಞಾನಂ ನಾಸ್ತೀತಿ ಲೋಕಶಂಕಾಂ ಪರಾಕರ್ತುಂ ವಿಷ್ಣುರಿತಿ ಪ್ರಸಿದ್ಧಂ ನಾಮ ಜಗ್ರಾಹೇತಿ। ಮದ್‌ದೃಷ್ಟಿಗೋಚರೋಽಪಿ ಅಸ್ಮದಾದಿಪುತ್ರತ್ವಾದಿನಾ

ವ್ಯವಹ್ರಿಯಮಾಣೋಽಪಿ ಕಾರ್ಯವಿಶೇಷಾರ್ಥಂ ಅಸ್ಮಾಸು ಅನುಗ್ರಹೇಣೈವ ಪ್ರಾದುರ್ಭೂತ ಇತಿ ತ್ವಮಿತ್ಯನೇನ ಸೂಚಯತಿ । ಕೃಷ್ಣಂ ಪ್ರತಿ ದೇವಕೀವಚನಂ । **ಯಥಾಹುಃ—**

''ವದಂತಿ ತತ್ತತ್ತ್ವವಿದಸ್ತತ್ತ್ವಂ ಯಜ್ಞ್ಞಾನಮದ್ವಯಂ ।
ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ ॥

ಸತ್ತಾಮಾತ್ರಂ ತು ಯತ್ಕಿಂಚಿತ್ಸದಸಚ್ಚಾವಿಶೇಷಣಂ ।
ಉಭಾಭ್ಯಾಂ ಭಾಷ್ಯತೇ ಸಾಕ್ಷಾದ್ಭಗವಾನ್ ಕೇವಲಃ ಸ್ಮೃತಃ ॥

ಯತ್ರಾವತೀರ್ಣೋ ಭಗವಾನ್ಕೃಷ್ಣಾಖ್ಯೋ ಜಗದೀಶ್ವರಃ ।
ವಸುದೇವಗೃಹೇ ಜನ್ಮ ತಸ್ಯ ವೃದ್ಧಿಶ್ಚ ಗೋಕುಲೇ ॥

ಕೇಚಿದಾಹುರಜಂ ಜಾತಂ ಪುಣ್ಯಶ್ಲೋಕಸ್ಯ ಕೀರ್ತಯೇ ।
ಯದೋಃ ಪ್ರಿಯಸ್ಯಾನ್ವವಾಯೇ ಮಲಯಸ್ಯೇವ ಚಂದನಂ ॥

ಅಥವಾ ವಸುದೇವಸ್ಯ ದೇವಕ್ಯಾಂ ಯಾಚಿತೋಽಭ್ಯಗಾತ್ ।
ಅಜಸ್ತ್ವಮಸ್ಯ ಕ್ಷೇಮಾಯ ವಧಾಯ ಚ ಸುರದ್ವಿಷಾಂ'' ಇತಿ ॥



ದೇವಕಿ ಶ್ರೀಕೃಷ್ಣನನ್ನು ಸ್ತುತಿಸಿದಳು—

**ಮುಮುಕ್ಷುವು ನಿರ್ಗುಣವನ್ನೇ ಆರಾಧಿಸಬೇಕು. ಸಗುಣವನ್ನು ಆರಾಧಿಸಿದರೆ ತ್ರಿಗುಣಬಂಧನಿವೃತ್ತಿರೂಪ ಸಂಸಾರಮೋಕ್ಷವು ಲಭಿಸಲಾರದು ಎನ್ನುವವರಿಗೆ ಹೇಳಬೇಕು. ನಿರ್ಗುಣೋಪಾಸನೆಯಿಂದ ಲಭಿಸಬಹುದಾದ ಫಲವು ಆನಂದಾದಿ ಸಕಲ ಶುಭಗುಣನಿವೃತ್ತಿ. ಅದನ್ನು ಯಾವ ಮುಮುಕ್ಷು ಬಯಸಿಯಾನು? 'ನಿರ್ಗುಣವೆಂದರೆ ಯಾವ ಗುಣವೂ ಇಲ್ಲದ್ದಲ್ಲ. ಪ್ರಕೃತಿಯ ಗುಣಗಳಿಂದ ಬದ್ಧವಾಗದುದು' ಎನ್ನುವುದಾದರೆ ಅದು ನಮಗೆ ಒಪ್ಪಿಗೆಯೆ. ಇಂಥ ನಿರ್ಗುಣಬ್ರಹ್ಮ ವಿಷ್ಣುವೆ. ಅವನನ್ನೆ ಆರಾಧಿಸಬೇಕೆಂದು ದೇವಕಿ ಹೇಳುತ್ತಾಳೆ.**

'ಅವ್ಯಕ್ತಮಚಲಂ ಶಾತಂ' ಎಂಬ ಶ್ರುತಿಯು ಹೇಳುವಂತೆ ವಿಷ್ಣು 'ಅವ್ಯಕ್ತ'. ತನ್ನ ಅನುಗ್ರಹವಾಗದಿರುವವರಿಗೆ ಸರ್ವಥಾ ವ್ಯಕ್ತನಾಗುವುದಿಲ್ಲ.

'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿ ಶ್ರುತಿಯಂತೆ ಸೃಷ್ಟಿಗಿಂತ ಮೊದಲು ಪ್ರಳಯಕಾಲದಲ್ಲಿಯೂ ಇದ್ದವನಾದ್ದರಿಂದ ವಿಷ್ಣುವೇ 'ಆದ್ಯ'.

'ಯತೋ ವಾ...ತದ್‌ಬ್ರಹ್ಮ' ಎಂಬ ಶ್ರುತಿ ಹೇಳುವಂತೆ ವಿಷ್ಣುವೆ 'ಬ್ರಹ್ಮ' ಅನಂತ ಕಲ್ಯಾಣಗುಣ ಪರಿಪೂರ್ಣ.

'ಪರಂಜ್ಯೋತಿರುಪಸಂಪದ್ಯ' ಎಂದು ಶ್ರುತಿ ಹೇಳುವಂತೆ ವಿಷ್ಣುವೆ 'ಜ್ಯೋತಿ'.

'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂದು ಶ್ರುತಿಯು ಹೇಳುವಂತೆ ಕಾಲತ್ರಯದಲ್ಲಿಯೂ ಪ್ರಾಕೃತದೇಹರಹಿತನಾದ್ದರಿಂದ ವಿಷ್ಣುವೇ 'ನಿರ್ಗುಣ'.

'ನಿರ್ವಿಕಾರೋಽಕ್ಷರಃ ಶುದ್ಧಃ' ಎಂದು ಶ್ರುತಿಯು ಹೇಳುವಂತೆ ಪರಿಣಾಮಾದಿ ವಿಕಾರ ರಹಿತನಾದ್ದರಿಂದ ವಿಷ್ಣುವೇ 'ನಿರ್ವಿಕಾರ'.

'ಅಥ ಕಸ್ಮಾದುಚ್ಯತೇ ಸತ್ತೇತಿ ನಂದತಿ ನಂದಯತಿ ಚೇತಿ' ಇತ್ಯಾದಿ ಶ್ರುತಿ ಹೇಳುವಂತೆ ಸರ್ವದೋಷರಹಿತ ಆನಂದಾದಿ ಗುಣಾತ್ಮಕ ದೇಹ ಉಳ್ಳವನಾದ್ದರಿಂದ 'ಸತ್ತಾಮಾತ್ರ'ನು ವಿಷ್ಣುವೆ. ಈ ಶ್ರುತಿಯಲ್ಲಿ ಯದ್ಯಪಿ 'ಸತ್ತಾಮಾತ್ರ' ಎಂಬ ನಾಮಕ್ಕೆ ವಿವರಣೆ ಕಾಣುವುದಿಲ್ಲ. 'ಸತ್ತಾ'ನಾಮಕ್ಕೇ ವಿವರಣೆ ಕಾಣುತ್ತದೆ. ಆದರೆ ನಾಮದ ಒಂದಂಶವನ್ನು ಹೇಳಿದರೆ ಇಡಿ ನಾಮವನ್ನೇ ಹೇಳಿದಂತಾಗುತ್ತದೆ. ಆದರಿಂದ ಶ್ರುತಿಯಲ್ಲಿ 'ಸತ್ತಾ' ಎಂದರೆ 'ಸತ್ತಾಮಾತ್ರ'ವೆ. 'ಬಲ ಎಂದರೆ 'ಬಲಭದ್ರ'ನೆ ಎಂಬಂತೆ.

'ನಿರ್ವಿಶೇಷೋಽಕ್ಷರಃ' ಎಂಬ ಶ್ರುತಿಯು ಹೇಳುವಂತೆ ಸಮಾಧಿಕರಹಿತ, ಸರ್ವೋತ್ತಮ, ಸ್ವಗತಭೇದ ವಿವರ್ಜಿತನಾದ್ದರಿಂದ ನಿರ್ವಿಶೇಷನೂ ವಿಷ್ಣುವೆ.

'ಆಪ್ತಕಾಮಸ್ಯ ಕಾ ಸ್ಪೃಹಾ?' ಎಂದು ಶ್ರುತಿಯು ಹೇಳುವಂತೆ ಪೂರ್ಣಕಾಮ, ಯಾರಿಂದಲೂ ಏನೂ ಬೇಡುವವನಲ್ಲವಾದ್ದರಿಂದ 'ನಿರೀಹ'ನೂ ವಿಷ್ಣುವೆ.

'ಆತ್ಮಾನಮೇವ ಲೋಕಮುಪಾಸೀತ' 'ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ' ಎನ್ನುವಂತೆ ಆತ್ಮನಾಮಕ ಬಿಂಬನಾಗಿ ಆತ್ಮನಲ್ಲಿದ್ದು ಆತ್ಮನಿಗೆ ತನ್ನ ಮತ್ತು ಆತ್ಮನ ಸ್ವರೂಪವನ್ನು ಅಪರೋಕ್ಷದಲ್ಲಿ ಬೆಳಗುವ ದೀಪನಾದ್ದರಿಂದ ವಿಷ್ಣುವೇ 'ಅಧ್ಯಾತ್ಮದೀಪ'ನೂ ಆಗಿದ್ದಾನೆ.

ಇಷ್ಟು ಹೇಳಿದರೆ ಏನೂ ಸಾಲದು, ಇನ್ನೂ ಹೇಳುವುದಿದೆ.

ಏಕಂ ಸದ್ ವಿಪ್ರಾ ಬಹುಧಾ ವದಂತಿ
ಅಗ್ನಿಂ ಯಮಂ ಮಾತರಿಶ್ವಾನಮಾಹುಃ ॥

ಲೋಕದಲ್ಲಿ ಜನರು ಆಡುವ ಎಲ್ಲ ಶಬ್ದಗಳನ್ನು ಒಡೆದು ನೋಡಿದರೆ ಮುಖ್ಯವಾಗಿ ನಿನ್ನನ್ನೇ ಅವು ಹೇಳುವುವು. ಅವು ಹೇಳುವ ರೂಪವೇನಿದೆಯೋ ಅದು ನಿನ್ನದೇ ರೂಪ. ಅವುಗಳಿಂದ ಯಾವ ತತ್ವವನ್ನು ಜ್ಞಾನಿಗಳು ಹೇಳುವರೋ ಆ ತತ್ವವು ನೀನೇ ಆಗಿರುವೆ ಎಂದು ಜ್ಞಾನಿಗಳು ಹೇಳುವರು. 'ಯತ್ತತ್ ರೂಪಂ ಯಸ್ಯ ಪ್ರಾಹುಃ ಸ ತ್ವಮೇವ' ವಿಶೇಷ ನಾಮವನ್ನು ಹೇಳಬೇಕೆಂದರೆ ಪ್ರಸಿದ್ಧನಾದ 'ವಿಷ್ಣು' ನೀನೆ ಆಗಿರುವೆ.

ನಮ್ಮ ನಡುವೇ ಬಂಧುಮಿತ್ರಾದಿ ರೂಪದಿಂದ ಎಲ್ಲ ವ್ಯವಹಾರಗಳನ್ನು ನೀನೇ ಮಾಡುತ್ತಿದ್ದರೂ ನಮ್ಮ ಮೇಲಿನ ಅನುಗ್ರಹಬುದ್ಧಿಯಿಂದ ಕಂಸವಧಾದಿ ಕಾರ್ಯವಿಶೇಷಕ್ಕಾಗಿ ನಮ್ಮ ಮಗನಾಗಿ ಈಗ ಪ್ರಾದುರ್ಭವಿಸಿರುವೆ ನೀನು, 'ತ್ವಂ'! ಎಂದು ಬಾಲಕೃಷ್ಣನನ್ನು ದೇವಕಿ ಸ್ತುತಿಸುತ್ತಾಳೆ. ಇದನ್ನೇ ಭಾಗವತವು ಬೇರೆ ಕಡೆಗಳಲ್ಲಿಯೂ ಹೇಳಿದೆ—

ವದಂತಿ ಯತ್ ತತ್ವವಿದಸ್ತತ್ವಂ ಯಜ್ಞಾನಮದ್ವಯಂ ।
ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ ॥
ಸತ್ತಾಮಾತ್ರಂ ತು ಯತ್ ಕಿಂಚಿತ್ ಸದಸಚ್ಚಾವಿಶೇಷಣಂ ।
ಉಭಾಭ್ಯಾಂ ಭಾಷ್ಯತೇ ಸಾಕ್ಷಾದ್ ಭಗವಾನ್ ಕೇವಲಃ ಸ್ಮೃತಃ ॥
(ಭಾ.೧.೨.೧೧,೧೨)

ಸರಿಮಿಗಿಲಿಲ್ಲದ ಜ್ಞಾನಸ್ವರೂಪನಾದ ಹರಿಯನ್ನೇ ತತ್ವಜ್ಞಾನಿಗಳು 'ತತ್ವ' ಎನ್ನುತ್ತಾರೆ. ಅವನಿಗೇ ಬ್ರಹ್ಮ ಎಂದೂ ಪರಮಾತ್ಮ ಎಂದೂ ಭಗವಾನ್ ಎಂದೂ ಹೆಸರುಗಳು.

ಭಗವಂತ 'ಕೇವಲ' ಎನಿಸುತ್ತಾನೆ. ಏಕೆಂದರೆ 'ಸತ್ತಾಮಾತ್ರ'ನಾದ ಅವನು ಆನಂದಾದಿಗುಣಶರೀರಿಯಾಗಿದ್ದು ಅವನ ಸ್ವರೂಪಭೂತವಾದ ಜ್ಞಾನವು 'ಸತ್‌ಅಸತ್' ಸ್ಥೂಲಸೂಕ್ಷ್ಮ ಪ್ರಪಂಚದ ಸಂಪರ್ಕದಿಂದ ಜನಿಸುವಂಥ ಇಂದ್ರಿಯಜನ್ಯ ಜ್ಞಾನವಲ್ಲ. ಸ್ಥೂಲಸೂಕ್ಷ್ಮಗಳನ್ನು ಕೇವಲ ಗೋಚರಿಸುವುದ

ರಿಂದ 'ಸ್ಥೂಲದ ಜ್ಞಾನ' 'ಸೂಕ್ಷ್ಮದ ಜ್ಞಾನ' ಎಂದು ಎರಡು ಬಗೆಯಾಗಿ ವ್ಯವಹಾರವಿದೆ.

ಯತ್ರಾವತೀರ್ಣೋ ಭಗವಾನ್ ಕೃಷ್ಣಾಖ್ಯೋ ಜಗದೀಶ್ವರಃ
ವಸುದೇವಗೃಹೇ ಜನ್ಮ ತಸ್ಯ ವೃದ್ಧಿಶ್ಚ ಗೋಕುಲೇ ॥

(ಭಾ.೧೨.೧೨.೨೬)

ಕೇಚಿದಾಹುರಜಂ ಜಾತಂ ಪುಣ್ಯಶ್ಲೋಕಸ್ಯ ಕೀರ್ತಯೇ
ಯದೋಃ ಪ್ರಿಯಸ್ಯಾನ್ವವಾಯೇ ಮಲಯಸ್ಯೇವ ಚಂದನಂ ।

(ಭಾ.೧.೮.೩೨)

ಜನ್ಮರಹಿತನಾದ ಕೃಷ್ಣನು ಯದುವಂಶದಲ್ಲಿ ಜನಿಸಿದುದು, ಶ್ರೀಗಂಧದ ಮರದಿಂದ ಮಲಯಪರ್ವತಕ್ಕೆ ಮಹತ್ವ ಬಂದಂತೆ, ಕೃಷ್ಣಾವತಾರದಿಂದ ಯದುವಂಶಕ್ಕೆ ಕೀರ್ತಿ ಬರಲೆಂಬ ಉದ್ದೇಶದಿಂದ ಎನ್ನುತ್ತಾರೆ ಕೆಲವರು.

ಅಪರೇ ವಸುದೇವಸ್ಯ ದೇವಕ್ಯಾಂ ಯಾಚಿತೋಽಭ್ಯಗಾತ್ ।
ಅಜಸ್ತ್ವಮಸ್ಯ ಕ್ಷೇಮಾಯ ವಧಾಯ ಚ ಸುರದ್ವಿಷಾಂ ॥

(ಭಾ.೧.೮.೩೬)

ಇನ್ನು ಕೆಲವರು ಹೇಳುತ್ತಾರೆ, ದೇವತೆಗಳ ಪ್ರಾರ್ಥನೆಯಂತೆ ಸಜ್ಜನರ ಕ್ಷೇಮಕ್ಕಾಗಿ ಅಸುರರ ಸಂಹಾರಕ್ಕಾಗಿ ವಸುದೇವನ ಮಗನಾಗಿ ದೇವಕಿಯಲ್ಲಿ ಜನಿಸಿದನೆಂದು.



—೧೬೯—

**ಕೃಷ್ಣನೆ ಜಗಕೆ ತಂದೆ ಎಂದು ತಂದೆ ವಸುದೇವನೆನ್ನುತ್ತಾನೆ**

ತ್ವತ್ತೋಽಸ್ಯ ಜನ್ಮಸ್ಥಿತಿ ಸಂಯಮಾನ್ ವಿಭೋ
ವದಂತ್ಯನೀಹಾದಗುಣಾದವಿಕ್ರಿಯಾತ್ ।
ತ್ವಯೀಶ್ವರೇ ಬ್ರಹ್ಮಣಿ ನೋ ವಿರುಧ್ಯತೇ
ತದಾಶ್ರಯತ್ವಾದುಪಚರ್ಯಸೇ ಜನ್ಯೈಃ ॥

**ನನು ಭವತು ವಿಷ್ಣುರೇವ ನಿರ್ಗುಣಂ ಬ್ರಹ್ಮ ಜಿಜ್ಞಾಸ್ಯೋಽಪಿ ಮುಮುಕ್ಷುಭಿಃ। ತಸ್ಯ ನಿರ್ಗುಣಸ್ಯ ನಿರ್ವಿಕಾರಸ್ಯ ಜಗಜ್ಜನ್ಮಾದಿಕಾರಣತ್ವಂ ನ ಸಂಭವತಿ। ಯದಿ ಚೋಚ್ಯತೇ ಜಗಜ್ಜನ್ಮಾದಿಕಾರಣತ್ವಂ ತದಾ ನಿರ್ಗುಣತ್ವಂ ನ ವಾಚ್ಯಮಿತಿ ಮಮಾಶಯ ಇತಿ ಚೇತ್। ತತ್ಕಿಂ ಜಗಜ್ಜನ್ಮಾದಿಕಾರಣತ್ವಂ ವದತಾಂ ವಿಕಾರಿಕಾರಣತ್ವಮಭಿಲಷಿತಂ ಮನ್ಯಸೇ। ಓಂ ಇತಿ ಚೇತ್। ಭ್ರಾಂತೋಽಸಿ। ಯತಃ ಕುಲಾಲಾದಿವನ್ನಿಮಿತ್ತಕಾರಣತ್ವಮೇವ ತದಭಿಪ್ರೇತ ಮಿತ್ಯಾ-ಶಯೇನಾಹ॥ ತ್ವತ್ತ ಇತಿ। ಅಗುಣಾದವಿಕ್ರಿಯಾದನೀಹಾದೇವ ತ್ವತ್ತೋಽಸ್ಯ ಜಗತೋ ಜನ್ಮಸ್ಥಿತಿಸಂಯಮಾನ್ ಜ್ಞಾನಿನೋ ವದಂತಿ। ಪೂರ್ಣತಯಾ ಸೃಷ್ಟ್ಯಾದಿನಾ ಪ್ರಯೋಜನವಿರಹಿತತ್ವಾತ್ ಸೃಷ್ಟ್ಯಾದಿಕಂ ವಿರುದ್ಧಂ ಜ್ಞಾನಿಭಿಃ ಕಥಮುಚ್ಯತ ಇತ್ಯತಸ್ತಾವದೇಕಂ ಸಾಧಾರಣಂ ಸಮಾಧಿಮಾಹ॥ ತ್ವಯೀತಿ॥ ಈಶ್ವರೇ ಬ್ರಹ್ಮಣಿ ತ್ವಯಿ ನೋ ವಿರುಧ್ಯತ ಇತಿ। ಅಘಟಿತಘಟನಾಪಟೀಯಸೀ ಹಿ ಈಶ್ವರಶಕ್ತಿರಿತಿ ಭಾವಃ। ಏವಮಗುಣಾದ- ವಿಕ್ರಿಯಾದೇವ ಜಗತೋ ಜನ್ಮಾದಿಕಮಿತ್ಯಂಗೀಕಾರೇ ಸಾತ್ತ್ವಿಕೋ ರಾಜಸಸ್ತಾಮಸ ಇತ್ಯಸ್ಯ ವ್ಯವಹಾರಸ್ಯ ಕಾ ಗತಿರಿತ್ಯತ ಆಹ॥ ತದಾಶ್ರಯತ್ವಾದಿತಿ॥ ಜನೈಃ ಜ್ಞಾನಿಭಿಃ ತೇಷಾಂ ಗುಣಾನಾಮಾಶ್ರಯತ್ವಂ ನಿಮಿತ್ತೀಕೃತ್ಯ ಸಾತ್ತ್ವಿಕಸ್ತ್ವಮಿತ್ಯಾದಿರೂಪೇಣ ಗೀಯಸ ಇತಿ॥**



ವಸುದೇವನು ಶ್ರೀಕೃಷ್ಣಾವತಾರವನ್ನು ಸ್ತುತಿಸುತ್ತಾನೆ—ಪ್ರಭು, ಈ ಜಗತ್ತಿಗೆ ಸೃಷ್ಟಿಸ್ಥಿತಿಲಯಗಳಾಗುವುದು 'ಅಗುಣ' ನಿರ್ಗುಣನಾದ ನಿನ್ನಿಂದ ಎಂದು ಜ್ಞಾನಿಗಳು ಹೇಳುತ್ತಾರೆ. ಯದ್ಯಪಿ ನಿರ್ಗುಣ ಬ್ರಹ್ಮನೆಂದರೆ ವಿಷ್ಣು ಎಂದಮೇಲೆ ಅವನು ಅವಿಕ್ರಿಯ ನಿರ್ವಿಕಾರನೆ ಇರಬೇಕು. ಅಂಥವನು ಜಗತ್ತಾಗಿ ವಿಕಾರಹೊಂದಿ ಜಗತ್‌ಕಾರಣನೆನಿಸುವುದು ಅಸಂಭವ. ನಿರ್ಗುಣಕ್ಕೆ ಕಾರಣತ್ವ, ಕಾರಣಕ್ಕೆ ನಿರ್ಗುಣತ್ವ–ಎರಡೂ ವಿರುದ್ಧ. ಆದರೂ ಈಶ್ವರ ಸರ್ವಶಕ್ತ ಪರಬ್ರಹ್ಮನಾದ ನಿನ್ನಲ್ಲಿ ಅದು ವಿರುದ್ಧವಲ್ಲ. ಅಘಟಿತ ಘಟನಾ ಸಾಮರ್ಥ್ಯಉಳ್ಳ ಅಚಿಂತ್ಯಶಕ್ತಿಯಿಂದ ಅದು ಕೂಡುತ್ತದೆ ಎಂದು ಹೇಳಲು ಶಕ್ಯವಿದೆ.

ವಸ್ತುತಃ ಜಗತ್ತಿಗೆ ಕಾರಣವೆಂದರೆ ಜಗತ್ತಾಗಿ ಪರಿಣಮಿಸುವ ವಿಕಾರಿ ಕಾರಣ ಎಂದು ತಿಳಿಯುವುದು ಭ್ರಾಂತಿ. ಮಡಿಕೆಗೆ ಮಣ್ಣಿನಂತೆ, ಜಗತ್ತಿಗೆ ಬ್ರಹ್ಮ ವಿಕಾರಿಕಾರಣವಲ್ಲ. ಮಡಿಕೆಗೆ ಕುಂಬಾರನಂತೆ ಜಗತ್ತಿಗೆ ಬ್ರಹ್ಮ ನಿಮಿತ್ತಕಾರಣ,

ಸ್ವತಂತ್ರಕರ್ತ. ಅದರಿಂದ ವಿರೋಧವಿಲ್ಲ ಎಂದು ಉತ್ತರ. ಹಾಗಿದ್ದರೂ ಪೂರ್ಣಕಾಮನಾದ ಬ್ರಹ್ಮನಿಗೆ ಸೃಷ್ಟ್ಯಾದಿಗಳಿಂದ ಪ್ರಯೋಜನವಿರಲಾರದು. ಪ್ರಯೋಜನವಿಲ್ಲದೆ ಸೃಷ್ಟ್ಯಾದಿಗಳನ್ನು ಮಾಡುವುದು ವಿರುದ್ಧವೆ ತಾನೆ? ಎಂದರೆ ಪೂರ್ಣಕಾಮನಿಗೂ ಪ್ರಯೋಜನವಿರುವುದು ಅಚಿಂತ್ಯಶಕ್ತಿಯಿಂದಲೆ ಕೂಡುತ್ತದೆ ಎನ್ನಲು ಬರುತ್ತದೆ. ವಿರೋಧವಿರುವುದಿಲ್ಲ. ವಸ್ತುತಃ ಜೀವರ ಪ್ರಯೋಜನಕ್ಕಾಗಿ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ. 'ಅನೀಹ'. ಯಾವುದೇ ಸ್ವಪ್ರಯೋಜನದ ಆಕಾಂಕ್ಷೆ ಇಲ್ಲದವನೆ ಆದರೂ ಪರಪ್ರಯೋಜನಕ್ಕಾಗಿ ಸೃಷ್ಟ್ಯಾದಿಗಳನ್ನು ಮಾಡುವುದರಲ್ಲಿ ವಿರೋಧವಿಲ್ಲ. ಹಾಗಾದರೆ ಸಾತ್ವಿಕನಾದ ವಿಷ್ಣುವಿನಿಂದ ಜಗತ್ತಿನ ಪಾಲನೆ, ರಾಜಸನಾದ ಬ್ರಹ್ಮನಿಂದ ಜಗತ್‌ಸೃಷ್ಟಿ. ತಾಮಸನಾದ ಶಿವನಿಂದ ಲಯ ಎಂಬ ವ್ಯವಹಾರ ಹೇಗೆ ಕೂಡುತ್ತದೆ? ಎಂದರೆ, 'ತದಾಶ್ರಯತ್ವಾತ್' ಎಂದು ಉತ್ತರ. ಸತ್ವಾದಿಗುಣಲೇಪ ನಿಮಿತ್ತವಾಗಿಯೆ ಸಾತ್ವಿಕತ್ವಾದಿ ವ್ಯವಹಾರವಾಗಬೇಕಿಲ್ಲ. ಸತ್ವಾದಿಗುಣಸ್ವಾಮಿತ್ವ ಪ್ರಯುಕ್ತವಾಗಿ ಔಪಚಾರಿಕ ಪ್ರಯೋಗವಿರಬಹುದು. ಬ್ರಹ್ಮರುದ್ರರಲ್ಲಿರುವ ವಿಷ್ಣುವಿನ ಬ್ರಹ್ಮರುದ್ರರೂಪಗಳೂ ಪ್ರತ್ಯೇಕವಾಗಿರುವ ವಿಷ್ಣುರೂಪವೂ ಸತ್ವಾದಿ ಗುಣಾಶ್ರಯವಾಗಿವೆ, ಸ್ವಾಮಿಯಾಗಿವೆ.



—೧೭೦—

**ಜಗವನ್ನು ಕಾಪಾಡುವುದು ಜಗದೊಡೆಯನ ಸ್ವಭಾವ**

**ನ ಯಸ್ಯವಧ್ಯೋ ನ ಚ ರಕ್ಷಣೀಯೋ**
**ನೋಪೇಕ್ಷಣೀಯಾದರಣೀಯ ಪಕ್ಷಃ ।**
**ಅಥಾಪಿ ಸರ್ಗಸ್ಥಿತಿಸಂಯಮಾರ್ಥಂ**
**ಧತ್ತೇ ರಜಃ ಸತ್ವತಮಾಂಸಿ ಕಾಲೇ ॥**

(ಭಾ.೮.೫.೨೨)

**ನನು ಭವತು ಸಾತ್ತ್ವಿಕಾದಿವ್ಯವಹಾರಃ ಕಯಾಚಿದ್ವಿವಕ್ಷಯಾ । ಪಾಲನಾದಿಕಂ ತು ವಿನಾ ಗುಣಬಂಧಂ ಕಥಂ ಭವತಿ । ಮಯಾಽಯಮಿದಾನೀಂ ವಧ್ಯೋ ರಕ್ಷಣೀಯಃ ಸೃಜ್ಯ ಇತಿ ಕಶ್ಚಿದ್ವರ್ಗ ಆದರಣೀಯಃ । ಅನ್ಯಶ್ಚ ನೇದಾನೀಂ**

**ವಧ್ಯಾದಿರಿತ್ಯುಪೇಕ್ಷಣೀಯಃ । ಏತಚ್ಚ ಸರ್ವಂ ಗುಣಕಾರ್ಯಮೇವೇತ್ಯತ ಆಹ ।। ನ ಯಸ್ಯೇತಿ । ಯಸ್ಯ ಯೇನ ವಧ್ಯೋ ನಾಸ್ತಿ ರಕ್ಷಣೀಯೋ ನಾಸ್ತಿ ಸೃಜ್ಯಶ್ಚ ನಾಸ್ತಿ । ಉಪೇಕ್ಷಣೀಯಾದರಣೀಯವರ್ಗ ಆತ್ಮಾರ್ಥತಯಾ ನಾಸ್ತಿ ಯದ್ಯಪಿ । ಅಥಾಪಿ ಸ ತಾದೃಶೋऽಪಿ ಸರ್ಗಾದ್ಯರ್ಥಂ ರಜಆದಿಕಂ ಧತ್ತೇ ಧಾರಯತಿ। ಗುಣಕಾರ್ಯಾಭಿಸಂಧ್ಯಾದ್ಯಭಾವೇ ಸೃಷ್ಟ್ಯಾದಿಕರಣಾಯೋಗಃ । ತದಂಗೀಕಾರೇ ತು ಕಥಂ ನ ಗುಣಬಂಧ ಇತ್ಯತ ಉಕ್ತಂ ಕಾಲ ಇತಿ। ತತ್ತತ್ಪರಿಪಾಕಕಾಲೇ। ಇದಮುದಿತಂ ಭವತಿ— ಅಭಿಸಂಧ್ಯಾದಿಕಮಸ್ತ್ಯೇವ ಭಗವತಃ। ನ ಚ ಗುಣಬಂಧಃ। ತಸ್ಯ ನಿತ್ಯತ್ವಾತ್। ನ ಚೈವಂ ಸದಾ ಸೃಷ್ಟ್ಯಾದಿಪ್ರಸಂಗಃ ।ಕಾಲ ಏವ ಸೃಷ್ಟ್ಯಾದಿ ಕರೋಮೀತ್ಯಾದಿರೂಪಸ್ಯ ನಿತ್ಯಸ್ಯಾಪಿ ತತ್ತದುಚಿತಕಾಲ ಏವಾಭಿವ್ಯಕ್ತ್ಯಂಗೀ ಕಾರಾದಿತಿ ।।**



**ದುರ್ವಾಸರ ಶಾಪದಿಂದ ಲೋಕ ಐಶ್ವರ್ಯ ಭ್ರಷ್ಟವಾದಾಗ ಬ್ರಹ್ಮದೇವರು ದೇವತೆಗಳಿಗೆ ಹೇಳುವ ಮಾತು— ಶ್ರೀಹರಿಗೆ ಇಂಥವನು ವಧಾರ್ಹನೆಂದಿಲ್ಲ. ಈತ ರಕ್ಷಣಾರ್ಹನೆಂದಿಲ್ಲ. ಈತನನ್ನು ಸೃಜಿಸಬೇಕೆಂದೂ ಅಭಿಪ್ರಾಯ ಇರುವುದಿಲ್ಲ. ಇವರನ್ನು ಉಪೇಕ್ಷೆ ಮಾಡಬೇಕು. ಇವರನ್ನು ಆದರಿಸಬೇಕೆಂದೂ ಎಂದೂ ಆಗ್ರಹ ಅವನಿಗಿಲ್ಲ. ಆದರೂ ಸೃಷ್ಟಿಗಾಗಿ ರಜೋಗುಣವನ್ನು ಪಾಲನೆಗಾಗಿ ಸತ್ವಗುಣವನ್ನು ಲಯಕ್ಕಾಗಿ ತಮೋಗುಣವನ್ನು ವೃದ್ಧಿಮಾಡುತ್ತಾನೆ.**

ಸೃಷ್ಟ್ಯಾದಿಗಳನ್ನು ಮಾಡುವ ಅಭಿಪ್ರಾಯಗಳಲ್ಲಿ ಯಾವುದೇ ಒಂದು ಸದಾ ಇರುವುದಿಲ್ಲವೆಂದಮೇಲೆ ಗುಣಲೇಪನಿಮಿತ್ತವಾಗಿ ಉಂಟಾಗುತ್ತವೆ ಎಂದು ಒಪ್ಪಬೇಕಾಗುತ್ತದೆ. ಆಗ ಶ್ರೀಹರಿ ನಿರ್ಗುಣ, ಗುಣಲೇಪವಿಲ್ಲದವನೆಂದು ಹೇಳುವುದು ಹೇಗೆ ಸಾಧ್ಯ ? ಎಂದರೆ, ಇದಕ್ಕೆ 'ಕಾಲೇ ಧತ್ತೇ' ಎಂದು ಉತ್ತರ.

ಸೃಷ್ಟ್ಯಾದಿಗಳನ್ನು ಮಾಡುವ ಅಭಿಪ್ರಾಯಗಳು ಗುಣಲೇಪನಿಮಿತ್ತವಾಗಿ ಬಂದು ಹೋಗುವವುಗಳಲ್ಲ. ಅವು ನಿತ್ಯಸ್ವಾಭಾವಿಕ. ಆದರೆ ಕಾಲ ಪಕ್ವವಾದಾಗ ಅವು ವ್ಯಕ್ತವಾಗುತ್ತವೆ.

ಅವನು ಸ್ವತಂತ್ರನಾದ್ದರಿಂದ ಸೃಷ್ಟಿಕಾಲ ಪಕ್ವವಾದಾಗಲೇ ಸೃಷ್ಟಿಮಾಡುವ ಅಭಿಪ್ರಾಯ ವ್ಯಕ್ತಮಾಡಿಕೊಳ್ಳುತ್ತಾನೆ. ಲಯಕಾಲ ಪಕ್ವವಾದಾಗಲೆ ಲಯ

ಮಾಡುವ ಅಭಿಪ್ರಾಯ ವ್ಯಕ್ತಮಾಡಿಕೊಳ್ಳುತ್ತಾನೆ ಹೊರತು ಗುಣಲೇಪ ನಿಮಿತ್ತದಿಂದ ಈ ಅಭಿಪ್ರಾಯಗಳು ಅವನಲ್ಲಿ ಮೂಡುವುದೆಂದಿಲ್ಲ.



—೧೭೧—

**ಜೀವರ ಮೋಕ್ಷಸಾಧನೆಗಾಗಿಯೆ ಜಗದ ಪಾಲನೆ**

**ಅಯಂ ತು ತಸ್ಯ ಸ್ಥಿತಿಪಾಲನಕ್ಷಣಃ**
**ಸತ್ವಂ ಜುಷಾಣಸ್ಯ ಭವಾಯ ದೇಹಿನಾಂ ।**
**ತಸ್ಮಾದ್ ವ್ರಜಾಮಃ ಶರಣಂ ಜಗದ್ಗುರುಂ**
**ಸ್ವಾನಾಂ ಸ ನೋ ಧಾಸ್ಯತಿ ಶಂ ಸುರಪ್ರಿಯಃ ॥**

(ಭಾ.೮.೫.೨೩)

ತದೇವಂ ಗುಣೈರಬದ್ಧತ್ವೇನ ನಿಮಿತ್ತೇನ ನಿರ್ಗುಣಪದವಾಚ್ಯೇನ ತಥಾಪಿ ಸ್ವಪ್ರಯೋಜನಾಭಾವೇಽಪಿ ಪರಪ್ರಯೋಜನಮಪ್ಯಾತ್ಮಗಾಮೀವ ಮನ್ವಾನೇನ ಭಕ್ತಾನುಕಂಪಿನಾ ಸತ್ತ್ವಾದಿಗುಣಪ್ರವರ್ತಕತಯಾ ಸಾತ್ತ್ವಿಕಾದಿಪದಪರಿಪಠಿತೇನ ಭಕ್ತಮುಕ್ತಯೇ ಸೃಷ್ಟ್ಯಾದಿಕಂ ಕ್ರಿಯತೇ ಯತೋಽತಃ ಸ ಏವ ಮುಮುಕ್ಷುಭಿಃ ಶರಣ್ಯ ಇತಿ ಪ್ರಸಿದ್ಧಮಿತ್ಯಾಶಯೇನೋಪಸಂಹರತಿ ॥ **ಅಯಂ ತ್ವಿತಿ** ॥ ಪೂರ್ವಪದ್ಯಯೋಃ ಸ್ಥಿತಂ ಸ್ಥಿತಿಪದಂ ಸತ್ತಾರ್ಥಕಮಿತಿ ಭ್ರಾಂತಿವಾರಣಾಯ ಸ್ಥಿತ್ಯಪರಪರ್ಯಾಯಂ ಯತ್ಪಾಲನಂ ತಸ್ಯಾಯಂ ಕ್ಷಣ ಇತಿ ವ್ಯಾಖ್ಯೇತಿ ವಾ ಸ್ವಸೃಷ್ಟಸ್ಯ ಜಗತಃ 'ಕ್ಲೃಪ್ತಕಾಲಪರ್ಯಂತಮವಸ್ಥಾನಾಯ ಪ್ರಯೋಜನಾಯ ಯತ್ಪಾಲನಮಿತಿ ವಾ ಬೋಧ್ಯಂ । ಯಸ್ಮಾತ್ ಪಾಲನಕ್ಷಣಃ ತತ್ ತಸ್ಮಾತ್ಸ್ವಾನಾಂ ನಃ ಅಸ್ಮಾಕಂ ಶಂ ಸುಖಂ ಧಾಸ್ಯತಿ ದದಾತಿ । ಸಾಧಾರಣಂ ಹೇತುಮುಕ್ತ್ವಾ ವಿಶೇಷಂ ಚಾಹ ॥ ಸುರಪ್ರಿಯ ಇತಿ ॥ ಸುರಾ ಏವ ಪ್ರಿಯಾ ಯಸ್ಯೇತಿ । ಅನೇನ ಶ್ರವಣಭಗವನ್ಮಹಿಮಾಪ್ರತಿಪಾದನರೂಪಕೀರ್ತನಾಖ್ಯೌ ಭಾಗವತಧರ್ಮೌ ಪ್ರದರ್ಶಿತಾವಿತಿ ಜ್ಞೇಯಂ ॥



ಬ್ರಹ್ಮದೇವರು ದೇವತೆಗಳಿಗೆ ಹೇಳುತ್ತಾರೆ—ಇದೀಗ ಶ್ರೀಹರಿಯು ಭಕ್ತರ

**ಕ್ಷೇಮಕ್ಕಾಗಿ ಪ್ರಪಂಚವನ್ನು ಪಾಲನ ಮಾಡಲು ಉದ್ದೇಶಿಸಿರುವ ಕಾಲ. ಸತ್ವವನ್ನು ವೃದ್ಧಿಪಡಿಸಲು ತೊಡಗಿದ್ದಾನೆ. ಆದರಿಂದ ನಮಗೆ ಇದು ಅನುಕೂಲವಾದ ಕಾಲ. ನಾವು ಜಗದ್ಗುರುವನ್ನು ಶರಣು ಹೊಂದೋಣ. ಅವನು ದೇವತೆಗಳ ಪಕ್ಷಪಾತಿ. ತನಗೆ ಪ್ರಿಯರಾದ ನಮಗೆ ಮಂಗಳ ಉಂಟುಮಾಡುತ್ತಾನೆ.**

ನಿರ್ಗುಣನಾದ್ದರಿಂದ ಶ್ರೀಹರಿ ತನಗೇನೂ ಪ್ರಯೋಜನವಿಲ್ಲದಿದ್ದರೂ ಜೀವರ ಮೇಲಿನ ಅನುಕಂಪೆಯಿಂದ ಮೋಕ್ಷ ಸಾಧನೆ ಮಾಡಿಸುವುದಕ್ಕಾಗಿ ಸೃಷ್ಟ್ಯಾದಿಗಳನ್ನು ಕಾಲಕಾಲಗಳಲ್ಲಿ ಮಾಡುತ್ತಾನೆ. ಮುಮುಕ್ಷುಗಳು ಅವನನ್ನೆ ಶರಣುಹೊಂದಬೇಕು.

ಈ ಪ್ರಕರಣದಲ್ಲಿ ಶ್ರವಣವನ್ನೂ ಭಗವನ್ಮಹಿಮಾಪ್ರತಿಪಾದನರೂಪ ಕೀರ್ತನವನ್ನೂ ಭಾಗವತಧರ್ಮವೆಂದು ತಿಳಿಸಿದಂತಾಯಿತು.



# (೧೨) ಪ್ರವೃತ್ತ ಕರ್ಮತ್ಯಾಗ ಪ್ರಕರಣ

## ಪ್ರಕರಣ ಸಾರಾಂಶ

ಲೌಕಿಕ ಫಲಾಪೇಕ್ಷೆಯಿಂದ ಮಾಡುವ ಕಾಮ್ಯಕರ್ಮವೇ ಪ್ರವೃತ್ತ ಕರ್ಮ. ಬ್ರಹ್ಮದೇವರಿಗೆ ಶ್ರೀಹರಿ ಸೃಷ್ಟಿ ಮಾಡಲು ಆಜ್ಞಾಪಿಸಿದಾಗ, ನನ್ನ ಸೃಷ್ಟಿಯಲ್ಲಿ ಸುಜೀವರು ಹಸಿವು ಬಾಯಾರಿಕೆ ವಾತಪಿತ್ತಕಫ ದೋಷ ಮುಂತಾದ ಆಧ್ಯಾತ್ಮಿಕ ತಾಪಗಳಿಂದಲೂ ಅನ್ಯೋನ್ಯಕಲಹ, ಕಾಮಕ್ರೋಧಾದಿ ಉಪದ್ರವ 'ಗಳಿಂದಲೂ ಸಂಸಾರದಲ್ಲಿ ಬಲು ಕ್ಲೇಶಕ್ಕೊಳಗಾಗುವುದನ್ನು ಆಲೋಚನೆ ಮಾಡಿದರೂ ನನ್ನ ಮನಸ್ಸು ನೋಯುತ್ತದೆ. ಸ್ವಲ್ಪವಾದರೂ ವೈರಾಗ್ಯ ಪಡೆದು ಜ್ಞಾನಿಗಳ ಸೇವೆ ಮಾಡಿದರೆ ಅವರ ಉಪದೇಶದಿಂದ ವಿಷಯಾಸಕ್ತಿ ತೊರೆದು ಪ್ರವೃತ್ತಕರ್ಮ ತ್ಯಾಗ ಮಾಡಿ ತಾಪತ್ರಯದಿಂದ ಮುಕ್ತರಾಗಬಹುದು. ಆದರೆ ಹಾಗೆ ಅವರು ಮಾಡುವುದಿಲ್ಲ ಎಂದು ಅವರನ್ನು ಸೃಜಿಸುವ ಮೊದಲೆ ಬ್ರಹ್ಮದೇವರು ಆಲೋಚಿಸಿ ನೊಂದುಕೊಳ್ಳುತ್ತಾರೆ.

ಪ್ರಹ್ಲಾದರಾಜರೂ ಹಾಗೇ ಪ್ರವೃತ್ತಕರ್ಮನಿರತರಾಗಿ ಭಗವತ್ ಕಥಾಮೃತರಸಪಾನದಿಂದ ವಂಚಿತರಾಗುವ ಸಜ್ಜನವೃಂದವನ್ನು ನೋಡಿ ನೊಂದುಕೊಳ್ಳುತ್ತಾರೆ. ತಾನು ಕಥಾಮೃತರಸಪಾನದಿಂದ ಸದಾ ಸುಖಸುತ್ತಿರುವೆನೆನ್ನುತ್ತಾರೆ.

ನಾರದರೂ ಶ್ರೀವ್ಯಾಸರಲ್ಲಿ, ತಾವು ಭಾರತ ಪುರಾಣಗಳಲ್ಲಿ ಕಾಮ್ಯಕರ್ಮಗಳನ್ನು ಉಪದೇಶಿಸಿದ್ದು ಸಾಕು. ಇನ್ನೂ ಅದನ್ನೆ ಉಪದೇಶಿಸಿದರೆ ಮೊದಲೆ ಕಾಮ್ಯಕರ್ಮದಲ್ಲಿ ಆಸಕ್ತರಾದ ಅಜ್ಞಾನಿಗಳಿಗೆ ಮಹಾ ಅನ್ಯಾಯವಾಗುತ್ತದೆ, ಗಿಡದಿಂದ ಬಿದ್ದ ಹುಡುಗನನ್ನು ಹಿಡಿದು ಬಡಿಗೆಯಿಂದ ಹೊಡೆದಂತಾಗುತ್ತಾದೆ. ಅದರಿಂದ ನಿಷ್ಕಾಮವಾದ ಶ್ರವಣಾದಿ ಭಾಗವತಧರ್ಮಾನುಷ್ಠಾನ ವನ್ನು ಬೋಧಿಸುವ ಭಾಗವತಪುರಾಣವನ್ನೇ ರಚಿಸಿರಿ ಎಂದು ಕೇಳಿಕೊಳ್ಳುತ್ತಾರೆ.

ಪ್ರವೃತ್ತಕರ್ಮಿಯು ಅರ್ಚಿರಾದಿ ಮಾರ್ಗದಿಂದ ವಿಷ್ಣುಲೋಕಕ್ಕೆ ಹೋಗುವುದಿಲ್ಲ. ಧೂಮಾದಿ ಮಾರ್ಗದಿಂದ ಸ್ವರ್ಗಲೋಕ ಪಿತೃಲೋಕಗಳಿಗೆ ಹೋಗಿ ಸ್ವಲ್ಪಕಾಲ ಕಾಮ್ಯಪುಣ್ಯಫಲವನ್ನುಂಡು ಆ ಪುಣ್ಯ ಬರಿದಾದಾಗ ತಿರುಗಿ ಭೂಮಿಯಲ್ಲಿ ಹುಟ್ಟುತ್ತಾನೆ. ತಿರುಗಿ ಕಾಮ್ಯಕರ್ಮ ಮಾಡಿ ಸ್ವರ್ಗಕ್ಕೆ ಹೋಗುತ್ತಾನೆ. ಹೀಗೆ ಹುಟ್ಟುಸಾವುಗಳ ಸಂಸಾರ ತಪ್ಪುವುದೇ ಇಲ್ಲ. ಅದರಿಂದ ಪ್ರವೃತ್ತಕರ್ಮವನ್ನೇ ತ್ಯಾಗ ಮಾಡಬೇಕು. ನಿವೃತ್ತಕರ್ಮವನ್ನೇ ಮಾಡಿ ಮೋಕ್ಷ ಪಡೆಯಬೇಕು ಎಂದು ಏಕಾದಶಸ್ಕಂಧದಲ್ಲಿ ಶ್ರೀಕೃಷ್ಣ ಉದ್ಧವನಿಗೆ ಉಪದೇಶಿಸುತ್ತಾನೆ.



–೧೭೨–

## ಪರರ ದುಃಖಕ್ಕೆ ತಾವೂ ಮರುಗುವ ದಯಾಳುತ್ವ ಸಾಧಕನಿಗೆ ಬೇಕು

**ಕ್ಷುತ್‌ತೃಟ್ ತ್ರಿಧಾತುಭಿರಿಮಾ ಮುಹುರರ್ದ್ಯಮಾನಾಃ**
**ಶೀತೋಷ್ಣ ವಾತವರ್ಷೈರಿತರೇತರಾಚ್ಚ ।**
**ಕಾಮಾಗ್ನಿನಾಚ್ಯುತ ರುಷಾ ಚ ಸುದುರ್ಭರೇಣ**
**ಸಂಪಶ್ಯತೋ ಮನ ಉರುಕ್ರಮ ಸೀದತೇ ಮೇ ॥**

(ಭಾ.೩.೧೦.೮)

ಏವಂ ಕಿಂಚಿದ್ವ್ಯಕ್ತವೈರಾಗ್ಯೈಃ ದೈವಾಲ್ಲಬ್ಧಮಹತ್ಸಮಾಗಮೈಃ ತತ್ಪಾದ-ರಜೋಭಿಷೇಕ ಸಮಾಸಾದಿತತದೀಯಾನುಗ್ರಹಲವೈಃ ಮಹನ್ನಿಂದಾದಿತೋ ನಿವೃತ್ತೈಃ ಕಿಂಚಿದೇವ ಜಿತೇಂದ್ರಿಯೈಃ ಮುಮುಕ್ಷುಭಿಃ ಬ್ರಹ್ಮ ಜಿಜ್ಞಾಸ್ಯ ಮಿತ್ಯಭಿಹಿತಂ। ಇದಾನೀಂ ಗುರುಪ್ರಸಾದಾಗತಬ್ರಹ್ಮೋಪದೇಶೈಃ ನೇತರ ಸುಖಾಯ ಪ್ರಯತಿತವ್ಯಂ ಕಿಂತು ಗುರೂದಿತಪ್ರಕಾರೇಣ ಹರೇರುಪಾಸನಾರ್ಥ ಮೇವೇತಿ ವಕ್ತುಂ ಮಧ್ಯೇ ತದುಪಯೋಗಿ ಕಿಂಚಿದ್ವದತಿ। ತತ್ರಾದೌ ಗುರೂಣಾಂ ಪರದುಃಖೇನ ದುಃಖಿತ್ವರೂಪಂ ದಯಾಲುತ್ವಂ ದರ್ಶಯತಿ ॥ ಕ್ಷುತ್ತೃಡಿತಿ ॥ ಉರುಕ್ರಮ ಅಚ್ಯುತ। ವಾತಪಿತ್ತಶ್ಲೇಷ್ಮರೂಪೈಸ್ತ್ರಿಧಾತುಭಿಃ ತಥಾ ಶೀತೋಷ್ಣವಾತವರ್ಷೈಃ ಅನ್ಯೋನ್ಯತಶ್ಚ ಕಾಮಲಕ್ಷಣೇನ ವಹ್ನಿನಾ ವೋಢುಮಶಕ್ಯೇನ, ರುಷಾ ಕ್ರೋಧೇನ ಚ ಮುಹುಃ ಪುನಃ ಪುನಃ ಅರ್ದ್ಯಮಾನಾ

**ಇಮಾಃ ಪ್ರಜಾಃ ಸಮ್ಯಕ್ ಪಶ್ಯತೋ ನಿರೀಕ್ಷತೋ ಮೇ ಸಾಧೋಃ ಮನಃ ಸೀದತೇ ಖೇದಯುಕ್ತಂ ಭವತಿ । ಅಯಮೇವ ಹಿ ಸ್ವಭಾವಃ ಸಾಧೂನಾಂ ಯತ್ಪರದುಃಖೇನ ದುಃಖಿತ್ವಮಿತಿ ॥**



**ಬ್ರಹ್ಮದೇವರು ಪರಮಾತ್ಮನಲ್ಲಿ ಹೇಳಿಕೊಳ್ಳುತ್ತಾರೆ—ನಾಶರಹಿತ ಮಹಾಮಹಿಮ ಪ್ರಭುವೆ, ನಾನು ಮುಂದೆ ಸೃಷ್ಟಿಮಾಡಲಿರುವ ಸಜ್ಜನರು ಹಸಿವು ಬಾಯಾರಿಕೆ ಮತ್ತು ವಾತಪಿತ್ತ ಕಫ ಎಂಬ ಆಧ್ಯಾತ್ಮಿಕ ತಾಪಗಳು. ಚಳಿ ಸೆಕೆ ಗಾಳಿ ಮಳೆ ಮುಂತಾದ ಆಧಿದೈವಿಕ ತಾಪಗಳು ಕಾಮಾಗ್ನಿ ಅಸಹನೀಯ ಕೋಪ ಹೀಗೆ ನಾನಾಕಾರಣಗಳಿಂದ ಮತ್ತೆ ಮತ್ತೆ ಕ್ಲೇಶಕ್ಕೆ ಒಳಗಾಗುತ್ತಾರೆ. ಇದನ್ನು ಆಲೋಚನೆ ಮಾಡಿಯೆ ನನ್ನ ಮನಸ್ಸು ಬಹಳ ನೊಂದುಕೊಳ್ಳುತ್ತದೆ.**

ಸ್ವಲ್ಪ ಅನುಭವಾರೂಢವಾದ ವೈರಾಗ್ಯವನ್ನು ಪಡೆದು, ದೈವಾನುಗ್ರಹದಿಂದ ಜ್ಞಾನಿಗಳ ಸಂಗ ದೊರೆತಾಗ ಅವರ ಪಾದಧೂಳಿ ಶಿರದಲ್ಲಿ ಧರಿಸಿ ಉಪದೇಶಗಳನ್ನು ಕೇಳಿ ಸ್ವಲ್ಪವಾದರೂ ಅವರ ಅನುಗ್ರಹಪಡೆದು ಜ್ಞಾನಿಗಳ ನಿಂದೆ ಮಾಡುವುದನ್ನು ಬಿಟ್ಟು ಯಥಾಶಕ್ತಿ ಇಂದ್ರಿಯನಿಗ್ರಹ ಮಾಡಿಕೊಂಡಿರುವ ಮುಮುಕ್ಷುಗಳಾದ ಸುಜನರು ಗುರುಪ್ರಸಾದದಿಂದ ಬ್ರಹ್ಮೋಪದೇಶ ಪಡೆದಾಗ ವಿಷಯಸುಖಗಳಿಗಾಗಿ ಯತ್ನಿಸದೆ ಗುರುವಿನ ಮಾರ್ಗದರ್ಶನದಲ್ಲಿ ಹರಿಯ ಉಪಾಸನೆಗೆ ಮನವಿಡಬೇಕು. ಈ ಉಪಾಸನೆಗೆ ಸಹಾಯಕವಾಗಿ ಬ್ರಹ್ಮದೇವರ ಉದಾಹರಣೆಯಿಂದ ಭೂತದಯೆಯನ್ನು ಪರದುಃಖಕ್ಕೆ ಮಿಡಿಯುವ ಹೃದಯವಂತಿಕೆಯನ್ನೂ ಅಭ್ಯಾಸ ಮಾಡಬೇಕು.

ಮುಂದೆ ಪ್ರಪಂಚದ ಎಲ್ಲ ಸಜ್ಜನ ಸಮೂಹವು ತ್ರಿವಿಧತಾಪದಿಂದ ಬೆಂದುಹೋಗಲಿದ್ದಾರೆ ಎಂದು ಈಗಲೇ, ತಾನು ಅವರನ್ನು ಸೃಜಿಸುವ ಮೊದಲೇ ಆಲೋಚಿಸಿ ನೊಂದುಕೊಳ್ಳುತ್ತಾರೆ ಪರಮದಯಾಳುವಾದ ಬ್ರಹ್ಮದೇವರು.



—೧೭೩—

## ಸಂಸಾರ ದುಃಖದಿಂದ ಉದ್ವೇಗಕ್ಕೊಳಗಾಗಬಾರದು

ನೈವೋದ್ವಿಜೇ ಭವದುರತ್ಯಯವೈತರಣ್ಯಾ-
ಸ್ತ್ವ ತ್ತೀರ್ಥಗಾಯನಮಹಾಮೃತಮತ್ತಚಿತ್ತಃ ।
ಶೋಚೇ ನು ತೇ ವಿಮುಖಚೇತಸ ಇಂದ್ರಿಯಾರ್ಥ-
ಮಾಯಾಸುಖಾಯ ಭರಮುದ್ವಹತೋ ವಿಮೂಢಾನ್ ॥

(ಭಾ.೭.೯.೪೩)

ನನು ಬ್ರಹ್ಮವಚನಮೇತತ್ । ತತ್ರಾಯಂ ಸ್ವಭಾವೋऽಸ್ತ್ಯೇವೇತಿ ವದಾಮಃ । ಸರ್ವೇಷಾಮಪಿ ಸಾಧೂನಾಮೀದೃಶ ಏವ ಸ್ವಭಾವ ಇತಿ ಕುತ ಇತ್ಯತೋ ನೈವಂ ವಕ್ತುಂ ಯುಕ್ತಂ । ಯತ ಇತೋऽನ್ಯೇಷ್ವಪಿ ಸಾಧುಷ್ವಿದಮಸ್ತಿ । ತತಃ ಸಾಧೂನಾಮಿತ್ಯೇವ ವಕ್ತವ್ಯಂ । ಅನ್ಯಥಾ ಅತಿವ್ಯಾಪ್ತ್ಯಾಪತ್ತೇರಿತ್ಯಾಶಯೇನ ಸಕಲಸಾಧುಶಿರೋಮಣೇಃ ಪ್ರಹ್ಲಾದಸ್ಯ ವಚನಂ ಪಠತಿ ॥ ನೈವೇತಿ । ತ್ವತ್ತೀರ್ಥಂ ತ್ವಚರಿತಂ ತಸ್ಯ ಗಾಯನಂ ಕೀರ್ತನಂ ತದೇವ ಮಹದಮೃತಂ ತೇನ ಮತ್ತಂ ತುಷ್ಟಂ ಚಿತ್ತಂ ಯಸ್ಯ ತಾದೃಶೋऽಹಂ ಭವರೂಪಾಯಾಸ್ತರಿತುಮಶಕ್ಯಾಯಾಃ ವೈತರಣ್ಯಾಃ ಸಕಾಶಾತ್ ನೈವೋದ್ವಿಜೇ ।ಕಥಂ ತರೇಯಮಿತಿ ಚಿಂತಯಾ ನ ಶೋಚಾಮಿ । ಅನೇನ ಸಂಸಾರಾದ್ಭಯಾಭಾವರೂಪಮಭಯಂ ಯಮಾಂತರ್ಗತಂ ಶಮಲಭ್ಯಂ ಸೂಚಯತಿ । ನು ತರ್ಹಿ ಕಿಂವಿಷಯಃ ಶೋಕಃ । ಉತ್ತರಮಾಹ ॥ ಇಂದ್ರಿಯೇತಿ ॥ ಇಂದ್ರಿಯಾಣಾಮರ್ಥಾ ವಿಷಯಾಃ ತಜ್ಜನ್ಯಂ ಯನ್ಮಾಯಾಸುಖಂ ಪ್ರಾಕೃತಮಲ್ಪಮಶಾಶ್ವತಂ ಚ ತದರ್ಥಂ । ಸಂಸಾರಾಖ್ಯಂ ಭಾರಂ ಗರ್ದಭವದ್ವಹತಃ । ಅತ ಏವ ವಿಮೂಢಾನ್ । ತೇನ ಭಾರೇಣ । ತೇ ತ್ವದ್ವಿಷಯೇ । ವಿಮುಖಂ ಚೇತೋ ಯೇಷಾಂ ತೇ ತಾದೃಶಾನುದ್ದಿಶ್ಯ ಶೋಚ ಇತಿ । ಅನೇನ ದಯಾಖ್ಯೋ ಭಾಗವತಧರ್ಮಃ ಪ್ರದರ್ಶಿತೋ ಭವತಿ ॥



ಪ್ರಹ್ಲಾದನು ಶ್ರೀನೃಸಿಂಹನಲ್ಲಿ ಹೇಳಿಕೊಳ್ಳುತ್ತಾನೆ—'ಪ್ರಭು, ನಾನೇನೂ ದಾಟಲಾಗದಂಥ ಸಂಸಾರವೆಂಬ ವೈತರಣಿನದಿಗೆ ಹೆದರುವುದಿಲ್ಲ. ಏಕೆಂದರೆ ನಿನ್ನನ್ನು ಕೊಂಡಾಡುವ ಶಾಸ್ತ್ರಗಳ ಶ್ರವಣಮಾಡುತ್ತ ಆ ಮಹಾ ಅಮೃತರಸ ಪಾನದಿಂದ ಸದಾ ಸುಖಿಸುತ್ತಿರುವವನು ನಾನು'.

ಸಕಲಗುಣಪೂರ್ಣರಾದ ಬ್ರಹ್ಮದೇವರಿಗೆ ಸಜ್ಜನರ ಮೇಲೆ ಅಪಾರ ಕರುಣೆ ಇರುವುದು ಆಶ್ಚರ್ಯವಲ್ಲ. ಸಜ್ಜನರೆಲ್ಲರಿಗೂ ಇಂಥ ದಯಾಗುಣ ಉಂಟೆ? 'ಎಲ್ಲರಿಗೂ ಇರುವುದಿಲ್ಲ'ವೆಂದರೆ ಸಜ್ಜನರ ದಯಾಗುಣವೆಂಬ ಲಕ್ಷಣಕ್ಕೆ ಅವ್ಯಾಪ್ತಿ ಇದೆ ಎಂದಾದೀತು ಎಂಬ ಜಿಜ್ಞಾಸೆಗೆ ಉತ್ತರವಾಗಿ ಸಜ್ಜನಶಿರೋಮಣಿಯಾದ ಪ್ರಹ್ಲಾದನ ಉದಾಹರಣೆ ಸಪ್ತಮಸ್ಕಂಧದಲ್ಲಿದೆ.

ಪ್ರಹ್ಲಾದನಿಗೆ ಸಂಸಾರ ಭಯವಿಲ್ಲ ಎಂದು ಇಲ್ಲಿ ಹೇಳಿದ್ದು ಯಮಗಳು ಹನ್ನೆರಡು ಇವೆ, ಅವುಗಳಲ್ಲಿ ಒಂದು, ಅಭಯ, ಸಂಸಾರ ದುಃಖಕ್ಕೆ ಭಯಪಡದಿರುವುದು. ಇದು ಶಮದಿಂದ ಲಭ್ಯ. ಶಮ ಎಂದರೆ ಭಗವನ್ನಿಷ್ಠೆ. 'ರಕ್ಷತೀತ್ಯೇವ ವಿಶ್ವಾಸಃ' ಭಗವಂತ ರಕ್ಷಿಸುತ್ತಾನೆ ಎನ್ನುವ ವಿಶ್ವಾಸ. ಆದರಿಂದ ಸಂಸಾರಕ್ಕೆ ಸಾಧಕ ಭಯಪಡಬಾರದು. ಸಂಸಾರಕ್ಕೆ ಭಯಪಟ್ಟು ಭಗವಂತನಲ್ಲಿ ಭಕ್ತಿ ಮಾಡಬಾರದು. ನಿಷ್ಕಾಮಭಕ್ತಿಗೇ ಹರಿ ಮೆಚ್ಚುತ್ತಾನೆ.

ಪ್ರಹ್ಲಾದನು ಮುಂದುವರಿದು ಹೇಳುತ್ತಾನೆ— 'ನಾನು ಶೋಕಿಸುವುದು ಸಜ್ಜನರಿಗಾಗಿ. ಸಜ್ಜನರು ಮೂಢರಾಗಿ, ನಿನ್ನಲ್ಲಿಯೇ ಮನಸಿಡದೆ, ಇಂದ್ರಿಯ ವಿಷಯ ಜನ್ಯವಾದ ಪ್ರಾಕೃತಸುಖಕ್ಕೆ ಆಸೆಪಟ್ಟು, ಸಂಸಾರದ ಭಾರವನ್ನು ಕತ್ತೆಯಂತೆ ಹೊತ್ತು ಪ್ರವೃತ್ತ ಕರ್ಮ ಮಾಡುತ್ತ ಬಳಲುತ್ತಿರುವುದನ್ನು ನೋಡಲಾರೆ' ಎಂದು.

ಅಭಯ ಮತ್ತು ದಯೆಗಳೆಂಬ ಭಾಗವತಧರ್ಮಗಳು ಇಲ್ಲಿ ಉಕ್ತವಾಗಿದೆ.



–೧೭೪–

**ಪ್ರವೃತ್ತಕರ್ಮೋಪದೇಶ ಮಾಡಿದರೆ ಅಜ್ಞರಿಗೆ ಮಹಾ ಅನ್ಯಾಯವಾದೀತು**

**ಜುಗುಪ್ಸಿತಂ ಧರ್ಮಕೃತೇಽನುಶಾಸನಂ**
**ಸ್ವಭಾವರಕ್ತಸ್ಯ ಮಹಾನ್ ವ್ಯತಿಕ್ರಮಃ ।**
**ಯದ್ವಾಕ್ಯತೋ ಧರ್ಮ ಇತೀತರಃ ಸ್ಥಿತೋ**
**ನ ಮನ್ಯತೇ ತಸ್ಯ ನಿವಾರಣಂ ಜನಃ ॥**

(ಭಾ.೧.೫.೧೫)

**ಕರ್ಮ ದ್ವಿವಿಧಂ। ಪ್ರವೃತ್ತಂ ನಿವೃತ್ತಂ ಚೇತಿ। ತತ್ರ ಪ್ರವೃತ್ತೇ ನ ಪ್ರವರ್ತಿತವ್ಯಂ। ನಶ್ವರಫಲತ್ವಾತ್ ಕ್ಲೇಶದತ್ವಾಚ್ಚ। ನಿವೃತ್ತೇ ತು ಪ್ರವರ್ತೇತ। ಅಕ್ಷಯಫಲತ್ವಾದಕ್ಲೇಶದತ್ವಾಚ್ಚೇತಿ ದಯಾಲುಭಿರ್ಗುರುಭಿರ್ವಕ್ತವ್ಯಮೇತದ್ ದ್ವಯಮಿತ್ಯಾಶಯೇನ ಪ್ರವೃತ್ತಕರ್ಮೋಪದೇಶನಂ ನಿಂದತಿ ॥ ಜುಗುಪ್ಸಿತಮಿತಿ ॥ ರಾಗಿಸ್ವಭಾವಾದೇವ ರಕ್ತಸ್ಯ ಜನಸ್ಯ। ಪ್ರವೃತ್ತಧರ್ಮೇ ಪ್ರವೃತ್ತಯೇ। ಅನುಶಾಸನಂ ಉಪದೇಶನಂ ನಿಂದಿತಂ। ನ ಕೇವಲಂ ನಿಂದಿತಂ ಕಿಂತು ಮಹಾನ್ ವ್ಯತಿಕ್ರಮಃ ಅನ್ಯಾಯಶ್ಚ ಭವತಿ। ವೃಕ್ಷಾದಧಃ ಪತಿತಸ್ಯ ದಂಡೇನ ತಾಡನಮಿವ। ಕುತೋ ಮಹಾನ್ವ್ಯತಿಕ್ರಮಃ। ಇತರಃ ಪ್ರಾಕೃತೋ ಜನಃ। ಯಸ್ಯ ಪ್ರವೃತ್ತಧರ್ಮಪ್ರತಿಪಾದಕಸ್ಯ ಪುರುಷಸ್ಯ ವಾಕ್ಯಾತ್। ಪ್ರವೃತ್ತ ಏವ ಧರ್ಮ ಇತಿ ಸ್ಥಿತಃ ನಿಶ್ಚಿತಃ। ಇತರಸ್ಥಿತ ಇತ್ಯೇಕಪದತಯಾ ಪಾಠೇ ತು ಯದ್ವಾಕ್ಯತಃ ಪ್ರವೃತ್ತ ಏವ ಧರ್ಮ ಇತಿ ಮತ್ವಾ। ಇತರಸ್ಮಿನ್ ಪ್ರವೃತ್ತ ಏವ ಸ್ಥಿತಃ ಪರಿನಿಷ್ಠಿತೋ ಜನಃ। ತಸ್ಯ ಪ್ರವೃತ್ತಧರ್ಮಸ್ಯ। ನಿವಾರಣಂ ತ್ಯಾಗಂ। ಸರ್ವಥಾ ನ ಮನ್ಯತೇ ಯತಃ। ಅತಃ ತಸ್ಯ ಪುರುಷಸ್ಯ ಮಹಾನ್ವ್ಯತಿಕ್ರಮ ಇತಿ ॥**



**ನಾರದರು ಶ್ರೀವ್ಯಾಸರಿಗೆ ಹೇಳುತ್ತಾರೆ—ಮೊದಲೇ ವಿಷಯಸುಖದಲ್ಲಿ ಆಸಕ್ತರಾಗಿ ಪ್ರವೃತ್ತಕರ್ಮ ನಿರತರಾಗಿರುವ ಅಜ್ಞಜನರಿಗೆ ತಿರುಗಿ ಪ್ರವೃತ್ತಕರ್ಮ ವನ್ನೇ ಧರ್ಮವೆಂದು ಉಪದೇಶಿಸಿದರೆ, ಅದು ಬಹಳ ಅನ್ಯಾಯವಾಗುವುದು. ನಿಮ್ಮಂಥ ಜ್ಞಾನಿಗಳು ಏನು ಹೇಳಿದರೂ ಧರ್ಮವೆಂದು ಕೇಳುವ ಸಜ್ಜನರು ಇವರು. ಅದರಿಂದ ಭಕ್ತಿಮಾರ್ಗವನ್ನು ಹೇಳಿ ದುರ್ಮಾರ್ಗದಲ್ಲಿ ಬೀಳದಂತೆ ಅವರನ್ನು ನೀವು ತಡೆಯಬೇಕು ತಾನೆ?**

'ಪ್ರವೃತ್ತ-ನಿವೃತ್ತ' ಅಂದರೆ 'ಕಾಮ್ಯ-ನಿಷ್ಕಾಮ'ಗಳೆಂದು ಕರ್ಮಗಳು ಎರಡು ಬಗೆ. ಅವುಗಳಲ್ಲಿ ಕಾಮ್ಯವಾದ ಪ್ರವೃತ್ತಕರ್ಮವು ಕ್ಲೇಶಕರ. ಅಸ್ಥಿರ ಅಲ್ಪಫಲ ಜನಕವಾದ್ದರಿಂದ ಅದರಲ್ಲಿ ಪ್ರವೃತ್ತಿ ಮಾಡಬಾರದು ಆಸಕ್ತನಾಗ ಬಾರದು. ನಿವೃತ್ತಕರ್ಮ ಮೋಕ್ಷಫಲ ಜನಕವಾದ್ದರಿಂದ ಕ್ಲೇಶರಹಿತವಾದ್ದರಿಂದ ಅದರಲ್ಲಿಯೇ ಮುಮುಕ್ಷು ಪ್ರವೃತ್ತಿ ಮಾಡಬೇಕು, ಆಸಕ್ತನಾಗಬೇಕು. ಅಜ್ಞರಿಗೆ ಜ್ಞಾನಿಗಳು ಇದನ್ನು ಹೇಳಬೇಕು ಹೊರತು ಕಾಮ್ಯ ಕರ್ಮವನ್ನೇ ಉಪದೇಶಿಸಿದರೆ ಗಿಡದಿಂದ ಬಿದ್ದ ಹುಡುಗನನ್ನು ಹಿಡಿದು ಬಡಿಗೆ ಏಟು ಕೊಡುವಂತೆ ಅನ್ಯಾಯವಾಗುವುದು,

ಅಜ್ಞರು ಪ್ರವೃತ್ತಕರ್ಮತ್ಯಾಗವನ್ನು ಪ್ರಶಸ್ತವೆಂದು ಎಂದಿಗೂ ತಿಳಿಯಲಾರರು. ಹೀಗಾಗಿ ಅವರಿಗೆ ಮಹಾಅನ್ಯಾಯವಾಗುವುದು. ನಿಷ್ಕಾಮಕರ್ಮ ಮಾಡಬೇಕೆಂದು ಬೋಧಿಸುವ ಭಾಗವತ ಶಾಸ್ತ್ರವನ್ನೇ ಶ್ರೀವ್ಯಾಸರು ರಚಿಸಬೇಕೆಂದು ನಾರದರು ಕೇಳಿಕೊಳ್ಳುತ್ತಾರೆ.



–೧೭೫–

## 'ಕಾಮ್ಯಕರ್ಮ ಮಾಡು' ಎಂದರೆ ಅದು ಕುರುಡನನ್ನು ಹಳ್ಳದಲ್ಲಿ ಬೀಳಿಸುವಂತೆ ಅನ್ಯಾಯ

**ಕಸ್ತಂ ಸ್ವಯಂ ತದಭಿಜ್ಞೋ ವಿಪಶ್ಚಿತ್**
**ಅವಿದ್ಯಾಯಾಮಂತರೇ ವರ್ತಮಾನಂ ।**
**ದೃಷ್ಟ್ವಾ ಪುನಸ್ತಂ ಸಘೃಣಃ ಕುಬುದ್ಧಿಂ**
**ಪ್ರಯೋಜಯೇದುತ್ಪಥಗಂ ಯಥಾಂಧಂ ॥**

(ಭಾ.೫.೫.೧೭)

ಏವಮುಕ್ತಮೇವ ಹೃದ್ಯಾರೋಹಾಯ ಪ್ರಪಂಚಯತಿ ॥ **ಕಸ್ತಮಿತಿ** ॥ ಸ್ವಯಂ । ತದಭಿಜ್ಞಃ ಪ್ರವೃತ್ತನಿವೃತ್ತೋಭಯವಿಧಧರ್ಮಫಲವಿಶೇಷಜ್ಞಾನೀ । ಅತ ಏವ ವಿಪಶ್ಚಿತ್ । ಕಃ ಪುರುಷಃ । ಸ್ವಯಂ ಸ್ವಭಾವತ ಏವ । ಅಜ್ಞಾನಿಭಿಃ ಪ್ರವರ್ತಿತಪ್ರವೃತ್ತಮಾರ್ಗೇ ಪ್ರವರ್ತಮಾನಂ । ಅತ ಏವ ಕುಬುದ್ಧಿಂ । ತಂ ದೃಷ್ಟ್ವಾ ತಮೇವ ಪುನಸ್ತಸ್ಮಿನ್ನೇವ ಮಾರ್ಗೇ । ಸ್ವಯಮೇವ ಉತ್ಪಥಗಂ ಅಂಧಮಿವ ಸದಯಃ ಪ್ರಯೋಜಯೇತ್ ಪ್ರೇರಯೇದಿತಿ ॥



ಋಷಭದೇವನ ಉಪದೇಶ—ಶ್ರೇಯಃ ಸಾಧನ ಯಾವುದೆಂದು ಸ್ವತಃ ತಿಳಿದಿರುವ ಜ್ಞಾನಿಯು ಯಾರು ತಾನೇ ಸ್ವತಃ ಅವಿದ್ಯೆಯ ನಡುವೆ ಕಾಮ್ಯಕರ್ಮ ಮಾರ್ಗದಲ್ಲಿ ಬಿದ್ದಿರುವ ಹಾಳುಬುದ್ಧಿಯ ಅಜ್ಞ ಜನತೆಯನ್ನು ಕಂಡೂ ಪುನಃ ಅವರನ್ನು ಅದೇ ಕಾಮ್ಯಕರ್ಮಮಾರ್ಗದಲ್ಲಿ ನಡೆಸಿಯಾನು? ಸ್ವತಃ ದಾರಿತಪ್ಪಿ ನಡೆಯುತ್ತಿರುವ ಕುರುಡನನ್ನು ಕಣ್ಣಿರುವ ಯಾವನು ಹಳ್ಳದಲ್ಲಿ ಬೀಳಿಸಿಯಾನು.



—೧೭೬—

**ಅಜ್ಞರಿಗೆ ಕಾಮ್ಯಕರ್ಮೋಪದೇಶದಿಂದ**
**ಅನ್ಯಾಯ ಮಾಡುವವರು ಬಹಳ ಇದ್ದಾರೆ**

ಗುರುರ್ನ ಸ ಸ್ಯಾತ್ ಸ್ವಜನೋ ನ ಸ ಸ್ಯಾತ್
ಪಿತಾ ನ ಸ ಸ್ಯಾತ್ ಜನನೀ ನ ಸಾ ಸ್ಯಾತ್ ।
ದೈವಂ ನ ತತ್‌ಸ್ಯಾತ್ ನ ಪತಿಶ್ಚ ಸ ಸ್ಯಾತ್
ನ ಮೋಚಯೇದ್ ಯಃ ಸಮುಪೇತ ಮೃತ್ಯುಂ ॥

(ಭಾ.೫.೫.೧೮)

ನನು ಕಃ ವಿಪಶ್ಚಿತ್ಪ್ರವೃತ್ತಮಾರ್ಗೇ ಪ್ರಯೋಜಯೇನ್ನ ಕೋಽಪೀತಿ ಯದುದಿತಂ ತನ್ನ ಸಮಂಜಸಂ । ಯತಸ್ತತ್ರೈವ ನಿಯೋಜಯಂತೋ ಬಹವಃ ಸಂತಿ ॥ **ತಥಾಹಿ**—ಗುರುಸ್ತಾವದಸ್ಮಾಕಂ ತತ್ರೈವ ನಿಯೋಜಯತಿ । ತಥೈವ ಸಾಕ್ಷಾಜ್ಜನನೀ । ತಾದೃಶಃ ಪಿತಾಪಿ । ಕಿಂ ಪುನಃ ಯಃ ಸ್ವಜನಃ ಸ ಸರ್ವೋಽಪಿ । ತಥೈವಾನ್ನಸ್ಯ ದಾತಾ ಸ್ವಾಮ್ಯಪಿ । ಕಿಂ ವಕ್ತವ್ಯಂ ಮನುಷ್ಯಾ ಏವೈವಮಿತಿ । ಯದಸ್ಮತ್ಕುಲದೈವಂ ತದಪ್ಯಸ್ಮದ್ಯಾತ್ರಾಸಮಯೇ ಪೃಚ್ಛತಾಂ ನಃ ಕಶ್ಚನ ಪುರುಷಂ ಪ್ರವಿಶ್ಯ ತಥೈವ ಬಭಾಷ ಇತಿ । ಏವಂ ಪ್ರಾಪ್ತೇ ಪ್ರವೃತ್ತಿಮಾರ್ಗೇ ಪ್ರವೃತ್ತಿಮುಪದಿಶತ್ಸು ತೇಷು ಗುರುತ್ವಾದಿಪ್ರತಿಪತ್ತಿರೇವ ನ ಕರ್ತವ್ಯಾ । ಯಯಾ ತೇಷಾಮುಪದೇಶಾತ್ತತ್ಪರಃ ಸ್ಯಾದಿತ್ಯಾಶಯೇನ ವಾಸ್ತವಂ ಗುರುತ್ವಾದಿಕಂ ನಾಸ್ತ್ಯೇವೇತ್ಯಾಹ ॥ **ಗುರುರ್ನೇತಿ** ॥ ಯಃ ಸಮುಪೇತಮೃತ್ಯುಂ ಸಂಸಾರಾಖ್ಯಂ ನ ಮೋಚಯೇತ್ । ತನ್ಮೋಚನಸಾಧನಂ ನಿವೃತ್ತಿಮಾರ್ಗಂ ನೋಪದಿಶೇತ್ । ಪ್ರತ್ಯುತ ಸಂಸೃತಿಸಾಧನಂ ಪ್ರವೃತ್ತಿಮಾರ್ಗಮೇವೋಪದಿಶೇತ್ಸ ತಾದೃಶೋ ಗುರ್ವಾದಿರೇವ ನೇತಿ ನ ತದ್ವಾಕ್ಯಂ ವಿಶ್ವಸನೀಯಮಿತಿ । **ಯಥಾಹುಃ**—

''ಗುರೂಕ್ತಮಪಿ ನ ಗ್ರಾಹ್ಯಂ ಯದನರ್ಥೇಽರ್ಥಕಲ್ಪನಂ ।
ಯದುಕ್ತ್ಯಾ ನ ಪ್ರಬುಧ್ಯೇತ ಸುಪ್ತಸ್ತ್ವಜ್ಞಾನನಿದ್ರಯಾ ।
ನ ಶ್ರದ್ದಧ್ಯಾನ್ಮತಂ ತಸ್ಯ ಯಥಾಂಧೋ ಹ್ಯಂಧನಾಯಕ'' ಇತಿ ॥



ಋಷಭದೇವನ ಉಪದೇಶ—

ಪ್ರವೃತ್ತಕರ್ಮ ಕ್ಲೇಶಕರವೆಂದು ಬಲ್ಲವನು ಯಾರುತಾನೆ ಅಜ್ಞರನ್ನು ಪುನಃ

**ಪ್ರವೃತ್ತಕರ್ಮಮಾರ್ಗದಲ್ಲಿ ಬೀಳಿಸಿಯಾನೆಂದು ಕೇಳಿದರೆ, ಅದು ವಾಸ್ತವದಲ್ಲಿ ನಿಜವಲ್ಲ. ಗುರುಗಳು ಬಂಧುಗಳು ತಂದೆ ತಾಯಿಗಳು ಮಾತ್ರವಲ್ಲ ಕುಲ ದೈವವೂ ಉತ್ಸವಕಾಲದಲ್ಲಿ ದರ್ಶನಪಾತ್ರಿಗಳಲ್ಲಿ, ಯಾರಲ್ಲಾದರೂ ಆವೇಶ ಗೊಂಡು ಪ್ರವೃತ್ತಕರ್ಮ ಮಾರ್ಗವನ್ನೇ ಉಪದೇಶಿಸುವುದುಂಟು. ರಾಜಾದಿ ಪ್ರಭುಗಳೂ ಪ್ರಜೆಗಳಿಗೆ ಉಪದೇಶಿಸುತ್ತಾರೆ, ಅದು ಸರಿಯಲ್ಲ ಎಂದು ಋಷಭದೇವನು ಹೇಳುತ್ತಾನೆ— ಪ್ರವೃತ್ತಕರ್ಮಮಾರ್ಗವನ್ನೇ ಉಪದೇಶಿಸಿ, ಪ್ರಾಪ್ತವಾಗಿರುವ ಸಂಸಾರ ಬಂಧನದಿಂದ ಬಿಡಿಸದಿದ್ದರೆ, ಸಂಸಾರಮುಕ್ತಿಗೆ ಸಾಧನವಾದ ನಿವೃತ್ತಕರ್ಮ ಮಾರ್ಗವನ್ನು ಉಪದೇಶಿಸದಿದ್ದರೆ ಗುರು ಗುರುವೇ ಅಲ್ಲ. ಬಂಧುವು ಬಂಧುವೆ ಅಲ್ಲ. ತಂದೆತಾಯಿಗಳು ತಂದೆತಾಯಿಗಳೇ ಅಲ್ಲ. ದೈವವೂ ದೈವವಲ್ಲ, ಪ್ರಭುವೂ ಪ್ರಭುವಲ್ಲ. ಅವರು ಹೇಳುವ ಮಾತನ್ನು ನಂಬಿ ನಡೆಯಬಾರದು.**

**ಇದು ಭಾಗವತದಲ್ಲಿ ಇನ್ನೂ ಬೇರೆಕಡೆ ಉಕ್ತವಾಗಿದೆ—**

ಗುರೂಕ್ತಮಪಿ ನ ಗ್ರಾಹ್ಯಂ ಯದನರ್ಥೇಽರ್ಥಕಲ್ಪನಂ ।
ಯದುಕ್ತ್ಯಾ ನ ಪ್ರಬುಧ್ಯೇತ ಸುಪ್ತಸ್ತ್ವಜ್ಞಾನ ನಿದ್ರಯಾ ।
ನ ಶ್ರದ್ದಧ್ಯಾನ್ಮತಂ ತಸ್ಯ ಯಥಾಂಧೋ ಹ್ಯಂಧನಾಯಕಃ ॥

(ಭಾ.೭.೬.೨,೩)

ಪ್ರಹ್ಲಾದನು ಅಸುರಬಾಲಕರಿಗೆ ಹೇಳುತ್ತಾನೆ—ನಾವು ಈ ಗುರುಗಳು ಸದಾ ಕಾಮ್ಯಕರ್ಮಮಾರ್ಗವನ್ನೇ ಉಪದೇಶಿಸುವ ಶಂಡಾಮರ್ಕರು ಹೇಳುವುದನ್ನು ಕೇಳಬಾರದು. ಅನರ್ಥಕರವಾದ ಧರ್ಮಾರ್ಥ ಕಾಮಗಳೆಂಬ ತ್ರಿವರ್ಗವನ್ನೇ ಪುರುಷಾರ್ಥವೆಂದು ಅವರು ಹೇಳುತ್ತಾರೆ. ಅಜ್ಞಾನದ ನಿದ್ದೆಯಲ್ಲಿ ಮುಳುಗಿದವನು ಯಾರ ಉಪದೇಶದಿಂದ ಎಚ್ಚೆತ್ತುಕೊಳ್ಳುವುದಿಲ್ಲವೋ ಅವನ ಮಾತನ್ನು ನಂಬಬಾರದು. ನಂಬಿದರೆ ಅವನು ಕುರುಡನನ್ನು ಹಿಂಬಾಲಿಸಿ ಹಳ್ಳದಲ್ಲಿ ಬೀಳುವ ಕುರುಡನಂತಾಗುತ್ತಾನೆ.



—೧೭೭—

## ಕಾಮ್ಯಕರ್ಮಫಲ ಅನಿತ್ಯ . ಕಾಮ್ಯಕರ್ಮಿಗಳಿಗೇ ಅದಿರಲಿ

**ಮಾ ವಃ ಪದವ್ಯಃ ಪಿತರಸ್ಮದಾಸ್ಥಿತಾ**
**ಯಾ ಯಜ್ಞಶಾಲಾಸನ ಧೂಮವರ್ತ್ಮನಾಂ ।**
**ಕದನ್ನತೃಪ್ತೈರಸುಭೃದ್ಭಿರೀಡಿತಾ**
**ಅವ್ಯಕ್ತಲಿಂಗಾ ಅವಧೂತಸೇವಿತಾಃ ॥**

(ಭಾ.೪.೪.೨೧)

ನಶ್ವರಫಲತ್ವಾತ್ಕ್ಲೇಶದತ್ವಾಚ್ಚ ಪ್ರವೃತ್ತಂ ಕರ್ಮ ತ್ಯಾಜ್ಯಂ, ನಿತ್ಯಫಲತ್ವಾದಕ್ಲೇಶದತ್ವಾಚ್ಚ ನಿವೃತ್ತಂ ಕರ್ಮ ಕಾರ್ಯಮಿತಿ ಯದುಕ್ತಂ ತತ್ರ ಶಿಷ್ಟಾಚಾರೋಽಪ್ಯಸ್ತೀತಿ ಭಾವೇನ ತದ್ಬೋಧಕಂ ಪಿತರಂ ಪ್ರತ್ಯುಕ್ತಂ ಸತೀವಾಕ್ಯಂ ಪಠನ್ ತದುಪಸಂಹರತಿ । **ಮಾ ವ ಇತಿ** ॥ ಹೇ ಪಿತಃ । ಅಸ್ಮಾಭಿರಾಸ್ಥಿತಾಃ । ನ ಕೇವಲಂ ಅಸ್ಮಾಭಿರೇವೇತಿ ಮಂತವ್ಯಂ । ಕಿಂತು ಅವಧೂತ ಸೇವಿತಾಃ ಸರ್ವಪೂಜ್ಯೈಃ ಸನಕಾದಿಭಿರವಧೂತವಿರಕ್ತೈರಪಿ ಸೇವಿತಾಃ ಅಜ್ಞಾತಲಿಂಗಾಃ ನಿವೃತ್ತಧರ್ಮಾನುಷ್ಠಾನರೂಪಾಃ ಭಾಗವತಧರ್ಮಾನುಷ್ಠಾನಾಪರಪರ್ಯಾಯಾಃ ಪದವ್ಯಃ ಸಂತಿ । ಯಾಃ ವಃ ಪದವ್ಯಃ ಸ್ವರ್ಗಸಾಧನವಿಶೇಷಾಃ ಪ್ರವೃತ್ತಧರ್ಮಾನುಷ್ಠಾನರೂಪಾಃ ಭವಾದೃಶೈರಸುಭೃದ್ಭಿಃ ಕೇವಲಂ ದೇಹಪೋಷಕೈರೇವ ಮಾಂಸಾದಿರೂಪಕುತ್ಸಿತಾನ್ನಸೇವಕೈರಸುಭೃದ್ಭಿರೇವ ಸ್ತುತ್ಯಾಸ್ತಾ ಅಸ್ಮಾಕಂ ನೈವ ಸ್ಯುರಿತಿ । ಅಥವಾ ನನು ಯಜ್ಞಶಾಲಾಯಾಂ ಆಸನದೀಕ್ಷಾದಿಪೂರ್ವಕಂ ಅಗ್ನಿಹೋತ್ರಪೂರ್ಣಮಾಸಚಾತುರ್ಮಾಸ್ಯ ಪಶುಸೋಮಾದಿರೂಪಾಣಿ ಪ್ರವೃತ್ತಕರ್ಮಾಣ್ಯಾಚರತಾಂ ಧೂಮರಾತ್ರ್ಯಾದಿ ಮಾರ್ಗೇಣ ಗತಾನಾಮಸ್ಮಾಕಂ ದಿವ್ಯಭೋಗಾ ಭವಂತಿ । ತೇ ಪುನಸ್ತತ್ಸಾಧನಂ ಪ್ರವೃತ್ತಿಮಾರ್ಗಮನಿಚ್ಛತಾಂ ಭವತಾಂ ಕಥಂ ಭವೇಯುರಿತಿ ಪಿತೃಮನೋಗತಾಮಾಶಂಕಾಮುತ್ಥಾಪ್ಯ ನಿರಾಹ ॥ **ಮಾ ವ ಇತಿ** ॥ ಹೇ ಪಿತಃ । ವಃ ಪದವ್ಯಃ ಧೂಮಾದಿಮಾರ್ಗಾಃ । ತೈರ್ಗತಾನಾಂ ಭೋಗಾಶ್ಚ ಅಸ್ಮಾಕಂ ನೈವ ಭವಂತು । ತದಪೇಕ್ಷಾ ನಾಸ್ತಿ । ಕುತಃ । ಯತಃ ಅಸ್ಮಾಕಂ ಅಗ್ನ್ಯಾದಿಮಾರ್ಗಾಃ ನಿತ್ಯಪುಮರ್ಥಹೇತವಃ ಸಂತಿ । ತೈಶ್ಚ ಗತಾನಾಮಸ್ಮಾಕಂ ನಿತ್ಯಭೋಗಾ ಭವಂತಿ । ತತಃ ನ ಹಿ ಕೋಽಪಿ ಸ್ವಸ್ಥಾತ್ಮಾ ಸುಲಭೇ ನಿತ್ಯಮಹಾಸುಖಸಾಧನೇ ಮಾರ್ಗೇ ಸತಿ ಆಯಾಸಸಾಧ್ಯೇ ಅನಿತ್ಯಾಲ್ಪದುಃಖಸಾಧನೇ ಮಾರ್ಗೇ ಪ್ರವರ್ತತೇ, ಸತಿ ನಿತ್ಯೇ

ಮಹತಿ ಸುಖೇ ಅಸ್ಥಿರಮಲ್ಪಂ ವಾ ಕಾಮಯತ ಇತಿ। ಅತ ಏವ ಆಯಾಸಸಾಧ್ಯತಾಜ್ಞಾಪನಾಯ ಯಜ್ಞಶಾಲಾಸನಧೂಮವರ್ತ್ಮನಾಮಿತ್ಯುಕ್ತಂ। **ಯಥಾಹುಃ—**

''ಪ್ರವೃತ್ತಂ ಚ ನಿವೃತ್ತಂ ಚ ದ್ವಿವಿಧಂ ಕರ್ಮ ವೈದಿಕಂ।
ಆವರ್ತತೇ ಪ್ರವೃತ್ತೇನ ನಿವೃತ್ತೇನಾಽಶ್ನುತೇಽಮೃತಂ ॥

ಹಿಂಸ್ರಂ ದ್ರವ್ಯಮಯಂ ಕಾಮ್ಯಮಗ್ನಿಹೋತ್ರಾದ್ಯಶಾಂತಿದಂ।
ದರ್ಶಶ್ಚ ಪೂರ್ಣಮಾಸಶ್ಚ ಚಾತುರ್ಮಾಸ್ಯಃ ಪಶುಃ ಸುತಃ ॥

ಏತದಿಷ್ಟಂ ಪ್ರವೃತ್ತಾಖ್ಯಂ ಹುತಂ ಪ್ರಹುತಮೇವ ಚ।
ಪೂರ್ತಂ ಸುರಾಲಯಾರಾಮಕೂಪಾಜೀವ್ಯಾದಿಲಕ್ಷಣಂ ॥

ದ್ರವ್ಯಮೂಷ್ಮವಿಪಾಕಶ್ಚ ಧೂಮೋ ರಾತ್ರಿರಪಕ್ಷಯಃ।
ಅಯನಂ ದಕ್ಷಿಣಂ ಸೋಮೋ ದರ್ಶ ಓಷಧಿವೀರುಧಃ ॥

ಅನ್ನಂ ರೇತ ಇತಿ ಕ್ಷ್ಮೇಶ ಪಿತೃಯಾನಂ ಪುನರ್ಭವಃ।
ಏಕೈಕಸ್ಯಾಪ್ಯಾನುಪೂರ್ವ್ಯಾದ್ಭೂತ್ವಾ ಭೂತ್ವೇಹ ಜಾಯತೇ ॥

ಸ್ವಲೋಕಂ ನ ವಿದುಸ್ತೇ ವೈ ಯತ್ರ ದೇವೋ ಜನಾರ್ದನಃ।
ಆಹುರ್ಧೂಮ್ರಧಿಯೋ ವೇದಂ ಸಕರ್ಮಕಮತದ್ವಿದಃ।

ನಿಷೇಕಾದಿಶ್ಮಶಾನಾಂತೈಃ ಸಂಸ್ಕಾರೈಃ ಸಂಸ್ಕೃತೋ ದ್ವಿಜಃ ॥

ಇಂದ್ರಿಯೇಷು ಕ್ರಿಯಾಯಜ್ಞಾನ್ ಜ್ಞಾನದೀಪೇಷು ಜುಹ್ವತಿ।
ಇಂದ್ರಿಯಾಣಿ ಮನಸ್ಯೇವಂ ವಾಚಿ ವೈಕಾರಿಕಂ ಮನಃ।
ತಾಂ ತು ವರ್ಣಸಮಾಮ್ನಾಯೇ ತಮೋಂಕಾರಂ ಸ್ವರೇ ನ್ಯಸೇತ್।
ಓಂಕಾರಂ ಬಿಂದುನಾದೇ ತು ತಂ ತು ಪ್ರಾಣೇ ಮಹತ್ಯಮುಂ।
ಅಗ್ನಿಃ ಸೂರ್ಯೋ ದಿವಾ ವಾಯುಃ ಶುಕ್ಲೋ ರಾಕೋತ್ತರಃ ಸ್ವರಾಟ್।
ವಿಶ್ವೋಽಥ ತೈಜಸಃ ಪ್ರಾಜ್ಞಸ್ತುರ್ಯ ಆತ್ಮಾ ಸಮನ್ವಯಃ ॥

ದೇವಯಾನಮಿದಂ ಪ್ರಾಹುರ್ಭೂತ್ವಾ ಭೂತ್ವಾಽನುಪೂರ್ವ್ಯಶಃ।
ಆತ್ಮಯಾಜ್ಯುಪಶಾಂತಾತ್ಮಾ ಹ್ಯಾತ್ಮಸ್ಥೋ ನ ನಿವರ್ತತೇ ॥

ಯ ಏತೇ ಪಿತೃದೇವಾನಾಮಯನೇ ದೇವನಿರ್ಮಿತೇ।
ಶಾಸ್ತ್ರೇಣ ಚಕ್ಷುಷಾ ವೇದ ಜನಸ್ಥೋಽಪಿ ನ ಮುಹ್ಯತಿ ॥

**ನಿವೃತ್ತಂ ಕರ್ಮ ಸೇವೇತ ಪ್ರವೃತ್ತಂ ಮತ್ಪರಸ್ತ್ಯಜೇತ್ ।**
**ಜಿಜ್ಞಾಸಾಯಾಂ ಸಂಪ್ರವೃತ್ತೋ ನಾದ್ರಿಯೇತ್ಕರ್ಮಚೋದನಾ'' ಮಿತಿ ಏಕಾದಶಸ್ಕಂಧೇ ॥**



**ಅಪ್ಪ, ಏಕಾಂತಭಕ್ತರು ಮಾತ್ರ ನಡೆಸಬಹುದಾದ ಅನ್ಯರಿಗೆ ತಿಳಿಯಲಾಗದ, ಮೋಕ್ಷವನ್ನೂ ಕೂಡ ಬಯಸದೆ ನಾವು ನಡೆಸುತ್ತಿರುವ ಮಹಾನಿಯಮ ಕರ್ಮಮಾರ್ಗವು ನಿಮಗೆ ಯೋಗ್ಯವಲ್ಲ. ನಮ್ಮಂತೆ ಸ್ವತಃ ದೇವತೆಯೇ ಆಗಿರುವನಾದರೂ ಪ್ರಾರಬ್ಧವಶದಿಂದ ಸ್ವರ್ಗಾದಿ ಕಾಮನೆಯಿಂದ ಪ್ರವೃತ್ತಿ ಮಾರ್ಗವನ್ನು ಹಿಡಿದಿರುವ ನಿನಗೆ ಯಜ್ಞಶಾಲೆಯಲ್ಲಿ ಯಜ್ಞದೀಕ್ಷಿತನಾಗಿ ಕುಳಿತು ಧೂಮಾದಿ ಮಾರ್ಗದಿಂದ ಸ್ವರ್ಗಕ್ಕೇ ಹೋಗಲು ಬಯಸುವ ನಿನಗೆ ಪಶುಮಾಂಸರೂಪವಾದ ಕದನ್ನದಿಂದ ತೃಪ್ತರಾಗುವ ಪ್ರಾಣಿಗಳು ಬಯಸುವ ಕಾಮ್ಯಕರ್ಮ ಮಾರ್ಗವೇ ಯೋಗ್ಯ. ಅದು ನಮಗೆ ಬೇಡ' –ಇದು ಸತೀದೇವಿ ತಂದೆಯಾದ ದಕ್ಷಪ್ರಜಾಪತಿಗೆ ಹೇಳಿದ ಮಾತು.**

ಇಲ್ಲಿ 'ಯಜ್ಞಶಾಲಾಸನ ಧೂಮ' ಶಬ್ದಗಳಿಂದ ಪ್ರವೃತ್ತಿಮಾರ್ಗದಲ್ಲಿ ಆಯಾಸವಿದೆ ಎಂದು ಸೂಚಿತವಾಗುತ್ತದೆ. ಯಜ್ಞಶಾಲೆಯಲ್ಲಿ ಕುಳಿತು ದೀಕ್ಷಾದಿಗಳನ್ನು ಸ್ವೀಕರಿಸಿ ಅಗ್ನಿಹೋತ್ರ ದರ್ಶಪೂರ್ಣಮಾಸ ಚಾತುರ್ಮಾಸ್ಯ ಪಶು ಸೋಮ ಮುಂತಾದ ಪ್ರವೃತ್ತ ಕರ್ಮಗಳನ್ನಾಚರಿಸುವವರು ಅದರ ಫಲವಾಗಿ ಧೂಮರಾತ್ರ್ಯಾದಿ ಮಾರ್ಗ ಮತ್ತು ಸ್ವರ್ಗಭೋಗಗಳನ್ನು ಪಡೆಯುತ್ತಾರೆ ನಿಜ.. ಆದರೆ ಅವು ಅನಿತ್ಯ. ಅಲ್ಪವಾಗಿರುವುದರಿಂದ ನಮಗೆ ಅವು ಬೇಡ. ಮೋಕ್ಷರೂಪವಾದ ನಿತ್ಯವಾದ ಮಹಾಪುರುಷಾರ್ಥವು ಅರ್ಚಿರಾದಿ ಮಾರ್ಗದಿಂದ ಹೋಗುವ ನಮಗೆ ಲಭ್ಯವಿವೆ. ಅನಾಯಾಸದಿಂದ ಮಹಾಪುರುಷಾರ್ಥ ಲಭ್ಯವಿರುವಾಗ ಆಯಾಸದಿಂದ ಅಲ್ಪ ಅಸ್ಥಿರ ಸುಖ ಪಡೆಯಲು ಬಯಸುವುದು ಬುದ್ಧಿವಂತರ ಲಕ್ಷಣವಲ್ಲ ಎಂದು ಸತೀದೇವಿ ಹೇಳುತ್ತಿದ್ದಾಳೆ.

ಇಲ್ಲಿ ಸ್ವರ್ಗದಲ್ಲಿಯೇ ಇರುವ ಓರ್ವದೇವೋತ್ತಮನೇ ಆಗಿರುವ ದಕ್ಷಪ್ರಜಾಪತಿಗೆ ಸ್ವರ್ಗಸಾಧನವಾದ ಕಾಮ್ಯಕರ್ಮವೇ ಯೋಗ್ಯವೆಂದೂ ಮೋಕ್ಷಮಾರ್ಗ ಯೋಗ್ಯವಲ್ಲವೆಂದೂ ಸತೀದೇವಿ ಹೇಳಿ ನಿಂದಿಸುವುದು

ಯಥಾರ್ಥವಲ್ಲ. ಯಥಾರ್ಥವೆನ್ನುವ ಅಭಿಪ್ರಾಯವೂ ದೇವಿಗೆ ಇಲ್ಲ. ಕೇವಲ ಹಿರಿಯರು ಕಿರಿಯರಿಗೆ ಮಾತಿನಿಂದ ಮಾಡುವ ಶಿಕ್ಷೆ ಎಂದು ತಿಳಿಯಬೇಕು ಇದನ್ನು.

'ಯಥಾಯೋಗ್ಯಂ ತು ತಾತ್ಪರ್ಯಂ ನಿಂದಾಯಾ ಅನ್ಯದೇವ ತು'

ಎಂದು ತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು ಹೇಳಿದ್ದಾರೆ.

'ಪ್ರವೃತ್ತ ಕರ್ಮವನ್ನು ಹೇಳುವುದೇ ವೇದದ ಮುಖ್ಯ ಉದ್ದೇಶವೇನಲ್ಲ' ಎಂದು ಚತುರ್ಥಸ್ಕಂಧದಲ್ಲಿ ನಾರದರು ಪ್ರಾಚೀನಬರ್ಹಿರಾಜನಿಗೆ ಉಪದೇಶಿಸುತ್ತಾರೆ—

ಸ್ವಲೋಕಂ ನ ವಿದುಸ್ತೇ ವೈಯತ್ರ ದೇವೋ ಜನಾರ್ದನಃ ।
ಆಹುರ್ಧೂಮ್ರ ಧಿಯೋ ವೇದಂ ಸಕರ್ಮಕಮತದ್ವಿದಃ ॥

ವಿಷ್ಣುಲೋಕಪ್ರಾಪ್ತಿ ಕಾಮ್ಯಕರ್ಮಿಗಳಿಗೆ ಇಷ್ಟವಲ್ಲ!

ಪ್ರವೃತ್ತ ನಿವೃತ್ತಕರ್ಮಗಳ ಬಗ್ಗೆ ಮತ್ತು ದೇವಯಾನ ಪಿತೃಯಾಣಗಳ ಬಗ್ಗೆ ಭಾಗವತ ಸಪ್ತಮಸ್ಕಂಧದಲ್ಲಿ ಸ್ಪಷ್ಟವಿವರಣೆಗಳಿವೆ—

ಪ್ರವೃತ್ತಂ ಚ ನಿವೃತ್ತಂ ಚ ದ್ವಿವಿಧಂ ಕರ್ಮವೈದಿಕಂ
ಆವರ್ತತೇ ಪ್ರವೃತ್ತೇನ ನಿವೃತ್ತೇನಾಶ್ನುತೇಽಮೃತಂ
ಹಿಂಸ್ರಂ ದ್ರವ್ಯಮಯಂ ಕಾಮ್ಯಮಗ್ನಿಹೋತ್ರಾದ್ಯಶಾಂತಿದಂ
ದರ್ಶಶ್ಚ ಪೂರ್ಣಮಾಸಶ್ಚ ಚಾತುರ್ಮಾಸ್ಯಂ ಪಶುಃ ಸುತಃ
ಏತದಿಷ್ಟಂ ಪ್ರವೃತ್ತಾಖ್ಯಂ ಹುತಂ ಪ್ರಹುತ ಮೇವ ಚ
ಪೂರ್ತಂ ಸುರಾಲಯಾರಾಮ ಕೂಪಾಜೀವ್ಯಾದಿ ಲಕ್ಷಣಂ
ದ್ರವ್ಯಮೂಷ್ಮ ವಿಪಾಕಶ್ಚ ಧೂಮೋ ರಾತ್ರಿರಪಕ್ಷಯಃ
ಅಯನಂ ದಕ್ಷಿಣಂ ಸೋಮೋ ದರ್ಶ ಓಷಧಿವೀರುಧಃ
ಅನ್ನಂ ರೇತ ಇತಿ ಕ್ಷ್ಮೇಶ ಪಿತೃಯಾನಂ ಪುನರ್ಭವಃ
ಏಕೈಕಸ್ಯಾನುಪೂರ್ವ್ಯಾಚ್ಚ ಭೂತ್ವಾಭೂತ್ವೇಹ ಜಾಯತೇ
ನಿಷೇಕಾದಿ ಶ್ಮಶಾನಾಂತ ಸಂಸ್ಕಾರೈಃ ಸಂಸ್ಕೃತೋ ದ್ವಿಜಃ
ಇಂದ್ರಿಯೇಷು ಕ್ರಿಯಾಯಜ್ಞಾನ್ ಜ್ಞಾನದೀಪೇಷು ಜುಹ್ವತಿ ॥

(ಭಾ.೭.೧೬.೪೭-೫೨)

ವೇದೋಕ್ತವಾದ ಸ್ವರ್ಗಾದಿ ವಿಷಯಭೋಗ ಸಾಧನವಾದ ಯಾಗಾದಿಗಳು ಪ್ರವೃತ್ತಿ ಕರ್ಮಗಳು. ವೇದೋಕ್ತ ಮೋಕ್ಷಸಾಧನ ಶ್ರವಣಾದಿಕರ್ಮ ನಿವೃತ್ತಕರ್ಮವೆನಿಸುತ್ತದೆ. ಎರಡೂ ವೈದಿಕವೆ. ಆದರೆ ಪ್ರವೃತ್ತಕರ್ಮದಿಂದ ಪುನಃ ಸಂಸಾರವೆ, ನಿವೃತ್ತ ಕರ್ಮದಿಂದ ಮೋಕ್ಷ ಲಭಿಸುತ್ತದೆ.

ಅಗ್ನಿಹೋತ್ರಾದಿ, ದರ್ಶಪೂರ್ಣಮಾಸ ಚಾತುರ್ಮಾಸ್ಯ ಪಶು ಸೋಮ ಯಾಗಗಳೆಲ್ಲವೂ ಹಿಂಸೆಯಿಂದ ಕೂಡಿವೆ. ಪಶು ಚರು ಪುರೋಡಾಶ ಸೋಮರಸ ಮುಂತಾದ ದ್ರವ್ಯಯುಕ್ತವಾಗಿವೆ. ಕಾಮ್ಯ ಫಲೋದ್ದೇಶಯುಕ್ತವಾಗಿದ್ದರೆ ಅವು ಮೋಕ್ಷಸಾಧನವಾಗುವುದಿಲ್ಲ. ಹುತವೆನಿಸುವ ವೈಶ್ವದೇವವೂ ಪ್ರಹುತವೆನಿಸುವ ಬಲಿಹರಣವೂ 'ಇಷ್ಟ' ಎನಿಸುತ್ತವೆ. ಅದೂ ಕಾಮ್ಯಫಲೋದ್ದೇಶಪೂರ್ವಕ ಮಾಡಿದರೆ ಪ್ರವೃತ್ತಕರ್ಮವೆನಿಸುತ್ತದೆ. ದೇವಾಲಯ ಉಪವನ ಕೆರೆ ಬಾವಿ ಸಾಲು ಮರಗಳನ್ನು ನಿರ್ಮಾಣ ಮಾಡುವುದು 'ಪೂರ್ತ'ವೆನಿಸುತ್ತದೆ. ಈ 'ಇಷ್ಟಾಪೂರ್ತ'ಗಳು ಫಲೋದ್ದೇಶ ಪೂರ್ವಕವಾಗಿದ್ದರೆ ಪ್ರವೃತ್ತ ಕರ್ಮವೆನಿಸುತ್ತವೆ.

ಶಾಖದಿಂದ ಬೇಯಿಸಿದ ಅನ್ನ ದಾನ ಮಾಡುವುದು 'ದ್ರವ್ಯ' ವೆನಿಸುವುದು. ಇದು ಫಲೋದ್ದೇಶದಿಂದ ಮಾಡಿದರೆ ಪ್ರವೃತ್ತಕರ್ಮವೆ.

ಈ ಎಲ್ಲ ಪ್ರವೃತ್ತಕರ್ಮಗಳನ್ನು ಮಾಡುವವರು ಧೂಮಲೋಕ ರಾತ್ರಿಲೋಕ ಕೃಷ್ಣಪಕ್ಷಲೋಕ ದರ್ಶಲೋಕ ದಕ್ಷಿಣಾಯನಲೋಕ ಚಂದ್ರಲೋಕಗಳನ್ನು ಕ್ರಮವಾಗಿ ಹೊಂದಿ ತಿರುಗಿ ಪಂಚಾಗ್ನಿ ಮಾರ್ಗವಾಗಿ ಭೂಮಿಯಲ್ಲಿ ಬಂದು ಪುನರ್ಜನ್ಮ ಪಡೆಯುತ್ತಾರೆ.

ಹೀಗೆ ಇದು ಪಿತೃಯಾನ, ಪುನಃ ಸಂಸಾರದಲ್ಲಿ ಹುಟ್ಟಲು ಕಾರಣವಾಗುತ್ತದೆ. ರಾಜನೆ, ಪ್ರವೃತ್ತಕರ್ಮಿಯು ಧೂಮಾದಿಲೋಕಗಳನ್ನು ಕ್ರಮವಾಗಿ ಹೊಂದಿ ಸ್ವರ್ಗಸುಖವನ್ನು ಉಂಡಬಳಿಕ ಕೊನೆಗೂ ಈ ಭೂಮಿಯಲ್ಲಿ ಹುಟ್ಟಲೇಬೇಕಾಗುತ್ತದೆ ಎಂದು ನಾರದರು ಧರ್ಮರಾಜನಿಗೆ ಹೇಳುತ್ತಾರೆ.

ಭೂಮಿಯಲ್ಲಿ ಹುಟ್ಟಿದ ಕಾಮ್ಯಕರ್ಮಿಗೆ ತಿರುಗಿ ಗರ್ಭಾದಾನದಿಂದ ತೊಡಗಿ ಅಂತ್ಯೇಷ್ಟಿವರೆಗೆ ಎಲ್ಲ ಸಂಸ್ಕಾರಗಳಾದಾಗ ಆತ ದ್ವಿಜನೆನಿಸುತ್ತಾನೆ. ಪುನಃ ಪ್ರವೃತ್ತ ಕರ್ಮ ಮಾಡುತ್ತಾನೆ. ಪಿತೃಯಾನ ಮಾರ್ಗದಿಂದ ಪುನಃ ಸ್ವರ್ಗಕ್ಕೆ ಹೋಗುತ್ತಾನೆ. ಹೀಗೆ ಸಂಸಾರ ತಪ್ಪುವುದೇ ಇಲ್ಲ.

ನಿವೃತ್ತಕರ್ಮಿಯು ಅರ್ಚಿರಾದಿ ಲೋಕಗಳ ಮಾರ್ಗವಾಗಿ ಹೋಗಿ ಮೋಕ್ಷವನ್ನು ಪಡೆಯುತ್ತಾನೆ. ತಿರುಗಿ ಭೂಮಿಯಲ್ಲಿ ಹುಟ್ಟುವುದಿಲ್ಲ.

ನಿವೃತ್ತಕರ್ಮಿಯು ಮೋಕ್ಷವನ್ನು ಹೊಂದುವುದಕ್ಕೆ ಮೊದಲಿಗೆ ಪ್ರಾಣೋತ್ಕ್ರಮಣಕಾಲದಲ್ಲಿ ಲಯಚಿಂತನೆ ಮಾಡಬೇಕು. ಕ್ರಿಯಾತ್ಮಕ ಯಜ್ಞಾಭಿಮಾನಿ ಶತಸ್ಥದೇವತೆಗಳನ್ನು ಜ್ಞಾನಕಾರಣ ಇಂದ್ರಿಯಾಭಿಮಾನಿ ದೇವತೆಗಳಲ್ಲಿ ಹೋಮಿಸಬೇಕು. ಅಂದರೆ, ಇವರನ್ನು ಅವರ ಅಧೀನರೆಂದು ಧ್ಯಾನಿಸಬೇಕು.

ಇಂದ್ರಿಯಾಣಿ ಮನಸ್ಯೇವಂ ವಾಚಿ ವೈಕಾರಿಕಂ ಮನಃ
ತಾಂ ತು ವರ್ಣಸಮಾಮ್ನಾಯೇ ತಮೋಂಕಾರೇ ಸ್ವರೇ ನ್ಯಸೇತ್ ।
ಓಂಕಾರಂ ಬಿಂದುನಾದೇ ತು ತಂ ತು ಪ್ರಾಣೇ ಮಹತ್ಯಮುಂ
ಅಗ್ನಿಃಸೂರ್ಯೋ ದಿವಾ ವಾಯುಃ ಶ್ಲುಕ್ಲೋ ರಾಕೋತ್ತರಃ ಸ್ವರಾಟ್
ವಿಶ್ವೋಽಥ ತೈಜಸಃ ಪ್ರಾಜ್ಞಸ್ತುರ್ಯ ಆತ್ಮಾ ಸಮನ್ವಯಃ
ದೇವಯಾನಮಿದಂ ಪ್ರಾಹುರ್ಭೂತ್ವಾಭೂತ್ವಾಽನುಪೂರ್ವ್ಯಶಃ
ಆತ್ಮಯಾಜ್ಯುಪಶಾಂತಾತ್ಮಾ ಹ್ಯಾತ್ಮಸ್ಥೋ ನ ನಿವರ್ತತೇ ॥
ಯ ಏತೇ ಪಿತೃದೇವಾನಾಮಯನೇ ದೇವನಿರ್ಮಿತೇ
ಶಾಸ್ತ್ರೇಣ ಚಕ್ಷುಷಾ ವೇದ ಜನಸ್ಥೋಽಪಿ ನ ಮುಹ್ಯತಿ ॥
(ಭಾ.೭.೧೬.೫೩-೫೬)

ಯಜ್ಞಾಭಿಮಾನಿಗಳು, ಇಂದ್ರಿಯಾಭಿಮಾನಿಗಳು, ಮನೋಭಿಮಾನಿ ಇಂದ್ರ ವೇದಾಭಿಮಾನಿ ಪಾರ್ವತಿ, ಓಂಕಾರದಲ್ಲಿರುವ ಅಕಾರ ಉಕಾರ ಮಕಾರಗಳ ಅಭಿಮಾನಿರುದ್ರ, ಓಂಕಾರಾಭಿಮಾನಿ ಶೇಷ. ಬಿಂದ್ವಭಿಮಾನಿಯಾದ ಸರಸ್ವತಿಯ ಒಂದುರೂಪ. ನಾದಾಭಿಮಾನಿಯಾದ ಸರಸ್ವತಿಯ ಮೂಲರೂಪ ಮತ್ತು ಬ್ರಹ್ಮ.

—ಹೀಗೆ ಕ್ರಮವಾಗಿ ಹಿಂದಿನವರನ್ನು ಮುಂದಿನವರಲ್ಲಿ ಲಯಗೊಳಿಸಿ ಬ್ರಹ್ಮನನ್ನು ಹರಿಯಲ್ಲಿ ಲಯಗೊಳಿಸಬೇಕು. ಅಧೀನರೆಂದು ಧ್ಯಾನಿಸಬೇಕು.

ಬಳಿಕ ಅರ್ಚಿರಾದಿ ಮಾರ್ಗವನ್ನು ಹೀಗೆ ಸ್ಮರಿಸಬೇಕು— ಅರ್ಚಿಲೋಕದಲ್ಲಿ ಅರ್ಚಿ ಮತ್ತು ಜ್ಯೋತಿ ಎಂದು ಎರಡು ರೂಪಗಳಿಂದ ಅಗ್ನಿದೇವನು ಜ್ಞಾನಿಗೆ ಲಭ್ಯನಾಗುತ್ತಾನೆ. ಬಳಿಕ ಆತಿವಾಹಿಕ ವಾಯುದೇವ,

ಅಭಿಜಿತ್, ದಿವಾ ಶುಕ್ಲಪಕ್ಷ ರಾಕಾ ಉತ್ತರಾಯಣ ಸಂವತ್ಸರ ತಟಿತ್ ವರುಣ ಪ್ರಜಾಪತಿಗಳ ದ್ವಾರಾ ಸೂರ್ಯ, ಸೋಮ ವೈಶ್ವಾನರಲೋಕಗಳ ದ್ವಾರಾ ಇಂದ್ರಲೋಕ ಧ್ರುವಲೋಕ. ಬಳಿಕ ವಿಶ್ವತೈಜಸ ಪ್ರಾಜ್ಞ ಅನಿರುದ್ಧ ಪ್ರದ್ಯುಮ್ನ ಸಂಕರ್ಷಣರೆಂಬ ಆರು ಮಂದಿ ಭಾರತೀಪುತ್ರರನ್ನು ಭಾರತೀಲೋಕದಲ್ಲಿ ಹೊಂದಿ, ಬಳಿಕ ಭಾರತಿಯ ಸಮೀಪಕ್ಕೆ ಹೋಗಿ, ಮುಖ್ಯಪ್ರಾಣನ ಬಳಿಗೆ ಹೋಗಿ ಸೇರುತ್ತಾನೆ. ಅಲ್ಲಿಂದ ವೈಕುಂಠದಲ್ಲಿ ಪರಮಾತ್ಮನ ಬಳಿಗೆ ಹೋಗುತ್ತಾನೆ.

ಮುಂದೆ ಬ್ರಹ್ಮನೊಂದಿಗೆ ಬ್ರಹ್ಮಾಂಡದ ನವಾವರಣಗಳನ್ನು ದಾಟಿದಾಗ ವಿಶ್ವ ತೈಜಸ ಪ್ರಾಜ್ಞ ತುರೀಯ ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವ ಎಂಬ ಭಗವದ್ರೂಪಗಳ ಪ್ರಾಪ್ತಿ. ಬಳಿಕ ಸರ್ವವ್ಯಾಪ್ತ ನಾರಾಯಣನ ಪ್ರಾಪ್ತಿ. ಇದು ದೇವಯಾನ ಮಾರ್ಗ.

ಇದರಲ್ಲಿ ಕ್ರಮವಾಗಿ ಒಂದಕ್ಕಿಂತ ಇನ್ನೊಂದು ಅಧಿಕಸುಖವುಳ್ಳ ಲೋಕಗಳು. ಅದರಿಂದ ಅಧಿಕ ಸುಖಉಂಡ ಜ್ಞಾನಿ ವಿಷಯವಾಸನಾರಹಿತ ಮನಸಿನಿಂದ ಭಗವಂತನನ್ನೇ ಆರಾಧಿಸುತ್ತ ಅವನಲ್ಲಿಯೇ ನೆಲೆಸುತ್ತಾನೆ. ಸಂಸಾರಕ್ಕೆ ಹಿಂತಿರುಗಿ ಬರುವುದಿಲ್ಲ.

ಈ ಪಿತೃಯಾನ ದೇವಯಾನಗಳು ಭಗವಂತನಿಂದ ನಿರ್ಮಿತವಾಗಿವೆ. ಇವುಗಳನ್ನು ಶಾಸ್ತ್ರವೆಂಬ ಕಣ್ಣಿಂದ ನೋಡುವವನು ಅಜ್ಞಜನಸಮೂಹದ ನಡುವೆ ಇದ್ದರೂ ಮೋಹಕ್ಕೊಳಗಾಗಿ ಅಧಃಪತನವನ್ನು ಹೊಂದುವುದಿಲ್ಲ. ಮುಕ್ತಿಯನ್ನೇ ಹೊಂದುತ್ತಾನೆ.

'ನಿವತ್ತಂ ಕರ್ಮ ಸೇವೇತ ಪ್ರವೃತ್ತಂ ಮತ್ಪರಸ್ತ್ಯಜೇತ್
ಜಿಜ್ಞಾಸಾಯಾಂ ಸಂಪ್ರವೃತ್ತೋ ನಾದ್ರಿಯೇತ್ ಕರ್ಮಚೋದನಾಂ ॥'
(ಭಾ.೧೧.೧೦.೪)

'ಸಾಧಕನು ನನ್ನಲ್ಲಿಯೇ ಸರ್ವೋತ್ತಮನೆಂದು ಭಕ್ತಿ ಮಾಡಬೇಕು. ನಿಷ್ಕಾಮಕರ್ಮ ಮಾಡಬೇಕು. ಕಾಮ್ಯಕರ್ಮವನ್ನು ತ್ಯಜಿಸಬೇಕು. ಬ್ರಹ್ಮಜ್ಞಾನ ಸಾಧನೆಗೆ ಹೊರಟವನು ಅದಕ್ಕೆ ವಿರೋಧಿಯಾದ ಕಾಮ್ಯಕರ್ಮವಿಧಿಯನ್ನು ಆದರಿಸಬಾರದು.' ಎಂದು ಏಕಾದಶಸ್ಕಂಧದಲ್ಲಿದೆ.



# (೧೩) ನಿವೃತ್ತ ಕರ್ಮಾಚರಣ ಪ್ರಕರಣ

## ಪ್ರಕರಣ ಸಾರಾಂಶ

ಲೌಕಿಕ ಫಲದ ಉದ್ದೇಶವಿಲ್ಲದೆ ಕೇವಲ ಹರಿಪ್ರೀತಿಗಾಗಿ ಭಕ್ತಿಯಿಂದ ಆಚರಿಸುವ ಶ್ರವಣಾದಿ ಕರ್ಮಗಳು ನಿವೃತ್ತಕರ್ಮವೆನಿಸುತ್ತವೆ. ನಿವೃತ್ತಕರ್ಮ ಮಾಡಲು ಆರಂಭಿಸಿ ಅಕಸ್ಮಾತ್ ಪೂರೈಸದಿದ್ದರೆ ಲೋಪದೋಷಗಳು ಬಂದರೇನು ಗತಿ? ಪ್ರವೃತ್ತ ಕರ್ಮ ಬಿಟ್ಟಿದ್ದರಿಂದ ಆ ಫಲವೂ ಇಲ್ಲ ಎಂದರೆ ಅಂಥ ಪ್ರಸಂಗವಿಲ್ಲ. ನಿವೃತ್ತಕರ್ಮ ಸ್ವಲ್ಪವೇ ಮಾಡಿದರೂ ಅದಕ್ಕೆ ಪುಣ್ಯಫಲವಿದ್ದೇ ಇದೆ. ಶಾಶ್ವತಮೋಕ್ಷಫಲ ಅನೇಕ ಜನ್ಮಗಳ ಸಾಧನೆಯಿಂದಲೇ ಸಿಗುವಂಥದ್ದು. ಸಿಕ್ಕೇ ಸಿಗುತ್ತದೆ, ಮೋಕ್ಷಯೋಗ್ಯನಿಗೆ ಮೋಕ್ಷವಿದ್ದೇ ಇದೆ. ಆದರೆ ಪ್ರವೃತ್ತಕರ್ಮವನ್ನು ಎಷ್ಟು ಶ್ರದ್ಧೆಯಿಂದ ಮಾಡಿದರೂ ಏನಾದರೂ ಲೋಪದೋಷ ಬಂದರೆ ಕರ್ಮವು ವ್ಯರ್ಥ ಅನರ್ಥಕರವಾಗುವುದು. ನಿವೃತ್ತಕರ್ಮದಲ್ಲಿ ಈ ದೋಷವಿರುವುದಿಲ್ಲ.

ಪ್ರವೃತ್ತಕರ್ಮಿಗೆ ಮುಕ್ತಿ ಸುಖ ಸರ್ವಥಾ ಇಲ್ಲ. ನಿವೃತ್ತಕರ್ಮಿಗೆ ಸಂಸಾರಸುಖ ಸರ್ವಥಾ ಇಲ್ಲವೆಂದಾಗುವುದಿಲ್ಲ. ಪ್ರಾರಬ್ಧವಶದಿಂದ ಸಂಸಾರ ದುಃಖದಂತೆಯೇ ಸಂಸಾರಸುಖವೂ ಪ್ರಯತ್ನವಿಲ್ಲದೆಯೇ ಸಿಗುತ್ತದೆ.



—೧೭೮—

**ಶ್ರವಣಾದಿಗಳಿಗೆ ಜನ್ಮಾಂತರದಲ್ಲಾದರೂ ಫಲವು ನಿಶ್ಚಿತವೆ**

**ತ್ಯಕ್ತ್ವಾ ಸ್ವಧರ್ಮಂ ಚರಣಾಂಬುಜಂ ಹರೇ**
**ರ್ಭಜನ್ನಪಕ್ವೋಽಥ ಪತೇತ್ ತತೋ ಯದಿ ।**
**ಯತ್ರಕ್ವವಾ ಭದ್ರಮಭೂದಮುಷ್ಯ**
**ಕೋ ವಾರ್ಥ ಆಪ್ತೋ ಭಜತಾಂ ಸ್ವಧರ್ಮಂ ॥** (ಭಾ.೧.೫.೧೭)

ಏವಂ ಪ್ರವೃತ್ತಂ ಕರ್ಮ ತ್ಯಾಜ್ಯಮಿತಿ ನಿರೂಪಿತಂ । ಅಂತಿಮಶ್ಲೋಕೇ ಚ ನಿವೃತ್ತಮಪಿ ಕಾರ್ಯಮಿತ್ಯುಕ್ತಂ । ಅತ ಏವ ಉಭಯಾರ್ಥಪ್ರತಿಪಾದಕತ್ವಾದು ಭಯಮಧ್ಯೇ ನಿವೇಶಃ । ತತ್ರ ಪ್ರವೃತ್ತಂ ಪರಿತ್ಯಜ್ಯ ನಿವೃತ್ತಕರ್ಮಕೃತೌ ಕದಾಚಿತ್ಪರಂ ಪಾರಮಗತೇ ಸತಿ ತತ್ಫಲಪ್ರಾಪ್ತಿರ್ನ ಭವೇದೇವ । ಏತತ್ಫಲಂ ತು ತತ್ಸಾಧನಪರಿತ್ಯಾಗಾದೇವ ನಾಸ್ತಿ । ತತ ಉಭಯತೋ ಭ್ರಷ್ಟಃ ಕಷ್ಟಾಂ ದಶಾಮಾಪದ್ಯೇತ । ತತೋ ವರಮವರಾಸ್ಥಿರಫಲಮಪಿ ಪ್ರವೃತ್ತಂ ಕರ್ಮೇತ್ಯತಃ ಸತ್ಯಂ । ಪರಂಪಾರಮಗತೇ ಫಲಂ ನ ಭವೇದೇವೇತಿ । ತಥಾಪಿ ಕಾಲ ವ್ಯವಧಾನೇನ ಜನ್ಮಾಂತರೇಽಪಿ ಮಹತ್ಫಲಂ ಭವೇದೇವೇತಿ ತದೇವಾನು-ಷ್ಠೇಯಂ । ನ ತು ಪ್ರವೃತ್ತಂ । ನಿಷ್ಫಲತ್ವಾತ್ । ಯಚ್ಚ ಫಲಮಿತ್ಯಭಿಮತಂ ನ ತತ್ಫಲಂ ಕಿಂತು ಕೇವಲಂ ಫಲವದವಭಾಸತೇ ಬಾಲಾನಾಂ । ಪ್ರದೀಪ ಇವ ಶಲಭಾನಾಮಿತ್ಯಭಿಸಂಧಿನಾ ಬ್ರವೀತಿ ॥ ತ್ಯಕ್ತ್ವೇತಿ ॥ ಸ್ವಧರ್ಮಂ ಪ್ರವೃತ್ತಲಕ್ಷಣಂ ತ್ಯಕ್ತ್ವಾ । ಹರೇಶ್ಚರಣಾಂಬುಜಂ ಭಜನ್ । ಅಪಕ್ವಬುದ್ಧಿತ್ವಾತ್ತತೋ ಭಜನಾತ್ ಯದಿ ಪತೇತ್ । ಅಥ ತದಾಪಿ । ಯತ್ರ ಕ್ವಾ ಜನ್ಮನಿ । ಕೃಪಸ್ತ್ಯಭಾವಾದೇವಮುಕ್ತಿಃ । ಏಕದ್ವ್ಯಾದಿಜನ್ಮವ್ಯವಧಾನೇನ । ಅಮುಷ್ಯ ಭದ್ರಮಭೂದೇವ । ಸ್ವಧರ್ಮ ಪ್ರವೃತ್ತಂ ಭಜತಾಂ ತು ಕೋ ವಾಽರ್ಥ ಆಪ್ತಃ । ನ ಕೋಽಪಿ । ಯೋ ಲಭ್ಯತೇ ನ ಸ ಪುರುಷಾರ್ಥ ಇತಿ ಭಾವಃ ॥



ನಾರದರು ಶ್ರೀವ್ಯಾಸರಲ್ಲಿ ಹೇಳುತ್ತಾರೆ—'ತ್ಯಕ್ತ್ವಾ ಸ್ವಧರ್ಮಂ' ತನಗೆ ವಿಹಿತವಾದ ನಿತ್ಯ ನೈಮಿತ್ತಿಕ ಕರ್ಮಗಳಲ್ಲಿ ಸ್ವಲ್ಪ ಸಂಕೋಚ ಮಾಡಿಯಾದರೂ ಶ್ರವಣಾದಿ ಜ್ಞಾನಸಾಧನೆಯನ್ನು ವಿಶೇಷವಾಗಿ ಮಾಡಬೇಕು. ಈ ನಿವೃತ್ತ ಕರ್ಮವನ್ನು ಒಮ್ಮೆ ಪ್ರಾರಂಭ ಮಾತ್ರ ಮಾಡಿದರೂ ಸಾಕು, ಬಳಿಕ ವಿಘ್ನದಿಂದ ಅದು ಮರಣ ಬಂದು ನಿಂತರೂ ಮುಂದಿನ ಜನ್ಮದಲ್ಲಿ ಅದು ಮುಂದು ವರಿಯುವುದು. ಮುಂದೆ ಎಂದಾದರೂ ಅದು ಶ್ರೇಯಃಸಾಧನವಾಗಿಯೇ ತೀರುವುದು. ಆದರೆ ಶ್ರವಣಾದಿಗಳನ್ನು ಸಂಕೋಚಮಾಡಿ ವಿಶೇಷವಾಗಿ ಎಷ್ಟು ವಿಹಿತಕರ್ಮಾಚರಣೆ ಮಾಡಿದರೂ ಅದಕ್ಕೆ ನಡುವೆ ವಿಘ್ನ ಬಂದು ನಿಂತರೆ ಏನೂ ಫಲ ಸಿಗಲಾರದು. ಸಿಕ್ಕಿದರೂ ಅದು ಪುರುಷಾರ್ಥವಲ್ಲ.

ಆದರೆ, ಹಿಂದೆ ಸತೀದೇವಿ ದಕ್ಷಪ್ರಜಾಪತಿಗೆ ಪ್ರವೃತ್ತಿಕರ್ಮವು ತ್ಯಾಜ್ಯವೆನ್ನುವುದರೊಂದಿಗೆ ನಿವೃತ್ತಕರ್ಮ ಅವಶ್ಯಕಾರ್ಯವೆಂದೂ ಹೇಳಿದ್ದಾಳೆ. ಆದರೆ ಇಲ್ಲಿ ಸಮಸ್ಯೆ ಬರುತ್ತದೆ.

ಪ್ರವೃತ್ತಕರ್ಮಬಿಟ್ಟು ನಿವೃತ್ತಕರ್ಮ ಮಾಡಿದಾಗ ಒಂದುವೇಳೆ ನಿವೃತ್ತ ಕರ್ಮ ಸಾಂಗವಾಗಿ ಪೂರೈಸದೆ ಅದರ ಫಲ ವಾದ ಮೋಕ್ಷ ಸಿಗದೇ ಹೋದರೆ, ಅತ್ತ ಮೋಕ್ಷವೆಂಬ ನಿವೃತ್ತಕರ್ಮ ಫಲವೂ ಇಲ್ಲ ಇತ್ತ ಪ್ರವೃತ್ತಕರ್ಮವನ್ನು ಬಿಟ್ಟಿದ್ದರಿಂದ ಪ್ರವೃತ್ತಕರ್ಮಫಲವಾದ ಸ್ವರ್ಗ ಸುಖವೂ ಇಲ್ಲ. ಉಭಯ ಭ್ರಷ್ಟನಾಗುವ ಪ್ರಸಂಗ! ಅದರಿಂದ ಅಲ್ಪಅಸ್ಥಿರಫಲ ಜನಕವಾದರೂ ಚಿಂತೆಯಿಲ್ಲ. ಪ್ರವೃತ್ತಕರ್ಮವನ್ನೇ ಮಾಡುವುದು ಲೇಸಲ್ಲವೆ?

ನಿಜ, ಆದರೆ ನಿವೃತ್ತಕರ್ಮದ ಫಲ ಸಿಗದೇ ಹೋದರೆ ತಾನೆ ಈ ಸಮಸ್ಯೆ ? ಅದು ಸಿಗುತ್ತದೆ. ಸಿಕ್ಕೇ ಸಿಗುತ್ತದೆ. ಇಂದಲ್ಲ ನಾಳೆ, ಮರಣಾನಂತರ ಜನ್ಮಾಂತರದಲ್ಲಾದರೂ ಮೋಕ್ಷಯೋಗ್ಯನಿಗೆ ಮೋಕ್ಷವಿದ್ದೇ ಇದೆ. ಇದರಲ್ಲಿ ಸಂಶಯವಿಲ್ಲ. ಏಕೆಂದರೆ ಸ್ವಲ್ಪವಾದರೂ ನಿವೃತ್ತಕರ್ಮ ಹರಿಪ್ರೀತ್ಯರ್ಥವಾಗಿ ಮಾಡಿದ್ದರಿಂದ ಹರಿಯ ಅನುಗ್ರಹವಾಗಿರುತ್ತದೆ. ಹರಿಯ ಅನುಗ್ರಹವೆಂದೂ ಸುಳ್ಳಾಗುವುದಿಲ್ಲ.

ಆದರೆ ಪ್ರವೃತ್ತಕರ್ಮವನ್ನು ಶ್ರದ್ಧೆಯಿಂದ ಮಾಡಿದರೂ ಏನಾದರೂ ಲೋಪದೋಷಗಳುಂಟಾದಲ್ಲಿ ಅದರ ಫಲವಾಗಿ ಅನರ್ಥವೇ ಸಂಭವಿಸುತ್ತದೆ. ದೀಪದ ಹುಳುವಿಗೆ ದೀಪದಂತೆ, ಫಲವಾಗಿ ಕಂಡರೂ ಅದು ಫಲವಲ್ಲ. ಪೌಂಡರೀಕ ಯಾಗ ಮಾಡಿ ದುರ್ಯೋಧನನು ಪಡೆದ ಪಾಂಡವರ ರಾಜ್ಯದಂತೆ! ಅದರಿಂದ ಫಲದಾಸೆಯಿಂದ ಮಾಡುವ ಸ್ವಧರ್ಮವನ್ನು ಬಿಟ್ಟೇ ಬಿಡಬೇಕು.

'ಸ್ವಧರ್ಮೇ ನಿಧನಂ ಶ್ರೇಯಃ' ಎಂದು ಗೀತೆಯು ಸ್ವಧರ್ಮವನ್ನು ಬಿಡಬಾರದೆಂದು ಹೇಳಿದ್ದು, ಫಲದಾಸೆಯಿಲ್ಲದೇ ಮಾಡುವ ಸ್ವಧರ್ಮದ ಬಗ್ಗೆ.



–೧೭೯–

**ಋಷಭದೇವನು ಹೇಳುವ ಹರಿಗುರುಭಕ್ತಿ**
**ಮುಂತಾದುದು ಮೋಕ್ಷಸಾಧನಕರ್ಮ**

**ಹರೌ ಗುರೌ ಮಯಿ ಭಕ್ತ್ಯಾಽನುವೃತ್ತ್ಯಾ**
**ವಿತೃಷ್ಣಯಾ ದ್ವಂದ್ವತಿತಿಕ್ಷಯಾ ಚ ।**

**ಸರ್ವತ್ರ ಜಂತೋರ್ವ್ಯಸನಾವಗತ್ಯಾ**
**ಜಿಜ್ಞಾಸಯಾ ತಪಸೇಹಾನಿವೃತ್ಯಾ ॥** (ಭಾ.೫.೫.೧೦)

ಸ್ವಧರ್ಮಂ ತ್ಯಕ್ತ್ವಾ ಹರೇಶ್ಚರಣಾಂಬುಜಂ ಭಜನ್ನಿತ್ಯನೇನ ಭಾಗವತಧರ್ಮಾನುಷ್ಠಾನಮೇವ ನಿವೃತ್ತಕರ್ಮಾನುಷ್ಠಾನಮಿತಿ ಲಬ್ಧಂ। ತಾಂಶ್ಚ ದರ್ಶಯನ್ ತದನುಷ್ಠಾನ ಜಿಜ್ಞಾಸೂನಾಂ ತದುಪದೇಶಶ್ಚ ಜ್ಞಾನಿನಾಮತ್ಯಂತಮಾವಶ್ಯಕ ಇತ್ಯಾಹ ॥ ಹರಾವಿತಿ ॥ ಪುತ್ರಾನ್ಪ್ರತಿ ಸಾಕ್ಷಾದ್ಭಗವತ ಋಷಭಸ್ಯ ವಚನಂ। ಹರೌ ಮಯಿ। ಗುರೌ ಚ ಭಕ್ತ್ಯಾ। ಅನುವೃತ್ತ್ಯಾ ಸೇವಯಾ। ಜಿಜ್ಞಾಸಯಾ ಬ್ರಹ್ಮವಿಚಾರೇಣ। ಈಹಾನಿವೃತ್ತ್ಯಾ ಮೋಕ್ಷತತ್ಸಾಧನಾತಿರಿಕ್ತೇಷು ॥



ಋಷಭದೇವನು ಪುತ್ರರಿಗೆ ಉಪದೇಶಿಸುತ್ತಾನೆ—ಹರಿಯೂ ಗುರುವೂ ಆಗಿರುವ ನನ್ನಲ್ಲಿ ಭಕ್ತಿಯಿಂದ ಸೇವೆ ಮಾಡಬೇಕು. ವಿಷಯಸುಖದಾಸೆ ಬಿಡಬೇಕು. ಸುಖದುಃಖಾದಿ ದ್ವಂದ್ವಗಳಿಂದ ಮನಸಿನಲ್ಲಿ ವಿಕಾರವಾಗುವುದನ್ನು ತಡೆಯಬೇಕು. ಎಲ್ಲ ಜಂತುಗಳ ದುಃಖವನ್ನು ಅರಿತುಕೊಳ್ಳಬೇಕು. ಬ್ರಹ್ಮವಿಚಾರ ಮಾಡುತ್ತಿರಬೇಕು. ತಪಸ್ಸು ಮಾಡಬೇಕು. ಮೋಕ್ಷ ಮೋಕ್ಷಸಾಧನ ವ್ಯತಿರಿಕ್ತವಿಷಯದಲ್ಲಿ ಪ್ರವೃತ್ತಿಯನ್ನು ಬಿಟ್ಟುಬಿಡಬೇಕು.



—೧೮೦—

**ಋಷಭದೇವನು ಹೇಳುವ ಭಾಗವತ ಧರ್ಮಗಳು—೧**

**ಮತ್ಕರ್ಮಭಿರ್ಮತ್ಕಥಯಾ ಚ ನಿತ್ಯಂ**
**ಮತ್ಪಾದಸಂಗಾದ್ ಗುಣಕೀರ್ತನಾನ್ಮೇ ।**
**ನಿರ್ವೈರಸಾಮ್ಯೋಪಶಮೇನ ಪುತ್ರಾ**
**ಜಿಹಾಸಯಾ ದೇಹಗೇಹಾತ್ಮಬುದ್ಧೇಃ ॥**

(ಭಾ.೫.೫.೧೧)

ಮತ್ಕರ್ಮಭಿಃ ಮದ್ಗೃಹಸಂಮಾರ್ಜನಾದಿಭಿಃ। ಮತ್ಪಾದಸಂಗಾತ್ ಪ್ರಕ್ಷಾಲನಾದಿರೂಪಾತ್। ಭೂತೇಷು ನಿರ್ವೈರೇಣ। ಅಹಿಂಸಯಾ

ಸರ್ವಭೂತೇಷು ಸಮತ್ವೇನ । ಉಪಶಮೇನ ಶಮೇನ । ದೇಹೇ ಆತ್ಮೇತ್ಯಹಮಿತಿ ಬುದ್ಧಿಃ, ಗೇಹೇ ಆತ್ಮನೋ ಮಮೇತಿ ಬುದ್ಧಿಃ ತಸ್ಯಾಃ ಪರಿತ್ಯಾಗೇನ ॥



ಋಷಭದೇವನು ಉಪದೇಶಿಸುತ್ತಾನೆ, ಮಕ್ಕಳೆ, ನಮ್ಮ ಮನೆಯನ್ನು ಶುದ್ಧಗೊಳಿಸುವುದು ಮುಂತಾದ ಕರ್ಮಗಳನ್ನು ಮಾಡಬೇಕು. ಸದಾ ನನ್ನ ಗುಣಗಾನವನ್ನು ಕೇಳಬೇಕು. ನನ್ನ ಪಾದೋದಕವನ್ನು ಧರಿಸಬೇಕು. ನನ್ನ ಗುಣಗಾನ ಮಾಡಬೇಕು. ಎಲ್ಲ ಜಂತುಗಳಿಗೂ ಹಿಂಸೆ ಮಾಡದೆ ಅವುಗಳನ್ನು ತನ್ನಂತೆ ಬಗೆದು ಕ್ಷಮಾಗುಣವನ್ನು ತೋರಬೇಕು. ಶರೀರ ಮತ್ತು ಮನೆಗಳಲ್ಲಿ ತಾನು ತನ್ನದೆಂಬ ಅಭಿಮಾನವನ್ನು ಬಿಡಬೇಕು.



—೧೮೧—

**ಋಷಭದೇವನು ಹೇಳುವ ಭಾಗವತಧರ್ಮಗಳು—೨**

ಅಧ್ಯಾತ್ಮಯೋಗೇನ ವಿವಿಕ್ತಸೇವಯಾ
ಪ್ರಾಣೇಂದ್ರಿಯಾತ್ಮಾಭಿಜಯೇನ ಸಮ್ಯಕ್ ।
ಸಚ್ಛ್ರದ್ಧಯಾ ಬ್ರಹ್ಮಚರ್ಯೇಣ ಶಶ್ವದ್
ಅಸಂಪ್ರಮಾದೇನ ಜಯೇನ ವಾಚಾಂ ॥

(ಭಾ.೫.೫.೧೨)

ಅಧ್ಯಾತ್ಮನಿಷ್ಠಯಾ । ವಾಯ್ವಿಂದ್ರಿಯಮನಸಾಂ ಜಯೇನ । ವಾಙ್ ನಿಯಮೇನ ಚ ॥



ಋಷಭದೇವರ ಉಪದೇಶ—ಎಲ್ಲ ಕರ್ಮವೂ ಅಂತರ್ಯಾಮಿಯ ಪೂಜೆ ಎಂದು ತಿಳಿಯಬೇಕು. ವಿವೇಕಿಗಳಾದ ಸಜ್ಜನರ ಒಡನಾಟ ಮಾಡಬೇಕು. ಪ್ರಾಣ ಇಂದ್ರಿಯ ಮನಸುಗಳನ್ನು ದುರ್ವಿಷಯಗಳಲ್ಲಿ ಹರಿಯದಂತೆ ನಿಗ್ರಹಿಸ ಬೇಕು. ಒಳ್ಳೆಯ ವಿಷಯಗಳಲ್ಲಿ ಶ್ರದ್ಧೆ ಇರಿಸಬೇಕು. ವೇದಾಧ್ಯಯನ ವಿಷ್ಣುಚಿಂತನ ಮಾಡುತ್ತ ಏಕಪತ್ನೀವ್ರತ ರೂಪವಾದ ಬ್ರಹ್ಮಚರ್ಯದಲ್ಲಿರಬೇಕು.

ಸಾಧನಾನುಷ್ಠಾನದಲ್ಲಿ ಎಂದೂ ವಿಸ್ಮರಣೆ ಕೂಡದು. ಮಾತಿನಲ್ಲಿ ಸಂಯಮ ವಿರಬೇಕು.



## –೧೮೨–

### ಋಷಭದೇವನು ಹೇಳುವ ಭಾಗವತಧರ್ಮಗಳು—೩

ಸರ್ವತ್ರ ಮದ್ಭಾವವಿಚಕ್ಷಣೇನ
ಜ್ಞಾನೇನ ವಿಜ್ಞಾನವಿರಾಜಿತೇನ ।
ಯೋಗೇನ ಧೃತ್ಯುದ್ಭವಸತ್ವಯುಕ್ತೋ
ಲಿಂಗಂ ವ್ಯಪೋಹೇತ್ ಕುಶಲೋಽಹಮಾಖ್ಯಂ ॥

(ಭಾ.೫.೫.೧೩)

ಸರ್ವತ್ರ ಸರ್ವಭೂತೇಷು । ಮದ್ಭಾವವಿಚಕ್ಷಣೇನ ಮದ್ಭಾವಂ ಮದ್ರೂಪಂ ವಿಚಕ್ಷಣೇನ ವಿಷಯೀಕುರ್ವತಾ ಜ್ಞಾನೇನ । ತಥಾ ವಿಜ್ಞಾನೇನ ಸಾಕ್ಷಾನ್ಮುಕ್ತಿಸಾಧನೇನ ಬಿಂಬವಿಷಯೇಣ ವಿರಾಜಿತೇನ । ಯೋಗೇನ ಧ್ಯಾನಲಕ್ಷಣಯೋಗೇನ । ಧೃತ್ಯಾ ಜಿಹ್ವೋಪಸ್ಥಜಯಲಕ್ಷಣಯಾ ಉದ್ಭೂತೇನ ಬಲೇನ ಯುಕ್ತಃ ಕುಶಲಃ ಪುರುಷಃ ಅಹಮಾಖ್ಯಂ ಅಹಮಿತ್ಯಭಿಧಾನಂ । ಲಿಂಗಂ ಶರೀರಂ । ವ್ಯಪೋಹೇತ್ ಪರಿತ್ಯಜೇದಿತಿ ॥



ಋಷಭದೇವರ ಉಪದೇಶ—ಎಲ್ಲೆಡೆ, ವ್ಯಾಪ್ತನಾಗಿ ನಾನಿರುವೆನೆಂದು ತಿಳಿಯಬೇಕು. ಸಾಕ್ಷಾತ್ ಮೋಕ್ಷಸಾಧನವಾಗಿರುವ ನನ್ನ ಬಿಂಬರೂಪದ ಧ್ಯಾನ ಮಾಡಬೇಕು. ಇಂದ್ರಿಯ ಜಯರೂಪವಾದ ಧೈರ್ಯದಿಂದ ಮನೋಬಲ ಸಂಪಾದಿಸಿಕೊಂಡಿರುವ ಸುಜೀವನು ಹೀಗೆ ಬುದ್ಧಿವಂತನೆನಿಸಿ 'ಅಹಂ' ಎನಿಸಿಕೊಳ್ಳುವ ಲಿಂಗಶರೀರದಲ್ಲಿ ಅಭಿಮಾನವನ್ನು ತೊರೆಯಬೇಕು.

'ತ್ಯಕ್ತ್ವಾ ಸ್ವಧರ್ಮಂ' ಸ್ವಧರ್ಮವನ್ನು ತೊರೆದು ಹರಿಯ ಚರಣಾಂಬುಜ ವನ್ನು ಭಜಿಸಬೇಕೆಂದು ನಾರದರ ಮಾತಿನಿಂದ ಭಾಗವತಧರ್ಮಾನುಷ್ಠಾನವೇ ನಿವೃತ್ತಕರ್ಮಾನುಷ್ಠಾನವೆಂದು ಹೇಳಿದಂತಾಯಿತು. ಆ ಭಾಗವತಧರ್ಮಗಳು

'ಹರೌಗುರೌ ಮಯಿ ಭಕ್ತ್ಯಾನುವೃತ್ತ್ಯಾ' ಎಂದು ಮುಂತಾಗಿ ಋಷಭದೇವರು ಉಪದೇಶಿಸಿದ ಧರ್ಮಗಳೆ. ಅವುಗಳನ್ನು ಸಾಧಕರು ತಪ್ಪದೇ ಆಚರಿಸಬೇಕು. ಜ್ಞಾನಿಗಳು ತಾವು ಆಚರಿಸುತ್ತ ಸಾಧಕರಿಗೆ ಉಪದೇಶಿಸುತ್ತಿರಬೇಕು ಎಂದು ಭಾಗವತವು 'ಪುತ್ರಾಂಶ್ಚ ಶಿಷ್ಯಾಂಶ್ಚ' ಎಂದು ಮುಂದಿನ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳುತ್ತಿದೆ—



–೧೮೩–

**ಭಾಗವತಧರ್ಮಗಳನ್ನು ಆಚರಿಸಬೇಕು, ಸಾಧಕರಿಗೆ ಉಪದೇಶಿಸಬೇಕು**

**ಪುತ್ರಾಂಶ್ಚ ಶಿಷ್ಯಾಂಶ್ಚ ಪಿತಾ ಗುರುರ್ವಾ**
**ಮಲ್ಲೋಕಕಾಮೋ ಮದನುಗ್ರಹಾರ್ಥಃ ।**
**ಇತ್ಥಂ ವಿಮನ್ಯುರನುಶಿಷ್ಯಾದತಜ್ಞಾನ್**
**ನ ಯೋಜಯೇತ್ ಕರ್ಮಸು ಕರ್ಮಮೂಢಾನ್ ॥**

(ಭಾ.೫.೫.೧೪)

**ಇತ್ಥಂ ಹರೌ ಗುರಾವಿತ್ಯಾದಿನೋಕ್ತಭಾಗವತಧರ್ಮಾನುಷ್ಠಾನ ರೂಪನಿವೃತ್ತಮಾರ್ಗೇಣ । ಮಲ್ಲೋಕಕಾಮಃ ಲಿಂಗಶರೀರಪರಿತ್ಯಾಗರೂಪೋ ಮೋಕ್ಷೋ ಭವತೀತ್ಯುಕ್ತಪ್ರಕಾರೇಣ ಮಮ ಲೋಕಂ ಜ್ಞಾನಂ ಸ್ಥಾನಂ ವಾ ಕಾಮಯತ ಇತಿ ತಥಾ । ತಥಾ ಮಮಾನುಗ್ರಹಃ ಅರ್ಥಃ ಪ್ರಯೋಜನಂ ಯಸ್ಯ ಸಃ । ಅತಜ್ಞಾನ್ ಮೋಕ್ಷೋಪಾಯಜ್ಞಾನರಹಿತಾನ್ । ಅತ ಏವ ಕರ್ಮಸು ಪ್ರವೃತ್ತೇಷು ಮೂಢಾನ್ । ಏತಾನಿ ಪುರುಷಾರ್ಥಸಾಧನಾನೀತಿ ಭ್ರಾಂತಿಮತಃ । ಕರ್ಮಸು ನ ಯೋಜಯೇದಿತಿ ॥**



ಋಷಭದೇವರ ಉಪದೇಶ— ಹೀಗೆ, ಅಂದರೆ 'ಹರೌಗುರೌ ಮಯಿ ಭಕ್ತ್ಯಾ' ಎಂದು ಮುಂತಾಗಿ ಹೇಳಿದಂತೆ ಭಾಗವತಧರ್ಮಾನುಷ್ಠಾನವೆಂಬ ನಿವೃತ್ತಮಾರ್ಗದಲ್ಲಿದ್ದು ನನ್ನ ವೈಕುಂಠಲೋಕವನ್ನು ಸೇರಲು ಅದಕ್ಕಾಗಿ ನನ್ನ ಜ್ಞಾನವನ್ನು ಸಂಪಾದಿಸಲು ಬಯಸುವವನು, ನನ್ನ ಅನುಗ್ರಹವೇ

ಭಾಗವತಧರ್ಮಾನುಷ್ಠಾನದ ಪ್ರಯೋಜನವೆಂದು ತಿಳಿದು ಜ್ಞಾನಿಯಾದವನು ದುರಾಗ್ರಹರಹಿತನಾಗಬೇಕು. ತಂದೆಯಾದವನು ಮಕ್ಕಳನ್ನು ಗುರುವಾದವನು ಶಿಷ್ಯರನ್ನು ಪ್ರವೃತ್ತಕರ್ಮದಲ್ಲಿ ಪ್ರೇರಿಸಬಾರದು.

ಮಕ್ಕಳು, ಶಿಷ್ಯರು ಲಿಂಗಭಂಗರೂಪ ಮೋಕ್ಷಕ್ಕೆ ನಿವೃತ್ತಕರ್ಮವೇ ಸಾಧನವೆಂದು ತಿಳಿಯದೆ ಮೊದಲೇ ಭ್ರಾಂತಿಯಿಂದ ಪ್ರವೃತ್ತಕರ್ಮದಲ್ಲಿ ತೊಡಗಿದ್ದರೆ ಅವರನ್ನು ದಯೆಯಿಂದ ನಿವೃತ್ತಕರ್ಮದಲ್ಲಿ ತೊಡಗಿಸಬೇಕು. ಪ್ರವೃತ್ತಕರ್ಮವೆ ಪುರುಷಾರ್ಥ ಸಾಧನವೆನ್ನುವ ಅವರ ಭ್ರಾಂತಿಯನ್ನು ಕಳೆಯಬೇಕು ಹೊರತು ತಿರುಗಿ ಪ್ರವೃತ್ತಕರ್ಮದಲ್ಲಿಯೆ ತೊಡಗುವಂತೆ ಮಾಡಬಾರದು.



## –೧೮೪–

### ಪುಣ್ಯಲೋಕದಲ್ಲಿಯೂ ಮೋಕ್ಷಸುಖ ಸಿಗದು ವಿಷಯಸುಖ ಎಲ್ಲೆಡೆ ಲಭ್ಯ

**ತಸ್ಯೈವ ಹೇತೋಃ ಪ್ರಯತೇತ ಕೋವಿದೋ**
**ನ ಲಭ್ಯತೇ ಯತ್ ಭ್ರಮತಾಮುಪರ್ಯಧಃ ।**
**ತಲ್ಲಭ್ಯತೇ ದುಃಖವದನ್ಯತಃ ಸುಖಂ**
**ಕಾಲೇನ ಸರ್ವತ್ರ ಗಭೀರರಂಹಸಾ ॥**

(ಭಾ.೫.೫.೧೮)

ತದೇವಂ ಭಾಗವತಧರ್ಮಾಪರಪರ್ಯಾಯನಿವೃತ್ತಧರ್ಮಾನುಷ್ಠಾನಮೇವ ಮುಮುಕ್ಷುಭಿರಪೇಕ್ಷಣೀಯ ಮಿತ್ಯಾಶಯೇನೋಕ್ತಮರ್ಥಮುಪ-ಸಂಹರತಿ । **ತಸ್ಯೈವೇತಿ** । ಯಸ್ಮಾದನ್ಯತೋ ವಿಷಯತೋ ಭವತ್ಸುಖಂ ಗಂಭೀರವೇಗೇನ ಕಾಲೇನ । ಸರ್ವತ್ರಾಪಿ ದುಃಖವತ್ ಅಪ್ರಯತ್ನೇನೈವ ಪ್ರವೃತ್ತ ಧರ್ಮಾನುಷ್ಠಾನಂ ವಿನಾಪಿ ಲಭ್ಯತೇ । ತಸ್ಮಾತ್ಕೋವಿದಃ ಪುರುಷಃ ಉಪರ್ಯಧೋ ಭ್ರಮತಾಂ ಯನ್ನ ಲಭ್ಯತೇ ತಸ್ಯೈವ ಹೇತೋಃ ನಿಮಿತ್ತಂ ಪ್ರಯತೇತ । ನಿವೃತ್ತಧರ್ಮಾನುಷ್ಠಾನಲಕ್ಷಣಂ ಸಾಧನಂ ಸಂಪಾದಯೇದಿತಿ ॥



ನಾರದರು ಶ್ರೀವ್ಯಾಸರಿಗೆ ಹೇಳುತ್ತಾರೆ—ಪ್ರವೃತ್ತಕರ್ಮವನ್ನೇ ಮಾಡುತ್ತ ಮೇಲಿನ ಕೆಳಗಿನ ಲೋಕಗಳಲ್ಲಿಯೇ ಸುತ್ತುವವರಿಗೆ ವೈಕುಂಠ ಲೋಕದ ಸುಖ ಸರ್ವಥಾ ಅಲಭ್ಯ. ಭಗವಂತನ ಆರಾಧನೆಯಾಗಿ ನಿವೃತ್ತಕರ್ಮ ಮಾಡುವುದರಿಂದ ಮಾತ್ರ ಸುಲಭಸಾಧ್ಯ. ಅದರ ಪ್ರಾಪ್ತಿಗಾಗಿಯೆ ಬುದ್ಧಿವಂತನು ಯತ್ನಮಾಡಬೇಕು. ಕೇವಲ ವಿಷಯಸುಖ ಬೇಕೆಂದರೆ ಅದಕ್ಕೆ ಪ್ರಯತ್ನ ಬೇಕಿಲ್ಲ. ವೇಗವಾಗಿ ಉರುಳುವ ಕಾಲದ ಪ್ರಭಾವದಿಂದಲೇ ಪ್ರಾರಬ್ಧದಿಂದ ದುಃಖದಂತೆಯೇ ವಿಷಯಸುಖವು ಎಲ್ಲೆಡೆ ಸಿಗುತ್ತದೆ. ಅದರಿಂದ ಮೋಕ್ಷೇಚ್ಛುವಾದ ಸಾಧಕನು ಭಾಗವತಧರ್ಮವೇ ಆಗಿರುವ ನಿವೃತ್ತಕರ್ಮವನ್ನೇ ಆಚರಿಸಬೇಕು.



## (೧೪) ದೇಶಪ್ರಶಂಸಾ ಪ್ರಕರಣ

ಸಪ್ತದ್ವೀಪಗಳಿಂದ ಯುಕ್ತವಾದ ಭೂಮಿಯಲ್ಲಿ ಜಂಬೂದ್ವೀಪ ಬಿಟ್ಟು ಉಳಿದ ಆರೂ ದ್ವೀಪಗಳು ಪ್ರಾರಬ್ಧ ಕರ್ಮಫಲ ಭೋಗಕ್ಕಾಗಿ ಇರುವಂಥವು. ಜಂಬುದ್ವೀಪದಲ್ಲಿಯೂ ಭಾರತವರ್ಷವನ್ನು ಬಿಟ್ಟು ಉಳಿದ ಎಂಟು ವರ್ಷಗಳು ಕರ್ಮಕ್ಷೇತ್ರವಲ್ಲ. ಭಾರತವರ್ಷ ಒಂದೇ ಕರ್ಮಕ್ಷೇತ್ರ. ಇಲ್ಲಿ ಹುಟ್ಟಿಯೂ ನಿವೃತ್ತಕರ್ಮ ಮಾಡದವನ ಜನ್ಮ ವ್ಯರ್ಥ.

ದೇವತೆಗಳೂ ಭಾರತ ಭೂಮಿಯ ಪ್ರಶಂಸೆ ಮಾಡುತ್ತಾರೆ. ಏಕೆಂದರೆ ಅಜ್ಞಮಾನವನು ಪ್ರವೃತ್ತಕರ್ಮಮಾಡಿ ಸ್ವರ್ಗಸುಖ ಉಣಲೆಂದು ಇಲ್ಲಿಗೆ ಬಂದರೆ ಅವನು ಪುಷ್ಕಳವಾಗಿ ಇಂದ್ರಿಯಸುಖ ಉಣ್ಣುತ್ತ ನಾರಾಯಣನ ಪಾದಕಮಲಸ್ಮರಣೆಯನ್ನು ಮರೆಯುತ್ತಾನೆ. ಇದು ಮಹಾ ಅನರ್ಥಕರ. ಭಾರತದಲ್ಲಿ ಕ್ಷಣಕಾಲ ಕರ್ಮಮಾಡಿ ಹರಿಗೆ ಅರ್ಪಿಸಿದರೂ ನಾರಾಯಣನ ಪಾದಮೂಲವನ್ನೇ ಸೇರುತ್ತಾನೆ.

ಭಾರತಭೂಮಿಯಲ್ಲಿ ಹುಟ್ಟಿದವನು ಹರಿಕಥೆ ಹೇಳಬೇಕು. ಕೇಳಬೇಕು. ಅದಕ್ಕೆ ಮಹಾಫಲವಿದೆ. ಅದಿಲ್ಲದಿದ್ದರೆ ದಿವ್ಯಸುಖದ ಸ್ವರ್ಗವೂ ವಾಸಯೋಗ್ಯವೆನಿಸಲಾದು. ಅಜ್ಞರಿಗೆ ಇದು ಜ್ಞಾನ ಮೋಕ್ಷಗಳಿಗೆ ಕಾರಣ. ಜ್ಞಾನಿಗಳಿಗೆ ಮೋಕ್ಷಸುಖದ ವೃದ್ಧಿಗೆ ಕಾರಣ. ಜ್ಞಾನಿಗಳಾದ ದೇವತೆಗಳು ಹೀಗೆ ಜ್ಞಾನೋತ್ತರ ಕರ್ಮಕ್ಕಾಗಿ ಭಾರತಭೂಮಿಯಲ್ಲಿ ಜನಿಸಲು ಬಯಸುತ್ತಾರೆ.

ಸ್ವರ್ಗಸುಖದಾಸೆಯನ್ನೇ ತೊರೆದು ಭಾರತಭೂಮಿಯಲ್ಲಿ ಮನೆ ಮಡದಿ ಮುಂತಾದ ಸುಖಗಳನ್ನು ತೊರೆದು ಕಾಡಿಗೆಹೋಗಿ ತಪಸ್ಸು ಮಾಡಬೇಕೆನ್ನುವಿರಿ. ಅದರಿಂದಲೂ ಮೋಕ್ಷ ನಿಶ್ಚಯವಿಲ್ಲವೆಂದರೆ ಬಿಸಿಲಿನ ತಾಪಕ್ಕೆ ಬೊಕ್ಕ ತಲೆಯವನು ನೆತ್ತಿ ಸುಡುವುದೆಂದು ತಾಳೆಮರದ ಕೆಳಗೆ ಕುಳಿತರೆ ಅವನ ನೆತ್ತಿಯ ಮೇಲೆ ನೆರಳಂತೂ ಇಲ್ಲ. ಹಣ್ಣು ಉದುರಿ ಬಿದ್ದು ತಲೆಗೆ ಅಪ್ಪಳಿಸಿದಂತಾಗುತ್ತದೆ!

ಎನ್ನುವವರಿಗೆ ಅವಧೂತರು ಹೇಳುತ್ತಾರೆ— ಅಂಥ ಅನಿಷ್ಟ ಪ್ರಸಂಗವನ್ನು ತಂದುಕೊಳ್ಳಬೇಕಿಲ್ಲ. ವನವಾಸವನ್ನೆ ಮಾಡ ಬೇಕೆಂಬ ಆಗ್ರಹ ನಮಗೇನಿಲ್ಲ. ಗೃಹವಾಸವನ್ನೇ ಮಾಡಿರಿ. ಆದರೆ ವರ್ಷಕ್ಕೆ ಸಾಲುವಷ್ಟೇ ಆಹಾರ ಸಂಗ್ರಹ ಮಾಡಿರಿ. ಅದಕ್ಕಿಂತ ಹೆಚ್ಚು ಬೇಡ. ಅದರಿಂದಲೆ ನೆಮ್ಮದಿಯಿಂದ ಶ್ರವಣಾದಿಕರ್ಮ ಮಾಡಲು ಶಕ್ಯವಿದೆ. ಹೆಚ್ಚು ಸಂಗ್ರಹಕ್ಕೆ ತೊಡಗಿದರೆ ವಿಷಯಾಸಕ್ತಿ ಉಂಟಾಗುವ ಅಪಾಯವಿದೆ ಎಂದು.

ವನವಾಸ ಮಾಡಿದರೂ ನೀವು ಹೇಳುವಂಥ ತೊಂದರೆ ಏನೂ ಇಲ್ಲ. ಅಂಗ ಪೃಥು ಭರತ ಯಯಾತಿ ಮುಂತಾದ ರಾಜರು ಕೊನೆಗಾಲದಲ್ಲಿ ವನವಾಸ ಮಾಡಿ ಹರಿಯನ್ನು ಒಲಿಸಿಕೊಂಡಿದ್ದಾರೆ! ಎಂದು ರುಕ್ಮಿಣೀದೇವಿ ಶ್ರೀಕೃಷ್ಣನಿಗೆ ಪ್ರೇಮಕಲಹ ಪ್ರಸಂಗದಲ್ಲಿ ಹೇಳುತ್ತಾಳೆ.



—೧೮೫—

**ಕರ್ಮಭೂಮಿ ಭಾರತದೇಶ**

**ಅಹೋ ಬತ್ಯೈಷಾಂ ಕಿಮಕಾರಿ ಶೋಭನಂ**
**ಪ್ರಸನ್ನ ಏಷಾಂಸ್ವಿದುತ ಸ್ವಯಂ ಹರಿಃ ।**
**ಯೈರ್ಜನ್ಮ ಲಬ್ಧಂ ನೃಷು ಭಾರತಾಜಿರೇ**
**ಮುಕುಂದ ಸೇವೌಪಯಿಕಸ್ಪ್ಪೃಹಾತ್ಮಭಿಃ ॥**

ಸಪ್ತದ್ವೀಪವತಿ ಭೂಮಂಡಲೇ ಷಟ್ ದ್ವೀಪಾ ಇವ ನವವರ್ಷವತಿ ಜಂಬೂದ್ವೀಪೇಽಪ್ಯಷ್ಟೌ ವರ್ಷಾ ಅಪಿ ನ ಕರ್ಮಕ್ಷೇತ್ರಾಣಿ । ಭಾರತೋ ವರ್ಷ ಏಕ ಏವ ಕರ್ಮಸ್ಥಾನಂ । ದೈವಾದೀದೃಶಂ ಸ್ಥಾನಂ ಪ್ರಾಪ್ಯ ವಿನಾ ಭಗವತ್ಸೇವಾಂ ಯೇಽನ್ಯತ್ರ ವ್ಯಾಪ್ರಿಯಂತೇ ತೇಷಾಂ ಜನ್ಮ ಧಿಗಿತಿ ಭಾವೇನ ದೇವೈರಪಿ ಸ್ತುತ್ಯೋಽಯಂ ಭಾರತೋ ವರ್ಷ ಇತಿ ತನ್ಮಹಿಮಾನಂ ಪ್ರತಿಪಾದಯತಿ ॥ **ಅಹೋ ಇತಿ** ॥ ಮುಕುಂದಸೇವಾಯಾಮುಪಯೋಗಿನೀ ಇಚ್ಛಾ ಯಸ್ಯ ತಾದೃಶಂ ಮನೋ ಯೇಷಾಂ ತಾದೃಶೈಃ ಸದ್ಭಿಃ ಯೈಃ । ಭಾರತೇ ಅಜಿರೇ ಪ್ರಾಂಗಣೇ ।

**ನೃಷು ಜನ್ಮ ಲಬ್ಧಂ। ಏಷಾಮೇಭಿಃ। ಕೀದೃಶಂ ಪುಣ್ಯಮಕಾರಿ। ಅಹೋ ಬತ। ಉತ ಪ್ರಕಾರಾಂತರಂ ಚ ಭಾಸತೇ। ಕಿಂ ತತ್। ಹರಿಃ ಸ್ವಯಮೇವ ತತ್ಪುಣ್ಯಾದಿಕಮನಪೇಕ್ಷ್ಯೈವ ಏಷಾಂ ಪ್ರಸನ್ನಃ ಕಿಮಿತಿ ॥**



**ಶುಕಮುನಿ ಪರೀಕ್ಷಿತನಿಗೆ ಹೇಳುತ್ತಾರೆ— ಭಾರತಭೂಮಿಯಲ್ಲಿ ಮುಕುಂದನ ಸೇವೆಗೆ ಯೋಗ್ಯವಾದ ಮಾನವಜನ್ಮ ಬರಲಿ ಎಂದು ಬಯಸಿ ಅದನ್ನು ಪಡೆದುಕೊಂಡಿರುವ ಜನರು ಅದೇನು ಪುಣ್ಯ ಮಾಡಿರುವರೊ! ಅಥವಾ ಏನೂ ಪುಣ್ಯ ಮಾಡಿರದಿದ್ದರೂ ಸ್ವಯಂ ಹರಿಯೇ ಇವರಿಗೆ ಒಲಿದನೊ? ಎಂದು ದೇವತೆಗಳು ಭಾರತದೇಶವನ್ನು ಹೊಗಳುತ್ತಾರೆ.**

ಸಪ್ತದ್ವೀಪಗಳಿಂದ ಯುಕ್ತವಾದ ಭೂಮಿಯಲ್ಲಿ ಜಂಬೂದ್ವೀಪ ಬಿಟ್ಟು ಉಳಿದ ಆರುದ್ವೀಪಗಳು ಕರ್ಮಫಲಭೋಗಕ್ಕಾಗಿ ಇರುವ ಕ್ಷೇತ್ರಗಳು. ಹಾಗೇ ಒಂಬತ್ತು ವರ್ಷಗಳಿಂದ ಕೂಡಿದ ಜಂಬೂದ್ವೀಪದಲ್ಲಿಯೂ ಭಾರತ ವರ್ಷವನ್ನು ಬಿಟ್ಟು ಉಳಿದ ಎಂಟು ವರ್ಷಗಳು ಕರ್ಮಕ್ಷೇತ್ರಗಳಲ್ಲ. ಭಾರತವರ್ಷ ಒಂದೇ ಕರ್ಮಭೂಮಿ. ದೈವಾನುಗ್ರಹದಿಂದ ಈ ಕರ್ಮಭೂಮಿಯಲ್ಲಿ ಮಾನವನಾಗಿ ಹುಟ್ಟಿ ಮುಕುಂದನ ಸೇವೆ ಮಾಡದೆ ಸ್ವರ್ಗಾದಿ ಕ್ಷುದ್ರಫಲದಾಸೆಯಿಂದ ಪ್ರವೃತ್ತ ಕರ್ಮ ಮಾಡುವಂಥವರ ಜನ್ಮಕ್ಕೇ ಧಿಕ್ಕಾರ! ಎಂದು ದೇವತೆಗಳೇ ಭಾರತಭೂಮಿಯ ಪ್ರಶಂಸೆ ಮಾಡುತ್ತಿದ್ದಾರೆ.



**—೧೮೬—**

**ಸ್ವರ್ಗಸುಖದಿಂದ ಹರಿಯ ವಿಸ್ಮರಣೆಯಾದೀತು!**

**ಕಿಂ ದುಷ್ಕರೈರ್ನಃ ಕ್ರತುಭಿಸ್ತಪೋ ವ್ರತೈ**
**ರ್ದಾನಾದಿಭಿರ್ವಾ ದ್ಯುಜಯೇನ ಫಲ್ಗುನಾ।**
**ನ ಯತ್ರ ನಾರಾಯಣ ಪಾದಪಂಕಜ-**
**ಸ್ಮೃತಿಃ ಪ್ರಮುಷ್ಟಾತಿಶಯೇಂದ್ರಿಯೋತ್ಸವಾತ್ ॥**

(ಭಾ.೫.೧೯.೨೨)

**ಕಿಮಿತ್ಯಯಂ ವರ್ಷಃ ಪ್ರಶಸ್ಯತ ಇತ್ಯತ ಆಹುಃ ॥ ಕಿಮಿತಿ ॥ ಯತ್ರ ನಾರಾಯಣಪಾದಪಂಕಜಸ್ಮೃತಿಃ ಅತಿಶಯೇಂದ್ರಿಯಸುಖೇನ ಪ್ರಮುಷ್ಟಾ ಸತೀ ನ ಭವತಿ। ತಾದೃಶಸ್ಯ ದ್ಯುಲೋಕಸ್ಯ ಜಯೇನ ಕಿಂ ಪ್ರಯೋಜನಂ। ಯದಾ ದ್ಯುಲೋಕಸ್ಯೇದೃಶೀ ದಶಾ ತದಾ ತಜ್ಜಯಸಾಧನೈಃ ಕ್ರತ್ವಾದಿಭಿರ್ವಾ ಕಿಂ ಪ್ರಯೋಜನಂ। ನ ಕಿಮಪಿ। ಮುಖ್ಯಫಲಸ್ಯ ನ್ಯೂನತ್ವಾದಿತಿ। ಅತ ಏವಾಹ। ಫಲ್ಗುನೇತಿ ॥ ಅಲ್ಪೇನೇತ್ಯರ್ಥಃ। ನಾರಾಯಣವಿಸ್ಮೃತಿಕಥನಂ ಲೋಕದರ್ಶನ-ಭಾಷಯಾ। ವಿದ್ಯಮಾನತ್ವೇಽಪಿ ಫಲಾಸಾಧಕತಯಾ ಅವಿದ್ಯಮಾನತುಲ್ಯ-ತೈವೇತಿ ಮಂತವ್ಯಂ ॥**



**ದೇವತೆಗಳು ಹೇಳುತ್ತಾರೆ—ಮನುಷ್ಯರು ನಮ್ಮನ್ನು ಒಲಿಸಿಕೊಳ್ಳಲು ದುಷ್ಕರವಾದ ಕಾಮ್ಯಯಜ್ಞಗಳನ್ನು ಕಾಮ್ಯ ತಪಸ್ಸು ವ್ರತದಾನಾದಿಗಳನ್ನು ಮಾಡಿ ಕಷ್ಟದಿಂದ ಅಲ್ಪವಾದ ಈ ಸ್ವರ್ಗದ ಸುಖವನ್ನು ಗಳಿಸಿದರೇನು ಫಲ? ಅವರು ಇಲ್ಲಿ ಕೇವಲ ಪುಷ್ಕಳ ಇಂದ್ರಿಯಸುಖ ಉಣ್ಣುತ್ತ ನಾರಾಯಣನ ಪಾದಕಮಲ ಸ್ಮರಣೆಯನ್ನು ಕಳೆದುಕೊಳ್ಳುತ್ತಾರೆ! ಅವರಿಗೆ ಆ ಭಾಗ್ಯ ಇಲ್ಲವಾಗುತ್ತದೆ.**

ಇದು ಕರ್ಮದಿಂದ ದೇವಶರೀರ ಪಡೆದ ಮನುಷ್ಯರ ದೃಷ್ಟಿಯಿಂದ ಹೇಳಿದ್ದು. ದೇವತೆಗಳಿಗೆ ಹರಿಯ ವಿಸ್ಮರಣೆಯಾಗದು. ಮನುಷ್ಯರು ಸಂಕಟ ಬಂದಾಗಲೇ ದೇವರನ್ನು ನೆನೆಯುತ್ತಾರೆ, ಅತಿಯಾದ ವಿಷಯಸುಖ ಬಂದರೆ, ದೇವರನ್ನು ಅವರು ನೆನೆಯುವುದೇ ಇಲ್ಲ. ಇದು ಲೋಕರೀತಿ. ಲೋಕದರ್ಶನ ಭಾಷೆ. ಹೊರತು, ವಾಸ್ತವವಲ್ಲ. ದೇವತೆಗಳಿಗೆ ಸುಖ ಬಂದಷ್ಟೂ ಹರಿಸ್ಮರಣೆ ಹೆಚ್ಚಾಗುವುದು. ಅವರು ಆ ಸುಖವನ್ನು ಹರಿಗೇ ಸಮರ್ಪಣ ಮಾಡುತ್ತಾರೆ!



–೧೮೭–

**ಕಾಮ್ಯಕರ್ಮದಿಂದ ಸ್ವರ್ಗಸಿಕ್ಕೀತು ಸಂಸಾರದಿಂದ ಬಿಡುಗಡೆ ಸಿಗದು**

**ಕಲ್ಪಾಯುಷಾಂ ಸ್ಥಾನಜಯಾತ್ ಪುನರ್ಭವಾತ್**
**ಕ್ಷಣಾಯುಷಾಂ ಭಾರತ ಭೂಜಯೋ ವರಃ ।**
**ಕ್ಷಣೇನ ಮರ್ತ್ಯೇನ ಕೃತಂ ಮನಸ್ವಿನಃ**
**ಸನ್ನ್ಯಸ್ಯ ಸಂಯಾಂತ್ಯಭಯಂ ಪದಂ ಹರೇಃ ॥**

(ಭಾ.೫.೧೯.೨೩)

ನನು ದೇವತ್ವಪ್ರಾಪ್ತಿರೂಪೇಣ ದ್ಯುಜಯೇನ ಆಕಲ್ಪಮಾಯುರ್ಲಭ್ಯತೇ। ಭಾರತಭೂಜಯೇನ ತು ನೃಜನ್ಮಪ್ರಾಪ್ತಿರೂಪೇಣ ಕ್ಷಣಮಿತಿ। ಸತಿ ಮಹತಿ ವಿಶೇಷೇ ಕಿಮಿತಿ ತಿರಸ್ಕ್ರಿಯತ ಇತಿ ತತ್ರಾಹ॥ **ಕಲ್ಪಾಯುಷಾಮಿತಿ**॥ ಕಲ್ಪಾಯುಷಾಂ ಯತ್ಸ್ಥಾನಂ ಕಲ್ಪಾಯುಷ್ಯಪ್ರದಂ ಸ್ಥಾನಂ ದೇವತ್ವಂ ತತ್ಪ್ರಾಪ್ತ್ಯಪೇಕ್ಷಯಾ ಕ್ಷಣಾಯುಷಾಂ ಯಾ ಭಾರತಭೂಃ ಕ್ಷಣಾಯುಷ್ಯಪ್ರದೋ ಭಾರತವರ್ಷಃ ತತ್ಪ್ರಾಪ್ತಿರೇವ ವರೀಯಸೀ। ತತ್ರ ನೃಜನ್ಮಪ್ರಾಪ್ತಿರೇವ ವರೀಯಸೀತಿ ಮನ್ಯಾಮಹೇ। ಕುತಃ। ಯತಃ ಸರ್ವದಾ ಭಗವತಿ ಮನಃ ಸಮಾಧಾತುಮವಶೀಕೃತಮನಸೋಽಪಿ।ಯತ್ರೋತ್ಪನ್ನೇನ ಕ್ಷಣೇನ ಮರ್ತ್ಯೇನ ಕ್ಷಣಮಾತ್ರನಾಶ್ಯೇನ ಶರೀರೇಣೈವ। ಕೃತಂ ಕರ್ಮಹರೌ ಸಂನ್ಯಸ್ಯ। ಕ್ಷಣಂ ತತ್ರ ಮನಃ ಸಮಾಧಾಯೇತಿ ಯಾವತ್। ತಸ್ಯ ಅಭಯಂ ಪುನರಾವೃತ್ತಿಭಯರಹಿತಂ ಪದಮೇವ ಸಂಯಾಂತಿ ತತ ಇತಿ। ದ್ಯುಜಯೋಽಪಿ ಈದೃಶಶ್ಚೇತ್ ಕೋ ವಿಶೇಷ ಇತ್ಯತೋ ನೇತ್ಯಾಹ। **ಪುನರ್ಭವಾದಿತಿ**। ಪುನರ್ಭವೋಪೇತಾದಿತ್ಯರ್ಥಃ॥ ನಿತ್ಯಸಿದ್ಧಿಪ್ರದತ್ವಾದ್ಭಾರತವರ್ಷೋ ವರಿಷ್ಠ ಇತಿ ಭಾವಃ॥



ದೇವತೆಗಳು ಹೇಳುತ್ತಾರೆ—ಯಾಗಾದಿ ಪ್ರವೃತ್ತಕರ್ಮದಿಂದ ಮನುಷ್ಯರಿಗೆ ಕಲ್ಪಾಯುಷ್ಯ ನೀಡಬಲ್ಲ ದೇವತ್ವವು ಲಭ್ಯವಿದ್ದರೂ ಆ ಆಯುಷ್ಯತೀರಿದ ಬಳಿಕ ಪುನಃ ಸಂಸಾರದಲ್ಲಿ ಹುಟ್ಟುವುದು ಅವರಿಗೆ ತಪ್ಪಿದ್ದಲ್ಲ. ಕರ್ಮಭೂಮಿಯಲ್ಲಿ ಮಾನವಶರೀರದಿಂದ ಕ್ಷಣಕಾಲ ಮಾಡಿದ ಕರ್ಮವನ್ನು ಮನೋನಿಗ್ರಹ ಉಳ್ಳ ಮಾನವರು ಹರಿಗೆ ಅರ್ಪಿಸಿದ ಮಾತ್ರಕ್ಕೇ ನಿರ್ಭಯವಾದ ಹರಿಯ ವೈಕುಂಠಸ್ಥಾನವನ್ನು ಪಡೆಯಬಲ್ಲರು.



## –೧೮೮–

### ಹರಿಭಜನೆ ಇಲ್ಲದಿದ್ದರೆ ಸ್ವರ್ಗವೂ ವಾಸಕ್ಕೆ ಯೋಗ್ಯವಲ್ಲ

ನ ಯತ್ರ ವೈಕುಂಠಕಥಾಸುಧಾಪಗಾ
ನ ಸಾಧವೋ ಭಾಗವತಾಸ್ತದಾಶ್ರಯಾಃ।
ನ ಯತ್ರಯಜ್ಞೇಶಮಖಾ ಮಹೋತ್ಸವಾಃ
ಸುರೇಶಲೋಕೋಽಪಿ ನ ಯಾತಿ ಸೇವ್ಯತಾಂ॥ (ಭಾ.೫.೧೯.೨೪)

**ನನು ಯತ್ರ ತರವೋऽಪಿ ನಿಖಿಲಾರ್ಥಪ್ರದಾಃ ಕಲ್ಪತರ್ವಾದಯಃ । ಯತ್ರ ಚ ವನಮಪಿ ತಾಪತ್ರಯಪರಿಹರಂ ನಂದನಂ । ಸರಾಂಸಿ ಚಾಮೃತಮಯಾನಿ । ಯುವತಯೋऽಪಿ ಜರಾದಿವಿಕಾರಹೀನಾಃ ಕಮನೀಯತಮಾಃ । ಗೀತಾನ್ಯಪಿ ತಾಸಾಂ ಕೇವಲಂ ಪಾರವಶ್ಯಪ್ರದಾನಿ । ಪುರುಷಾ ಅಪಿ ನಿತ್ಯತರುಣಾಃ । ಭೋಗಾ ಅಪಿ ಸಂಕಲ್ಪಮಾತ್ರಸಾಧ್ಯಾಃ ಅತುಲಾಃ । ತದೇವಂ ಪ್ರತಿಕ್ಷಣಮಿಂದ್ರಿಯೋತ್ಸವಾಃ । ತಾದೃಶೋऽಪಿ ಸುರೇಶಾನಾಂ ಲೋಕಃ ಸ ಕಿಮಿತ್ಯವಜ್ಞಾಯತೇऽಭಿಜ್ಞೈರಿತ್ಯತ ಆಹ ॥ ನ ಯತ್ರೇತಿ ॥ ಯಜ್ಞೇಶೋ ಹರಿಃ ತಸ್ಯ ಮಖಾಃ ತದುಪದೇಶರೂಪಾಃ ಯಜ್ಞಾಃ । ತದ್ರೂಪಾಃ ಮಹೋತ್ಸವಾಃ । ತಾದೃಶೋऽಪಿ ಸುರೇಶಲೋಕಃ । ಸೇವ್ಯತಾಂ ವಾಸಯೋಗ್ಯತಾಂ ॥**



ದೇವತೆಗಳು ಹೇಳುತ್ತಾರೆ—ಸ್ವರ್ಗಲೋಕದಲ್ಲಿರುವ ಸುಖಭೋಗ ಭೂಲೋಕದಲ್ಲಿರುವವರಿಗೆ ಕನಸಿನಲ್ಲಿಯೂ ಲಭ್ಯವಾಗದು. ಸ್ವರ್ಗದಲ್ಲಿರುವ ಗಿಡಗಳೂ ಕೂಡ ಕಲ್ಪವೃಕ್ಷಗಳಾಗಿ ಬೇಡಿದ್ದನ್ನೆಲ್ಲ ಕೊಡಬಲ್ಲುವುದು. ಅರಣ್ಯವೂ ಕೂಡ ನಂದನವನವಾಗಿ ತಾಪತ್ರಯ ಪರಿಹಾರ ಮಾಡಬಲ್ಲುವು. ಸರೋವರಗಳೂ ಕೂಡ ಅಮೃತಸರೋವರಗಳಾಗುವುವು. ಯುವತಿಯರೂ ಎಲ್ಲರೂ ಮುಪ್ಪುರೋಗ ಮುಂತಾದ ವಿಕಾರವಿಲ್ಲದವರೂ ಅತ್ಯಂತ ಮನೋಹರರೂಪವುಳ್ಳ ಷೋಡಶಿಯರಾಗಿರುತ್ತಾರೆ. ಅವರು ಹಾಡಿದರೆ ಶ್ರೋತೃಗಳು ಮೈಮರೆಯುತ್ತಾರೆ. ಪುರುಷರೂ ಕೂಡ ನಿತ್ಯ ತಾರುಣ್ಯ ತುಂಬಿಕೊಂಡಿರುತ್ತಾರೆ. ಸುಖಭೋಗಗಳು ಬೇಕಾದಾಗೆಲ್ಲ ಲಭ್ಯವಾಗಿದ್ದು ಉತ್ತಮವಾಗಿರುತ್ತವೆ. ಹೀಗೆ ಕ್ಷಣಕ್ಷಣ ಕಣ್ಮನ ಸೂರೆಗೊಳ್ಳುವಂಥ ವಿಷಯಭೋಗಗಳಿಂದ ತುಂಬಿರುವ ಸ್ವರ್ಗಲೋಕ ಭೂಮಿಗಿಂತ ಕೀಳೆನ್ನುವುದು ಯಾವ ನ್ಯಾಯ? ಎಂದು ಕೇಳಿದರೆ ಹೇಳುತ್ತೇವೆ—

**'ಒಂದುವೇಳೆ ಹರಿಕಥಾಮೃತರಸದ ನದಿಗಳು ಸ್ವರ್ಗಲೋಕದಲ್ಲಿ ಹರಿಯದಿದ್ದ ಪಕ್ಷದಲ್ಲಿ, ಹರಿಯ ಗುಣಗಾನಗೈವ ಭಾಗವತ ಜನರಿಲ್ಲದ ಪಕ್ಷದಲ್ಲಿ, ಸಂಗೀತ ನೃತ್ಯಾದಿ ಉತ್ಸವಯುಕ್ತವಾಗಿ ಹರಿತತ್ತ್ವೋಪದೇಶ ರೂಪವಾದ ವೈಷ್ಣವ ಯಾಗಗಳು ನಡೆಯದಿದ್ದ ಪಕ್ಷದಲ್ಲಿ ದೇವಲೋಕವೂ ಕೂಡ ವಾಸಯೋಗ್ಯವೆನಿಸಲಾರದು. ಇನ್ನು ಭರತಭೂಮಿಯ ಬಗ್ಗೆ ಏನು ಹೇಳಬೇಕು?**

ಆದರಿಂದ ಭರತಭೂಮಿಯಲ್ಲಿ ಜನ್ಮತಳೆದ ಮಾನವರು ಹರಿಕಥೆಗಳನ್ನು ಕೇಳಬೇಕು, ಹೇಳಬೇಕು. ಹರಿಪ್ರೀತ್ಯರ್ಥವಾಗಿ ನೃತ್ಯಗಾನಾದಿ ಉತ್ಸವ 'ಗಳೊಂದಿಗೆ ಜ್ಞಾನಸತ್ರರೂಪವಾದ ಯಾಗಾದಿ ಸತ್ಕರ್ಮಗಳನ್ನು ನಡೆಸಬೇಕು. ಸ್ವರ್ಗಲೋಕದಲ್ಲಿ ನಾವು ಹಾಗೇ ಅವುಗಳನ್ನು ನಡೆಸುತ್ತೇವೆ. ಸ್ವರ್ಗಸುಖವನ್ನು ಅನುಭವಿಸುತ್ತೇವೆ' ಎಂದು.



—೧೮೯—

**ಭಾರತದಲ್ಲಿ ಕರ್ಮಮಾಡಲು ದೇವತೆಗಳೂ ಬಯಸುವರು**

**ಯದ್ಯತ್ರ ನಃ ಸ್ವರ್ಗಸುಖಾವಶೇಷಿತಂ**
**ಸ್ವಿಷ್ಟಸ್ಯ ದತ್ತಸ್ಯ ಕೃತಸ್ಯ ಶೋಭನಂ ।**
**ತೇನಾಬ್ಜನಾಭಸ್ಮೃತಿಜನ್ಮ ನಃ ಸ್ಯಾದ್**
**ವರ್ಷೇ ಹರಿರ್ಯದ್‌ಭಜತಾಂ ಶಂ ತನೋತಿ ॥**

(ಭಾ.೫.೧೯.೨೮)

**ಯದರ್ಥಮೇತಾವದುದಿತಂ ತದೇವ ಮನೋಗತಂ ದರ್ಶಯತಿ ॥ ಯದೀತಿ ॥ ಯದ್ಯಸ್ಮಾಕಂ ಸ್ವರ್ಗಸುಖಸಾಧನಾವಶಿಷ್ಟಂ । ಯಜ್ಞದಾನಾದಿ ಕರ್ಮಾರ್ಜಿತಂ ಪುಣ್ಯಂ ವಿದ್ಯೇತ । ತರ್ಹಿ ತೇನ ಪುಣ್ಯೇನ । ಅಬ್ಜನಾಭಸ್ಮೃತಿಹೇತುಃ ಜನ್ಮ । ಅತ್ರ ಭಾರತೇ ವರ್ಷೇ ಸ್ಯಾತ್ । ಕುತಃ । ಯತೋ ಹರಿರತ್ರ ವರ್ಷ ಏವ ಭಜತಾಮಪೇಕ್ಷಿತಾರ್ಥಂ ದದಾತಿ ತತ ಇತಿ । ಯಥಾಹುಃ—''ಅತ್ರಾಪಿ ಜಂಬೂದ್ವೀಪೇ ಭಾರತಮೇವ ವರ್ಷಂ ಕರ್ಮಕ್ಷೇತ್ರಂ ಅನ್ಯಾನ್ಯಷ್ಟವರ್ಷಾಣಿ ಸ್ವರ್ಗಿಣಾಂ ಪುಣ್ಯಶೇಷೋಪ ಭೋಗಸ್ಥಾನಾನಿ ಭೌಮಾನಿ ಸ್ವರ್ಗಪದಾನಿ ವ್ಯಪದಿಶಂತೀ'ತಿ । ತದೇವಂ ದೇವೈರಪಿ ಸಾಧನಾನುಷ್ಠಾನ ಯೋಗ್ಯತಯಾ ಪ್ರಾರ್ಥಿತೇ ವರ್ಷೇ ಸಾಧನಾನುಷ್ಠಾನಮೇವ ಅವಶ್ಯ-ಮನುಷ್ಠೇಯಂ ನಾನ್ಯತ್ರ ದೃಷ್ಟಿರ್ದೇಯೇತಿ ಪರಮಾರ್ಥಃ ॥**



ದೇವತೆಗಳು ಹೇಳುತ್ತಾರೆ—ನಾವು ಯಜ್ಞ ದಾನ ಅಥವಾ ಬೇರೆ ಕರ್ಮಗಳಿಂದ ಗಳಿಸಿದ ಪುಣ್ಯದಲ್ಲಿ ಸ್ವರ್ಗಸುಖ ಉಂಡ ಬಳಿಕ ಏನಾದರೂ ಶೇಷ

**ಉಳಿದಿದ್ದರೆ ಅದರಿಂದ ನಮಗೆ ಭರತಭೂಮಿಯಲ್ಲಿ ಜನ್ಮ ದೊರಕಲಿ. ಏಕೆಂದರೆ ಅದು ಪದ್ಮನಾಭನ ಸ್ಮರಣೆ ನೀಡುತ್ತದೆ. ಭರತಭೂಮಿಯಲ್ಲಿ ತನ್ನನ್ನು ಭಜಿಸುವವರಿಗೆ ಹರಿ ಮೋಕ್ಷಸುಖ ನೀಡುತ್ತಾನೆ' ಎಂದು.**

ಆದರಿಂದ ಭರತಭೂಮಿಯಲ್ಲಿ ಜನ್ಮಪಡೆದೂ ಹರಿಸ್ಮರಣೆ ಮಾಡದೆ ಹೋದರೆ ಅದು ಆ ಜನ್ಮಕ್ಕೇ ಅಪಚಾರ.

ಯದ್ಯಪಿ ದೇವತೆಗಳು ಭಾರತದಲ್ಲಿ ಜನ್ಮವನ್ನು ಪಡೆಯಲು ಇಚ್ಛಿಸುವುದು ಹರಿಸ್ಮರಣ ಲಾಭಕ್ಕಾಗಿ, ಹರಿಸ್ಮರಣೆ ಮೋಕ್ಷಸುಖಲಾಭಕ್ಕಾಗಿ ಎನ್ನುವುದು ಸರಿಯಲ್ಲ. ದೇವತೆಗಳಿಗೆ ಹರಿಯ ವಿಸ್ಮರಣೆಯೆ ಇರುವುದಿಲ್ಲ. ಅವರು ಮೋಕ್ಷಸುಖವನ್ನೂ ಬಯಸುವುದಿಲ್ಲ. ಕೇವಲ ಭಕ್ತಿಯೊಂದನ್ನೇ ಬೇಡುವವರು ಅವರು. ಆದರೂ ಮೋಕ್ಷದಲ್ಲಿ ಆನಂದವೃದ್ಧಿಗೆ ಕಾರಣವಾಗುವ ನಿಷ್ಕಾಮವಾದ ಶ್ರವಣಾದಿ ಪುಣ್ಯಕರ್ಮಮಾಡುವುದಕ್ಕೂ ಹರಿ ಅವತಾರ ಮಾಡಿದಾಗ ತಾವೂ ಅವತರಿಸಿ ಅವನ ಸೇವೆ ಮಾಡುವ ಬಯಕೆಯಿಂದಲೂ ಭಾರತದಲ್ಲಿ ಜನಿಸಲು ಬಯಸುವುದುಂಟು. ಮತ್ತು ಪುಣ್ಯಕರ್ಮದಿಂದ ದೇವಶರೀರಿಗಳಾಗಿ ಜನಿಸಿದ ಮಾನವರು ಕೂಡ ಸ್ವರ್ಗಸುಖವನ್ನು ಅನುಭವಿಸಿದ ಬಳಿಕ, ಮೋಕ್ಷಕ್ಕಾಗಿ ಪುಣ್ಯಕರ್ಮಮಾಡುವುದಕ್ಕಾಗಿ ತಿರುಗಿ ಭೂಮಿಯಲ್ಲಿ ಜನಿಸಲು ಬಯಸುತ್ತಾರೆ. ಇದು ಕೂರ್ಮಪುರಾಣದಲ್ಲಿ ಉಕ್ತವಾಗಿದೆ.

ಭಾರತದೇಶವೇ ಕರ್ಮಭೂಮಿ. ಹರಿವರ್ಷ ಕಿಂಪುರುಷ ಮುಂತಾದ ಇತರ ಎಂಟು ವರ್ಷಗಳೂ ಸ್ವರ್ಗದಲ್ಲಿ ಸುಖಉಂಡು ಪುಣ್ಯಶೇಷದಿಂದ ಭೂಮಿಗೆ ಬರುವ ಮಾನವರು ಆ ಪುಣ್ಯಶೇಷವನ್ನು ಅನುಭವಿಸುವ ಭೋಗ ಭೂಮಿಗಳು, 'ಭೂಸ್ವರ್ಗ'ವೆಂದೇ ಅವು ಪ್ರಸಿದ್ಧವಾಗಿವೆ ಎಂದು ಭಾಗವತ ಹೇಳುತ್ತಿದೆ.

ಆದರಿಂದ ಕರ್ಮಭೂಮಿಯಾದ ಭಾರತದಲ್ಲಿ ಕರ್ಮಮಾಡಲು ದೇವತೆಗಳೂ ಬಯಸುವರೆಂದಮೇಲೆ ಭಾರತದಲ್ಲಿ ಹುಟ್ಟಿದ ಮಾನವರು ನಿವೃತ್ತ ಕರ್ಮ ಮಾಡದಿರುವುದು ಬಹಳ ಅನುಚಿತವಾಗುವುದು.



—೧೯೦—

## ವಿಷಯಭೋಗವು ಕೇವಲ ಚರ್ವಿತ ಚರ್ವಣ

ಮತಿರ್ನ ಕೃಷ್ಣೇ ಪರತಃ ಸ್ವತೋಽಪಿ ವಾ
ಮಿಥೋಽಭಿಪದ್ಯೇತ ಗೃಹವ್ರತಾನಾಂ ।
ಅದಾಂತ ಗೋಭಿರ್ವಿಶತಾಂ ತಮಿಸ್ರಂ
ಪುನಃ ಪುನಶ್ಚರ್ವಿತಚರ್ವಣಾನಾಂ ॥ (ಭಾ.೭.೫.೩೦)

ಭಾರತವರ್ಷೇ ವನಮೇವ ಸ್ಥಾನಂ ಪ್ರಶಸ್ತಂ ಅಥವಾ ಗೃಹಂ। ಉಭಯಮಪೀತಿ ಬ್ರೂಮಃ। ವಿರುದ್ಧಮೇಕಸ್ಯ ಉಭಯತ್ರಾವಸ್ಥಾನಮಿತ್ಯತಃ ಅಧಿಕಾರಿಭೇದೇನ ನ ವಿರೋಧ ಇತಿ ಭಾವೇನ ತತ್ಸ್ವಭಾವಂ ತಾವತ್ಪ್ರತಿಪಾದಯತಿ ॥ ಮತಿರಿತಿ ॥ ಅವಶ್ಯೈರಿಂದ್ರಿಯೈಃ। ಪುನಃಪುನರಪಿ ಭುಕ್ತಚರಭೋಗಾನೇವ ಭುಂಜಾನಾನಾಂ। ಅತ ಏವ ತಮಿಸ್ರಸದೃಶಂ ಸಂಸಾರಂ ಭಜತಾಂ ಕುಟುಂಬಿನಾಂ। ಪರೋಪದೇಶೇನ ವಾ ಸ್ವಬುದ್ಧ್ಯಾ ವಾ। ಪರಸ್ಪರಂ ಸವಯಸ್ಯೈರ್ವಾ। ಶ್ರೀಹರೌ ರತಿರ್ನ ಭವೇದಿತಿ ॥

❖❖❖

ಪ್ರಹ್ಲಾದನು ಹಿರಣ್ಯಕಶಿಪುವಿಗೆ ಹೇಳುತ್ತಾನೆ— ಕಾಮ್ಯಕರ್ಮಗಳನ್ನೇ ಮಾಡುತ್ತ ಇಂದ್ರಿಯನಿಗ್ರಹ ಮಾಡಿಕೊಳ್ಳದೆ ನರಕಸದೃಶವಾದ ಸಂಸಾರದಲ್ಲಿ ಅನರ್ಥ ಭಾಗಿಗಳಾಗುವವರಿದ್ದಾರೆ. ಲೌಕಿಕ ಜೀವನದಲ್ಲಿ ಅವರಿಗೆ ಸುಖವಿಲ್ಲ. ಆದರೂ ಮತ್ತೆ ಮತ್ತೆ ಉಂಡ ಭೋಗಗಳನ್ನು ತಿರುಗಿ ಉಣ್ಣುತ್ತಾರೆ. ಗೃಹಸ್ಥಧರ್ಮದಲ್ಲಿ ನಿರತರಾಗಿರುತ್ತಾರೆ. ಅವರಿಗೆ ಇನ್ನೊಬ್ಬರು ಹೇಳುವುದ ರಿಂದಾಗಲಿ ಸ್ವಬುದ್ಧಿಯಿಂದಲಾಗಲಿ ಜೊತೆಗಾರರೊಂದಿಗೆ ಬೆರೆತಾಗಲಿ ಪರಮಾತ್ಮನಲ್ಲಿ ಆಸಕ್ತಿ ಬರುವುದೇ ಇಲ್ಲ.

❖❖❖

—೧೯೧—

## ಮನೆ ಎಂಬುದು ಕತ್ತಲು ಬಾವಿ ಎಂದು ಪ್ರಹ್ಲಾದನ ಉಪದೇಶ

ತತ್ಸಾಧು ಮನ್ಯೇಽಸುರವರ್ಯ ದೇಹಿನಾಂ
ಸದಾ ಸಮುದ್ವಿಗ್ನಧಿಯಾಮಸದ್ಗ್ರಹಾತ್ ।

ಹಿತ್ವಾಽಽತ್ಮಪಾತಂ ಗೃಹಮಂಧಕೂಪಂ
ವನಂ ಗತೋ ಯದ್ಧರಿಮಾಶ್ರಯೇತ ॥

(ಭಾ.೭.೫.೫)

ಸಂತ್ವೀದೃಶಾ ಅಪಿ ಜನಾಃ ಕಿಮೇತೇ ವನವಾಸೇಽಧಿಕಾರಿಣಃ ಕಿಂವಾ ಗೃಹವಾಸ ಇತ್ಯತ ಆಹ ॥ **ತದಿತಿ** ॥ ಗೃಹಂ ಹಿತ್ವಾ ವನಂ ಗತಃ ಸನ್ ಹರಿಮಾಶ್ರಯೇತೇತಿ ಯತ್ ತದೇವ ತೇಷಾಂ ಸಾಧು ಮನ್ಯೇ ಇತಿ ॥



ಪ್ರಹ್ಲಾದನು ತಂದೆಗೆ ಹೇಳುತ್ತಾನೆ—ಅಸುರಶ್ರೇಷ್ಠನೆ, ಸದಾ ಸತ್‌ಸಿದ್ಧಾಂತಕ್ಕೆ ವಿರುದ್ಧವಾದ ದುರ್ಮತವನ್ನೇ ಹಿಡಿದು ಮನಸಿನ ನೆಮ್ಮದಿ ಕಳೆದುಕೊಂಡಿರುವ ಕಾಮ್ಯಕರ್ಮಿಗಳಿಗೆ ಕತ್ತಲುಬಾವಿಯಂತಿರುವ ತಮ್ಮ ಮನೆಯನ್ನು ಬಿಟ್ಟು ಕಾಡಿಗೆ ಹೋಗಿ ಹರಿಯನ್ನು ಭಜಿಸುವುದೇ ಒಳ್ಳೆಯದೆಂದು ನನ್ನ ಅಭಿಪ್ರಾಯ.



—೧೯೨—

**ಮನೆಯಲ್ಲಿಯೆ ಧರ್ಮ ಮಾಡಬಹುದು ಕಾಡಿಗೇ ಹೋಗಬೇಕಿಲ್ಲ**

ಶಿಲೋಂಛವೃತ್ತ್ಯಾ ಪರಿತುಷ್ಟ ಚಿತ್ತೋ
ಧರ್ಮಂ ಮಹಾಂತಂ ವಿರಜಂ ಜುಷಾಣಃ ।
ಮಯ್ಯರ್ಪಿತಾತ್ಮಾ ಗೃಹ ಏವ ತಿಷ್ಠನ್
ನಾತಿಪ್ರಸಕ್ತಃ ಸಮುಪೈತಿ ಶಾಂತಿಂ ॥

(ಭಾ.೧೧.೧೭.೪೩)

ದ್ವಿತೀಯಾಧಿಕಾರಿಣೋ ದರ್ಶಯತಿ । **ಶಿಲೋಂಛೇತಿ** ॥ ಚತುರ್ವಿಧಾ ಹಿ ಗೃಹಿಣಾಂ ಜೀವನೋಪಯೋಗಿನೀ ವೃತ್ತಿರ್ವಿರಿಂಚೇನ ವಿರಚಿತಾ । ವಾರ್ತಾ ೧ । ಅಸಂಚಯಃ ೨ । ಶಾಲೀನಂ ೩ । ಶಿಲೋಂಛಃ ೪ । ಇತಿ । **ಯಥಾಹುಃ**— "ವಾರ್ತಾಽಸಂಚಯಶಾಲೀನಂ ಶಿಲೋಂಛ ಇತಿ ವೈ ಗೃಹ" ಇತಿ । ತತ್ರ ಯಾಯಾವರಪರ್ಯಾಯಃ ಭೈಕ್ಷಚರ್ಯಾವಿಶೇಷೋ ವಾರ್ತಾ । ೧ । ತದ್ದಿನಾರ್ಜಿತಸ್ಯ ವ್ರೀಹ್ಯಾದಿದ್ರವ್ಯಸ್ಯ ತದ್ದಿನ ಏವ ವ್ಯಯಃ ಅಸಂಚಯಃ । ೨ ।

ವತ್ಸರಪರ್ಯಂತಂ ಸ್ವಜೀವನಹೇತೋಃ ಕುಸೂಲಮಂಜೂಷಾದಿಷು ವ್ರೀಹ್ಯಾದೇಃ ಸಂಗ್ರಹಃ ಶಾಲೀನಂ । ೩ । ವ್ರೀಹ್ಯಾದಿಸಸ್ಯಯುಕ್ತಕ್ಷೇತ್ರೇಷು ಖಲೇ ರಾಶೀಕೃತೇ ವ್ರೀಹ್ಯಾದೌ ತತ್ಸ್ವಾಮಿನಾ ನೀತೇ ಸತಿ ತತ್ಪರಿತ್ಯಕ್ತಧಾನ್ಯಾನಯನಂ ಶಿಲೋಂಛ ಇತಿ । ೪ । ತತ್ರ ಯಯಾ ಕಯಾಚನ ವೃತ್ತ್ಯಾ ಪರಿತುಷ್ಟಂ ಚಿತ್ತಂ ಯಸ್ಯ । ಅನೇನ ವಶೀಕೃತೇಂದ್ರಿಯತ್ವಮಭಿಪ್ರೈತಿ । ಅತ ಏವ ತಯೈವ ವೃತ್ತ್ಯಾ । ವಿರಜಂ ಪಾಪಾಜನಕಂ । ಮಹಾಂತಂ ಅಕ್ಷಯಫಲಂ ।ಧರ್ಮಂ ಜುಷಾಣಃ ಸೇವಮಾನಃ । ತಥಾ ಮಯ್ಯರ್ಪಿತಮನಾಃ ।ಅತ ಏವ ನಾತಿಪ್ರಸಕ್ತಃ ಉದರಪೂರ್ತ್ಯನುಕೂಲಾಧಿಕವಿಷಯೇಷ್ವಪ್ರಸಕ್ತಃ । ಯೋಽಧಿಕಾರೀ ಸ ಗೃಹ ಏವ ತಿಷ್ಠನ್ । ಶಾಂತಿಂ ಸಂಸಾರನಿವೃತ್ತಿಂ ಪ್ರಾಪ್ನೋತಿ । ಯತೋಽತಸ್ತಸ್ಯ ಗೃಹ ಏವ ವಾಸ ಉಚಿತ ಇತಿ । ಇದಮುದಿತಂ ಭವತಿ— ನಹಿ ಗೃಹಪರಿತ್ಯಾಗೇನ ವನವಾಸೋ ವ್ಯಸನಿತಯಾ ಕ್ರಿಯತೇ । ಕಿಂ ನಾಮ । ಅವಶೀಕೃತೇಂದ್ರಿಯಾಣಾಂ ಪುನಃಪುನರ್ಭೋಗವಾಸನಯಾ ಭಗವತಿ ಮನೋ ನ ಪ್ರವಿಶತೀತ್ಯೇವ ಹೇತೋಃ । ಸ ಚ ತಸ್ಮಿನ್ಮನೋನಿವೇಶೋ ಯದಿ ಗೃಹ ಏವ ಭವೇತ್ ತದಾ ಕಿಮಧಿಕಂ ಲಭ್ಯಂ ವನವಾಸೇನ । ಯದರ್ಥಂ ತತ್ಪರಿತ್ಯಜ್ಯ ವನವಾಸಃ ಕರ್ತವ್ಯೋ ಭವೇದಿತಿ ॥



ಶ್ರೀಕೃಷ್ಣ ಉದ್ಧವನಿಗೆ ಹೇಳುತ್ತಾನೆ—ಶಿಲೋಂಛ ಮುಂತಾದ ವೃತ್ತಿಯಲ್ಲಿ, ಸಿಕ್ಕಿದ್ದರಿಂದಲೇ ತೃಪ್ತಿಯಿಂದ ಇದ್ದು ಇಂದ್ರಿಯ ನಿಗ್ರಹದಿಂದ ಫಲಕಾಮನೆ ಇಲ್ಲದೆ ನಿರ್ಮಲವಾದ ಶ್ರವಣಾದಿ ಅತಿಥಿಸತ್ಕಾರಾದಿ ಮಹಾಧರ್ಮವನ್ನು ಆಚರಿಸುತ್ತ ಮೈಮನಗಳನ್ನು ನನಗೇ ಅರ್ಪಿಸುವವರು, ವಿಷಯಸುಖದಲ್ಲಿ ಅತಿಯಾದ ಆಸಕ್ತಿ ತೋರದಿರುವವರು ಕೆಲವರು ಇರುತ್ತಾರೆ. ಇವರು ಗೃಹಸ್ಥಾಶ್ರಮದಲ್ಲಿದ್ದೇ ಮುಕ್ತಿಪಡೆಯಬಹುದು.

ಹೀಗೆ ಭಾರತಭೂಮಿಯಲ್ಲಿ ಹುಟ್ಟಿ ಸುಜೀವರು ಮೋಕ್ಷಸಾಧನೆ ಮಾಡುತ್ತಾರೆ. ನಿಷಿದ್ಧ ವಿಷಯ ಭೋಗಗಳ ಕಡೆಗೆ ದೃಷ್ಟಿಯನ್ನೇ ಹಾಕುವುದಿಲ್ಲ. ಭರತಭೂಮಿಯಲ್ಲಿ ಗೃಹವಾಸ ಮೇಲೊ ವನವಾಸ ಮೇಲೊ ಎಂದರೆ ಎರಡೂ ಪ್ರಶಸ್ತವೆ. ಆದರೆ ಒಬ್ಬನಿಗೇ ಎರಡೂ ಪ್ರಶಸ್ತವೆನಿಸುವುದಿಲ್ಲ. ಅದು ವಿರುದ್ಧವಾಗುವುದು. ಅಧಿಕಾರಿಗಳಲ್ಲಿ ಭೇದವಿದೆ. ಕೆಲವರು ಗೃಹವಾಸದಲ್ಲಿದ್ದರೆ ಅತಿಯಾಗಿ ವಿಷಯಭೋಗದಲ್ಲಿ ಮುಳುಗುತ್ತಾರೆ. ಅದು ಕತ್ತಲು ಬಾವಿ. ಅವರು ಅದನ್ನು ಬಿಟ್ಟು ವನವಾಸ ಮಾಡುವುದೇ ಒಳ್ಳೆಯದು. ಕೆಲವರು

ಗೃಹವಾಸದಲ್ಲಿದ್ದರೂ ವಿಷಯಭೋಗದಲ್ಲಿ ಅತಿಯಾಗಿ ಆಸಕ್ತಿ ತೋರದೆ ಶಿಲೋಂಛವೃತ್ತಿಯಲ್ಲಿ ಸಿಕ್ಕಿದ್ದರಿಂದಲೇ ತೃಪ್ತಿಪಟ್ಟಿಕೊಂಡಿರುತ್ತಾರೆ. ಹರಿಸೇವೆ ಮಾಡುತ್ತಲೇ ಇರುತ್ತಾರೆ. ಇವರಿಗೆ ಅವರ ಗೃಹವಾಸದಲ್ಲಿ ಏನೂ ದೋಷವಿಲ್ಲ. ಅದು ಅವರಿಗೆ ಪ್ರಶಸ್ತವೇ ಆಗಿರುತ್ತದೆ.

ಅದರಿಂದ ಗೃಹವಾಸವನ್ನು ಪರಿತ್ಯಜಿಸಿ ವನವಾಸವನ್ನೇ ಮಾಡಬೇಕೆಂದು ಆಗ್ರಹವೇನಿಲ್ಲ. ಗೃಹವಾಸ ಮಾಡಬಹುದು. ಆದರೆ 'ವಾರ್ತಾಽಸಂಚಯ ಶಾಲೀನಂ ಶಿಲೋಂಛ ಇತಿ ವೈ ಗೃಹೇ' ಎಂಬಂತೆ ಯಾಯಾವರ ಮಾಡುವ 'ವಾರ್ತೆ', ಅಂದು ಸಿಕ್ಕಿದ್ದನ್ನು ಅಂದೇ ಉಣ್ಣುವ 'ಅಸಂಚಯ', ವರ್ಷಕ್ಕೆ ಬೇಕಾಗುವಷ್ಟು ಮಾತ್ರ ಸಂಗ್ರಹ ಮಾಡುವ 'ಶಾಲೀನ', ಹೊಲದಲ್ಲಿ ಬಿದ್ದಿರುವ ಕಾಳನ್ನು ಮಾತ್ರ ಹೆಕ್ಕಿ ಉಣ್ಣುವ ಶಿಲೋಂಛ. ಇವು ನಾಲ್ಕೇ ಜೀವಿಕೆಯಾಗಿರಬೇಕು.



–೧೯೩–

**ನಂಬಿ ಕೆಟ್ಟವರಿಲ್ಲವೊ ರಂಗಯ್ಯನ**

**ಯದ್ವಾಂಛಯಾ ನೃಪಶಿರೋಮಣಯೋಽಂಗ ವೈನ್ಯ-**
**ಜಾಯಂತನಾಹುಷಗದಾದಯ ಐಕಪತ್ಯಂ ।**
**ರಾಜ್ಯಂ ವಿಸೃಜ್ಯ ವಿವಿಶುರ್ವನಮಂಬುಜಾಕ್ಷ**
**ಸೀದಂತಿ ನಾನುಪದವೀಂ ತ ಇಹಾಸ್ಥಿತಾಃ ಕಿಂ ?**

(ಭಾ.೧೦.೭೫.೪೫)

**ನನು ಸಮೀಚೀನಮೇತತ್ ಯದ್ಗೃಹ ಏವ ಸ್ಥಿತೋ ಹರಿಂ ಭಜೇತೇತಿ । ಗೃಹಂ ಹಿತ್ವಾ ವನಂ ಗತೋ ಹರಿಮಾಶ್ರಯೇತೇತಿ ತು ವಿಚಿಂತ್ಯಂ । ತತ್ರ ಹರಿಭಜನೇ ಕೃತೇ ಸತಿ ಯದಿ ಪುರುಷಾರ್ಥಪ್ರಾಪ್ತಿಃ ಸ್ಯಾತ್ ತದಾ ಚಿಂತಾ ನಾಸ್ತ್ಯೇವ । ಯದಾ ತು ನ ತದಾ ಕೇವಲಂ ಶ್ರಮ ಏವ ಸಂಪಾದಿತಃ ಸ್ಯಾತ್ । ನನು ದೈವಮೇವ ಏಷಾಂ ಪ್ರತಿಕೂಲಮಿವ ಆಭಾತಿ । ಯತ್ತು ಗೃಹೇಷು ಮನಃಪ್ರಸಾದಮನಾಸಾದಯತಾಂ ತತ ಏವ ಅತನುಭವಭವಪರಿತಾಪ-ಪರಿತಾಪಿನಾಂ ತನ್ನಿವೃತ್ತಯೇ ವನಾಶ್ರಯಣೇ ತತ್ರಾಪಿ ಇತೋಽಪ್ಯನೇಕಗುಣಾಧಿ**

ಕಶ್ರಮಃ ಪ್ರಾಪ್ತಃ। ತರಣಿಚರಣಸಂತಪ್ತಮಸ್ತಕಸ್ಯ ಖಲ್ವಾಟಕಸ್ಯ ತನ್ನಿವೃತ್ತಯೇ ತಾಲತರುಚ್ಛಾಯಾಶ್ರಯಣೇ ತತ್ಫಲಪತನೇನ ತತೋಽಧಿಕಕ್ಲೇಶ ಇವೇತ್ಯತಃ ಸ್ಯಾದಿಯಂ ಚಿಂತಾ ಸಂತಾಪಕರೀ ಭವತಾಂ। ಯದಿ ಹಿ ಹರಿಶರಣಾನಾಂ ಪುರುಷಾರ್ಥಪ್ರಾಪ್ತಿಃ ಕದಾಚಿನ್ನ ಭವತೀತ್ಯಯಮರ್ಥಃ ಸಿದ್ಧ್ಯೇತ್। ತದೇವ ನಾಸ್ತಿ।ತಚ್ಚರಣಸೇವಾನಿರತಾನಾಂ ಕದಾಪಿ ಫಲಾನಿಷ್ಪತ್ತ್ಯದರ್ಶನಾತ್। ತತೋ ಯುಕ್ತಮೇವ ವನಂ ಗತೋ ಹರಿಮಾಶ್ರಯೇತೇತಿ ಭಾವೇನಾಹ। ಯದ್ವಾಂಛಯೇತಿ। ''ಹೇ ಅಂಬುಜಾಕ್ಷೇತಿ ಶ್ರೀಕೃಷ್ಣಂ ಪ್ರತಿ ರುಕ್ಮಿಣೀವಚನಂ। ಕದಾಚಿನ್ನರ್ಮಸಮಯೇ ಹರಿಣೋಕ್ತಂ— ''ಮಹಾಸಾಮ್ರಾಜ್ಯವತೋ ನೃಪಾನ್ ಪರಿತ್ಯಜ್ಯ ದರಿದ್ರಾಣಾಂ ನಃ ಕರಂ ಧೃತವತೀ ಕ್ಲಿಶ್ಯಸೀ''ತಿ। ತಚ್ಛ್ರುತವತ್ಯಾ ದೇವ್ಯಾ ಉತ್ತರಮುಚ್ಯತೇ। ಯಸ್ಯ ತ್ವತ್ಪಾದಸೇವನಸ್ಯ ವಾಂಛಯಾ। ಯೇ ನೃಪಶಿರೋಮಣಯಃ ವನಂ ವಿವಿಶುಃ ತೇಽನುಪದವೀಂ ಸ್ವಯೋಗ್ಯಪದಂ ನಾಸ್ಥಿತಾಃ ಕಿಂ। ಅಪ್ರಾಪ್ಯ ಇಹ ವನ ಏವ ಸೀದಂತಿ ಕಿಂ। ಕಿಮಾಕ್ಷೇಪೇ। ನೈವ। ಸ್ವಯೋಗ್ಯಮಪೇಕ್ಷಿತಂ ಪದಂ ಪ್ರಾಪ್ಯ ನಿರ್ವೃತಾಃ। ಅತೋಽಹಮಪಿ ತ್ವತ್ಪಾದಾಶ್ರಿತಾ ಕಥಂ ಕ್ಲಿಷ್ಟಾ ಭವೇಯಮಿತಿ। ಅಂಗೋ ನಾಮ್ನಾ। ವೈನ್ಯೋ ವೇನಪುತ್ರಃ ಪೃಥುಃ। ಜಾಯಂತೋ ಭರತಃ। ನಾಹುಷೋ ನಹುಷಪುತ್ರೋ ಯಯಾತಿಃ ॥



ರುಕ್ಮಿಣಿ ಶ್ರೀಕೃಷ್ಣನಿಗೆ ಹೇಳುತ್ತಾಳೆ— ಹೇ ಕಮಲಾಕ್ಷ, ನಿನ್ನ ಪಾದಸೇವೆ ಮಾಡುತ್ತಿರಬೇಕೆನ್ನುವ ಆಸೆಯಿಂದ ಅಂಗರಾಜ, ಪೃಥು ಭರತ ಯಯಾತಿ ಗದ ಮುಂತಾದ ಅನೇಕ ಶ್ರೇಷ್ಠರಾದ ರಾಜರು ದೊಡ್ಡ ದೊಡ್ಡ ರಾಜ್ಯಗಳನ್ನು ತ್ಯಜಿಸಿ ಕಾಡಿಗೆ ಹೋದರು. ಅವರು ತಮ್ಮ ಯೋಗ್ಯ ಮುಕ್ತಿಮಾರ್ಗವನ್ನು ಅನುಸರಿಸಿದವರೇ ಅಲ್ಲವೆ? ಅವರ ಮಾರ್ಗವನ್ನು ಅನುಸರಿಸಿದರೆ ಸ್ತ್ರೀಯರು ದುಃಖಭಾಗಿಗಳಾಗುವರೆ? ಅವರು ನಾಡನ್ನು ಬಿಟ್ಟು ಕಾಡಿನಲ್ಲಿ ಕಷ್ಟಪಡುತ್ತಿರು ವರೆ? ಜರಾಸಂಧ ಮುಂತಾದ ರಾಜರನ್ನು ಬಿಟ್ಟು ನಿನ್ನ ಕೈಹಿಡಿದ ಮಾತ್ರಕ್ಕೆ ನಾನೇಕೆ ಕಷ್ಟಪಡಬೇಕು? ನಾನೆಂದೂ ದುಃಖಪಡುವುದಿಲ್ಲ, ನಿತ್ಯಸುಖಿ ಯಾಗಿಯೇ ಇರುತ್ತೇನೆ, ಅದು ನಿನ್ನ ಪಾದಸೇವೆಯಿಂದಲೆ! ಎಂದು.

'ಕತ್ತಲುಬಾವಿಯಂತಿರುವ ಮನೆಯಲ್ಲಿ ನೆಮ್ಮದಿ ಇಲ್ಲವೆಂದು ಅದನ್ನು ಬಿಟ್ಟು ಕಾಡಿಗೆ ಹೋದರೆ ಅಲ್ಲಿ ಹರಿಭಜನೆಯಿಂದ ಮುಕ್ತಿ ಅವಶ್ಯ ದೊರೆಯುವ

ಪಕ್ಷದಲ್ಲಿ ಚಿಂತೆಯಿಲ್ಲ. ಒಂದುವೇಳೆ ಮುಕ್ತಿ ದೊರೆಯದಿದ್ದಲ್ಲಿ, ಕೇವಲ ಇನ್ನೂ ಹೆಚ್ಚಿನ ದುಃಖವೇ ಉಂಟಾದೀತು. ವನವಾಸ ಶಾಪವಾಗಿಯೇ ಪರಿಣಮಿಸೀತು. ಬಿಸಿಲಿನ ತಾಪಕ್ಕೆ ಬೊಕ್ಕತಲೆಯವನು ನೆತ್ತಿ ಸುಡುವುದೆಂದು ತಾಳೆ ಮರದ ಕೆಳಗೆ ನೆರಳಿಗಾಗಿ ಕುಳಿತರೆ, ಅದರ ಹಣ್ಣು ತಲೆಗೆ ಬಿದ್ದು ಅಪ್ಪಳಿಸಿದಂತಾದೀತು. ಶೋಚನೀಯ ಈ ವನವಾಸಿಯ ಸ್ಥಿತಿ' ಅದರಿಂದ 'ವನಂ ಗತೋ ಹರಿಮಾಶ್ರಯೇತ್' ಎನ್ನುವುದು ಸರಿಯಲ್ಲ ಎಂದು ಕಳವಳಿಸುವವರಿಗೆ ರುಕ್ಮಿಣೀದೇವಿ 'ನಿಮಗೇನೂ ಸಂದೇಹಬೇಡ'ವೆಂದು ಇಲ್ಲಿ ಸಂತೈಸುತ್ತಿದ್ದಾಳೆ.

ಯದ್ಯಪಿ ಇದು ದೇವಿಯ ಪರೀಕ್ಷೆಯಲ್ಲ. ಕೇವಲ ವಿನೋದಕ್ಕಾಗಿ ದಂಪತಿಗಳು ನಡೆಸಿದ ಪ್ರೇಮಕಲಹ. ಆದರೂ ಈ ರಮಾನಾರಾಯಣರ ಪ್ರೇಮಲೀಲೆ, ಸುಜೀವಿಗಳಿಗೆ ಮೋಕ್ಷರೂಪ ಮಹಾ ಪುರುಷಾರ್ಥ ಪ್ರಾಪ್ತಿ ನಿಶ್ಚಿತವೆಂದು ಸಾಧನೆ ಮಾಡಿಕೊಡುತ್ತದೆ. 'ನಂಬಿ ಕೆಟ್ಟವರಿಲ್ಲವೋ ರಂಗಯ್ಯನ' ಎಂದು ಪಾಠ ಕಲಿಸುತ್ತದೆ. ಕಾಡಿಗೆ ಹೋಗಿ ಹರಿಭಜನೆ ಮಾಡುವ ಜೀವರು ಎಂದೂ ಕಷ್ಟಕ್ಕೆ ಈಡಾಗುವುದೇ ಇಲ್ಲ. ನೆಮ್ಮದಿಯಿಂದಲೆ ಅವರು ಹರಿಭಜನೆ ಮಾಡುತ್ತಾರೆ. ಅಲೌಕಿಕ ದಿವ್ಯ ಆನಂದಾನುಭವದಲ್ಲಿ ಮಗ್ನರಾಗಿದ್ದೇ ಹರಿಯ ಅನುಗ್ರಹ ಸಂಪಾದಿಸಿ ಮುಕ್ತಿಭಾಗಿಗಳಾಗುತ್ತಾರೆ ಎಂದು ತಿಳಿಸುತ್ತದೆ.



# (೧೫) ಕಾಲಪ್ರಶಂಸಾ ಪ್ರಕರಣ

## ಪ್ರಕರಣ ಸಾರಾಂಶ

ಕಲಿಕಾಲ ಮೋಕ್ಷಸಾಧನೆಗೆ ಪ್ರಶಸ್ತವಾದ ಕಾಲ. ಸಾಧನೆಗೆ ಕಠಿಣವಾದ ತಪಸ್ಸು ಯಜ್ಞಾದಿ ಮಾರ್ಗವನ್ನು ಹಿಡಿಯಬೇಕಾಗಿಲ್ಲ. ಹರಿನಾಮೋಚ್ಚಾರಣೆಯೊಂದೇ ಸಾಕು. ಆದರೂ ಪಾಖಂಡಮತ ಗಳಿಂದ ಮತಿಗೆಟ್ಟು ಹರಿನಾಮವನ್ನೂ ಮರೆಯುತ್ತಿರುವುದು ದೊಡ್ಡ ವಿಪರ್ಯಾಸ. ವಸ್ತುತಃ ಪಾಖಂಡ ಮತಗಳ ಹಾವಳಿ ಕೇವಲ ನಿಮಿತ್ತ ಮಾತ್ರ. ಕಾಲನಿಯಾಮಕನಾದ ಹರಿಯ ಅನುಗ್ರಹವಾದರೆ ಮತಿಗೆಡುವ ಪ್ರಸಂಗವೇ ಇಲ್ಲ.



—೧೯೪—

**ಮಾನವಜನ್ಮವೆ ದುರ್ಲಭ, ಅದರಲ್ಲಿ ಪಾಷಂಡಮತಗಳ ಹಾವಳಿ!**

**ಕಲೌ ನ ರಾಜನ್ ಜಗತಾಂ ಪರಂ ಗುರುಂ**
**ತ್ರಿಲೋಕನಾಥಾನತಪಾದಪಂಕಜಂ ।**
**ಪ್ರಾಯೇಣ ಮರ್ತ್ಯಾ ಭಗವಂತಮಚ್ಯುತಂ**
**ಯಕ್ಷ್ಯಂತಿ ಪಾಷಂಡವಿಭಿನ್ನಚೇತಸಃ ॥**

(ಭಾ.೧೨.೩.೪೩)

**ಶ್ರೀರಸ್ತು ॥ ಕಾಲೋಽಪಿ ಈದೃಶಃ ಸುದುರ್ಲಭಃ ತತಃ ಅಸ್ಮಿನ್ನೇವ ಪುಂಸಾ ಯತ್ಸಂಪಾದನೀಯಂ ತತ್ಸಂಪಾದ್ಯಮಿತಿ ಭಾವೇನ ತತ್ರ ಅಪ್ರವೃತ್ತಾನ್ ಧಿಕ್ಕರೋತಿ ॥ ಕಲಾವಿತಿ ॥ ಹೇ ರಾಜನ್, ಮಾಂ ಈದೃಶೇಽಪಿ ಕಲೌ ಪ್ರಾಯೇಣ ನ ಯಕ್ಷ್ಯಂತಿ ನ ತಂ ಸೇವಂತೇ । ಅತಃ ಪ್ರಾಪ್ತಪರಿತ್ಯಾಗಿನಾಂ ಜನ್ಮ ಧಿಗಿತಿ ಭಾವಃ । ಕುತೋ ನ ಯಕ್ಷ್ಯಂತೀತ್ಯತ ಉಕ್ತಂ ಪಾಷಂಡೇತಿ ॥ ಪಾಷಂಡಮತೇನ ಮೋಹಿತಬುದ್ಧಯ ಇತಿ ॥**



ಶುಕಮುನಿ ಪರೀಕ್ಷಿದ್ರಾಜನಿಗೆ ಹೇಳುತ್ತಾರೆ—ರಾಜನೆ, ಮೋಕ್ಷಸಾಧನೆಗೆ

ಈ ಕಲಿಕಾಲದಂಥ ಯೋಗ್ಯಕಾಲ ಇನ್ನೊಂದಿಲ್ಲ. ಬಲು ದುರ್ಲಭ. ಆದರಿಂದ ಈಗಲೆ ಸಾಧನೆ ಮಾಡಬೇಕು. ಹರಿಚರಣ ಸೇವೆಯನ್ನು ತಪ್ಪದೆ ಮಾಡಬೇಕು. ಆದರೆ ಹೆಚ್ಚಿನವರು ಮಾಡುವುದಿಲ್ಲ! ಅವರಿಗೆ ಧಿಕ್ಕಾರ. ಅವರು ಪಾಷಂಡ ಮತಗಳಿಂದ ಮತಿಗೆಟ್ಟು ಮೂಲೋಕದೊಡೆಯರೂ ನಮಿಸುವಂಥ ಪಾದಕಮಲಉಳ್ಳ ಮೂಲೋಕಕ್ಕೆ ಪರಮಗುರುವಾದ ಭಗವಾನ್ ಅಚ್ಯುತನನ್ನು ಆರಾಧಿಸುವುದಿಲ್ಲ. ಇದಕ್ಕೆ ಏನೆನ್ನಬೇಕು? ಕಲಿಯುಗದಲ್ಲಿ ಹರಿನಾಮ ಉಚ್ಚಾರಣ ಮಾತ್ರದಿಂದಲೆ ಪುರುಷಾರ್ಥ ಪ್ರಾಪ್ತಿ ಇದೆ. ಇಂಥ ಪ್ರಶಸ್ತವಾದ ಕಾಲ ಲಭಿಸಿರುವಾಗ ಮೋಕ್ಷಸಾಧನೆ ಮಾಡಿಕೊಳ್ಳದವನು ಸರ್ವಥಾ ಜಾಣನಲ್ಲ!



–೧೯೫–

**ಕಲಿಕಾಲದಲ್ಲಿ ಹರಿನಾಮದಿಂದಲೆ ಉತ್ತಮಸದ್ಗತಿ!**

ಯನ್ನಾಮಧೇಯಂ ಮ್ರಿಯಮಾಣ ಆತುರಃ
ಪತನ್ ಸ್ಖಲನ್ವಾ ವಿವಶೋ ಗೃಣನ್‌ಪುಮಾನ್ ।
ವಿಮುಕ್ತಕರ್ಮಾರ್ಗಲ ಉತ್ತಮಾಂ ಗತಿಂ
ಪ್ರಾಪ್ನೋತಿ ಯಕ್ಷ್ಯಂತಿ ನ ತಂ ಕಲೌ ಜನಾಃ ॥

(ಭಾ.೧೨.೩.೪೪)

ಯಸ್ಮಿನ್ಕಲೌ ನಾಮೋಚ್ಚಾರಣಮಾತ್ರೇಣ ಪುರುಷಾರ್ಥಪ್ರಾಪ್ತಿಃ ತಸ್ಮಿನ್ ಸ್ವಕಾರ್ಯಮಸಾಧಯನ್ ಅಕುಶಲ ಏವೇತಿ ಭಾವೇನಾಹ ॥ **ಯನ್ನಾಮಧೇಯಮಿತಿ** ॥ ಆಸನ್ನಮರಣೋಽಪಿ ವಾ ।ರೋಗೀ ವಾ । ಯತಃ ಕುತಶ್ಚಿತ್ಪತನ್ ವಾ । ಸ್ಖಲನ್ವಾ । ಸ್ವವಶೋ ವಿವಶೋ ವಾ । ಯಸ್ಯ ಹರೇರ್ನಾಮ । ಯಸ್ಮಿನ್ಕಲೌ ಗೃಣನ್ ಕೀರ್ತಯನ್ನೇವ । ವಿಮುಕ್ತಕರ್ಮಾರ್ಗಲಃ ವಿಮುಕ್ತ-ಕರ್ಮಪಾಶಃ ಸನ್ । ಉತ್ತಮಾಂ ಗತಿಂ ಪ್ರಾಪ್ನೋತಿ ಜನಃ । ತಂ ತಾದೃಶಮಹಿಮಾನಂ । ತಸ್ಮಿನ್ ತಾದೃಶಫಲದೇಽಪಿ ಕಲೌ ನ ಯಕ್ಷ್ಯಂತಿ । **ಯಥಾಹುಃ**—

''ಕಲೇರ್ದೋಷನಿಧೇ ರಾಜನ್ನಸ್ತಿ ಹ್ಯೇಕೋ ಮಹಾನ್ ಗುಣಃ ।
ಕೀರ್ತನಾದೇವ ಕೃಷ್ಣಸ್ಯ ಮುಕ್ತಬಂಧಃ ಪರಂ ವ್ರಜೇ''ದಿತಿ ॥



**ಶುಕಮುನಿ ಹೇಳುತ್ತಾರೆ— ಮರಣಕಾಲದಲ್ಲಿ, ರೋಗದಿಂದ ಬಳಲುವ ಕಾಲದಲ್ಲಿ ಬೀಳುವಾಗ ಎಡವಿದಾಗ ಪರವಶತೆಯಿಂದಲಾದರೂ ಯಾರ ನಾಮವನ್ನು ಉಚ್ಚರಿಸುವಾತನು ಕರ್ಮಬಂಧನದಿಂದ ಮುಕ್ತನಾಗಿ ಉತ್ತಮಗತಿಯನ್ನು ಹೊಂದುವನೋ ಆ ಅಚ್ಯುತನನ್ನು ಕಲಿಯುಗದಲ್ಲಿ ಜನರು ಆರಾಧಿಸುವುದಿಲ್ಲ.**

ಕಲೇರ್ದೋಷನಿಧೇ ರಾಜನ್ನಸ್ತಿ ಹ್ಯೇಕೋ ಮಹಾನ್ ಗುಣಃ ।
ಕೀರ್ತನಾದೇವ ಕೃಷ್ಣಸ್ಯ ಮುಕ್ತಬಂಧಃ ಪರಂ ವ್ರಜೇತ್ ॥

(ಭಾ.೧೨.೩.೫೧)

ಕಲಿಕಾಲ ಎಲ್ಲ ಕಲಿ ದೋಷಗಳಿಗೆ ಆಶ್ರಯವಾದರೂ ಅದರಲ್ಲಿ ಒಂದು ದೊಡ್ಡ ಗುಣವಿದೆ. ಅದೇನೆಂದರೆ, ರಾಜನೆ, ಕಲಿಕಾಲದಲ್ಲಿ ಕೃಷ್ಣನ ನಾಮಸಂಕೀರ್ತನೆಯಿಂದಲೆ ಕರ್ಮಬಂಧನದಿಂದ ವಿಷಯಾಸಕ್ತಿಯಿಂದ ಮುಕ್ತನಾಗಿ ಪರಮಾತ್ಮನನ್ನು ಹೊಂದಬಹುದು.



–೧೯೬–

**ಕಾಲ ನಿಮಿತ್ತಮಾತ್ರ , ಎಲ್ಲವೂ ಕಾಲನಿಯಾಮಕನ ಲೀಲೆ**

**ಯೋಽಯಂ ಕಾಲಸ್ತಸ್ಯತೇಽವ್ಯಕ್ತಬಂಧೋ**
**ಚೇಷ್ಟಾಮಾಹುಶ್ಚೇಷ್ಟತೇ ಯೇನ ವಿಶ್ವಂ ।**
**ನಿಮೇಷಾದಿರ್ವತ್ಸರಾಂತೋ ಮಹೀಯಾಂ-**
**ಸ್ತಂ ತ್ವೇಶಾನಂ ಕ್ಷೇಮಧಾಮ ಪ್ರಪದ್ಯೇ ॥**

(ಭಾ.೧೦.೪.೨೭)

**ಪಾಷಂಡಮತವಿಭಿನ್ನಮತಿತ್ವಾತ್ ನ ತಂ ಕಲೌ ಯಕ್ಷ್ಯಂತೀತಿ ಯದುದಿತಂ ತನ್ನಿಮಿತ್ತಮಾತ್ರಂ । ವಸ್ತುತಸ್ತು ಕಾಲನಾಮಾ ಶ್ರೀಹರಿರೇವ ಯಮನುಗೃಹ್ಣಾತಿ ತಸ್ಮೈ ಸ್ವಸ್ಮಿನ್ ಮತಿಂ ದಾಸ್ಯತ್ಯೇವ। ಅತಃ ಸ ಏವ ಸರ್ವೇಷಾ- ಮಾಯುರಾದಿರಕ್ಷಕೋ ವಿಘ್ನಪರಿಹಾರಕಃ ಸಾಧನಕಾರಕಶ್ಚೇತಿ ಪ್ರತಿಪತ್ತವ್ಯ ಇತಿ ಭಾವೇನಾಹ ॥ ಯೋಽಯಮಿತಿ ॥ ಕೃಷ್ಣಂ ಪ್ರತಿ ದೇವಕೀವಚನಮೇತತ್ । ಹೇಽವ್ಯಕ್ತಬಂಧೋ । ನಿಮೇಷಾದಿರ್ವತ್ಸರಾಂತೋ ಮಹೀಯಾನ್ ಯೋಽಯಂ**

ಕಾಲೋಽಸ್ತಿ । ತಂ ಕಾಲಂ ತಸ್ಯ ತೇ ಚೇಷ್ಟಾಂ ತ್ವಯೈವ ಪ್ರೇರ್ಯಮಾಣಂ । ಜ್ಞಾನಿನ ಆಹುಃ । ನ ತಸ್ಯ ಸ್ವಾತಂತ್ರ್ಯೇಣ ಫಲದಾತೃತ್ವಮಿತಿ ಭಾವಃ । ಕುತ ಏವಂ । ತಸ್ಯೈವ ಸ್ವಾತಂತ್ರ್ಯಂ ಕಿಂ ನ ಸ್ಯಾದಿತ್ಯತಃ ತಸ್ಯ ತೇ ಇತ್ಯುಕ್ತಂ । ಸಃ ಕಃ ಇತ್ಯತ ಆಹ ॥ ಯೇನೇತಿ ॥ ವಿಶ್ವಂ ಯೇನೈವ ಚೇಷ್ಟತೇ ತಸ್ಯ ತೇ ಇತಿ । ಸರ್ವಪ್ರೇರಕತಯಾ ಪ್ರಮಿತತ್ವಾದಿತಿ ಭಾವಃ । ತತೋಽಹಂ ಕಾಲತೋ ಭೀತಾ ಸರ್ವಪ್ರೇರಕತಯಾ ಕಾಲಸ್ಯಾಪಿ ಪ್ರೇರಕಂ ಕಾಲೇ ಸ್ಥಿತ್ವಾ । ಕ್ಷೇಮಧಾಮ ಕ್ಷೇಮಪ್ರದಂ ಸರ್ವಭಕ್ತಾಶ್ರಯಂ ತ್ವಾಮೇವ । ಕ್ಷೇಮಾಯ ಪ್ರಪದ್ಯೇ ಇತಿ ॥



ದೇವಕಿ ಕೃಷ್ಣನನ್ನು ಸ್ತುತಿಸಿದಳು—ನಿಮಿಷದಿಂದ ತೊಡಗಿ ಬ್ರಹ್ಮನ ನೂರು ವರ್ಷಪರ್ಯಂತ ಅಪರಿಮಿತವಾಗಿ ಯಾವ ಕಾಲ ಪ್ರವಾಹವು ಹರಿಯುತ್ತಲೇ ಇರುವುದೋ ಅದು ನಿನಗೆ ಬರಿ ಒಂದು ಆಟದ ಸಾಮಾನು ಎಂದು ಜ್ಞಾನಿಗಳು ಹೇಳುತ್ತಾರೆ. ಏಕೆಂದರೆ ಅದರ ಮೂಲಕ ನಿನ್ನಿಂದಲೇ ಜಗತ್ತಿನ ಎಲ್ಲ ಚಟುವಟಿಕೆಗಳೂ ಆಗುಹೋಗುಗಳೂ ನಡೆಯುತ್ತವೆ. ಈ ಪಾಷಡಮತಗಳ ಹಾವಳಿ ನಿಮಿತ್ತಮಾತ್ರ ವಸ್ತುತಸ್ತು ಕಾಲನಿಯಾಮಕನಾದ ನಿನ್ನ ಅನುಗ್ರಹವಾದರೆ ಮತಿಗೆಡುವುದಿಲ್ಲ. ಹೀಗೆ ಸರ್ವಪ್ರೇರಕನಾದ್ದರಿಂದ ಕಾಲಕ್ಕೂ ಪ್ರೇರಕನಾಗಿ ಕಾಲದಲ್ಲಿದ್ದು ಕ್ಷೇಮದಾಯಕನಾಗಿರುವ ಸರ್ವಭಕ್ತರಿಗೂ ಆಶ್ರಯದಾತನಾದ ನಿನ್ನನ್ನೇ ಕ್ಷೇಮಕ್ಕಾಗಿ ಮೊರೆ ಹೋಗುತ್ತೇನೆ.



# (೧೬) ದೇಹಪ್ರಶಂಸಾಪ್ರಕರಣ

## ಪ್ರಕರಣ ಸಾರಾಂಶ

ಮಾನವಜನ್ಮ ದೊಡ್ಡದು. ಶ್ರೀಹರಿ ಮರಗಿಡ ಪ್ರಾಣಿ ಪಕ್ಷಿ ಮುಂತಾದವುಗಳನ್ನು ಸೃಜಿಸಿದರೂ ತೃಪ್ತಿಯಾಗದೆ ಹೋಯಿತು. ಇವು ಯಾವುದೂ ಜ್ಞಾನಸಾಧನೆ ಮಾಡಲಾರವು. ಮೋಕ್ಷ ಸಾಧನೆಯೆ ಇಲ್ಲ. ಅದಕ್ಕೆ ಕೊನೆಯಲ್ಲಿ ಮಾನವನ ಶರೀರವನ್ನು ಸೃಜಿಸಿದ. ಆಗ ತೃಪ್ತಿಯಾಯಿತು. ಏಕೆಂದರೆ 'ಹರಿಯೆ ಗುಣಪೂರ್ಣ ಸ್ವತಂತ್ರ. ಬೇರೆ ಎಲ್ಲರೂ ಹರಿದಾಸರು' ಎಂದು ತಿಳಿಯುವ ಬುದ್ಧಿಶಕ್ತಿ ಮಾನವನಿಗೆ ಇದೆ. ಇದರಿಂದ ಮಾನವನು ಅವಶ್ಯ ಜ್ಞಾನಸಾಧನೆ ಮಾಡಬೇಕೆಂದು ದೇವನ ಉದ್ದೇಶವಿದೆ.

ರಾಜನು ನೀಡುವ ಎಲ್ಲ ಸವಲತ್ತುಗಳನ್ನು ಪಡೆದೂ ಕೂಡ ರಾಜನಿಗಿಷ್ಟವಾದ ಕಾರ್ಯಮಾಡದೇ ಹೋದರೆ ರಾಜನ ಕೋಪಕ್ಕೆ ಬಲಿಯಾಗುವಂತೆ ಶ್ರೀಹರಿ ನೀಡಿದ ಶರೀರ ಇಂದ್ರಿಯ ಮನ ಆದಿ ಎಲ್ಲ ಸಾಧನಸಂಪತ್ತು ಸವಲತ್ತುಗಳನ್ನೂ ಕೂಡ ಪಡೆದಮೇಲೆ ಮಾನವನು ಜ್ಞಾನಸಾಧನೆ ಮಾಡದಿದ್ದರೆ ಅದು ಹರಿಯ ಕೋಪಕ್ಕೆ ಕಾರಣವಾಗುವುದು ಸಹಜ.

ಮಾನವ ಶರೀರ ಜ್ಞಾನಸಾಧನೆಗೆ ಸಮರ್ಥವಾಗಿದ್ದರೂ ಅಶಾಶ್ವತ. ಯಾವ ಕ್ಷಣದಲ್ಲಾದರೂ ಮೃತ್ಯುವಶವಾಗಬಹುದು. ಹೀಗಾಗಿ ಅದು ಬಿದ್ದು ಹೋಗುವುದರೊಳಗೇ ಅದರ ಸದುಪಯೋಗ ಮಾಡಿಕೊಳ್ಳಬೇಕು. ವಿಷಯಭೋಗ ಪ್ರಾಣಿಜನ್ಮದಲ್ಲಿಯೂ ಲಭ್ಯವೆ ಇದೆ. ಅದಕ್ಕೆ ಅಮೂಲ್ಯವಾದ ಮಾನವಶರೀರವನ್ನು ದುರುಪಯೋಗಪಡಿಸಿಕೊಳ್ಳಬಾರದು. ಈ ವಿವೇಕದ ಆವಶ್ಯಕತೆಯನ್ನು ಪ್ರಹ್ಲಾದರಾಜರು ಅಸುರ ಬಾಲಕರಿಗೆ ಹೇಳಿ, ಕ್ರೀಡಾಸಕ್ತಿಯಿಂದ ಕುರುಡರಾಗಿ ಆಯುಷ್ಯವನ್ನು ವ್ಯರ್ಥಮಾಡಿಕೊಳ್ಳಬೇಡಿರೊ' ಎಂದು ಕಳಕಳಿಯಿಂದ ಉಪದೇಶ ನೀಡಿದ್ದಾರೆ.



–೧೯೭–

## ಮಾನವ ಜನ್ಮವೇ ಮೋಕ್ಷಸಾಧನೆಗೆ ಯೋಗ್ಯ

ಸೃಷ್ಟ್ವಾ ಪುರಾಣಿ ವಿವಿಧಾನ್ಯಜಯಾऽऽತ್ಮಶಕ್ತ್ಯಾ
ವೃಕ್ಷಾನ್ ಸರೀಸೃಪ ಪಶೂನ್ ಖಗದಂಶ ಮತ್ಸ್ಯಾನ್
ತೈಸ್ತೈರತುಷ್ಟಹೃದಯಃ ಪುರುಷಂ ವಿಧಾಯ
ಬ್ರಹ್ಮಾವಬೋಧಧಿಷಣಂ ಮುದಮಾಪ ದೇವಃ ॥

(ಭಾ.೧೧.೯.೨೮)

ಶ್ರೀರಸ್ತು ॥ ದೇಹೋऽಪಿ ಈದೃಶೋ ದುರ್ಲಭಃ ತತಃ ಅಸ್ಮಿನ್ನೇವ ಸ್ವಕಾರ್ಯ ಸಾಧನೀಯಮವಹಿತೈರಿತ್ಯಾಶಯೇನ ಇದಂ ಪ್ರಕರಣಂ। ತತ್ರಾದೌ ಶ್ರೀಹರಿಣಾ ಜೀವಸಾಧನಾರ್ಥಮೇವ ಇದಂ ಶರೀರಂ ನಿರ್ಮಿತಂ ತತಸ್ತತ್ರೈವ ವಿನಿಯೋಗೋ ಯುಕ್ತ ಇತ್ಯಾಹ ॥ ಸೃಷ್ಟ್ವೇತಿ ॥ ಆತ್ಮನಃ ಅಧೀನಾ ಶಕ್ತಿಃ ಯಸ್ಯಾಃ ತಯಾ ಪ್ರಕೃತ್ಯಾ। ವೃಕ್ಷಾದಿರೂಪಾಣಿ ವಿವಿಧಾನ್ಯಪಿ ಪುರಾಣಿ ಸೃಷ್ಟ್ವಾ। ತೈಸ್ತೈಃ ಸೃಷ್ಟೈರಪಿ ಸ್ವಾಭಿಪ್ರೇತಕಾರ್ಯಸಾಧನಾಕ್ಷಮೈಃ। ಅತುಷ್ಟಮನಾಃ। ಪುರುಷಂ ಪುರುಷದೇಹಂ ವಿಧಾಯ ಮುದಮಾಪ। ತತ್ರ ಹೇತುಃ। ಬ್ರಹ್ಮಣೋऽವಬೋಧಸ್ಯಾಶ್ರಯಮಿತಿ। ಅನೇನ ಉದ್ದೇಶ್ಯಂ ಬ್ರಹ್ಮಜ್ಞಾನಮೇವ ಶರೀರನಿರ್ಮಾಣಸ್ಯೇತಿ ಸೂಚಿತಂ ॥

❖❖❖

ಅವಧೂತಮುನಿ ತನಗೆ ತನ್ನ ಶರೀರವೇ ಇಪ್ಪತ್ತೈದನೆಯ ಗುರುವಾಯಿತೆಂದು ಯದುರಾಜನಿಗೆ ಹೇಳುತ್ತಾನೆ—'ಶ್ರೀಹರಿ ಅನಾದಿಯಿಂದ ತನ್ನಿಚ್ಛೆಯಿಂದಲೂ ತನಗೆ ಅಧೀನಳಾದ ಚೇತನ ಅಚೇತನ ಪ್ರಕೃತಿಯಿಂದಲೂ ಮರಗಿಡ ಹಾವು ಪಶು ಪಕ್ಷಿ ನೊಣ ಮೀನು ಮುಂತಾದ ನಾನಾ ಬಗೆಯ ಶರೀರಗಳನ್ನು ಜೀವರಿಗೆ ನಿರ್ಮಿಸಿಯೂ ಅವು ಯಾವುವೂ ಸರಿಯಾಗಿ ಮೋಕ್ಷಸಾಧನವಾಗದಿದ್ದುದರಿಂದ ತೃಪ್ತಿಗಾಣದೆ ಕೊನೆಯಲ್ಲಿ ಮಾನವ ಶರೀರವನ್ನು ನಿರ್ಮಿಸಿದನು. ತನ್ನ ಅಭಿಪ್ರಾಯದಂತೆ ಜೀವರು ಮಾನವ ಶರೀರದಲ್ಲಿ ಮಾತ್ರವೇ 'ಹರಿಯೇ ಗುಣಪೂರ್ಣ ಸ್ವತಂತ್ರ. ನಾವು ಹರಿಯ ದಾಸರು, ಎಂದು ತಿಳಿಯುವ ಬುದ್ಧಿಶಕ್ತಿಉಳ್ಳವರಾಗಿರುವುದನ್ನು ಕಂಡು ತೃಪ್ತಿ ಹೊಂದಿದನು' ಎಂದು.

ಇದರಿಂದ ಮಾನವಶರೀರ ನಿರ್ಮಾಣ ಮಾಡುವಾಗ ಶ್ರೀಹರಿಗೆ ಅದು ಜೀವರಿಗೆ ಬ್ರಹ್ಮಜ್ಞಾನ ಹೊಂದಲು ಸಾಧನವಾಗಲಿ ಎಂಬ ಉದ್ದೇಶವಿದ್ದುದು ಸ್ಪಷ್ಟವಾಗುತ್ತದೆ. ಹೀಗಾಗಿ ಮಾನವಶರೀರ ಅತ್ಯಂತ ಪ್ರಶಸ್ತವಾದ ಶರೀರ. ದುಲರ್ಭವಾಗಿದೆ ಎಂದು ತಿಳಿದು ಬ್ರಾಹ್ಮಣಾದಿ ಜನ್ಮ ಬಂದಾಗ ಅದನ್ನು ಹಾಳುಮಾಡಿಕೊಳ್ಳದೆ ಶ್ರದ್ಧೆಯಿಂದ ಜ್ಞಾನಸಾಧನೆ ಮಾಡಿಕೊಳ್ಳಬೇಕು.



–೧೯೮–

**ಮಾನವಜನ್ಮ ಹಾಳು ಮಾಡಿಕೊಂಡರೆ ನರಕ**

ಪ್ರಾಪ್ತಾ ನೃಜಾತಿಂ ತ್ವಿಹ ಯೇ ಚ ಜಂತವೋ
ಜ್ಞಾನಕ್ರಿಯಾ ದ್ರವ್ಯಕಲಾಪಸಂಭೃತಾಃ ।
ನ ಚೇದ್ಯತೇರನ್ನಪುನರ್ಭವಾಯ ತೇ
ಭೂಯೋ ವನೌಕಾ ಇವ ಯಾಂತಿ ಬಂಧನಂ ॥

(೮.೫.೧೯.೨೫)

ವಿಪಕ್ಷೇ ಬಾಧಕಂ ದರ್ಶಯತಿ ॥ ಪ್ರಾಪ್ತಾ ಇತಿ ॥ ಇಹ ಭರತಖಂಡೇ ।ಯೇ ಪ್ರಾಣಿನೋ ನೃದೇಹಂ ಪ್ರಾಪ್ತಾಃ। ತತ್ರಾಪಿ ಜ್ಞಾನಸಾಧನೇನ ಪ್ರತಿಭಾವಿಶೇಷಾದಿನಾ। ಕ್ರಿಯಾಸಾಧನೇನ ದೇಹದಾರ್ಢ್ಯವಿತ್ತಾದಿನಾ। ದ್ರವ್ಯಕಲಾಪೇನ ಸಂಭೃತಾಃ ಪೂರ್ಣಾಃ। ಈದೃಶಾ ಅಪಿ ಮೋಕ್ಷಾಯ ಯದಿ ನ ಪ್ರಯತ್ನಂ ಕುರ್ಯುಃ। ತೇ ವನೌಕಾಃ ನರಕಸ್ಥಾ ಇವ। ಬಂಧನಂ ದುಃಖಮೇವ। ಭೂಯೋ ಬಾಹುಲ್ಯೇನ। ಯಾಂತಿ ಪ್ರಾಪ್ನುವಂತಿ। ಇದಮುದಿತಂ ಭವತಿ— ಜೀವಾನಾಂ ವಿಮುಕ್ತಯೇ ಸೃಷ್ಟಿರಿತಿ ತಾವದವಿವಾದಂ। ವಿಮುಕ್ತಿಶ್ಚ ಜ್ಞಾನಾದಿಸಾಧನಸಾಮಗ್ರ್ಯೇಣ। ತತ್ರ ಸೃಷ್ಟಿಸಮಯೇ ಶ್ರೀಹರಿಃ ತಾಂಸ್ತಾಂದೇಹಾನ್ ವಿರಚಯ್ಯ ತತ್ರ ತತ್ರ ಪ್ರವಿಶ್ಯ ತತ್ರ ಸಾಧನಸಂಪತ್ತಿಸಾಧಕತ್ವಂ ಅನುಪಲಭ್ಯ। ಅಂತತಃ ಪುರುಷದೇಹಂ ವಿಧಾಯ। ತತ್ರ ಪ್ರವಿಶ್ಯ। ತತ್ರ ಸಾಧನಸಂಪತ್ತಿಂ ಉಪಲಭ್ಯ। ತದಭಿಲಷಿತಂ ಮುಕ್ತಿಸ್ತತ್ಸಾಧನಂ ಜ್ಞಾನಂ ಚೇತ್ಯೇದ್ ದ್ವಯಮಪಿ ಸಿದ್ಧಮಿತಿ ಸಂತುಷ್ಟಮನಾ ಬಭೂವ। ತತಃ ಸಾಧನಸಾಮಗ್ರ್ಯವತಾ ಅನೇನ ದೇಹೇನ ಯೇ ಮುಕ್ತ್ಯರ್ಥಮೇವ ಪ್ರಯತಂತೇ ತದನುಮತಕಾರಿಣಃ ತತ್ಪ್ರಸಾದೇನ ಸಿದ್ಧಾಃ ಭವಂತ್ಯೇವ। ಯೇ ತು

**ಪುನರ್ವಿಷಯಲೌಲ್ಯಾದನ್ಯತ್ರ ಪ್ರಯತಮಾನಾ ಅತ್ರ ನ ಪ್ರಯತಂತೇ ತೇ ಪುನಸ್ತತ್ಕೋಪೇನ ರಾಜಕೋಪೇನ ರಾಜದತ್ತಸಕಲಸಂಭಾರಃ ರಾಜಕಾರ್ಯಾಕಾರೀ ರಾಜಭೃತ್ಯ ಇವ ಕ್ಲಿಶ್ಯತ್ಯೇವ ಭೂರಿಶ ಇತಿ। ಯದನ್ಯದ್ವಕ್ತವ್ಯಂ ತದಧ್ಯಾತ್ಮಪ್ರಕರಣೇ ವಕ್ಷ್ಯತೇ ॥**



**ದೇವತೆಗಳು ಮಾನವಜನ್ಮವನ್ನು ಹೊಗಳುತ್ತಾರೆ—ಜ್ಞಾನಸಾಧನವಾದ ಬುದ್ಧಿಶಕ್ತಿ, ಕರ್ಮಸಾಧನವಾದ ದೇಹದಾರ್ಢ್ಯ, ಧನಕನಕಾದಿ ದ್ರವ್ಯಗಳೆಂದು ಎಲ್ಲ ಸಾಮಗ್ರಿಯುಕ್ತವಾದ ಮನುಷ್ಯಜನ್ಮವನ್ನು ಕಷ್ಟದಿಂದ ಸಂಪಾದಿಸಿಯೂ ಕೂಡ ಮೋಕ್ಷಕ್ಕೆ ಯತ್ನ ಮಾಡದವರು 'ವನೌಕ'ರಂತೆ ನರಕಸ್ಥರಂತೆ ಅಧಿಕ ಬಂಧನದುಃಖ ಭಾಗಿಯಾಗುತ್ತಾರೆ.**

ಯದ್ಯಪಿ 'ವನೌಕ' ಎಂದರೆ ಅರಣ್ಯವಾಸಿ ಮೃಗಪಕ್ಷಿಗಳೆಂದರ್ಥ. 'ವನ್ಯತೇ ಸೇವ್ಯತೇ ಇತಿ ವನಂ' ಎಂದು ವನ ಶಬ್ದಕ್ಕೆ ವ್ಯುತ್ಪತ್ತಿ. ಸೇವಿಸಲು ಯೋಗ್ಯ, ಮೃಗಪಕ್ಷಿಗಳಿಗೆ ಸೇವಿಸಲು ಯೋಗ್ಯವಾದ್ದರಿಂದ ಅರಣ್ಯವು 'ವನ'ವೆನಿಸಿದೆ. ಆದರೂ ಪ್ರಕೃತ ಶ್ಲೋಕದಲ್ಲಿ 'ಭೂಯೋ ವನೌಕಾ ಇವ' ಎಂಬಲ್ಲಿ ಅಕಾರ ಪ್ರಶ್ಲೇಷ ಮಾಡಿದರೆ 'ಅ–ವನೌಕ' ಸೇವಿಸಲು ಅಯೋಗ್ಯವಾದ ನರಕದಲ್ಲಿರುವವನು ಎಂದು ಅರ್ಥಗ್ರಹಿಸಬಹುದು.

'ವನ' ಶಬ್ದಕ್ಕೆ ಅರಣ್ಯ ಎಂಬ ರೂಢಿಯ ಅರ್ಥವನ್ನು ಬಿಟ್ಟು 'ಸೇವಿಸಲು ಯೋಗ್ಯರಾದ ಸಜ್ಜನರು' ಎಂಬ ಯೋಗಾರ್ಥ ಗ್ರಹಿಸುವುದಾದರೆ 'ಸೇವಿಸಲು ಅಯೋಗ್ಯವಾದ ನರಕ ಎಂಬರ್ಥವನ್ನು 'ಅ–ವನ' ಶಬ್ದಕ್ಕೆ ಧಾರಾಳವಾಗಿ ಗ್ರಹಿಸಬಹುದು.

ಇಲ್ಲಿ ವನವೆಂದರೆ ಅರಣ್ಯವೆಂದೇ ಅರ್ಥಗ್ರಹಿಸುವ ಪಕ್ಷದಲ್ಲಿ 'ಕಾಡಿನಲ್ಲಿರುವ ಪಕ್ಷಿಗಳು ಬಲೆಗೆ ಬಿದ್ದು ದುಃಖಿಸುವಂತೆ' ಎಂದು ಅರ್ಥ.

ಶ್ಲೋಕಾಭಿಪ್ರಾಯ ಇದು—ಜೀವರ ಮೋಕ್ಷಸಾಧನೆಗಾಗಿ ಶ್ರೀಹರಿ ಅವರಿಗೆ ಶರೀರ ಸೃಷ್ಟಿಮಾಡಿ ಕೊಡುತ್ತಿದ್ದಾನೆ. ಶರೀರದಿಂದಲೇ ಜ್ಞಾನಾದಿ ಸಾಧನೆಯಾಗಬೇಕು. ಶ್ರೀಹರಿ ಮೊದಲಿಗೆ ಮರ ಗಿಡ ಮುಂತಾದ ಶರೀರಗಳನ್ನು ಸೃಜಿಸಿದಾಗ ಆ ಶರೀರಗಳಿಂದ ಜ್ಞಾನಸಾಧನೆಯಾಗದಿರುವುದನ್ನು ಕಂಡು ಕೊನೆಗೆ

ಮಾನವ ಶರೀರವನ್ನು ಸೃಜಿಸಿದ. 'ಮಾನವಶರೀರ ಜ್ಞಾನಸಾಧನೆಗೆ ಯೋಗ್ಯವಾಗುವುದರಿಂದ ಶ್ರೀಹರಿ ಅದನ್ನು ಸೃಜಿಸಿದಾಗ ತೃಪ್ತಿ ಹೊಂದಿದ. ಅದರಿಂದ ಜ್ಞಾನಸಾಧನೆಗೆ ಯೋಗ್ಯವಾದ ಮಾನವ ಶರೀರವನ್ನು ಪಡೆದ ಮೇಲೆ ಸುಜೀವನು ಶ್ರೀಹರಿಯ ಅಪೇಕ್ಷೆಯಂತೆ ಆ ಶರೀರದಿಂದ ಜ್ಞಾನಸಾಧನೆ ಮಾಡಿಕೊಂಡು ಅವನ ಅನುಗ್ರಹದಿಂದ ಮುಕ್ತನಾಗಬೇಕು. ಅವನೂ ಹಾಗೆ ಮಾಡದೆ ವಿಷಯಗಳಲ್ಲಿ ಆಸಕ್ತನಾದರೆ, ರಾಜನು ನೀಡಿದ ಎಲ್ಲ ಸವಲತ್ತುಗಳನ್ನು ಪಡೆದೂ ಕೂಡ ಸೇವಕನು ಆ ಸವಲತ್ತಿನಿಂದ ರಾಜನಿಗಿಷ್ಟವಾದ ಕಾರ್ಯ ಮಾಡದೆ ಹೋದರೆ ರಾಜನ ಕೋಪಕ್ಕೆ ಬಲಿಯಾಗುವಂತೆ, ಶ್ರೀಹರಿ ನೀಡಿದ ಶರೀರೇಂದ್ರಿಯ ಮನ ಆದಿ ಎಲ್ಲ ಸಾಧನ ಸಂಪತ್ತು ಸವಲತ್ತುಗಳನ್ನು ಪಡೆದೂ ಕೂಡ ಜ್ಞಾನಸಾಧನೆ ಮಾಡಿಕೊಳ್ಳದಿದ್ದರೆ ಶ್ರೀಹರಿಯ ಕೋಪಕ್ಕೆ ತುತ್ತಾಗಿ ನರಕವನ್ನೇ ಹೊಂದುವನು. 'ಭೂಯೋಽವನೌಕಾ ಇವ ಯಾಂತಿ ಬಂಧನಂ' ಎಂದು ಭಾಗವತವು ಸಾಧಕನನ್ನು ಎಚ್ಚರಿಸಿದೆ.



—೧೯೯—

**ಮಾನವಜನ್ಮದಲ್ಲೇ ಮೋಕ್ಷಸಾಧನೆ. ವಿಷಯಭೋಗ ಎಲ್ಲ ಜನ್ಮದಲ್ಲಿದೆ**

**ಲಬ್ಧ್ವಾ ಸುದುರ್ಲಭಮಿದಂ ಬಹು ಸಂಭವಾಂತೇ**
**ಮಾನುಷ್ಯಮರ್ಥದಮನಿತ್ಯಮಪೀಹ ಧೀರಃ ।**
**ತೂರ್ಣಂ ಯತೇತ ನ ಪತೇದನುಮೃತ್ಯು ಯಾವ-**
**ನ್ನಿಃಶ್ರೇಯಸಾಯ ವಿಷಯಃ ಖಲು ಸರ್ವತಃ ಸ್ಯಾತ್ ॥**

(ಭಾ.೧೧.೯.೨೯)

**ಪ್ರಕರಣಾರ್ಥಮುಪಸಂಹರತಿ ॥ ಲಬ್ಧ್ವೇತಿ ॥** ಬಹುಸಂಭವಾಂತೇ ಬಹುಜನ್ಮಾವಸಾನೇ । ಪೃಷ್ಠತೋಽನುಗತಮೃತ್ಯುತ್ವೇನ ಅನಿತ್ಯಮಪಿ ಪುರುಷಾರ್ಥಪ್ರದಂ । ಮಾನುಷ್ಯಂ ಮಾನುಷಂ ದೇಹಂ ಲಬ್ಧ್ವಾ । ಅನು ಅನಂತರಮೇವ । ಕೌಮಾರಾವಸ್ಥಾಯಾಮೇವ ಇತಿ ಯಾವತ್ । ತತ್ರಾಪಿ ಶ್ವಃ ಪರಶ್ವಃ ಇತಿ ನ ಕರ್ತವ್ಯಮಿತ್ಯಾಹ ॥ **ತೂರ್ಣಮಿತಿ** ॥ ಕುತ ಏವಂ ಶೈಘ್ರ್ಯಮಿತ್ಯತ ಉಕ್ತಂ । **ಯಾವನ್ನ ಪತೇದಿತಿ** ॥ ಮರಣಮವಧಿಂ ಕೃತ್ವೈವ ನಿಃಶ್ರೇಯಸಾಯ

**ಮೋಕ್ಷಾಯ ಯತೇತೇತಿ।ಮರಣಂ ಚ ನಾಸ್ಮಿನ್ಕಾಲೇ ಭವತೀತಿ ನಿಯತಮಿತಿ ಭಾವಃ। ಕೌಮಾರಮಾರಭ್ಯೈವ ಮೋಕ್ಷಾಯ ಪ್ರಯತನೇ ದೇಹಪೋಷಣಸಾಧನವಿಷಯಃ ಕಥಂ ಸಿಧ್ಯೇದಿತ್ಯತ ಉಕ್ತಂ ವಿಷಯ ಇತಿ॥ ವಿಷಯಃ ಸರ್ವತಃ ಸರ್ವಸ್ಮಾತ್ಪಶ್ವಾದಿದೇಹಾದಪಿ ಸ್ಯಾತ್। ಖಲು। ದೇಹಾದಿ ಪೋಷಣಲಕ್ಷಣಂ ಕಾರ್ಯಂ ಪಶ್ವಾದಿದೇಹಸಾಧಾರಣಂ। ನೈತಚ್ಛರೀರ ಪ್ರಯೋಜನಮಿತಿ ತತ್ರ ಪ್ರಯತ್ನಃ ಕಾರ್ಯಃ। ದುಃಖವದಪ್ರಯತ್ನೇನೈವ ಲಭ್ಯತ್ವಾತ್ ವೈಷಯಿಕಸುಖಸ್ಯೇತಿ ಭಾವಃ। ಯಥಾಹುಃ—**

**''ಸರ್ವೇಷಾಮೇವ ಜಂತೂನಾಂ ಸತತಂ ದೇಹಪೋಷಣೇ।**
**ಅಸ್ತಿ ಪ್ರಜ್ಞಾ ಸಮಾಯತ್ತಾ ಕೋ ವಿಶೇಷಸ್ತಯಾ ನೃಣಾಂ॥**

**ಕೌಮಾರ ಆಚರೇತ್ಪ್ರಾಜ್ಞೋ ಧರ್ಮಾನ್ಭಾಗವತಾನಿಹ।**
**ದುರ್ಲಭಂ ಮಾನುಷಂ ಜನ್ಮ ತದಪ್ಯಧ್ರುವ ಮರ್ಥದಂ॥**

**ಸುಖಮೈಂದ್ರಿಯಕಂ ದೈತ್ಯಾ ದೇಹಯೋಗೇನ ದೇಹಿನಾಂ।**
**ಸರ್ವತ್ರ ಲಭ್ಯತೇ ದೈವಾದ್ಯಥಾ ದುಃಖಮಯತ್ನತಃ॥**

**ತತ್ಪ್ರಯಾಸೋ ನ ಕರ್ತವ್ಯೋ ಯತ ಆಯುರ್ವ್ಯಯಃ ಪರಂ।**
**ಹಂತಾರ್ಭಕಾ ಮೇ ಶೃಣುತ ವಚೋ ವಃ ಸರ್ವತಃ ಶಿವಂ।**
**ವಯಸ್ಯಾನ್ಪಶ್ಯತ ಮೃತಾನ್ ಕ್ರೀಡಾಂಧಾ ಮಾ ಪ್ರಮಾದ್ಯಥ'' ಇತಿ॥**



**ಶ್ರೀಕೃಷ್ಣನು ಉದ್ಧವನಿಗೆ ಹೇಳುತ್ತಾನೆ—**

**ಬಹುಜನ್ಮಗಳು ಕಳೆದ ಬಳಿಕ ಬಲು ದುರ್ಲಭವಾದ ಈ ಮಾನವಜನ್ಮ ಪಡೆದು, ಅದು ಪುರುಷಾರ್ಥ ಸಾಧನವಾಗಿದ್ದರೂ ಅಶಾಶ್ವತವಾದ್ದರಿಂದ ಯಾವ ಕ್ಷಣದಲ್ಲಾದರೂ ಮೃತ್ಯುವಶವಾಗಬಹುದಾದ್ದರಿಂದ ಅದು ಬಿದ್ದು ಹೋಗುವುದರೊಳಗೇ ವಿವೇಕಿಯಾದ ಮಾನವನು ಬೇಗನೆ ಈ ದೇಹದಲ್ಲಿಯೇ ಮೋಕ್ಷಕ್ಕಾಗಿ ಯತ್ನಿಸಬೇಕು. ವಿಷಯಭೋಗವನ್ನು ಅರಸಬಾರದು. ಅದು ಎಲ್ಲ ಪ್ರಾಣಿಜನ್ಮದಲ್ಲಿಯೂ ಅಯತ್ನವಾಗಿ ಲಭಿಸುತ್ತದೆ.**

ಅದಕ್ಕೆ ಅಮೂಲ್ಯವಾದ ಈ ಮಾನವ ಶರೀರವನ್ನು ದುರುಪಯೋಗ ಪಡಿಸಿಕೊಳ್ಳಬಾರದು. ಇದನ್ನು ಭಾಗವತವು ಬೇರೆ ಕಡೆಯೂ ಹೇಳಿದೆ—

ಸರ್ವೇಷಾಮೇವ ಜಂತೂನಾಂ ಸತತಂ ದೇಹಪೋಷಣೇ ।
ಅಸ್ತಿ ಪ್ರಜ್ಞಾ ಸಮಾಯತ್ತಾ ಕೋ ವಿಶೇಷಸ್ತಯಾ ನೃಣಾಂ ॥

ಎಲ್ಲ ಜಂತುಗಳಿಗೂ ಕೂಡ ತಮ್ಮ ಶರೀರವನ್ನು ತಾವು ಪೋಷಿಸಿ ಕೊಳ್ಳಬೇಕೆಂಬ ಪ್ರಜ್ಞೆ ಇರುತ್ತದೆ. ಮಾನವರಿಗೂ ಇದೇ ಪ್ರಜ್ಞೆ ಎನ್ನುವುದಾದರೆ ಅವನಲ್ಲಿ ಏನು ವಿಶೇಷವನ್ನು ಹೇಳಿದಂತಾಯಿತು?

ಕೌಮಾರ ಆಚರೇತ್ ಪ್ರಾಜ್ಞೋ ಧರ್ಮಾನ್ ಭಾಗವತಾನಿಹ ।
ದುರ್ಲಭಂ ಮಾನುಷಂ ಜನ್ಮ ತದಪ್ಯಧ್ರುವಮರ್ಥದಂ ॥

ವಿವೇಕಿಯಾದವನು ಈ ಮಾನವಜನ್ಮದಲ್ಲಿ ಎಳೆವಯಸಿನಲ್ಲಿಯೇ ಭಗವತ್ ಪ್ರೀತಿಕರವಾದ ಧರ್ಮಾಚರಣೆಯನ್ನು ಪ್ರಾರಂಭಿಸಬೇಕು. ಏಕೆಂದರೆ ಮಾನವ ಜನ್ಮವೇ ಪುರುಷಾರ್ಥ ಸಾಧನ. ಆದರೆ ಅದು ಸ್ಥಿರವಲ್ಲ. ಅದರಿಂದ ಇಳಿವಯಸ್ಸಿನಲ್ಲಿ ಧರ್ಮಾಚರಣೆ ಮಾಡಿದರಾಯಿತು ಎನ್ನುವಂತಿಲ್ಲ. ಮಾನವ ಜನ್ಮ ದುರ್ಲಭವಾದ್ದರಿಂದ ಮುಂದಿನ ಮಾನವಜನ್ಮದಲ್ಲಿ ಧರ್ಮಾಚರಣೆ ಮಾಡಿದರಾಯಿತು ಎಂದೂ ಹೇಳುವಂತಿಲ್ಲ. (ಭಾ.೭.೬.೬)

ಸುಖಮೈಂದ್ರಿಯಕಂ ದೈತ್ಯಾ ದೇಹಯೋಗೇನ ದೇಹಿನಾಂ ।
ಸರ್ವತ್ರ ಲಭ್ಯತೇ ದೈವಾದ್ ಯಥಾ ದುಃಖಮಯತ್ನತಃ ॥

ಹಾಗಾದರೆ ವಿಷಯ ಸುಖಸಾಧನೆ ಯಾವಾಗ? ಎಂದರೆ ದೈತ್ಯರೆ, ದೇಹಿಗಳಿಗೆ ಯಾವುದಾದರೊಂದು ದೇಹ ಬರುತ್ತಲೆ ಇರುತ್ತದೆ. ದೇಹದಲ್ಲಿ ಅದೃಷ್ಟವಶದಿಂದ ದುಃಖದಂತೆ ಇಂದ್ರಿಯಜನ್ಯವಾದ ಸುಖವು ಬಂದೇ ತೀರುತ್ತದೆ. ಅದಕ್ಕೆ ಸಾಧನೆ ಮಾಡಬೇಕಾಗಿಲ್ಲ. (ಭಾ.೭.೬.೮)

ತತ್ಪ್ರಯಾಸೋ ನ ಕರ್ತವ್ಯೋ ಯತ ಆಯುರ್ವ್ಯಯಃ ಪರಂ ।
ನ ತಥಾ ವಿಂದತೇ ಕ್ಷೇಮಂ ಮುಕುಂದ ಚರಣಾಂಬುಜಂ ॥

(ಭಾ.೭.೬.೯)

ಇಂದ್ರಿಯಜನ್ಯವಾದ ಸುಖಕ್ಕೇ ಪ್ರಯತ್ನ ಮಾಡುತ್ತಿದ್ದರೆ ಅದು ಆಯುಷ್ಯದ ಅಪವ್ಯಯವೆ ಸರಿ. ಕ್ಷೇಮಕರವಾದ ಮುಕುಂದನ ಚರಣಕಮಲ ಸೇವೆಯ ಸುಖ ಪ್ರಯತ್ನ ಮಾಡದೆ ಸಿಗಲಾರದು.

ಹಂತಾರ್ಭಕಾ ಮೇ ಶೃಣುತ ವಚೋ ವಃ ಸರ್ವತಃ ಶಿವಂ ।
ವಯಸ್ಯಾನ್ ಪಶ್ಯತ ಮೃತಾನ್ ಕ್ರೀಡಾಂಧಾ ಮಾ ಪ್ರಮಾದ್ಯಥ ॥
(ಭಾ.೭.೬.೧)

ಬಾಲಕರೆ, ನನ್ನ ಮಾತನ್ನು ಕೇಳಿ, ಇಹಪರಗಳೆರಡಲ್ಲಿಯೂ ಅದು ಸುಖಕರವಾಗುತ್ತದೆ. ಕ್ರೀಡಾಸಕ್ತಿಯಿಂದ ಕುರುಡರಾಗಿ ಆಯುಷ್ಯವನ್ನು ವ್ಯರ್ಥಮಾಡಿಕೊಳ್ಳಬೇಡಿ. ಆಯುಷ್ಯ ಸ್ಥಿರವಲ್ಲ. ನಮ್ಮ ಗೆಳೆಯರು ಅನೇಕರು ಸತ್ತಿರುವುದನ್ನು ಆಲೋಚಿಸಿರಿ.



# (೧೭) ಧ್ಯಾನ ಪ್ರಕರಣ

## ಪ್ರಕರಣ ಸಾರಾಂಶ

ಬಿಂಬರೂಪಧ್ಯಾನದಿಂದಲೇ ಮುಕ್ತಿ. ಆದರೆ ಬಿಂಬರೂಪ ಬಲು ಸೂಕ್ಷ್ಮ. ಅದಕ್ಕೆ ಸ್ಥೂಲರೂಪಧ್ಯಾನವನ್ನು ಮೊದಲಿಗೆ ಅಭ್ಯಾಸ ಮಾಡಬೇಕು, ಸ್ಥೂಲವೆಂದರೆ ಕಣ್ಣಿಗೆ ಕಾಣುವಂಥ ಬ್ರಹ್ಮಾಂಡದಿಂದ ತೊಡಗಿ ಪುರುಷಬಾಲ್ಯ ಶರೀರಪರ್ಯಂತ ಎಲ್ಲವೂ ಸ್ಥೂಲವೆ. ಅಂಥ ಸ್ಥೂಲವಾದ ಪ್ರತಿಮೆಗಳಲ್ಲಿ ಧ್ಯಾನಾಭ್ಯಾಸ ಮಾಡಬೇಕು. ಮನಸಿನಲ್ಲಿರುವ ಈ ಸ್ಥೂಲಪ್ರತೀಕದರ್ಶನದ ಸಂಸ್ಕಾರದಿಂದ ಮನಸಿನಲ್ಲಿಯೇ ಸೂಕ್ಷ್ಮ ವಾದ ಅಂದರೆ ವಾಸನಾಮಯವಾದ ಪ್ರತೀಕವನ್ನು ನಿರ್ಮಾಣ ಮಾಡಿಕೊಂಡು ಅದನ್ನು ತಾನೇ ಮನಸಿನಿಂದ ನೋಡಬೇಕು, ಮಾನಸ ವಾಸನಾ ನಿರ್ಮಿತವಾದ ಸ್ವಾಪ್ನಪದಾರ್ಥಗಳನ್ನು ಸ್ವಪ್ನದಲ್ಲಿ ಮನಸಿನಿಂದಲೇ ಕಾಣುವಂತೆ. ಈ ಸೂಕ್ಷ್ಮಪ್ರತೀಕದಲ್ಲಿ ಸೂಕ್ಷ್ಮಾತಿಸೂಕ್ಷ್ಮನಾದ ಬಿಂಬನನ್ನು ಧ್ಯಾನಿಸಿದರೆ ಅವನ ಅನುಗ್ರಹದಿಂದ ಅವನು ಮನಸಿಗೆ ಅಂದರೆ ಅಂತಶ್ಚಕ್ಷುವಿಗೆ ಗೋಚರನಾಗುತ್ತಾನೆ, ಇದು ಅಪರೋಕ್ಷಜ್ಞಾನ, ಧ್ಯಾನದ ಫಲ. ಧ್ಯಾನವೇ 'ಸ್ಮರಣ' ಎಂಬ ಭಾಗವತಧರ್ಮ.



## –೨೦೦–

**ಸ್ಮರಣವೆಂಬ ಭಾಗವತಧರ್ಮವೆ ಧ್ಯಾನ.**
**ಅದಿಲ್ಲದೆ ಬಿಂಬನ ಜ್ಞಾನವಿಲ್ಲ**

**ಭೂದ್ವೀಪವರ್ಷಸರಿದದ್ರಿನಭಃಸಮುದ್ರ-**
**ಪಾತಾಲದಿಙ್‌ನರಕ ಭಾಗಣಲೋಕಸಂಸ್ಥಂ ।**
**ಗೀತಂ ಮಯಾ ತವ ನೃಪಾದ್ಭುತಮೀಶ್ವರಸ್ಯ**
**ಸ್ಥೂಲಂ ವಪುಃ ಸಕಲ ಜೀವ ನಿಕಾಯಧಾಮ್ನಃ ॥**

(ಭಾ.೫.೨೬.೪೪)

ಶ್ರೀರಮಾರಮಣಾಯ ನಮಃ ॥ ಯದುಪಯೋಗಿತಯಾ ಪ್ರವೃತ್ತಂ ಕರ್ಮ ತ್ಯಾಜ್ಯಮಿತ್ಯುದಿತಂ, ನಿವೃತ್ತಂ ಕರ್ಮ ಕರ್ತವ್ಯಮಿತ್ಯಭಿಹಿತಂ, ದೇಶಃ ಕಾಲೋ ದೇಹಶ್ಚ ಪ್ರಶಸ್ತ ಇತಿ ಪ್ರತಿಪಾದಿತಂ, ತದಿದಾನೀಂ ಶ್ರೀಹರೇರುಪಾಸನಂ ಸಮವಹಿತೈಃ ಸದೈವ ಸಂಪಾದ್ಯಮಿತಿ ವಕ್ತುಮಿದಂ ಪ್ರಕರಣಂ। ತತ್ರಾಣಿಷ್ಠರೂಪೋಪಾಸನಯೈವ ಮುಕ್ತಿರಿತಿ ತಾವನ್ನಿಷ್ಕರ್ಷಃ। ವಿನಾ ಬಿಂಬೋಪಾಸಾಂ ಸಾಧನಸಹಸ್ರೇಣಾಪಿ ಮುಕ್ತೇರಯೋಗಾತ್। ಬಿಂಬಸ್ಯ ಚಾಣಿಷ್ಠತ್ವೇ ಸಂದೇಹಾಭಾವಾತ್। ಉಪಾಸನಂ ಚ ಮನೋವೃತ್ತೇಸ್ತತ್ರಾವ-ಧಾನಮೇವ। ನಚ ಪ್ರಥಮಮೇವಾಣಿಷ್ಠೇ ಮನೋಽವಧಾತುಂ ಶಕ್ಯಂ। ಮಾನಸವಾಸನಾನಿರ್ಮಿತಪ್ರತಿಮಾಯಾಂ ಹಿ ಮನೋ ನಿವೇಶ್ಯಂ। ವಾಸನಾ ಚ ಶ್ರವಣದರ್ಶನಾದಿಜನ್ಯಾ। ಅತಸ್ತತ್ಸಂಸ್ಕಾರಸಮರ್ಪಕತಯಾ ಸ್ಥೂಲ ಪ್ರತಿಮಾಪೇಕ್ಷಾ ಭವತ್ಯೇವ। ಸ್ಥೂಲೇ ನಿವೇಶಿತಂ ಮನಃ ಸೂಕ್ಷ್ಮೇ ನಿವೇಶಯಿತುಂ ಶಕ್ಯಂ। ತತ್ರಾಪಿ ಸ್ಥವಿಷ್ಠಂ ''ಪಾತಾಲಮೇತಸ್ಯ ಹಿ ಪಾದಮೂಲಮಿ'' ತ್ಯಾದಿನಾ ಪ್ರತಿಪಾದಿತಂ ರೂಪಮಾರಭ್ಯ ಪುರುಷಬಾಲ್ಯದೇಹಪರಿಮಿತ ಪ್ರತಿಮಾ-ಪರ್ಯಂತಂ ಸ್ಥೂಲಮಿತ್ಯುಚ್ಯತೇ। ತೇಷು ಚ ಸ್ಥೂಲೇಷು ರೂಪೇಷು ಯತ್ರ ಯತ್ರ ಮನೋ ನಿಮ್ನಭೂಮಿಮಾಪ ಇವ ಪ್ರವಿಶತಿ ತತ್ರ ತತ್ರ ನಿವೇಶ್ಯ ಪಾದಾದಿಮುಖಪರ್ಯಂತಂ ವಾಸನಾಃ ದೃಢೀಕುರ್ಯಾತ್। ತತಃ ಪ್ರಾದೇಶ-ಪರಿಮಿತಂ, ''ಕೇಚಿತ್ಸ್ವದೇಹಾಂತರಿ'' ತ್ಯಾದಿನಾ ಪ್ರತಿಪಾದಿತಂ ರೂಪಮಾರಭ್ಯ ಅಣಿಷ್ಠರೂಪಪರ್ಯಂತಂ ಸೂಕ್ಷ್ಮಮಿತ್ಯಭಿಧೀಯತೇ। ತದೇವಂ ಸ್ಥೂಲಶ್ರವಣ-ದರ್ಶನಾದ್ಯಭ್ಯಾಸ ಸಮಾಸಾದಿತೇನ ವಾಸನಾಪರಪರ್ಯಾಯಸಂಸ್ಕಾರ-ಪಾಟವೇನ ಸೂಕ್ಷ್ಮಪ್ರತಿಮಾಕಲ್ಪನಾಸಾಮರ್ಥ್ಯೇ ಸತಿ ಸ್ಥೂಲೇ ನಿರ್ಜಿತಂ ಮನಃ ಸೂಕ್ಷ್ಮ ಏವ ರೂಪೇ ನಿವೇಶನೀಯಂ। ತತಸ್ತದುಪಯೋಗಿತಯಾ ಸ್ಥೂಲರೂಪ-ಮುಪಾಸನಾವಿಷಯಮಾದೌ ದರ್ಶಯತಿ ॥ ಭೂರ್ದ್ವೀಪೇತಿ ॥

ಹೇ ನೃಪ, ತವ ಸಕಲಜೀವಸಮೂಹಾಶ್ರಯಸ್ಯ ಹರೇಃ। ಅದ್ಭುತಂ ಸ್ಥೂಲಂ ವಪುಃ। ಮಯಾ ಗೀತಂ ಪ್ರತಿಪಾದಿತಂ। ಕೀದೃಶಂ ವಪುಃ। ಭೂರ್ಭೂಮಿಃ ಪ್ರಸಿದ್ಧಾ। ದ್ವೀಪಾಸ್ತತ್ರ ವಿದ್ಯಮಾನಾಃ ಜಂಬೂಪ್ಲಕ್ಷ-ಶಾಲ್ಮಲೀಕುಶಕ್ರೌಂಚಶಾಕಪುಷ್ಕರಸಂಜ್ಞಾಃ ಸಪ್ತ। ವರ್ಷಾಃ ಭಾರತ ಕಿಂಪುರುಷ ಕುರು ಹಿರಣ್ಮಯ ರಮ್ಯಕ ಕೇತುಮಾಲ ಹರಿವರ್ಷ ಭದ್ರಾಶ್ವೇಲಾವೃತ ಸಂಜ್ಞಾಃ ಖಂಡಾಪರನಾಮಾನೋ ನವ। ತತ್ರ ಪೂರ್ವಮಾಂಜನಾಭಂ ನಾಮ ವರ್ಷಂ ಭರತೇನ ಪ್ರತಿಪಾಲಿತಮಿತಿ ಭಾರತಮಿತಿ ವ್ಯಪದಿಶಂತಿ। ಸರಿತಃ

ಭಾಗೀರಥ್ಯಾದಯಃ। ಅದ್ರಯಃ ಮೇರ್ವಾದಯಃ। ಸಮುದ್ರಾಃ ಲವಣೋದ-ಸುರಸೋದ-ಸುರೋದ-ಘೃತೋದ- ಕ್ಷೀರೋದ- ದಧಿ ಮಂಡೋದ-ಶುದ್ಧೋದನಾಮಾನಃ ಸಪ್ತ। ತತ್ರ ಸುರಸೋದಮೇವೇಕ್ಷುರಸ-ಸಮುದ್ರಮನ್ಯೇ ಮನ್ಯಂತೇ। ಭಾಗಣಃ ಜ್ಯೋತಿರ್ಗಣಃ। ಲೋಕಾಃ ಉಕ್ತೇಭ್ಯೋಽನ್ಯ ಏಕಾದಶ। ತ ಏವ ಸಂಸ್ಥಾ ಅವಯವಾ ಯಸ್ಯ ತಾದೃಶಮಿತಿ। **ಯಥಾಹುಃ**—

''ಉದ್ಗೀಯತೇ ಯತ್ತದ್ಭಗವತೋ ನಾರಾಯಣಸ್ಯ ಸಾಕ್ಷಾನ್ಮಹಾಪುರುಷಸ್ಯ ಸ್ಥವಿಷ್ಟ ರೂಪಮಾತ್ಮಮಾಯಯಾ ಗುಣಮಯಮನುವರ್ಣಿತಮಾದೃತಃ ಪಠತಿ ಶೃಣೋತಿ ಶ್ರಾವಯತಿ ಸ ಏವಾಯಂ ಭಗವತಃ ಪರಮಾತ್ಮನೋ ಹ್ಯಣಿಷ್ಠಮತಿಶ್ರದ್ದಧಾನೋ ಭಕ್ತಿವಿಶುದ್ಧಬುದ್ಧಿ ರ್ವೇದ ॥

''ಶ್ರುತ್ವಾ ಸ್ಥೂಲಂ ತಥಾ ಸೂಕ್ಷ್ಮಂ ರೂಪಂ ಭಗವತೋ ಯತಿಃ।
ಸ್ಥೂಲೇ ನಿರ್ಜಿತಮಾತ್ಮಾನಂ ಶನೈಃ ಸೂಕ್ಷ್ಮೇ ಧಿಯಾ ನಯೇದಿತಿ ಕ್ರಮ''

**ಇತೀತಿ** ॥

ನನ್ವಣಿಷ್ಠಬಿಂಬಜ್ಞಾನಾದೇವ ಮುಕ್ತಿಸಿದ್ಧೇಃ ಕಿಂ ಸ್ಥವಿಷ್ಠರೂಪಕಥನೇನೇತ್ಯತ ಆಹ। **ಉದ್ಗೀಯತ ಇತಿ** ॥ ಸ್ಥವಿಷ್ಠಂ ಸ್ಥೂಲತಮಂ। ಅಣಿಷ್ಠಂ ಸೂಕ್ಷ್ಮತಮಂ। ಸ ಏವ ವೇದೇತ್ಯನೇನ ತಸ್ಯ ತದ್ವೇದನೋಪಯೋಗಿತಾಲಾಭೇನ ತದುಪಯೋಗಿತಯಾಽಸ್ಯ ಕಥನಂ ಯುಜ್ಯತ ಇತಿ ಭಾವಃ। ನನ್ವಣಿಷ್ಠಾದ್ ಬಿಭ್ಯತಃ ಸ್ಥವಿಷ್ಠಕಥನಂ ವೃಶ್ಚಿಕಭಿಯಾ ಪಲಾಯಮಾನಸ್ಯಾಶೀವಿಷಮುಖೇ ನಿಪಾತ ಇತ್ಯಾಭಾಣಕಮನುಸರತೀತ್ಯತ ಉಕ್ತಂ ವಿವೃಣೋತಿ ॥ **ಶ್ರುತ್ವೇತ್ಯಾದಿನಾ** ॥ ಅನೇನ ಸ್ಥವಿಷ್ಠಪದಂ ಸ್ಥೂಲೋಪಲಕ್ಷಕಂ। ಅಣಿಷ್ಠಪದಂ ತು ಸೂಕ್ಷ್ಮೋಪಲಕ್ಷಕಮಿತಿ ವಿವೃತಂ ಭವತಿ। ನನು ಯದಿ ಸ್ಥೂಲಮಾಶ್ರಿತಂ ತದಾಪಿ ಸೂಕ್ಷ್ಮಮನುಸರಣೀಯಮೇವ। ತತೋ ವರಂ ಪ್ರಥಮತ ಏವ ಸೂಕ್ಷ್ಮಶರಣಮಿತಿ ಚೇತ್। ಸತ್ಯಂ। ಜನ್ಮಾಂತರಾನುಸೃತಸ್ಥೂಲಾನಾಂ ವಿಶದಭಕ್ತಿವಿಶುದ್ಧಮನಸಾಮೇವಮಿತಿ। ಯೇ ತು ನ ತಾದೃಶಾಃ ತೇಷಾಮಯಂ ಕ್ರಮ ಇತ್ಯಾಶಯೇನ ಶ್ರುತ್ವೇತಿ ''ಕ್ತ್ವಾ' ಪ್ರತ್ಯಯೇನೋಕ್ತಮುಪಯೋಗಂ ವ್ಯನಕ್ತಿ ॥ **ಸ್ಥೂಲೇ ನಿರ್ಜಿತಮಿತಿ** ॥ ಬುದ್ಧಿಶಬ್ದಸ್ಯ ವಿವಕ್ಷಿತಮಾಹ ॥ **ಆತ್ಮಾನಮಿತಿ** ॥ ಮನ ಇತ್ಯರ್ಥಃ। ಸ್ಥೂಲೋಪಾಸನಾಭಿವ್ಯಕ್ತಭಕ್ತಿವಿಶೇಷ-ವಿಶುದ್ಧಂ। ಆತ್ಮಾನಂ ಮನಃ। ಸೂಕ್ಷ್ಮೇ ರೂಪೇ। ನಯೇತ್ ಗಮಯೇತ್। ತತ್ರ ಸಹಾಯಮಾಹ ॥ **ಧಿಯೇತಿ** ॥ ಅತ ಏವ ಪ್ರಾಕ್ ಯಃ ಸ್ಥವಿಷ್ಠಂ ಪಠತಿ ಸ ಏವ

**ಭಕ್ತಿವಿಶುದ್ಧಬುದ್ಧಿಃ ಸನ್ ಅಣಿಷ್ಠಂ ವೇದೇತ್ಯಭಿಹಿತಮಿತಿ ಮಂತವ್ಯಂ। ತತ್ರಾಪ್ಯಾದೌ ಏಕಮೇವಾವಯವಂ ತತೋ ದ್ವಯಮಿತಿ ಕ್ರಮೇಣೈವ ವಿಶಿಷ್ಟಂ ರೂಪಮಿತ್ಯಪಿ ವಿಶೇಷೋಽಸ್ತೀತ್ಯಾಶಯೇನೋಕ್ತಂ ಶನೈರಿತಿ। ಯತ ಏವಂ ಮನೋ ನೇತುಂ ಶಕ್ಯಂ ಭಗವತಿ ತತಸ್ತಾದೃಗಧಿಕಾರಿಣಃ ಪ್ರತಿ ಅಯಂ ಕ್ರಮಃ ಇತ್ಯಭಿಪ್ರೇತ್ಯಾಹ। ಇತಿ ಹೇತೋಃ ಕ್ರಮ ಇತಿ ॥**



**ಶುಕಮುನಿ ಪರೀಕ್ಷಿತನಿಗೆ ಹೇಳುತ್ತಾರೆ—ಭೂಮಿ ದ್ವೀಪ ಖಂಡ ನದಿ ಪರ್ವತ ಆಕಾಶ ಸಮುದ್ರ ಪಾತಾಳ ದಿಕ್ ನರಕ ಜ್ಯೋತಿರ್ಮಂಡಲಗಳು ಅಂತರಿಕ್ಷಾದಿ ಲೋಕಗಳು ಇವೆಲ್ಲವೂ ಒಂದು ಬ್ರಹ್ಮಾಂಡದ ಬೇರೆ ಬೇರೆ ಭಾಗಗಳು—ಇಂಥ ಅದ್ಭುತವಾದ ಬ್ರಹ್ಮಾಂಡವು ಪರಮಾತ್ಮನ ಅತಿಮಹತ್ತಾದ ಪ್ರತಿಮೆ.**

ಪ್ರವೃತ್ತಕರ್ಮವನ್ನು ಬಿಡಬೇಕು. ನಿವೃತ್ತಕರ್ಮ ಮಾಡಬೇಕು.ಒಳ್ಳೆಯ ದೇಶ ಕಾಲ ದೇಹಗಳು ಮುಮುಕ್ಷುವಿಗೆ ಒದಗಿ ಬಂದಿರುವಾಗ ಧ್ಯಾನಾದಿ ಉಪಾಸನೆಯನ್ನು ಅವಶ್ಯ ಮಾಡಬೇಕು. ಶ್ರೀಹರಿಯ ಬಿಂಬರೂಪವು ಬಲುಸೂಕ್ಷ್ಮ. ಬಾಹ್ಯಶರೀರದ ಹೃದಯದಲ್ಲಿ ಬಾಹ್ಯಶರೀರದ ಚೋಟಿನಷ್ಟು, ಸ್ವರೂಪಶರೀರದ ಹೃದಯದಲ್ಲಿ ಸ್ವರೂಪ ಶರೀರದ ಚೋಟಿನಷ್ಟು ಗಾತ್ರದ್ದು ಬಿಂಬರೂಪ. ಈ ಬಿಂಬರೂಪದ ಉಪಾಸನೆ ಇಲ್ಲದೆ ಮುಕ್ತಿ ಇಲ್ಲ. ಮಾನವ ತನ್ನ ಮನೋ ವಾಸನಾನಿರ್ಮಿತ ಸೂಕ್ಷ್ಮಪ್ರತೀಕದಲ್ಲಿ ಬಿಂಬೋಪಾಸನೆ ಮಾಡಬೇಕು. ಅಂದರೆ ಮಾನಸವಾಸನಾ ನಿರ್ಮಿತವಾದ ಸ್ವಾಪ್ನಪದಾರ್ಥಗಳನ್ನು ಸ್ವಪ್ನದಲ್ಲಿ ಮನಸಿನಿಂದಲೆ ಕಾಣುವಂತೆ, ಸೂಕ್ಷ್ಮವಾಸನಾಮಯವಾದ ಪ್ರತೀಕವನ್ನು ಮನಸಿನಿಂದಲೇ ಒಂದೇ ಸಮನೆ ನೋಡಬೇಕು. ಆ ಪ್ರತೀಕದಲ್ಲಿ ಭಗವಂತನ ರೂಪವನ್ನು ಚಿಂತನ ಮಾಡಬೇಕು. ಈ ಸೂಕ್ಷ್ಮ ಮಾನಸಪ್ರತೀಕವನ್ನು ಉಪಾಸಕನು ತಾನೇ ಸ್ಥೂಲಪ್ರತೀಕದರ್ಶನದಿಂದ ಸಂಪಾದಿತವಾದ ವಾಸನಾಗಳಿಂದ ನಿರ್ಮಾಣ ಮಾಡಿಕೊಳ್ಳಬೇಕಾಗಿ ಇರುವುದರಿಂದ ಮೊದಲಿಗೆ ಬಾಹ್ಯ ಸ್ಥೂಲಪ್ರತೀಕಗಳಲ್ಲಿ ಹರಿಯನ್ನು ಉಪಾಸನೆ ಮಾಡಬೇಕಾಗುತ್ತದೆ. ಹದಿನಾಲ್ಕುಲೋಕಗಳಿಂದ ಯುಕ್ತವಾದ ಇಡಿ ಬ್ರಹ್ಮಾಂಡ ಅತ್ಯಂತ ಸ್ಥೂಲವಾದ ಪ್ರತೀಕ. ಅದರಲ್ಲಿ

'ಪಾತಾಳ ಮೇತಸ್ಯ ಹಿ ಪಾದಮೂಲಂ
ಪಠಂತಿ ಪಾರ್ಷ್ಣಿಪ್ರಪದೇ ರಸಾತಳಂ'

ಎಂದು ಮುಂತಾಗಿ ದ್ವಿತೀಯಸ್ಕಂಧದಲ್ಲಿ ಹೇಳಿದಂತೆ ಪಾತಾಳಾದಿ ಹದಿನಾಲ್ಕು ಲೋಕಗಳಲ್ಲಿ ಒಂದೊಂದು ಲೋಕದಲ್ಲಿ ಒಂದೊಂದು ಅವಯವದಂತೆ ಸರ್ವಾಂಗಸುಂದರವಾದ ಭವ್ಯವಿರಾಡ್ರೂಪವು ಅಂತರ್ಗತವಾಗಿದೆ. ಈ ವಿರಾಡ್ರೂಪದ ಧ್ಯಾನೋಪಾಸನೆಯಿಂದ ಬ್ರಹ್ಮದೇವರಿಗೆ ಬ್ರಹ್ಮಾಂಡದೊಳಗೆ ಹದಿನಾಲ್ಕು ಲೋಕಗಳನ್ನು ಸೃಷ್ಟಿಮಾಡಲು ಸ್ಫೂರ್ತಿ ದೊರಕಿತು. ಅತ್ಯಂತ ಸ್ಥೂಲವಾಗಿ ಚೆನ್ನಾಗಿ 'ವಿರಾಜಮಾನ'ವಾಗಿರುವುದರಿಂದ 'ವಿರಾಟ್' ಎನಿಸಿದ ಬ್ರಹ್ಮಾಂಡವು ಅದರೊಳಗೆ ಅಷ್ಟೇ ಪ್ರಮಾಣದಿಂದ ನೆಲೆಸಿರುವ ಶ್ರೀಹರಿಯ ಬೃಹದಾಕಾರರೂಪವಾದ ರೂಪವು ವಿರಾಡ್ರೂಪವೆನಿಸಿದೆ.

ಈ ಬೃಹದ್ ರೂಪದಿಂದ ತೊಡಗಿ ಪುರುಷ ಬಾಲ್ಯ ಶರೀರದವರೆಗಿನ ಸ್ಥೂಲರೂಪದ ಶ್ರವಣ ಧ್ಯಾನ ದರ್ಶನಗಳಿಂದ, ಮನಸಿನಲ್ಲಿ ಹುಟ್ಟುವ ಸೂಕ್ಷ್ಮವಾದ ಮನಸಿನ ಸಂಸ್ಕಾರಗಳಿಂದ, ಉಪಾಸಕನು ತಾನು ನಿರ್ಮಿಸುವ ಅತಿಸೂಕ್ಷ್ಮವಾದ ಪ್ರತೀಕದಲ್ಲಿ ಬಿಂಬನ ಧ್ಯಾನ ಮಾಡಬೇಕಾಗು ತ್ತದೆ.

ಹೀಗಾಗಿ ಮೊದಲೇ ಸೂಕ್ಷ್ಮಬಿಂಬರೂಪ ಧ್ಯಾನವು ಶಕ್ಯವಲ್ಲ. ಬಾಹ್ಯಸ್ಥೂಲರೂಪ ಧ್ಯಾನವನ್ನು ಅಭ್ಯಾಸ ಮಾಡಬೇಕು. ಅದರ ಸಂಸ್ಕಾರವು ದೃಢವಾಗುವ ಪರ್ಯಂತ ಪ್ರಯತ್ನ ಮಾಡಬೇಕು. ನೀರು ತಗ್ಗಿಗೆ ಸ್ವಾಭಾವಿಕವಾಗಿ ಹರಿಯುವಂತೆ ಮನಸು ಯಾವಾಗ ಬಾಹ್ಯಸ್ಥೂಲರೂಪ ಒಂದರಲ್ಲಿ ಅಪ್ರಯತ್ನವಾಗಿ ಹೋಗಿ ನೆಲೆಸುವುದೋ ಆಗ ಅದರ ಸಂಸ್ಕಾರವು ದೃಢವಾಗಿದೆ ಎಂದು ತಿಳಿಯಬೇಕು.

ಕೇಚಿತ್ ಸ್ವದೇಹಾಂತರ್ಹೃದಯಾವಕಾಶೇ ।
ಪ್ರಾದೇಶಮಾತ್ರಂ ಪುರುಷಂ ವಸಂತಂ ॥

(ಭಾ.೨.೨.೮)

ಎಂದು ಹೇಳಿದಂತೆ, ಹೃದಯದಲ್ಲಿ ಮಾಡಿಕೊಂಡ ಚೋಟಿನಷ್ಟು ಗಾತ್ರದ ವಾಸನಾಮಯ ಪ್ರತೀಕದಲ್ಲಿ ಸೂಕ್ಷ್ಮವಾದ ಬಿಂಬರೂಪವನ್ನು ಧ್ಯಾನಿಸಬೇಕು. ಹೀಗೆ ಸೂಕ್ಷ್ಮ ರೂಪನಾದ ಬಿಂಬನ ಧ್ಯಾನಕ್ಕೆ ಸ್ಥೂಲರೂಪಧ್ಯಾನವು

ಪೂರ್ವಭಾವಿಯಾಗಿ ಅತ್ಯಂತ ಆವಶ್ಯಕವಾಗಿದೆ. ಮತ್ತು ಜಪಾದಿ ನಿತ್ಯಕರ್ಮಾನುಷ್ಠಾನದ ಕೊನೆಯಲ್ಲಿ ವಿರಾಡ್ರೂಪದ ಅವಯವಗಳನ್ನು ಒಂದೊಂದಾಗಿ ಚಿಂತಿಸುವುದರಿಂದ ಅಖಂಡ ಪೂರ್ಣರೂಪದ ಧ್ಯಾನಕ್ಕೆ ಆವಶ್ಯಕವಾದ 'ಭಕ್ತಿಯೋಗ' ಅಂದರೆ, 'ಮನ ಇಂದ್ರಿಯಗಳು ಆಯತ್ನವಾಗಿ ಬಿಂಬನಲ್ಲಿ ಹೋಗಿ ನೆಲಸುವ ಸಮಾಧಿಸ್ಥಿ' ಲಭ್ಯವಾಗುತ್ತದೆ.

ಉದ್ಗೀಯತೇ ಯತ್ತದ್ ಭಗವತೋ ನಾರಾಯಣಸ್ಯ
ಸಾಕ್ಷಾನ್ಮಹಾ ಪುರುಷಸ್ಯ ಸ್ಥವಿಷ್ಠಂ ರೂಪಂ ಆತ್ಮಮಾಯಾ
ಗುಣಮಯ ಮನುವರ್ಣಿತಂ ಆದೃತಃ ಪಠತಿ ಶೃಣೋತಿ
ಶ್ರಾವಯತಿ ಸ ಏವಾಯಂ ಭಗವತಃ ಪರಮಾತ್ಮನೋ
ಹ್ಯಣಿಷ್ಠಮಪಿ ಶ್ರದ್ಧಧಾನೋ ಭಕ್ತಿ ವಿಶುದ್ಧಬುದ್ಧಿರ್ವೇದ ॥
ಶ್ರುತ್ವಾ ಸ್ಥೂಲಂ ತಥಾ ಸೂಕ್ಷ್ಮಂ ರೂಪಂ ಭಗವತೋ ಯತಃ ।
ಸ್ಥೂಲೇ ನಿರ್ಜಿತಮಾತ್ಮಾನಂ ಶನೈಃ ಸೂಕ್ಷ್ಮಧಿಯಾ ನಯೇತ್ ॥
ಇತಿ ಕ್ರಮಃ ॥ (ಭಾ.೫.೨೬.೪೨, ೪೩)

'ಈ ಬ್ರಹ್ಮಾಂಡವೆಂಬುದು ಪುರುಷೋತ್ತಮನಾದ ಸಾಕ್ಷಾದ್ ಭಗವಾನ್ ನಾರಾಯಣನು ಸ್ವಸಾಮರ್ಥ್ಯದಿಂದ ಮತ್ತು ಪ್ರಕೃತಿಯ ಗುಣಗಳಿಂದ ನಿರ್ಮಿಸಿದ ತನ್ನದೇ ಆದ ಅತಿಮಹತ್ತಾದ ಪ್ರತಿಮೆ. ಇದರ ವರ್ಣನೆಯನ್ನು ಆದರದಿಂದ ಪಠಿಸುವವನು ಕೇಳುವವನು ಹೇಳುವವನು ಮಾತ್ರ ಶ್ರದ್ಧಾವಂತನಾಗಿ ಭಕ್ತಿತುಂಬಿದ ನಿರ್ಮಲ ಅಂತಃಕರಣ ಉಳ್ಳವನಾಗಿ ಪರಮಾತ್ಮನ ಅತ್ಯಂತ ಸೂಕ್ಷ್ಮವಾದ ಬಿಂಬರೂಪವನ್ನು ಕಾಣುವನು.

'ಭಗವಂತನ ಬಾಹ್ಯಮಹಾಪ್ರತಿಮೆಯ ಬಗ್ಗೆ ಶ್ರವಣ ಮಾಡಿದರೆ ಮಾನಸ ವಾಸನಾಮಯವಾದ ಸೂಕ್ಷ್ಮವಾದ ಬಿಂಬರೂಪದ ಧ್ಯಾನ ಕೈಗೂಡುತ್ತದೆ. ಮಹಾಪ್ರತಿಮೆಯ ಚಿಂತನೆಯಲ್ಲಿ ಏಕಾಗ್ರತೆಯನ್ನು ಪಡೆದ ಮನಸ್ಸನ್ನು ನಿಧಾನ ವಾಗಿ ಧ್ಯಾನದಿಂದ ಬಿಂಬನಲ್ಲಿ ಸೇರಿಸಿ ನೆಲೆಗೊಳಿಸಲು ಸಾಧ್ಯವಾಗುವುದು. ಇದೇಕ್ರಮ'

ಎಂದು ಭಾಗವತ ಪಂಚಮಸ್ಕಂಧದಲ್ಲಿ ಹೇಳಿದ್ದಾರೆ. ಇಲ್ಲಿ ಸೂಕ್ಷ್ಮಬಿಂಬ ಧ್ಯಾನದಿಂದಲೇ ಮುಕ್ತಿ ಎಂದ ಬಳಿಕ ಬಾಹ್ಯಸ್ಥೂಲಧ್ಯಾನವನ್ನು ಶಾಸ್ತ್ರವು ಏಕೆ

ವಿಧಿಸುತ್ತದೆ ಎನ್ನುವ ಪ್ರಶ್ನೆ ಸಹಜ. ಆದರೆ ಬಾಹ್ಯಸ್ಥೂಲರೂಪವು ಲಕ್ಷ್ಮೀಸಮೇತವಾಗಿ ತ್ರಿಗುಣಪ್ರೇರಕವಾಗಿ ಮಹಾಮಹಿಮೋಪೇತ ಆನಂದಾದಿ ಗುಣಪೂರ್ಣವಾಗಿರುವುದರಿಂದ ಅದರ ವರ್ಣನೆಯನ್ನು ಕೇಳುವವನು ಹೇಳುವವನು ಬಿಂಬಧ್ಯಾನಕ್ಕೆ ಅರ್ಹನೆನಿಸುತ್ತಾನೆ. ಹೀಗೆ ಬಾಹ್ಯರೂಪೋಪಾಸನೆಯು ಬಿಂಬೋಪಾಸನೆಗೆ ಉಪಯೋಗಿ ಅನುಕೂಲವಾಗಿದೆ ಎಂದು ಅಭಿಪ್ರಾಯ.

ಆದರೂ ಅತ್ಯಂತ ಸ್ಥೂಲ ಸೂಕ್ಷ್ಮಬಿಂಬೋಪಾಸನಾದಲ್ಲಿಯೇ ಸಾಮರ್ಥ್ಯವಿಲ್ಲದವನಿಗೆ ಬಾಹ್ಯವಿರಾಡ್ರೂಪ ಉಪಾಸನೆಯನ್ನು ಮಾಡೆಂದು ವಿಧಿಸಿದರೆ, ಚೇಳಿಗೇ ಹೆದರಿದವನು ಹಾವಿನ ಬಳಿಗೆ ಹೋಗುವಂತಾಯಿತು ಎಂದರೆ ಹೇಳುತ್ತಾರೆ, ಶಾಸ್ತ್ರವು ಮೊದಲಿಗೆ ಬಾಹ್ಯವಿರಾಡ್ರೂಪ ಉಪಾಸನವನ್ನೇ ವಿಧಿಸುತ್ತಿಲ್ಲ. ಬಾಹ್ಯಸ್ಥೂಲದ ಉಪಾಸನೆ ಮಾಡೆಂದು ಮಾತ್ರ ಹೇಳುತ್ತಿದೆ. ವಿರಾಡ್ರೂಪದ ಉಪಾಸನೆಯ ಸಾಮರ್ಥ್ಯಉಳ್ಳ ಸಾಧಕರು ಆ ಉಪಾಸನೆ ಮಾಡಲಿ ಎನ್ನುತ್ತಿದೆ.

ಸಣ್ಣ ಬಾಲಗೋಪಾಲಮೂರ್ತಿಯಂಥ ಸ್ಥೂಲ ಪ್ರತಿಮಾರೂಪದ ಉಪಾಸನೆಯನ್ನು ಮಾಡಬಹುದು. ಅದೂ ಬಾಹ್ಯಪ್ರತಿಮೆಯಾದ್ದರಿಂದ ಸ್ಥೂಲವೆ. ಅದಕ್ಕೆ ಹೆದರಬೇಕಾಗಿಲ್ಲ.

ಇನ್ನೂ ಒಂದು ಪ್ರಶ್ನೆ. ಸ್ಥೂಲವನ್ನು ಉಪಾಸನೆ ಮಾಡಿದರೂ ಬಳಿಕ ಸೂಕ್ಷ್ಮದ ಉಪಾಸನೆ ಮಾಡಲೇಬೇಕೆಂದಮೇಲೆ ಮೊದಲಿಗೇ ಸೂಕ್ಷ್ಮದ ಉಪಾಸನೆಯನ್ನೇಕೆ ಮಾಡಬಾರದು? ಇದಕ್ಕೆ ಹೇಳುತ್ತಾರೆ, —ನಿಜ. ಜನ್ಮಾಂತರದಲ್ಲಿ ಮಾಡಿದ ಸ್ಥೂಲೋಪಾಸನದ ಅಭ್ಯಾಸ ಸಂಸ್ಕಾರ ಉಳ್ಳವರು ಅದರಿಂದ ಲಭ್ಯವಾದ ಭಕ್ತಿಯೋಗದಿಂದ ಈಗ ಸೂಕ್ಷ್ಮ ವಾಸನಾಮಯ ಪ್ರತೀಕದಲ್ಲಿ ಬಿಂಬೋಪಾಸನ ಮಾಡಬಹುದು. ಯಾರು ಹೀಗೆ ಜನ್ಮಾಂತರ ಸಂಸ್ಕಾರ ರಹಿತರಾಗುವರೋ, ಅವರು ಈಗ ಮೊದಲಿಗೆ ಸ್ಥೂಲರೂಪದ ಉಪಾಸನೆಯನ್ನೇ ಮಾಡಿ ಸೂಕ್ಷ್ಮೋಪಾಸನೆಗೆ ತಕ್ಕ ಭಕ್ತಿಯೋಗರೂಪ ಸಾಮರ್ಥ್ಯವನ್ನು ಸಂಪಾದಿಸಲಿ ಎಂಬುದು ಶಾಸ್ತ್ರದ ಅಭಿಪ್ರಾಯ.

ಸ್ಥೂಲೋಪಾಸನೆಯಲ್ಲಿ ಮೊದಲಿಗೆ ಒಂದು ಅವಯವದ ಉಪಾಸನೆ.

ಅದರಲ್ಲಿ ಮನಸು ಸುಖವಾಗಿ ಯತ್ನವಿಲ್ಲದೆ ನೆಲೆಸುವಂತಾದರೆ ಎರಡು ಅವಯವಗಳ ಉಪಾಸನೆ ಅಭ್ಯಾಸ ಮಾಡಬೇಕು. ಉಪಾಸಕನು ಹೀಗೆ ತನ್ನ ಸಾಮರ್ಥ್ಯಕ್ಕೆ ಅನುಸಾರವಾಗಿ ಅವುಗಳ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಬಹುದು.



–೨೦೧–

**ಧ್ರುವರಾಯನ ಬಿಂಬಧ್ಯಾನ**

**ತಸ್ಯಾ ವಿಶುದ್ಧಕರಣಃ ಶಿವವಾರ್ವಿಗಾಹ್ಯ**
**ಬದ್ಧ್ವಾಸನಂ ಜಿತಮರುನ್ಮನಸಾऽऽಹೃತಾಕ್ಷಃ ।**
**ಸ್ಥೂಲೇ ದಧಾರ ಭಗವತ್ಪ್ರತಿರೂಪ ಏತದ್**
**ಧ್ಯಾಯಂಸ್ತದವ್ಯವಹಿತೋ ವ್ಯಸೃಜತ್ ಸಮಾಧೌ ॥**

(ಭಾ.೪.೧೨.೧೭)

**ಏವಂ ಉಕ್ತಾರ್ಥಸ್ಯ ಸಮ್ಯಗ್ ಹೃದ್ಯವರೋಹೇಣ ತತ್ರಾದರಜನನಾಯ ಪೂರ್ವಾಚಾರಮಪಿ ದರ್ಶಯತಿ ॥ ತಸ್ಯಾ ಇತಿ ॥ ವಿಶಾಲಾನಾಮ್ನ್ಯಾ ನದ್ಯಾಃ । ಶಿವಂ ವಾಃ ಮಂಗಲಂ ವಾರಿ ಯತ್ । ತತ್ರ ವಿಗಾಹ್ಯಾವಗಾಹ್ಯ । ಆಸನಂ ಬದ್ಧ್ವಾ ಗುದಂ ಸ್ವಪಾರ್ಷ್ಣಿನಾऽऽಪೀಡ್ಯ । ಜಿತೋ ವಾಯುರ್ಯೇನ ಸಃ । ಮನಸೈವ ಆಹೃತೇಂದ್ರಿಯಃ ಸನ್ । ಸ್ಥೂಲೇ ಪಾತಾಲಾದಿಚತುರ್ದಶಲೋಕಾತ್ಮಕೇ । ಪ್ರತಿರೂಪೇ ಭಗವತ್ಪ್ರತೀಕೇ । ದಧಾರ ಮನೋ ನಿವೇಶಿತವಾನ್ । ಏತತ್ ಭಗವದ್ರೂಪಂ ಧ್ಯಾಯನ್ ಸನ್ । ತೇನ ವಿಶುದ್ಧಕರಣಃ ಶುದ್ಧಾಂತಃಕರಣಃ । ಜಿತಮನಾ ಭೂತ್ವಾ ಸಮಾಸೀನಃ । ಸಮಾಧೌ ಸತಿ ಸೂಕ್ಷ್ಮರೂಪವಿಷಯೀಕರಣ ಸಾಮರ್ಥ್ಯೇ ಪ್ರಾಪ್ತೇ ಸತಿ । ಸಮಾಧೌ ಸೂಕ್ಷ್ಮರೂಪ ಏವ ಮನೋऽವಧಾನ ರೂಪೇ । ಅವ್ಯವಹಿತಃ ಮಗ್ನೋ ಭೂತ್ವಾ ತತ್ ಸ್ಥೂಲಂ ವ್ಯಸೃಜತ್ । ಸ್ಥೂಲೇ ಮನೋऽವಧಾನರೂಪಸ್ಯ ತದುಪಾಸನಸ್ಯ ಸೂಕ್ಷ್ಮರೂಪೋಪಾಸನಾಪ್ರಾಪ್ತ್ಯವಧಿಕತ್ವಾತ್ತ್ಯಕ್ತವಾನಿತಿ ॥**



ಧ್ರುವರಾಯನು ಬದರಿಕಾಶ್ರಮದಲ್ಲಿ ಮಾಡಿದ ತಪಸ್ಸನ್ನು ಮೈತ್ರೇಯರು ವಿದುರನಿಗೆ ವರ್ಣಿಸುತ್ತಾರೆ— ಧ್ರುವರಾಯನು ಅಲ್ಲಿ ವಿಶಾಲಾ ನದಿಯಲ್ಲಿ

ಸ್ನಾನಮಾಡಿ, ಕಾಲಿನ ಹಿಮ್ಮಡಿಯಿಂದ ಮೂಲಾಧಾರವನ್ನು ಒತ್ತಿಕೊಂಡು ಕುಳಿತು ಪ್ರಾಣಾಯಾಮದಿಂದ ಮನಸಿನಿಂದ ಇಂದ್ರಿಯಗಳನ್ನು ಒಳಗೆ ಸೆಳೆದುಕೊಂಡು ಸ್ಥೂಲವಾದ ಪಾತಾಳದ ಚತುರ್ದಶ ಲೋಕಾತ್ಮಕವಾದ ಪ್ರತಿಮೆಯಲ್ಲಿ ಮನಸ್ಸನ್ನು ಸೇರಿಸಿ ನೆಲೆಗೊಳಿಸಿದ. ಅದರಿಂದ ಶುದ್ಧಾಂತಃಕರಣನಾಗಿ ಸೂಕ್ಷ್ಮ ಬಿಂಬರೂಪಧ್ಯಾನದಲ್ಲಿ ಸಾಮರ್ಥ್ಯವನ್ನು ತಂದುಕೊಂಡು ಸ್ಥೂಲಸೂಕ್ಷ್ಮರೂಪ ಗಳಿಗೆ ಐಕ್ಯವನ್ನು ಚಿಂತಿಸಿ ಸ್ಥೂಲೋಪಾಸನೆಯನ್ನು ತೊರೆದನು. ಪರಮಾಚ್ಛಾದಿಕೆಯು ಮೊದಲೇ ಸರಿದಿದ್ದರಿಂದ ವ್ಯಕ್ತವಾದ ಬಿಂಬರೂಪವನ್ನು ಸ್ವರೂಪಮನಸಿನಿಂದಲೇ ಕಾಣುತ್ತ ಶರೀರಾದ್ಯಭಿಮಾನವನ್ನು ತೊರೆದ, ಅಸಂಪ್ರಜ್ಞಾತ ಸಮಾಧಿಗೆ ಜಾರಿದ. ಹೀಗೆ ಸ್ಥೂಲೋಪಾಸನೆಯು ಬಿಂಬೋಪಾಸನೆಗೆ ಉಪಯೋಗಿಯಾಗುವುದು ಕಂಡಿದೆ.



–೨೦೨–

**ಬಿಂಬಧ್ಯಾನ ಸುಲಭವೆಂದು ಪ್ರಹ್ಲಾದನ ಉಪದೇಶ**

**ಕೋऽತಿ ಪ್ರಯಾಸೋऽಸುರಬಾಲಕಾ ಹರೇ-**
**ರುಪಾಸನೇ ಸ್ವೇ ಹೃದಿ ಛಿದ್ರವತ್ ಸತಃ ।**
**ಅಸ್ಯಾತ್ಮನಃ ಸಖ್ಯುರಶೇಷ ದೇಹಿನಾಂ**
**ಸಾಮಾನ್ಯತಃ ಕಿಂ ವಿಷಯೋಪಪಾದನೈಃ ॥**

(ಭಾ.೭.೭.೪೦)

ನನ್ವೇವಂ ವಿಚಾರ್ಯಮಾಣೇ ಹರೇರುಪಾಸನೇ ಅತಿಪ್ರಯಾಸಃ ದೃಶ್ಯತೇ ಅನಿಷ್ಟರೂಪ ಗತವಿಶೇಷಾಣಾಂ ಅವಯವಾದೀನಾಂ ಬುದ್ಧ್ಯಾ ವಿಭಾವಯಿತುಂ ಅಶಕ್ಯತ್ವಾದಿತ್ಯತ ಆಹ ॥ **ಕೋऽತಿಪ್ರಯಾಸ ಇತಿ** ॥ ಹೇ ಅಸುರಬಾಲಕಾಃ । ಸ್ವೇ ಹೃದಿ । ಛಿದ್ರವತ್ ಆಕಾಶವದಲಿಪ್ತತಯಾ । ಸತಃ ವಿದ್ಯಮಾನಸ್ಯ । ಅಶೇಷದೇಹಿನಾಂ ಆತ್ಮನಃ ಅಂತರ್ಯಾಮಿಣಃ । ಸಖ್ಯುರ್ಮಿತ್ರಸ್ಯ । ಅಸ್ಯ ಹರೇಃ । ಉಪಾಸನೇ ವಿಷಯೇ । ಅತಿಪ್ರಯಾಸಃ ಕಃ ವಿದ್ಯತೇ । ಯೇನ ತತೋ ನಿವೃತ್ತಿರ್ಭವತಾಂ ಭವೇತ್ । ವಿಶೇಷಜ್ಞಾನಮಶಕ್ಯಮಿತಿ ದರ್ಶಿತಮಿತಿ ಚೇತ್ತತ್ರಾಹ ॥ **ಸಾಮಾನ್ಯತ ಇತಿ** ॥ ಉಪಾಸನೇ ಕೋऽತಿಪ್ರಯಾಸ ಇತಿ । ತರ್ಹಿ

**ವಿಶೇಷೋ ನ ಜ್ಞೇಯ ಏವ ಕಿಮಿತ್ಯತ ಉಕ್ತಂ ಕಿಂವಿಷಯೋಽಪಪಾದನೈರಿತಿ ॥ ಅಯಮಾಶಯಃ ಹೃದಯಾವಕಾಶೇ ಸಾಮಾನ್ಯತ ಸ್ತಾವದುಪಾಸನಂ ಕಾರ್ಯಂ। ತತ್ರ ಮನೋಽವಧಾನೇ ಸತಿ ತದುಪಾಸನಾವರ್ಧಿತಭಕ್ತಿ ವಿಶುದ್ಧಮನಸಃ ವಿಶೇಷಾಕಾಂಕ್ಷಾಯಾಂ ತದ್ವಿಶೇಷಾಭಿಧಾನಸ್ಯಾವಸರಃ। ಶಕ್ಯಂತೇ ಚ ತೇ ವಿಶೇಷಾಃ ಜ್ಞಾತುಂ ಪುಂಸಾಂ ಸುಮನಸಾಂ। ವಕ್ಷ್ಯಾಮಶ್ಚ ತದ್ದೈವ। ಇದಾನೀಂ ಸಾಮಾನ್ಯತ ಏವೋಪಾಸನಾರಹಿತಾನಾಂ ಭವತಾಂ ಕಿಂ ವಿಚಾರೇಣ। ಕಿಂಚಾಸ್ಮಾಕಂ ತದುಪಪಾದನೇನೇತಿ। ಸಾಮಾನ್ಯತ ಉಪಾಸನೇ ತು ನ ಕೋಽಪ್ಯತಿಪ್ರಯಾಸಃ ಇತಿ ಭಾವಃ। ಜನ್ಮಾಂತರಾಚೀರ್ಣ ಸ್ಥೂಲೋಪಾಸನಾನ್ ಅಸುರಬಾಲಕಾನ್ ಪ್ರತಿ ಪ್ರಹ್ಲಾದೇನ ಪ್ರಥಮತ ಏವ ಸೂಕ್ಷ್ಮೋಪಾಸನ ಮಭಿಹಿತಮಿತಿ ನ ಕ್ರಮಭಂಗ ಇತಿ ॥**



**ಪ್ರಹ್ಲಾದನು ದೈತ್ಯಬಾಲಕರಿಗೆ ಬಿಂಬೋಪಾಸನೆ ಮಾಡಲು ಆದೇಶಿಸು ತ್ತಿದ್ದಾನೆ— ಅಸುರ ಬಾಲಕರೆ, ಹರಿನಾಮಕ ಬಿಂಬನ ಸಾಮಾನ್ಯ ಉಪಾಸನೆ ಯಲ್ಲಿ ಏನು ಹೆಚ್ಚಿನ ಪ್ರಯಾಸವಿದೆ? ಏಕೆಂದರೆ ಎಲ್ಲ ಶರೀರಿಗಳಲ್ಲಿಯೂ ಹೃದಯದಲ್ಲಿ ಆತ್ಮನಿಗೆ ಸಖನಾಗಿ ಅವನು ನಿರ್ಲಿಪ್ತನಾಗಿ ಆಕಾಶದಂತೆ ಇರುತ್ತಾನೆ.**

ಸಾಮಾನ್ಯಾಕಾರವಾಗಿ ಮೊದಲಿಗೆ ಅವನನ್ನು ಉಪಾಸನೆ ಮಾಡಿರಿ, ಮಾಡಿದ ಬಳಿಕವೇ ವಿಶೇಷ ಭಕ್ತಿಭರಿತವಾಗುವ ಮನಸಿನಿಂದ ಅವನ ವಿಶೇಷಾಕಾರವನ್ನು ತಿಳಿಯಲು ಸಾಧ್ಯವಿದೆ ಆಗಲೆ ವಿಶೇಷವನ್ನು ಹೇಳುತ್ತೇವೆ. ಮೊದಲಿಗೇ ವಿಶೇಷದ ವಿಚಾರದಿಂದೇನು? ಈಗ ಸಾಮಾನ್ಯೋಪಾಸನೆಯಲ್ಲಿ ಪ್ರಯಾಸ ವೇನೂ ಇಲ್ಲ.

ಅಸುರಬಾಲಕರು ಪೂರ್ವಜನ್ಮದಲ್ಲಿಯೇ ಸ್ಥೂಲೋಪಾಸನೆ ಮಾಡಿದ್ದಾರೆ. ಅದರಿಂದ ಭಾಗವತೋಕ್ತ ಕ್ರಮಪ್ರಕಾರವಾಗಿಯೇ ಈಗ ಪ್ರಹ್ಲಾದ ಸಾಮಾನ್ಯಾಕಾರವಾಗಿ ಅವರಿಗೆ ಹೃದಯಾಂತರ್ಗತ ಸೂಕ್ಷ್ಮಬಿಂಬೋಪಾಸನೆ ಯನ್ನು ಮಾಡಲು ಉಪದೇಶಿಸುತ್ತಿದ್ದಾನೆ.

**ಮೊದಲಿಗೆ ಸಾಮಾನ್ಯೋ ಪಾಸನಯೇ ಇಲ್ಲದವರಿಗೆ ವಿಶೇಷಗಳ**

'ಉಪಪಾದನೆ' ವಿಚಾರಗಳಿಂದೇನು ಪ್ರಯೋಜನ? ವಿಶೇಷಗಳನ್ನು ನಾವಾದರೂ ಈಗ ಹೇಳಬೇಕಾಗಿಲ್ಲ. ಹೇಳುವ ಕಾಲದಲ್ಲಿ ತಪ್ಪದೆ ಅವನ್ನೂ ನಾವು ಹೇಳುವೆವು. ಅಂತೂ ಈಗ ಸಾಮಾನ್ಯೋಪಾಸನೆ ಮಾಡುವಲ್ಲಿ ನಿಮಗೆ ಏನೂ ಪ್ರಯಾಸವಿಲ್ಲ' ಎನ್ನುತ್ತಾನೆ.



-೨೦೩-

## ಹೃದಯಕಮಲದಲ್ಲಿ ಬಿಂಬನಧ್ಯಾನ

ಕೇಚಿತ್ ಸ್ವದೇಹಾಂತ ಹೃ‌ದಯಾವಕಾಶೇ
ಪ್ರಾದೇಶಮಾತ್ರಂ ಪುರುಷಂ ವಸಂತಂ ।
ಚತುರ್ಭುಜಂ ಕಂಜರಥಾಂಗಶಂಖ
ಗದಾಧರಂ ಧಾರಣಯಾ ಸ್ಮರಂತಿ ॥

(ಭಾ.೨.೨.೮)

ನನ್ವಸ್ತು ಸಂಪಾದಿತಸಾಮಾನ್ಯಾನ್ ಪ್ರತಿ ವಿಶೇಷಾಭಿಧಾನಸ್ಯ ಅವಸರಃ। ಸಾಮಾನ್ಯಮೇವ ಕಥಂ। ತತ್ರೈವ ತಾವದ್ವಯಂ ಪ್ರವರ್ತಾಮಹೇ ಇತ್ಯತಃ ಅವಸರಪ್ರಾಪ್ತ ಸೂಕ್ಷ್ಮರೂಪಂ ತದುಪಾಸನಂ ಚ ಸಪ್ರಕಾರಂ ತತ್ರ ವಿಶೇಷವಿವಿತ್ಸೂನಾಂ ವಿಶೇಷಾಂಶ್ಚ ಜ್ಞಾಪಯತಿ। **ಕೇಚಿದಿತ್ಯಾದಿನಾ ಪದ್ಯಷಟ್ಕೇನ** ॥ ಅತ್ರಾಪರೋಕ್ಷಜನಿಕಾಃ ತಿಸ್ರಃ ಮನೋವೃತ್ತಯಃ। ಧಾರಣಾ, ಧ್ಯಾನಂ, ಸಮಾಧಿರಿತಿ। ತತ್ರಾದೌ ಧಾರಣಾಂ ತಾವದಾಹ ॥ **ಕೇಚಿದಿತಿ** ॥ ಕೇಚಿತ್ ಸ್ಥೂಲೇ ಜಿತಮನಸ್ಕಾಃ ಸೂಕ್ಷ್ಮಾವಧಾನಯೋಗ್ಯಾಃ। ಪ್ರಾದೇಶಪರಿಮಾಣಂ। ಅವಕಾಶೇ ಆಕಾಶೇ। ವಸಂತಂ। ಅತ ಏವ ಪುರುಷಂ। ರಥಾಂಗಂ ಚಕ್ರಂ। ಧಾರಣಯಾ ಖಂಡಿತಯಾ ಮನೋವೃತ್ತ್ಯಾ। ಸ್ಮರಂತಿ ವಿಷಯೀಕುರ್ವಂತಿ। ಆದೌ ಧಾರಣಾಂ ಸಂಪಾದಯೇದಿತಿ ಭಾವಃ ॥



ಶುಕಮುನಿ ಹೇಳುತ್ತಾರೆ—ಸ್ಥೂಲರೂಪ ಚಿಂತನೆ ಸಾಧಿಸಿ ಮುಗಿಸಿ ಸೂಕ್ಷ್ಮಬಿಂಬರೂಪ ಚಿಂತನೆಗೆ ಯೋಗ್ಯತೆ ಸಂಪಾದಿಸಿದವರು ಕೆಲವರು ಮೊದಲಿಗೆ ತಮ್ಮ ದೇಹದ ಹೃದಯಾಕಾಶದಲ್ಲಿ ಚೋಟಿನಷ್ಟಿರುವ ಚತುರ್ಭುಜ

**ಚಕ್ರಶಂಖಾದಿಧಾರಿ ಬಿಂಬನ ಅವಯವಗಳನ್ನು ಕ್ರಮವಾಗಿ ಧಾರಣ ಮಾಡುವರು.**

ಒಂದೊಂದಾಗಿ ಹರಿಯ ಪಾದಾದಿ ಅವಯವಗಳನ್ನು ಮತ್ತೆಮತ್ತೆ ಚಿಂತಿಸುವುದು ಧಾರಣ. ಖಂಡಸ್ಮೃತಿ. ನಿರಂತರ ಮನೋವೃತ್ತಿಯಿಂದ ಪೂರ್ಣರೂಪವನ್ನು ಚಿಂತಿಸುವುದು ಅಖಂಡಸ್ಮೃತಿ, ಧ್ಯಾನವೆನಿಸುವುದು. ಅದು ಅಪ್ರಯತ್ನವಾಗಿ ಬಂದರೆ ಸಮಾಧಿ ಎನಿಸುವುದು. ಚಿರಕಾಲೀನವಾದ ಸಮಾಧಿ ಯಿಂದ ಅಪರೋಕ್ಷಜ್ಞಾನವಾಗುವುದು.

ಶ್ಲೋಕದಲ್ಲಿ 'ಕೇಚಿತ್' ಎಂಬುದು ಅಸ್ವರಸವಾದ, ತಮಗೆ ಸಮ್ಮತವಲ್ಲದ ಬೇರೆ ಪಕ್ಷದವರೆಂಬರ್ಥದಲ್ಲಿ ಅಲ್ಲ. ಬಿಂಬೋಪಾಸನೆಗೆ ಅರ್ಹತೆಯನ್ನು ಸಂಪಾದಿಸಿದವರು ಕೆಲವರು ಎಂಬ ಅರ್ಥದಲ್ಲಿ ಹೇಳಿದ್ದಾರೆ.

ಸಾಮಾನ್ಯೋಪಾಸನೆಯಲ್ಲಿ ಪ್ರಯಾಸವಿಲ್ಲ ಎಂದಿದ್ದಾನೆ ಪ್ರಹ್ಲಾದ. ಆದರೆ ಆ ಸಾಮಾನ್ಯೋಪಾಸನೆಯೆ ಹೇಗೆ ಲಭ್ಯ ? ಎನ್ನುವ ಪ್ರಶ್ನೆ ಬರುತ್ತದೆ, ಎಂದರೆ ಸಮಾಧಾನ— 'ಅಭ್ಯಾಸ ಮಾಡಬೇಕು' ಎಂದು. 'ಯೋಗೇಶ್ವರಾಸ್ಥಾಪಿತ ಪಾದಪಲ್ಲವಂ' ಎಂದು ಮುಂದೆ ಇದನ್ನೇ ಹೇಳುತ್ತಾರೆ ಶುಕಮುನಿಗಳು.



## –೨೦೪–

**ಬಿಂಬನ ಅವಯವಧ್ಯಾನ**

**ಪ್ರಸನ್ನವಕ್ತ್ರಂ ನಲಿನಾಯತೇಕ್ಷಣಂ**
**ಕದಂಬಕಿಂಜಲ್ಕಪಿಶಂಗ ವಾಸಸಂ ।**
**ಲಸನ್ಮಹಾಹಾರಹಿರಣ್ಮಯಾಂಗದ**
**ಸ್ಫುರನ್ಮಹಾರತ್ನಕಿರೀಟಕುಂಡಲಂ ॥** (ಭಾ.೨.೨.೧೦)

**ಪ್ರಸನ್ನಂ ವಿಕಸಿತಂ । ಕದಂಬಸ್ತರುವಿಶೇಷಃ ತತ್ಪುಷ್ಪಸ್ಯ ಕಿಂಜಲ್ಕವತ್ ಕೇಸರವತ್ ಪಿಶಂಗಂ ಪೀತಂ ವಾಸೋ ಯಸ್ಯ । ಲಸನ್ಮಹಾಹಾರಶ್ಚಾಸೌ ಹಿರಣ್ಮಯಾಂಗದಶ್ಚಾಸೌ ಸ್ಫುರನ್ಮಹಾರತ್ನಾನಿ ಕಿರೀಟಕುಂಡಲಾನಿ ಯಸ್ಯ ಸ ಚ ತಂ ॥**



ಶುಕಮುನಿ ಹೇಳುತ್ತಾರೆ— ಪ್ರಸನ್ನವಾದ ಮುಖ, ಕಮಲದಂಥ ನೀಳವಾದ ಕಣ್ಣುಗಳು, ಕದಂಬ ಪುಷ್ಪದ ಕೇಸರದಂತೆ ಹೊಳೆಯುವ ಪೀತಾಂಬರದ ಉಡುಗೆ, ಬಂಗಾರದ ಹಾರ ಅಂಗದ ರತ್ನಕಿರೀಟ ಕುಂಡಲಗಳುಳ್ಳ ಬಿಂಬಮೂರ್ತಿಯನ್ನು ಮತ್ತೆಮತ್ತೆ ಕೆಲವರು ಚಿಂತಿಸುತ್ತಾರೆ.



–೨೦೫–

### ಬಿಂಬನ ಅವಯವಧ್ಯಾನ

ಉನ್ನಿದ್ರಹೃತ್ ಪಂಕಜ ಕರ್ಣಿಕಾಲಯೇ
ಯೋಗೇಶ್ವರಾಸ್ಥಾಪಿತ ಪಾದಪಲ್ಲವಂ ।
ಶ್ರೀಲಕ್ಷಣಂ ಕೌಸ್ತುಭರತ್ನ ಕಂಧರಂ
ಅಮ್ಲಾನಲಕ್ಷ್ಮ್ಯಾ ವನಮಾಲಯಾಂಚಿತಂ ॥

(ಭಾ.೨.೨.೧೧)

ವಿಕಸಿತಹೃತ್ಪದ್ಮಕರ್ಣಿಕಾರೂಪಸ್ಥಾನೇ ಅಭ್ಯಸ್ತಯೋಗೈರ್ಭಕ್ತೈಃ ಸಂಸ್ಥಾಪಿತ ಪಾದಪಲ್ಲವಮಿತ್ಯನೇನ ''ಪ್ರಾಕ್ತನಾನಾಂ ಕೇಷಾಂಚಿದಪಿ ದುರ್ಲಭಮಿಮಂ ಹರಿಂ ಕಥಂ ಲಭೇಮಹೀ''ತಿ ಚಿಂತಾ ಅಭ್ಯಸ್ಯ ಮಾನಯೋಗೈಃ ನ ಕರ್ತವ್ಯೇತಿ ಸೂಚಯತಿ ॥ ಉನ್ನಿದ್ರೇತ್ಯಾದಿನಾ ॥ ಶ್ರೀಲಕ್ಷಣಂ ಯಸ್ಯ ವಕ್ಷಸಿ । ಕೌಸ್ತುಭಾಖ್ಯರತ್ನೋಪೇತಾ ಕಂಧರಾ ಗಲೋ ಯಸ್ಯ । ಅಮ್ಲಾನಲಕ್ಷ್ಮ್ಯಾ ಅಗತಶೋಭಯಾ ವನಮಾಲಯಾ ॥



ಶುಕಮುನಿ ಹೇಳುತ್ತಾರೆ— ಯೋಗೇಶ್ವರರು ತಮ್ಮ ಅರಳಿದ ಹೃದಯ ಕಮಲದಲ್ಲಿ ಅವನ ಪಾದಪಲ್ಲವಗಳನ್ನು ಸ್ಥಿರವಾಗಿ ಇರಿಸಿಕೊಂಡಿರುತ್ತಾರೆ. ಅವನೆದೆ ಶ್ರೀವತ್ಸದಿಂದ, ಅವನ ಕಂಠ ಕೌಸ್ತುಭರತ್ನದಿಂದ ಮತ್ತು ಬಾಡದ ಕಾಂತಿಯ ವನಮಾಲೆಯಿಂದ ಭೂಷಿತವಾಗಿರುತ್ತದೆ. ಇಂಥ ಬಿಂಬಮೂರ್ತಿಯನ್ನು ಮತ್ತೆಮತ್ತೆ ಕೆಲವರು ಚಿಂತಿಸುತ್ತಾರೆ.



-೨೦೬-

**ಬಿಂಬನ ಅವಯವಧ್ಯಾನ**

ವಿಭೂಷಿತಂ ಮೇಖಲಯಾಂಗುಲೀಯಕೈ
ರ್ಮಹಾರ್ಘನೈರ್ನೂಪುರ ಕಂಕಣಾದಿಭಿಃ ।
ಸ್ನಿಗ್ಧಾಮಲೈಃ ಕುಂಚಿತನೀಲಕುಂತಲೈ
ರ್ವಿರೋಚಮಾನಾನನ ಹಾಸಪೇಶಲಂ ॥ (ಭಾ.೨.೨.೧೨)

ಮೇಖಲಯಾ ಕಾಂತ್ಯಾ । ಅಂಗುಲೀಯಕೈರಂಗುಲಿಭೂಷಣೈಃ ।ನೂಪುರಃ ಪಾದಭೂಷಣಂ । ಕಂಕಣಂ ಕರಭೂಷಣಂ । ಸ್ನಿಗ್ಧಾಃ ಮನೋಹರಾಶ್ಚ ತೇ ಅಮಲಾಶ್ಚ ತೈಃ । ಕುಂಚಿತಾಃ ವಕ್ರಾಃ । ವಿರೋಚಮಾನೇ ಆನನೇ ಸ್ಥಿತೇನ ಹಾಸೇನ ಮಂದಹಾಸೇನ ಮನೋರಮಂ ॥

❖❖❖

ಶುಕಮುನಿ ಹೇಳುತ್ತಾರೆ—ಒಡ್ಯಾಣ ಬೆರಳುಂಗರ ಅಮೂಲ್ಯವಾದ ಅಂದುಗೆ ಕಂಕಣಗಳಿಂದ ಅಲಂಕೃತನಾದವನು. ಮೃದುವಾದ ಕಪ್ಪಾದ ಗುಂಗುರು ಕೂದಲುಗಳಿಂದ ಶೋಭಿಸುವ ಮುಖದಲ್ಲಿ ಅರಳಿದ ಹೂನಗು ಸೂಸುವವನು. ಇಂಥ ಬಿಂಬಮೂರ್ತಿಯನ್ನು ಕೆಲವರು ಮತ್ತೆಮತ್ತೆ ಚಿಂತಿಸುವರು.

❖❖❖

-೨೦೭-

**ಅವಯವಗಳ ಧ್ಯಾನದಿಂದ ಪೂರ್ಣರೂಪಧ್ಯಾನ**

ಅದೀನಲೀಲಾಹಸಿತೇಕ್ಷಣೋಲ್ಲಸದ್
ಭ್ರೂಭಂಗ ಸಂಸೂಚಿತಭೂರ್ಯನುಗ್ರಹಂ ।
ಈಕ್ಷೇತ ಚಿಂತಾಮಯಮೇನಮೀಶ್ವರಂ
ಯಾವನ್ಮನೋ ಧಾರಣಯಾಽವತಿಷ್ಠತೇ ॥ (ಭಾ.೨.೨.೧೩)

ಅದೀನಲೀಲಯಾ ಹಾಸಪೂರ್ವಕೇಕ್ಷಣೇನ ಚೋಲ್ಲಸತಾ ಭ್ರೂವಿಕ್ಷೇಪೇಣ ಸಮ್ಯಕ್ ಸೂಚಿತೋ ಮಹಾನನುಗ್ರಹೋ ಯೇನ ತಂ । ಚಿಂತಾಮಯಂ

**ಚಿಂತನಮಪೇಕ್ಷ್ಯೈವ ಫಲದಾಯಕಂ। ಏನಂ ತಾವತ್ ಧಾರಣಯಾ ಚಿಂತಯೇತ್। ಕಃ ಅವಧಿಃ ಇತ್ಯತ ಉಕ್ತಂ ಯಾವದಿತಿ ॥ ಮನಃ ಯಾವತ್ ಯಾವತಾ ಕಾಲೇನ। ಅವತಿಷ್ಠತೇ ಅಖಂಡತಯಾ ಸಂಸ್ಥಿತಂ ಭವೇತ್ ತಾವದಿತಿ। ಯಾವತ್ಕಾಲಂ ಭಗವತ್ಯಖಂಡತಯಾ ಮನಃ ಸ್ಥಾಪಯಿತುಂ ನ ಶಕ್ಯಂ ತಾವತ್ಪರ್ಯಂತಂ ಧಾರಣಾ। ತತೋಽಖಂಡ ತಯಾ ಮನೋಽವಧಾನರೂಪಂ ಧ್ಯಾನಮೇವ ಕಾರ್ಯಂ। ತತಸ್ತಸ್ಮಿನ್ ಚಿರಕಾಲಮಭ್ಯಸ್ತೇ ಸತಿ ಸಮಾಧಿಃ ಅಯತ್ನೇನ ಮನೋಽವಧಾನರೂಪೋ ಭವತೀತಿ ಭಾವಃ ॥**



**ಶುಕಮುನಿ ಹೇಳುತ್ತಾರೆ—ಭಕ್ತರ ಮೇಲಿನ ಅನುಗ್ರಹವನ್ನು ಸೂಚಿಸುವಂಥ ಹುಬ್ಬುಗಳ ಚಲನದ ಸೊಬಗು ಉತ್ತಮವಾದ ವಿಲಾಸ ಹಾಸ್ಯನೋಟಗಳಿಂದ ಕೂಡಿದವನು ಸಕಲಾಭೀಷ್ಟದಾಯಕನಾದ ಪ್ರಭು ಬಿಂಬಮೂರ್ತಿ. ಮಾನಸ ವಾಸನಾಮಯ ಪ್ರತೀಕದಲ್ಲಿ ಮತ್ತೆಮತ್ತೆ ಚಿಂತಿಸಬೇಕು. ಮನಸು ಸ್ಥಿರವಾಗಿ ಈ ಬಿಂಬನಲ್ಲಿ ನೆಲೆಸುವವರೆಗೂ ಒಂದೊಂದು ಅವಯವವನ್ನಾಗಲಿ ಎರಡು ಮೂರು ನಾಲ್ಕು ಐದು ಆರು ಅಂಗಗಳನ್ನು ಸೇರಿಸಿ ಒಟ್ಟಾಗಿಯೇ ಆಗಲಿ ಕ್ರಮವಾಗಿ ಚಿಂತಿಸುತ್ತಿದ್ದರೆ ಮುಂದೆ ಪೂರ್ಣರೂಪದ ಧ್ಯಾನ ಮಾಡುವ ಸಾಮರ್ಥ್ಯ ಬರುವುದು. ಯಾರಿಗೆ ಎಷ್ಟು ಅಂಗಗಳನ್ನು ಒಟ್ಟಾಗಿ ಚಿಂತನ ಮಾಡಲು ಬರುವುದೋ ಅಷ್ಟನ್ನು ಚಿಂತಿಸುವ ಅಭ್ಯಾಸ ಮಾಡಬೇಕು.**

ಇದು ಸ್ಮರಣವೆಂಬ ಭಾಗವತಧರ್ಮ.



**–೨೦೮–**

**ಅವಯವಧ್ಯಾನದಿಂದ ಅಂತಃಕರಣ ಶುದ್ಧಿ**

**ಏಕೈಕಶೋಽಂಗಾನಿ ಧಿಯಾ ವಿಭಾವಯೇತ್**
**ಪಾದಾದಿ ಯಾವದ್ಧಸಿತಂ ಗದಾಭೃತಃ।**
**ಜಿತಂಜಿತಂ ಸ್ಥಾನಮಪೋಹ್ಯ ಧಾರಯೇತ್**
**ಪರಂಪರಂ ಶುದ್ಧ್ಯತಿ ಧೀರ್ಯಥಾ ಯಥಾ ॥** (ಭಾ.೨.೨.೧೪)

**ಉಕ್ತಪ್ರಕಾರೇಣ ಸಮಸ್ತಾವಯವಧಾರಣಾಯಾಮಪ್ಯಶಕ್ತೇನ ಕಿಂ ಕಾರ್ಯಮಿತ್ಯತ ಆಹ ॥ ಏಕೈಕಶ ಇತಿ ॥ ಪಾದಮಾರಭ್ಯ ಮುಖಪರ್ಯಂತಂ। ಗದಾಭೃತಃ ಹರೇಃ। ಅಂಗಾನಿ। ಏಕೈಕಶಃ ಏಕೈಕಮೇವ। ಮನಸಾಽವಕ್ರರೂಪತಯಾ ಚಿಂತಯೇತ್ । ಜಿತಂ ಧಾರಯಿತುಂ ಶಕ್ಯಂ। ಸ್ಥಾನಂ ಅಂಗಂ। ಅಪೋಹ್ಯ ಪರಿತ್ಯಜ್ಯ। ಪರಮನ್ಯಂ ಧಾರಯೇತ್ ಖಂಡಸ್ಮೃತಿ ವಿಷಯಂ ಕುರ್ಯಾತ್। ಜಿತಂ ಜಿತಂ ಪರಂ ಪರಮಿತಿ ಚ ಸಮಸ್ತಧಾರಣಾಯಾಮಶಕ್ತಿಂ ಸೂಚಯತಿ। ಏಕೈಕಶ ಇತ್ಯುಕ್ತಿರಪಿ ನ ನಿಯಮಪರಾ। ಕಿಂತು ಯಸ್ಯ ಯಾವತಾಮಂಗಾನಾಂ ಧಾರಣಾಯಾಂ ಶಕ್ತಿರಸ್ತಿ ತೇನ ತಾವತಾಮೇವ ಧಾರಣಾ ಕಾರ್ಯೇತ್ಯಭಿಪ್ರಾಯ ಇತ್ಯಾಶಯೇನಾಹ। ಧೀರ್ಮನೋ ಯಥಾ ಯಥಾ ಶುದ್ಧ್ಯತೀತಿ ॥ ಇದಮುದಿತಂ ಭವತಿ- ಸಮಸ್ತಾವಯವಧಾರಣಾಯಾಮಶಕ್ತೇನ ಪಂಚಷಾಣಾಂ ವಾ ತ್ರಿಚತುರಾಣಾಂ ವಾ ದ್ವಿತ್ರಾಣಾಂ ವಾಂಗಾನಾಂ ಧಾರಣಾ ಕರ್ತವ್ಯಾ। ತತ್ರಾಪ್ಯಶಕ್ತೇನ ತು ಏಕೈಕಾವಯವಸ್ಯ ಧಾರಣಾ ಕಾರ್ಯೇತಿ। ಅನೇನ ಸ್ಮರಣಾಖ್ಯೋ ಭಾಗವತೋ ಧರ್ಮಃ ಉಕ್ತೋ ಭವತೀತಿ ಸ್ಫುಟಂ ॥**



**ಶುಕಮುನಿ ಹೇಳುತ್ತಾರೆ—ಪಾದದಿಂದ ತೊಡಗಿ ಮುಖದ ಮಂದಹಾಸದವರೆಗೆ ಒಂದೊಂದಾಗಿ ಅಥವಾ ಎರಡುಮೂರು ಮುಂತಾದ ಅವಯವಗಳನ್ನು ಚಿಂತನೆ ಮಾಡುವ ಅಭ್ಯಾಸ ಮಾಡಬೇಕು. ಮನಸಿಗೆ ವಶವಾದ ಅವಯವಗಳ ಚಿಂತನೆಯನ್ನು ಬಿಟ್ಟು ಇತರ ಅವಯವ ಚಿಂತನ ಮಾಡುತ್ತ ಕ್ರಮವಾಗಿ ಎಲ್ಲ ಅವಯವಗಳನ್ನು ವಶಮಾಡಿಕೊಂಡು ಬಳಿಕ ಪೂರ್ಣರೂಪವನ್ನು ವಶಮಾಡಿಕೊಳ್ಳಲು ಅಭ್ಯಾಸವನ್ನು ಮಾಡಬೇಕು. ಮಂಗಳಕರವಾದ ಪೂರ್ಣರೂಪವು ಹೃದಯದಲ್ಲಿ ಕ್ರಮೇಣ ಸ್ಥಿರವಾಗುತ್ತಲೇ ಅಜ್ಞಾನದ ಕತ್ತಲು ಸರಿದು ಅಂತಃಕರಣ ಶುದ್ಧವಾಗುವುದು.**

ಹೀಗೆ ಮೋಕ್ಷಕ್ಕೆ ಅತ್ಯಾವಶ್ಯಕ ಸಾಧನವಾದ ಧ್ಯಾನದ ಲಾಭಕ್ಕೆ ನಿರಂತರ ಯತ್ನಿಸಬೇಕು. ಇದೇ ಸ್ಮರಣರೂಪ ಭಾಗವತಧರ್ಮಾನುಷ್ಠಾನ.





ವಿದ್ವಾನ್ ಶ್ರೀ ಕೆ. ಹಯವದನ ಪುರಾಣಿಕರು ಕಾಪು ಸುಬ್ರಾಯ ಪುರಾಣಿಕರ ಸುಪುತ್ರರು. ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ೧೨ ವರ್ಷ ಶಾಸ್ತ್ರಾಭ್ಯಾಸ ನಡೆಸಿ, ತದನಂತರ ಪರಮಪೂಜ್ಯ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರು ಹಾಗೂ ಶ್ರೀ ಶ್ರೀ ವಿಶ್ವೇಶತೀರ್ಥರಲ್ಲಿ ಸುಧಾಂತ, ವೇದಾಂತ, ಬಾಧಾಂತ, ನ್ಯಾಯಶಾಸ್ತ್ರ, ವ್ಯಾಸತ್ರಯಗಳ ಅಧ್ಯಯನವನ್ನು ಮಾಡಿ, ಮೂರು ದಶಕಕ್ಕೂ ಮೀರಿ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಪ್ರಾಧ್ಯಾಪಕರು ಹಾಗೂ ಪ್ರಾಂಶುಪಾಲರಾಗಿ ಸೇವೆಯನ್ನು ಸಲ್ಲಿಸಿರುತ್ತಾರೆ. ಶ್ರೀಮದಾಚಾರ್ಯರ ಸರ್ವಮೂಲ ಗ್ರಂಥಗಳು, ಶ್ರೀ ವಾದಿರಾಜರ ಯುಕ್ತಿಮಲ್ಲಿಕಾ ಹಾಗೂ ಹರಿದಾಸ ಸಾಹಿತ್ಯ ಇವುಗಳ ಪಾಠ ಪ್ರವಚನ ಹಾಗೂ ಕನ್ನಡ ಅನುವಾದವನ್ನು ಮಾಡಿರುತ್ತಾರೆ.

ಭಗವದ್ಗೀತೆ, ಶ್ರೀಲಕ್ಷ್ಮೀಶೋಭನಪದ, ಶ್ರೀ ವಾದಿರಾಜರ ವೈಕುಂಠ ವರ್ಣನೆ, ಶ್ರೀ ವಾದಿರಾಜರು ಕಂಡ ಶ್ರೀ ಕೃಷ್ಣ – ಒಂದು ಅಧ್ಯಯನ ಹಾಗೂ ಶ್ರೀ ಹರಿವಾಯುಸ್ತುತಿ, ಶ್ರೀ ರಾಘವೇಂದ್ರ ನಮನ, ಪೂರ್ಣಪ್ರಜ್ಞ ವಿಜಯ, ಸೀತಾಯನ, ಹರೇ ವೇಂಕಟ ದಾಸೋಹಂ, ಸುಲಭನಿತ್ಯಾನುಷ್ಠಾನಪದ್ಧತಿ, ಸುಲಭನಿತ್ಯಾನುಷ್ಠಾನಸಂಗ್ರಹ, ಸ್ತವನಾಂಜಲಿ, ಗೋಪೀಗೀತಾ, ಭ್ರಮರಗೀತ, ಗುರುಗುಣಸ್ತವನ, ಗಂಗಾಲಹರಿ, ಶ್ರೀ ಶ್ರೀಶಗುಣದರ್ಪಣ, ಶ್ರೀ ಹರಿಕಥಾಮೃತಸಾರ–ಒಂದು ಅಧ್ಯಯನ, ಇವರು ಸಂಪಾದಿಸಿದ ಕನ್ನಡ ಕೃತಿಗಳು ಹಾಗೂ ಗ್ರಂಥಗಳು.

ಇದರ ಜೊತೆಯಲ್ಲಿ ಅಖಿಲ ಭಾರತ ಮಾಧ್ವ ಮಹಾಮಂಡಲದ ಸರ್ವಮೂಲ ಗ್ರಂಥದ ಪ್ರಕಾಶನದ ಮುಖಾಂತರ ಪ್ರಕಟಣೆಗೊಂಡಿರುವ ಮಹಾಭಾರತ ತಾತ್ಪರ್ಯ ನಿರ್ಣಯ– ಶ್ರೀಮದ್ಭಾಗವತ ತಾತ್ಪರ್ಯ ನಿರ್ಣಯ ಮತ್ತು ಸರ್ವಮೂಲ ಗ್ರಂಥದ ಶ್ರೀ ಗೀತಾಪ್ರಸ್ಥಾನದಲ್ಲಿ ಭಗವದ್ಗೀತೆ, ಉಪನಿಷತ್ ಪ್ರಸ್ಥಾನದಲ್ಲಿ ಶ್ರೀಮನ್ ಮಹೈತರೇಯೋಪನಿಷದ್ಭಾಷ್ಯ, ಸಂಕೀರ್ಣಗ್ರಂಥದಲ್ಲಿ ಕಂದುಕ ಸ್ತುತಿ ಹಾಗೂ ಋಗ್ಭಾಷ್ಯ ಇತ್ಯಾದಿಗಳೂ ಇವರ ವಾಙ್ಮಯ ಸೇವೆಯ ಮೈಲಿಗಲ್ಲುಗಳು. ಪ್ರಸ್ತುತ, ಶ್ರೀವಿಷ್ಣುತೀರ್ಥ ವಿರಚಿತ ಶ್ರೀಮದ್‌ಭಾಗವತಸಾರೋದ್ಧಾರ ಗ್ರಂಥದ ಕನ್ನಡ ಅನುವಾದವನ್ನು ಶ್ರೀಯುತರು ೨ ಸಂಪುಟಗಳಲ್ಲಿ ಮಾಡಿ ಮಹದುಪಕಾರ ಮಾಡಿರುತ್ತಾರೆ.